# ಮೌಖಿಕ ಆಕರಗಳಲ್ಲಿ ಚಾರಿತ್ರಿಕ ಅಂಶಗಳು

## (ತುಮಕೂರು ಜಿಲ್ಲೆಯನ್ನು ಅನುಲಕ್ಷಿಸಿ)

(ಪಿಎಚ್.ಡಿ. ಪದವಿಗಾಗಿ ಹಂಪಿಯ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸುತ್ತಿರುವ ಸಂಶೋಧನಾ ಮಹಾಪ್ರಬಂಧ)


ಸಂಶೋಧಕರು

ನರಸಿಂಹಮೂರ್ತಿ ಎ. ಓ.

ಮಾರ್ಗದರ್ಶಕರು

ಡಾ. ಗಣಪತಿಗೌಡ ಎಸ್.

ಸಹ ಪ್ರಾಧ್ಯಾಪಕರು

ವಿಶ್ವವಿದ್ಯಾನಿಲಯ ಕಾಲೇಜು, ಮಂಗಳೂರು.

ಮಾನ್ಯತಾ ಸಂಸ್ಥೆ

ಡಾ. ಹಾಮಾನಾ ಸಂಶೋಧನಾ ಕೇಂದ್ರ

ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಕಾಲೇಜು ಉಜಿರೆ

ದಕ್ಷಿಣ ಕನ್ನಡ ಜಿಲ್ಲೆ ೫೭೪೨೪೦





ಚರಿತ್ರೆ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾನಿಲಯ, ಹಂಪಿ.

ವಿದ್ಯಾರಣ್ಯ ೫೮೩೨೭೬



೨೦೧೮

# ಮೌಖಿಕ ಆಕರಗಳಲ್ಲಿ ಚಾರಿತ್ರಿಕ ಅಂಶಗಳು

## (ತುಮಕೂರು ಜಿಲ್ಲೆಯನ್ನು ಅನುಲಕ್ಷಿಸಿ)

(ಪಿಎಚ್.ಡಿ. ಪದವಿಗಾಗಿ ಹಂಪಿಯ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸುತ್ತಿರುವ ಸಂಶೋಧನಾ ಮಹಾಪ್ರಬಂಧ)

ಸಂಶೋಧಕರು

ನರಸಿಂಹಮೂರ್ತಿ ಎ. ಓ.

ಮಾರ್ಗದರ್ಶಕರು

ಡಾ. ಗಣಪತಿಗೌಡ ಎಸ್.

ಸಹ ಪ್ರಾಧ್ಯಾಪಕರು

ವಿಶ್ವವಿದ್ಯಾನಿಲಯ ಕಾಲೇಜು, ಮಂಗಳೂರು.

ಮಾನ್ಯತಾ ಸಂಸ್ಥೆ

ಡಾ. ಹಾಮಾನಾ ಸಂಶೋಧನಾ ಕೇಂದ್ರ

ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಕಾಲೇಜು ಉಜಿರೆ

ದಕ್ಷಿಣ ಕನ್ನಡ ಜಿಲ್ಲೆ ೫೭೪೨೪೦



ಚರಿತ್ರೆ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾನಿಲಯ, ಹಂಪಿ.

ವಿದ್ಯಾರಣ್ಯ ೫೮೩೨೭೬

೨೦೧೮

## ಮಾರ್ಗದರ್ಶಕರ ದೃಢೀಕರಣ

ಮೌಖಿಕ ಆಕರಗಳಲ್ಲಿ ಚಾರಿತ್ರಿಕ ಅಂಶಗಳು (ತುಮಕೂರು ಜಿಲ್ಲೆಯನ್ನು ಅನುಲಕ್ಷಿಸಿ) ಎಂಬ ಶೀರ್ಷಿಕೆಯ ಸಂಶೋಧನಾ ಮಹಾಪ್ರಬಂಧವನ್ನು ಚರಿತ್ರೆ ವಿಭಾಗದ ಪಿಎಚ್.ಡಿ. ಪದವಿಗಾಗಿ ನರಸಿಂಹಮೂರ್ತಿ ಎ. ಓ. ರವರು ನನ್ನ ಮಾರ್ಗದರ್ಶನದಲ್ಲಿ ಸಿದ್ದಪಡಿಸಿರುತ್ತಾರೆ. ಸದರಿ ಮಹಾಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸಲಾಗಿದೆ.

ದಿನಾಂಕ : ೨೯/೦೮/೨೦೧೮

ಸ್ಥಳ : ಉಜಿರೆ

ಮಾರ್ಗದರ್ಶಕರು

**ಡಾ. ಗಣಪತಿಗೌಡ ಎಸ್.**
ಸಹ ಪ್ರಾಧ್ಯಾಪಕರು
ವಿಶ್ವವಿದ್ಯಾನಿಲಯ ಕಾಲೇಜು,
ಮಂಗಳೂರು.

Dr. GANAPATHI GOWDA
Associate Professor
Dept. of History
University College, Mangalore

# ಸಂಶೋಧಕರ ಪ್ರಮಾಣಪತ್ರ

ಮೌಖಿಕ ಆಕರಗಳಲ್ಲಿ ಚಾರಿತ್ರಿಕ ಅಂಶಗಳು (ತುಮಕೂರು ಜಿಲ್ಲೆಯನ್ನು ಅನುಲಕ್ಷಿಸಿ) ಎಂಬ ಶೀರ್ಷಿಕೆಯ ಸಂಶೋಧನಾ ಮಹಾಪ್ರಬಂಧವನ್ನು ಡಾ. ಗಣಪತಿಗೌಡ ಎಸ್. ರವರ ಮಾರ್ಗದರ್ಶನದಲ್ಲಿ ಪಿಎಚ್.ಡಿ. ಪದವಿಗಾಗಿ, ಹಂಪಿಯ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸುತ್ತಿದ್ದೇನೆ. ಸದರಿ ಮಹಾಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ದಿನಾಂಕ : ೨೯/೦೮/೨೦೧೮

ಸಂಶೋಧಕರು

ಸ್ಥಳ : ಉಜಿರೆ

**ನರಸಿಂಹಮೂರ್ತಿ ಎ. ಓ.**
ನೋಂದಣಿ ಸಂಖ್ಯೆ **HSUH-00227/25.09.2012**
ಡಾ. ಹಾಮಾನಾ ಸಂಶೋಧನಾ ಕೇಂದ್ರ,
ಶ್ರೀ. ಧ. ಮಂ. ಕಾಲೇಜು ಉಜಿರೆ.

## ಪರಿವಿಡಿ

# ಅಧ್ಯಾಯ : ೧

## ಪ್ರಸ್ತಾವನೆ

೧.೧ ಪೀಠಿಕೆ

೧.೨ ಅಧ್ಯಯನದ ಉದ್ದೇಶ

೧.೩ ಅಧ್ಯಯನದ ವ್ಯಾಪ್ತಿ

೧.೪ ಅಧ್ಯಯನದ ಸಮೀಕ್ಷೆ

೧.೫ ಅಧ್ಯಯನದ ವಿಧಾನ

೧.೬ ಅಧ್ಯಯನದ ಸ್ವರೂಪ

# ಅಧ್ಯಾಯ : ೧

# ಪ್ರಸ್ತಾವನೆ

## ೧.೧ ಪೀಠಿಕೆ

'ವೇದ ಸುಳ್ಳಾದರೂ ಗಾದೆ ಸುಳ್ಳಾಗದು' ಎಂಬ ನಾಣ್ಣುಡಿಯಿದೆ. ಅಕ್ಷರಸ್ಥ ವರ್ಗವು ವೇದಗಳನ್ನು ರಚಿಸಿತು. ಅಕ್ಷರದ ಅರಿವು ಇದ್ದುದರಿಂದಲೇ ಈ ವರ್ಗವು ದೇವರು, ಪುರಾಣ, ಜ್ಯೋತಿಷ್ಯಗಳಿಗೆ ಸಂಬಂಧಿಸಿದಂತಹ ದಾಖಲೆಗಳನ್ನು ಸೃಷ್ಟಿಸಿತು. ಈ ದಾಖಲೆಗಳು ಲಿಖಿತ ರೂಪದಲ್ಲಿ ಉಳಿದುಕೊಂಡು ಬಂದವು. ಇವುಗಳೇ ಚರಿತ್ರೆಯ ಆಕರಗಳೂ ಆದವು. ಇಂತಹ ಲಿಖಿತ ಚರಿತ್ರೆಗೆ ಪರ್ಯಾಯವಾಗಿ ಜನಸಾಮಾನ್ಯರು ಸೃಷ್ಟಿಸಿದ, ಕಟ್ಟಿದ ಲಾವಣಿಗಳು, ಕಾವ್ಯಗಳು, ಕಥನಗಳು, ಪ್ರತೀತಿಗಳು, ಐತಿಹ್ಯಗಳು, ಗಾದೆಗಳನ್ನು ಆಧರಿಸಿ ಚರಿತ್ರೆಯನ್ನು ಕಟ್ಟಬೇಕಾದ ಅನಿವಾರ್ಯತೆಯಿದೆ. ಇವುಗಳು ಸಮುದಾಯದ ಬದುಕಿನ ಜೀವಂತಿಕೆಯ ಪ್ರತಿರೂಪಗಳಾಗಿವೆ. ಇವು ಅಕ್ಷರ ರೂಪವನ್ನು ಪಡೆದುಕೊಳ್ಳದೆ ಅಲಿಖಿತವಾಗಿದ್ದು, ಇಂದಿಗೂ ಊರಿನ ಕೇರಿಗಳಲ್ಲಿ, ಬೀದಿಗಳಲ್ಲಿ, ಬಯಲಿನಲ್ಲಿ ಜನರ ಬಾಯಲ್ಲಿವೆ. ಇವುಗಳೇ ಇಂದು ನಾವು ಕಟ್ಟಲು ಹೊರಟಿರುವ ಮೌಖಿಕ ಚರಿತ್ರೆಗೆ ಆಕರಗಳಾಗಿವೆ. ಇಂತಹ ಮೌಖಿಕ ಆಕರಗಳನ್ನು ಆಧರಿಸಿ ರಚಿಸಿದ ಚರಿತ್ರೆಯು 'ಬೆವರಿನ ಚರಿತ್ರೆ' ಯಾಗಿರುತ್ತದೆ. ಮೌಖಿಕ ಆಕರಗಳು ಭೂತಕಾಲದಿಂದ ವರ್ತಮಾನಕಾಲದ ಮೂಲಕ ಭವಿಷ್ಯತ್‌ಕಾಲಕ್ಕೆ ಆಚಾರ, ವಿಚಾರ, ಸಂಪ್ರದಾಯಗಳನ್ನು ವರ್ಗಾಯಿಸುತ್ತಿರುತ್ತವೆ.

ಚರಿತ್ರೆಯು ಗತಕಾಲದಲ್ಲಿ ಘಟಿಸಿಹೋದ ಘಟನೆಗಳನ್ನು ಕುರಿತು ಅಧ್ಯಯನ ಮಾಡುತ್ತದೆ. ಅದಕ್ಕಾಗಿ ಆಕರಗಳನ್ನು ಆಧರಿಸಿರುತ್ತದೆ. ಆಕರಗಳನ್ನು ಅವುಗಳ ಸ್ವರೂಪಕ್ಕೆ ಅನುಗುಣವಾಗಿ ವರ್ಗೀಕರಿಸಲಾಗುತ್ತದೆ. ಅವುಗಳು ಲಿಖಿತ ಮತ್ತು ಮೌಖಿಕ ರೂಪದಲ್ಲಿ ಇರುತ್ತವೆ.

ಮೌಖಿಕ ಆಕರಗಳು ತಲೆಮಾರುಗಳಿಂದ ರವಾನೆಯಾದ ಕಂಠಸ್ಥ ಸ್ವರೂಪದವುಗಳಾಗಿವೆ. ಅವುಗಳು ಆಯಾ ಪ್ರಾದೇಶಿಕತೆಗೆ ತಕ್ಕಂತೆ ಜನಸಾಮಾನ್ಯರ ಸ್ಮರಣೆಯಲ್ಲಿದ್ದು, ಸಾಂಸ್ಕೃತಿಕವಾಗಿ ಜನಪದರೊಂದಿಗೆ ಬೆಸೆದುಕೊಂಡಿರುತ್ತವೆ. ಹಾಗೂ ಅವುಗಳು ಸ್ಥಳೀಯ ಚರಿತ್ರೆಯ ರಚನೆಗೆ ಇರುವ ಮೂಲ ಸಾಮಗ್ರಿಗಳಾಗಿವೆ. ಸ್ಥಳೀಯ

ಚರಿತ್ರೆಯಂತೆ ಮೌಖಿಕ ಚರಿತ್ರೆಯು ಮೌಖಿಕ ಆಕರಗಳನ್ನೇ ಅವಲಂಬಿಸಿರುತ್ತದೆ. ಇದು ಒಂದು ಭೌಗೋಳಿಕ ಮಿತಿಗೆ ಒಳಪಟ್ಟ, ಸಂಪೂರ್ಣ ಕ್ಷೇತ್ರ ಸಂಬಂಧಿಯಾದ ಅಧ್ಯಯನವಾಗಿದೆ. ಪ್ರಾದೇಶಿಕ ಸಂಸ್ಕೃತಿಯ ನೈಜತೆಯನ್ನು, ಸ್ವಂತಿಕೆಯನ್ನು ಮತ್ತು ಅದರ ಶ್ರೇಷ್ಠತೆಯನ್ನು ಕಟ್ಟಿಕೊಡಲು ಮೌಖಿಕ ಆಕರಗಳು ಸಮರ್ಥವಾಗಿರುತ್ತವೆ. ಮೌಖಿಕ ಆಕರಗಳು ಜನಸಾಮಾನ್ಯರಿಂದ ಸೃಷ್ಟಿಯಾಗುತ್ತವೆ. ಇವುಗಳು ನಂತರದಲ್ಲಿ ಸಮಷ್ಟಿಯ ಸ್ವತ್ತಾಗಿದ್ದು ತಲೆಮಾರಿನಿಂದ ತಲೆಮಾರಿಗೆ ಸಂಸ್ಕೃತಿಯನ್ನು ಕೊಂಡೊಯ್ಯುವ ಲಕ್ಷಣಗಳನ್ನು ಹೊಂದಿರುತ್ತವೆ. ಕಂಠಸ್ಥ ಸ್ವರೂಪದವುಗಳಾದ ಇವುಗಳು ಪರಂಪರಾನುಗತವಾಗಿ ಬಾಯಿಂದ ಬಾಯಿಗೆ ಹರಿದು ತಲೆಮಾರಿನಿಂದ ತಲೆಮಾರಿಗೆ ಸಾಗುವಾಗ ಅನೇಕ ರೀತಿಯ ರೂಪಾಂತರಗಳನ್ನು ಹೊಂದಿದರೂ ಸಹ ಮೂಲದ ಸೊಗಡನ್ನು ಬಿಡುವುದಿಲ್ಲ. ಒಂದು ಜನಸಮುದಾಯದಲ್ಲಿ ಬಳಕೆಯಲ್ಲಿರುವ ಮೌಖಿಕ ಆಕರಗಳು ಮತ್ತು ಸಂಪ್ರದಾಯಗಳನ್ನು ಸಮಗ್ರವಾಗಿ ಸಂಗ್ರಹಿಸಿ, ವಿಶ್ಲೇಷಿಸಿ, ವರ್ಗೀಕರಿಸಿ ನೋಡಿದಾಗ ಆ ಗುಂಪಿನ ಜೀವನದ ಬಗೆಗಿನ ಶ್ರದ್ಧೆ, ನಂಬಿಕೆ, ಆಚರಣೆಗಳ ನೈಜಪರಿಚಯವು ಆಗುತ್ತದೆ. ಕವಿರಾಜಮಾರ್ಗಕಾರನ ಅಭಿಪ್ರಾಯದಂತೆ 'ಕುರಿತೋದದೆಯುಂ ಕಾವ್ಯ ಪ್ರಯೋಗ ಪರಿಣತಮತಿಗಳ್' ಎಂಬುದು ಸಮೃದ್ಧ ಸಾಂಸ್ಕೃತಿಕ ಪರಂಪರೆಯನ್ನು ಹೊಂದಿರುವ ಕನ್ನಡ ಜನಸಮುದಾಯದ ಪ್ರತಿಭೆಯನ್ನು ಕುರಿತು ಹೇಳಿದಂತಹ ಅರ್ಥಪೂರ್ಣವಾದ ನುಡಿಯಾಗಿದೆ. ಈ ಹೇಳಿಕೆಯು ಆ ಕಾಲದ ಅಕ್ಷರಲೋಕದಿಂದ ದೂರವಿದ್ದ ಗ್ರಾಮೀಣ ಮತ್ತು ಜನಪದರ ಪ್ರತಿಭೆಯನ್ನು ಕುರಿತದ್ದಾಗಿದೆ.

ಜನಪದ ಬದುಕು ಹಾಗೂ ಸಾಹಿತ್ಯದ ನಡುವೆ ಅವಿನಾಭಾವ ಸಂಬಂಧವಿದೆ. ಶ್ರಮದಾಯಕ ದುಡಿಮೆಯ ಸಂದರ್ಭದಲ್ಲಿ ದಣಿವು ಹಾಗೂ ಬೇಸರವನ್ನು ನೀಗಿಸಿಕೊಳ್ಳಲು ಪದಗಳು, ಲಾವಣಿಗಳು, ಕಾವ್ಯಗಳನ್ನು ಕಟ್ಟಿ ಹಾಡಿದರು. ಇವು ಬದುಕಿನ ಜೀವಂತಿಕೆಗೆ ಹಿಡಿದ ಕೈಗನ್ನಡಿಯಾಗಿವೆ. ಇವುಗಳಲ್ಲಿ ಜನಪದರು ಆಚರಿಸುವ ಹಬ್ಬಗಳನ್ನು, ಉತ್ಸವಾದಿಗಳನ್ನು, ಹಾಗೂ ಕೃಷಿ ಬದುಕನ್ನು ವೈಭವದಿಂದ ಕಾಣಲಾಗುತ್ತದೆ. ಇಂತಹ ಪದಗಳನ್ನು, ಲಾವಣಿಗಳನ್ನು, ಕಾವ್ಯಗಳನ್ನು ಕಟ್ಟಿ ಹಾಡುವ ಮೂಲಕ ರಾಗಿ ಬೀಸುವ, ಭತ್ತ ಕುಟ್ಟುವ, ಪೈರು ನಾಟಿ ಮಾಡುವಂತಹ ಕೃಷಿ ಸಂಬಂಧಿ ಕೆಲಸಗಳನ್ನು ಸುಗಮವಾಗಿ ಮಾಡಲಾಗುತ್ತಿತ್ತು. ಈ ನೆಲೆಯಲ್ಲಿ ಇವು ಶ್ರಮ ಸಂಸ್ಕೃತಿಯನ್ನು ಸಮಗ್ರವಾಗಿ ಚಿತ್ರಿಸುತ್ತವೆ. ಅಲ್ಲದೆ ಬದುಕಿನ ಸಡಗರ, ಸಂಭ್ರಮ, ಸಮುದಾಯಗಳ ನಡುವಿನ ಸಂಬಂಧಗಳು, ನಲಿವು ಅಲ್ಲದೇ ದುಃಖ, ಸಾವು, ನೋವುಗಳಂತಹ ಭಾವನಾತ್ಮಕ ಅಂಶಗಳನ್ನು ಇವುಗಳು ವ್ಯಕ್ತಪಡಿಸುತ್ತವೆ. ಗ್ರಾಮೀಣ ಕಲೆಗಳಾದ ಕೋಲಾಟ, ಕುಣಿತ, ಕ್ರೀಡೆಗಳಂತಹ ಮೌಖಿಕ ಸಂಪ್ರದಾಯಗಳು ಮನರಂಜನೆಯ ಉತ್ಕೃಷ್ಟ ಸಾಧನಗಳಾಗಿದ್ದು ಜನಸಾಮಾನ್ಯರ ಪ್ರತಿಭೆಯ ಔನ್ನತ್ಯವನ್ನು ಸಾರಿ ಹೇಳುತ್ತವೆ. ಸಮುದಾಯದೊಂದಿಗೆ ದನಿಗೂಡಿಸಿ ಎಲ್ಲರೂ ಹಾಡಿ ಅನುಭವಿಸುತ್ತಿದ್ದ ಆ ಆನಂದವನ್ನು ವಿವರಿಸಲು ಕೇವಲ ಮಾತು ಅಥವಾ ಬರಹಕ್ಕೆ

ಸಾಧ್ಯವಿರಲಿಲ್ಲ. ಈ ಹಾಡುಗಳ ಅಧ್ಯಯನದಿಂದ ಅವರ ಆಚಾರ, ವಿಚಾರ, ನಂಬಿಕೆ, ಸಂಪ್ರದಾಯಗಳು ಹಾಗೂ ಜನಪದ ಬದುಕಿನ ಅಂತ:ಕರಣದ ಆಳ ವಿಸ್ತಾರಗಳ ಪರಿಚಯವಾಗುತ್ತದೆ. ಹೀಗಾಗಿ ಸಮುದಾಯವೊಂದರ ಸಾಂಸ್ಕೃತಿಕ ಚರಿತ್ರೆಯ ಸಮಗ್ರ ಪರಿಚಯವನ್ನು ಮೌಖಿಕ ಆಕರಗಳಿಂದ ಕಟ್ಟಿಕೊಡಲು ಸಾಧ್ಯವಾಗುತ್ತದೆ.

ಸ್ತ್ರೀಯರು ಕೂಡ ಮನೆಯ ಒಳಗೆ ಮತ್ತು ಹೊರಗೆ ಶ್ರಮದಾಯಕವಾದ ಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿರುತ್ತಿದ್ದರು. ಇವರು ಶ್ರಮದ ಕೆಲಸಗಳನ್ನು ನಿರ್ವಹಿಸುವಾಗ ದಣಿವು ನಿವಾರಣೆಗಾಗಿ, ಇಲ್ಲವೇ ಆನಂದಕ್ಕಾಗಿ, ಹಾಡುಗಳನ್ನು ಕಟ್ಟಿ ಹಾಡುತ್ತಿದ್ದ ಪ್ರತಿಭಾವಂತರಾಗಿದ್ದರು. ಪುರುಷ ಪ್ರಾಬಲ್ಯ ಸಾಹಿತ್ಯಕ್ಕೆ ಹೋಲಿಸಿದರೆ ಸ್ತ್ರೀ ಸಾಮಾನ್ಯರಿಂದ ನಿರ್ಮಿತವಾದ ಜನಪದ ಗೀತೆಗಳು ಹೆಚ್ಚು ಶ್ರೀಮಂತವಾಗಿವೆ. ಇವುಗಳು ಸಾಹಿತ್ಯವೆಂದು ಪರಿಗಣಿಸಲ್ಪಡದಿದ್ದರೂ ಅವುಗಳಲ್ಲಿ ಸಾಹಿತ್ಯದ ಗುಣವಿದೆ. ಹೀಗಾಗಿ ಜನಪದ ಪರಂಪರೆಯು ಸದಾ ಮುನ್ನಡೆಯುತ್ತಿರುವ ಜೀವಂತ ಪ್ರಕ್ರಿಯೆಯಾಗಿದೆ. ಅಲ್ಲದೇ ಪರಿವರ್ತನಾಶೀಲವಾದುದೂ ಆಗಿದೆ. ಇದು ಯಾವುದೇ ಬದಲಾವಣೆಯಿಲ್ಲದೆ ಸ್ಥಾಯೀ ರೂಪವನ್ನು ತಾಳುವುದು ಅದು ಲಿಖಿತ ರೂಪವನ್ನು ಪಡೆದಾಗ ಮಾತ್ರ. ಆಗ ಅದರ ಮೌಖಿಕತೆಯು ನಾಶವಾಗಬಹುದು ಇಲ್ಲವೇ ಜೀವಂತವಾಗಿಯೂ ಇರಬಹುದು. ಉದಾಹರಣೆಗೆ 'ತುಳುಭಾಷೆಯಲ್ಲಿ ಮೌಖಿಕ ಕಾವ್ಯ ಸಂಪ್ರದಾಯವು ಇನ್ನೂ ಜೀವಂತವಾಗಿದೆ. ತುಳುಪಾಡ್ದಾನಗಳು ಸಂಪೂರ್ಣವಾಗಿ ಲಿಪಿಗಿಳಿದು ಗಾಯಕರ ಕೈಗೆ ಇನ್ನೂ ಬಂದಿಲ್ಲ. ಬಾಯಿ ಮೂಲಕವೇ ಅದು ಪ್ರಸರಣಗೊಳ್ಳುತ್ತಿವೆ. ಹೀಗಾಗಿ ಪಾಡ್ದಾನಗಳ ಸ್ಥಿರವಾದ ಪಾಠವೊಂದು ದೊರೆಯುವ ಸಾಧ್ಯತೆಯಿಲ್ಲ' ಎಂದು ಎ. ವಿ. ನಾವಡರವರು ಅಭಿಪ್ರಾಯಪಡುತ್ತಾರೆ. ಮುಂದುವರೆದು ಅವರು ವಿವೇಚಿಸುವಂತೆ ತುಳು ಪಾಡ್ದಾನಕಾರರೂ ಒಳಗೊಂಡಂತೆ ಬಹುಶಃ ಎಲ್ಲಾ ಮೌಖಿಕ ಕವಿಗಳಿಗೂ ಕೂಡ ತಮ್ಮ ಮೌಖಿಕ ಕಾವ್ಯವು ಬಹಳ ಪ್ರಾಚೀನವಾದುದು, ಆಧುನಿಕತೆಯ ಫಲವಾಗಿ ಯಾವುದೇ ಬದಲಾವಣೆಗೆ ಒಳಗಾಗದು, ಶುದ್ಧರೂಪದಲ್ಲಿಯೇ ಉಳಿದಿರುವಂತಹದು ಎನ್ನುವುದನ್ನು ಹೆಮ್ಮೆಯಿಂದ ಹೇಳಿಕೊಳ್ಳುವ ಬಯಕೆಯಿರುತ್ತದೆ. ಆದರೂ ಅವರು ಸಂಸ್ಕೃತಿಯ ವಾಹಕರು ಹಾಗೂ ಏಕಕಾಲದಲ್ಲಿ ಹೊಸದನ್ನು ಸೃಷ್ಟಿಸಬಲ್ಲ ಸೃಜನಶೀಲರೂ ಆಗಿರುತ್ತಾರೆ ಎಂಬುದಾಗಿ ಅಭಿಪ್ರಾಯ ಪಡುತ್ತಾರೆ. ಈ ಹಿನ್ನೆಲೆಯಲ್ಲಿ ಮೌಖಿಕ ಆಕರಗಳು ಕಾಲಾತೀತವಾಗಿದ್ದು, ಲಿಖಿತ ಆಕರಗಳಂತೆ ಒಂದು ನಿರ್ದಿಷ್ಟ ಕಾಲಘಟ್ಟಕ್ಕೆ ಸಂಬಂಧಿಸಿರುವುದಿಲ್ಲ. ಇವುಗಳು ಪುರಾಣ, ಚರಿತ್ರೆ ಹಾಗೂ ಸಮಕಾಲೀನ ಅಂಶಗಳನ್ನು ಘನೀಕರಿಸಿಕೊಂಡು ರಚನೆಯಾಗುತ್ತಿರುತ್ತವೆ. ಈ ಹಿನ್ನೆಲೆಯಲಿ ತುಮಕೂರು ಪರಿಸರದ ಲಿಖಿತ ಮತ್ತು ಮೌಖಿಕ ಆಕರಗಳನ್ನು ಬಳಸಿಕೊಳ್ಳಲಾಗಿದೆ. ಈ ಪ್ರದೇಶದಲ್ಲಿ ಲಭಿಸಿರುವ ಮೌಖಿಕ ಆಕರಗಳ ಸತ್ಯಾಸತ್ಯತೆಯನ್ನು, ಚಾರಿತ್ರಿಕ ನೆಲೆಯನ್ನು ಕಂಡುಕೊಳ್ಳಲು ಸಮಕಾಲೀನ ಅಭಿಪ್ರಾಯಗಳನ್ನು ಸಹ ಬಳಸಿಕೊಳ್ಳಲಾಗಿದೆ.

ನೇಗಿಲ ಮೊನೆಯಿಂದ
ಇತಿಹಾಸ ಕೊರೆಯಲ್ಪಟ್ಟಿತು
ಆದರೆ ಕಿರೀಟದೊಜ್ರದ ಮೊನೆಯಿಂದ
ಎಂದು ಕಲಿಸಿದರು ನಮಗೆ...
ರೈತರ ಬೆವರ ಹನಿಯಿಂದ
ಇತಿಹಾಸ ರಚಿಸಲ್ಪಟ್ಟಿತು
ಆದರೆ ಪುರೋಹಿತರ ಮಂತ್ರದಿಂದ
ಎಂದು ಕಲಿಸಿದರು ನಮಗೆ...

ಎಂಬುದಾಗಿ ಆರ್. ವಿ. ಭಂಡಾರಿಯವರು ಅಭಿಪ್ರಾಯಪಟ್ಟಿದ್ದಾರೆ. ರಾಜ ಮಹಾರಾಜರ ಆಸ್ಥಾನದಲ್ಲಿ ರಚಿಸಿದ ಕೃತಿಗಳು, ಶಾಸನಗಳು ಚರಿತ್ರೆಯನ್ನು ರಚಿಸಲು ಅಧಿಕೃತವಾದ ಆಕರಗಳು ಎಂದು ಭಾವಿಸಲಾಯಿತು. ಅವುಗಳ ಮೂಲಕ ಯಜಮಾನಿಕೆಯ ಪ್ರಭಾವಕ್ಕೆ ಒಳಗಾದ ಚರಿತ್ರೆಯನ್ನು ರಚಿಸಲಾಯಿತು. ಆದರೆ ಅದಕ್ಕೆ ಪರ್ಯಾಯವಾದ ಜನಪದರ ಸಾಂಸ್ಕೃತಿಕ ಬದುಕು, ಸಂಪ್ರದಾಯಗಳು, ಹಾಗೂ ಸಂವೇದನಾಶೀಲತೆಯನ್ನು ಒಳಗೊಂಡಂತಹ ಸಮುದಾಯದ ಚರಿತ್ರೆಯನ್ನು ಕಟ್ಟುವ ಅಗತ್ಯವಿದೆ. ಇಂತಹ ಚರಿತ್ರೆ ರಚನೆಗೆ ಬಳಸಿಕೊಂಡಿರುವ ಮೌಖಿಕ ಆಕರಗಳು ಮತ್ತು ಲಿಖಿತ ದಾಖಲೆಗಳು ವ್ಯಕ್ತಪಡಿಸಿರುವ ಮಾಹಿತಿಗಳಲ್ಲಿನ ಪರಸ್ಪರ ಪೂರಕವಾದ ಮತ್ತು ಭಿನ್ನವಾದ ಅಂಶಗಳನ್ನು ಗುರುತಿಸಲಾಗಿದೆ.

## ೧.೨ ಅಧ್ಯಯನದ ಉದ್ದೇಶ

ಇತಿಹಾಸವೆಂದರೆ ಪ್ರಸಿದ್ಧ ರಾಜಮನೆತನಗಳ ಕಥನ ಎಂಬ ಸಾಮಾನ್ಯವಾದ ಹೇಳಿಕೆಯಿದೆ. ಈ ಹಿನ್ನೆಲೆಯಲ್ಲಿ ರಾಜ ಮಹಾರಾಜರ ವೈಭವಯುತ ಆಳ್ವಿಕೆಯ ಪರಿಕಲ್ಪನೆಯು ಮನಸ್ಸಿನಲ್ಲಿ ಬರುವುದುಂಟು. ಇಂತಹ ಎಲೈಟ್ ಚರಿತ್ರೆಗೆ ಬದಲಾಗಿ ಇತ್ತೀಚಿನ ದಿನಗಳಲ್ಲಿ ಸಾಮ್ರಾಟರು ಮತ್ತು ಸಾಮಾನ್ಯರ ನಡುವೆ ಸೇತುವೆಯಂತೆ ಇದ್ದ ಸ್ಥಳೀಯ ಆಡಳಿತಗಾರರ ಬಗ್ಗೆ ಸಂಶೋಧನೆಯನ್ನು ಮಾಡಲಾಗುತ್ತಿದೆ. ಆದರೆ ಬಹುತೇಕ ಚಾರಿತ್ರಿಕ ಸಂಶೋಧನೆಗಳು ಲಿಖಿತ ಆಕರಗಳನ್ನೇ ಅವಲಂಭಿಸಿವೆ. ಲಿಖಿತ ಆಧಾರಗಳ ಅಲಭ್ಯತೆಯಿರುವಲ್ಲಿ ಮಾತ್ರ ಕೆಲವೊಮ್ಮೆ ಮೌಖಿಕ ಆಕರಗಳನ್ನು ಆಧಾರವಾಗಿ ಪರಿಗಣಿಸಲಾಗಿದೆ. ಆದರೆ ಈ ಅಧ್ಯಯನದಲ್ಲಿ ಮೌಖಿಕ ಆಕರಗಳನ್ನೇ ಪ್ರಧಾನವಾಗಿ ಬಳಸಿಕೊಳ್ಳಲಾಗಿದೆ. ಈ ಸಂಶೋಧನೆಯ ಪ್ರಮುಖ ಉದ್ದೇಶಗಳೆಂದರೆ,

- ಜನಸಾಮಾನ್ಯರ ಬದುಕನ್ನು ಅಧ್ಯಯನ ಮಾಡುವುದು :

ಜನಸಾಮಾನ್ಯರಲ್ಲಿ ಜೀವಂತವಾಗಿ ಲಭಿಸುವ ಧ್ವನಿ ಮಾಹಿತಿಗಳನ್ನೇ ಪ್ರಧಾನವಾಗಿ ಆಧರಿಸಿ ರಚಿತವಾಗಿರುವುದನ್ನು ಮೌಖಿಕ ಚರಿತ್ರೆ ಎಂದು ಗುರುತಿಸಲಾಗಿದೆ. ಈ ಮೌಖಿಕ ಇತಿಹಾಸವು ನಿರ್ಜೀವ ಭೌತಿಕ ಆಕರಗಳಿಗೆ ಬದಲಾಗಿ ಸಜೀವ ವ್ಯಕ್ತಿಗಳೊಡನೆ ವ್ಯವಹರಿಸುತ್ತದೆ. ಈ ಹಿನ್ನೆಲೆಯಲ್ಲಿಯೇ ಮೌಖಿಕ ಆಕರಗಳು ಸಮುದಾಯಗಳ ಸಾಂಸ್ಕೃತಿಕ

ಆತ್ಮಕಥನಗಳಾಗಿವೆ. ಜನಪದ ಆಕರಗಳು ಆಧುನಿಕ ಅರ್ಥದ ಚರಿತ್ರೆಯ ಪಠ್ಯಗಳಲ್ಲವೆಂಬ ಅಭಿಪ್ರಾಯವಿತ್ತು. ಆದರೆ ಅವುಗಳನ್ನು ನಿರ್ಲಕ್ಷಿಸುವಂತೆಯೂ ಇಲ್ಲ ಎಂಬ ಅಭಿಪ್ರಾಯವೂ ಇದೆ. ಇಂದು ನಮಗೆ ಬೇಕಾಗಿರುವುದು ಸಮುದಾಯದ ಚರಿತ್ರೆ, ಅದು ಆಯಾ ಸಮುದಾಯಗಳ ಸ್ಮರಣೆಯಲ್ಲಿದೆ. ಅದನ್ನು ಒರೆಗೆ ಹಚ್ಚುವುದು ಇತಿಹಾಸಕಾರನ ಬದ್ಧತೆಯಾಗಿದೆ. ಮೌಖಿಕ ಪರಂಪರೆಯು ತನ್ನ ಸಾಂಸ್ಕೃತಿಕ ತಲ್ಲಣಗಳನ್ನು, ಸಹಭಾಗಿತ್ವವನ್ನು, ಸಂವೇದನೆಗಳನ್ನು ಲಿಖಿತ ಪರಂಪರೆಯ ಆಚೆಗೆ ಇಂದಿಗೂ ಉಳಿಸಿಕೊಂಡು ಬಂದಿದೆ. ಹಾಗೂ ಮುಂದಿನ ತಲೆಮಾರಿಗೆ ವರ್ಗಾಯಿಸುವ ಸ್ವರೂಪವನ್ನು ಹೊಂದಿದೆ. ಈ ಹಿನ್ನೆಲೆಯಲ್ಲಿ ಎಲೈಟ್ ಚರಿತ್ರೆಗೆ ಪರ್ಯಾಯವಾದ ಸಮುದಾಯದ ಚರಿತ್ರೆಯನ್ನು ಕಟ್ಟುವುದು ಆ ಮೂಲಕ ಜನಸಾಮಾನ್ಯರು ಬದುಕುವ ಶೈಲಿಯ ಸ್ವರೂಪವನ್ನು ಗುರುತಿಸುವುದು, ಜನಪದ ಬದುಕಿನಲ್ಲಿ ಕಂಡುಬರುವ ಸಂಘರ್ಷಗಳು, ಸಂಪ್ರದಾಯಗಳಿಗೆ ಕಾರಣವಾಗಿರುವ ಚಾರಿತ್ರಿಕ ಬುನಾದಿಗಳನ್ನು ಕಂಡುಕೊಳ್ಳುವುದು ಈ ಅಧ್ಯಯನದ ಆಶಯವಾಗಿದೆ.

- ಜನಸಾಮಾನ್ಯರ ಬದುಕಿನ ಅನುಭವ, ಸ್ಮರಣೆಗಳು ಹಾಗೂ ಮೌಖಿಕ ಸಂಪ್ರದಾಯಗಳು ನಶಿಸಿ ಹೋಗಬಹುದಾದ ಸಂಭವವನ್ನು ತಪ್ಪಿಸುವುದು :

ಬಹಳಷ್ಟು ಸನ್ನಿವೇಶಗಳಲ್ಲಿ ಒಂದು ನಿರ್ದಿಷ್ಟವಾದ ಘಟನೆಯಲ್ಲಿ ಪಾಲ್ಗೊಂಡಂತಹ ಅಥವಾ ಆ ಘಟನೆಯನ್ನು ವೀಕ್ಷಿಸಿದ ವ್ಯಕ್ತಿ ಅಥವಾ ಸಮುದಾಯವು ತಮ್ಮ ಅನುಭವಗಳನ್ನು ಬರೆಯುವಂತಹ ಇಲ್ಲವೇ ಲಿಪಿಯ ಮೂಲಕ ದಾಖಲಿಸುವಂತಹ ಸಾಮರ್ಥ್ಯವನ್ನು ಹೊಂದಿರುವುದಿಲ್ಲ. ಇಂತಹ ಸನ್ನಿವೇಶದಲ್ಲಿ ಅನುಭವದ ಸ್ಮರಣೆಗಳು ಮರೆತು ಹೋಗಬಹುದಾದ ಸಂಭವವಿರುತ್ತದೆ. ಇದನ್ನು ತಪ್ಪಿಸುವುದು ಈ ಸಂಶೋಧನೆಯ ಪ್ರಮುಖ ಉದ್ದೇಶವಾಗಿದೆ.

- ತುಮಕೂರು ಪರಿಸರದಲ್ಲಿನ ಸಾಂಸ್ಕೃತಿಕ ನಾಯಕರನ್ನು ಚಾರಿತ್ರಿಕ ನೆಲೆಯಲ್ಲಿ ಅಧ್ಯಯನ ಮಾಡುವುದು :

ತುಮಕೂರು ಪರಿಸರದ ಬಹು ಜನಸಮುದಾಯಗಳು ತಮ್ಮ ಹಲವು ಸಾಂಸ್ಕೃತಿಕ ನಾಯಕರನ್ನು ಆರಾಧಿಸುತ್ತಾರೆ. ಈ ಸಾಂಸ್ಕೃತಿಕ ನಾಯಕರನ್ನು ಚಾರಿತ್ರಿಕ ನೆಲೆಯಲ್ಲಿ ಅಧ್ಯಯನ ಮಾಡುವುದು ಈ ಸಂಶೋಧನೆಯ ಮುಖ್ಯ ಉದ್ದೇಶವಾಗಿದೆ.

- ಮೌಖಿಕ ಮತ್ತು ಲಿಖಿತ ಅಕರಗಳಲ್ಲಿ ವ್ಯಕ್ತಪಡಿಸಲಾಗಿರುವ ಮಾಹಿತಿಗಳಲ್ಲಿ ಭಿನ್ನತೆ ಮತ್ತು ಸಾಮ್ಯತೆಯ ವಿಶ್ಲೇಷಣೆ :

ಮೌಖಿಕ ಆಕರಗಳು ಹಾಗೂ ಲಿಖಿತ ಆಕರಗಳಲ್ಲಿ ಪರಸ್ಪರ ಪೂರಕವಾದ ಮತ್ತು ಭಿನ್ನವಾದ ಅಂಶಗಳು ಕಂಡುಬರುತ್ತವೆ. ಅಂದರೆ ಮೌಖಿಕ ಚರಿತ್ರೆ ಮತ್ತು ಲಿಖಿತ ಚರಿತ್ರೆಯಲ್ಲಿ ವ್ಯಕ್ತಪಡಿಸಿರುವ ಮಾಹಿತಿ / ಅಂಶಗಳ ನಡುವೆ ಭಿನ್ನತೆ ಇಲ್ಲವೇ ಸಾಮ್ಯತೆಯು

ಕಂಡುಬರುತ್ತದೆ. ಇದನ್ನು ಗುರುತಿಸುವುದು ಹಾಗೂ ಆಕರಗಳನ್ನು ಗ್ರಹಿಸಿಕೊಂಡಿರುವ ಸನ್ನಿವೇಶಗಳನ್ನು ಕಂಡುಕೊಳ್ಳಬೇಕಿದೆ.

- ಮೌಖಿಕ ಆಕರಗಳನ್ನೇ ಪ್ರಧಾನವಾಗಿ ಆಧರಿಸಿ ಚರಿತ್ರೆಯನ್ನು ಕಟ್ಟುವುದು :

  ಬಹುತೇಕ ಬುಡಕಟ್ಟು, ಆದಿವಾಸಿ ಜನತೆಯಲ್ಲಿ ಅಕ್ಷರ ಜ್ಞಾನವಿರದ ಸನ್ನಿವೇಶವನ್ನು ಇಂದಿಗೂ ಕಾಣಬಹುದಾಗಿದೆ. ಅನಕ್ಷರಸ್ಥರಾದ ಜನಸಮುದಾಯವು ತಾವು ಬಾಳಿ ಬದುಕಿದ ಅನುಭವಗಳನ್ನು ದಾಖಲೆಗಳಲ್ಲಿ ಸೆರೆಹಿಡಿಯಲು ಸಾಧ್ಯವಾಗಿರುವುದಿಲ್ಲ. ಅಲ್ಲದೇ ಅಂದು ಈ ಸಮುದಾಯಕ್ಕೆ ಅಭಿವ್ಯಕ್ತಿ ಸ್ವಾತಂತ್ರ್ಯವಾಗಲೀ, ಜ್ಞಾನವಾಗಲೀ ಇದ್ದಿತೇ? ಎಂಬ ಪ್ರಶ್ನೆಗೆ ಉತ್ತರವನ್ನು ಕಂಡುಕೊಳ್ಳು ಅಗತ್ಯವಿದೆ. ಇದಕ್ಕಾಗಿ ಮೌಖಿಕ ಆಕರಗಳನ್ನೇ ಪ್ರಧಾನವಾಗಿ ಆಧರಿಸಿ ಚರಿತ್ರೆಯನ್ನು ಕಟ್ಟಬೇಕಿದೆ.

- ಮೌಖಿಕ ಆಕರಗಳು ರಾಜಕೀಯ, ಸಾಮಾಜಿಕ, ಆರ್ಥಿಕ, ಮತ್ತು ಆಡಳಿತಾತ್ಮಕ ವ್ಯವಸ್ಥೆಯ ಪ್ರಭಾವಕ್ಕೆ ಒಳಗಾಗಿರುವ ಬಗೆಯನ್ನು ಗುರುತಿಸುವುದು :

  ಪೀಳಿಗೆಯಿಂದ ಪೀಳಿಗೆಗೆ ಸಾಗುತ್ತಾ ಬಂದಿರುವಂತಹ ಸಂಪ್ರದಾಯ ಮತ್ತು ಆಚರಣೆಗಳಿಗೆ ಚಾರಿತ್ರಿಕ ಬುನಾದಿ ಇರುವುದರಿಂದಲೇ ಅವು ಅಸ್ತಿತ್ವದಲ್ಲಿರುತ್ತದೆ. ಆದರೆ ಮೌಖಿಕ ಕಾವ್ಯ, ಕಥನ ಹಾಗೂ ಆಚರಣೆಗಳು ತನ್ನ ಸುತ್ತಲೂ ಹಲವಾರು ಕಥೆಗಳನ್ನು ಸೃಷ್ಟಿಸಿಕೊಂಡು ಸಾಗುತ್ತಾ ಇರುತ್ತವೆ. ಇವುಗಳು ತ್ಯಾಗ, ಬಲಿದಾನ, ಶೋಷಣೆ, ನೋವು, ನಲಿವುಗಳಂತಹ ಭಾವನಾತ್ಮಕ ಅಂಶಗಳನ್ನು ಹೊಂದಿರುತ್ತವೆ. ಇಂತಹ ಘಟನೆಗಳು ರಾಜಕೀಯ, ಸಾಮಾಜಿಕ, ಆರ್ಥಿಕ, ಆಡಳಿತಾತ್ಮಕ ವ್ಯವಸ್ಥೆಯ ಪ್ರಭಾವಕ್ಕೆ ಹೇಗೆ ಒಳಗಾಗಿರುತ್ತವೆ ಎಂಬ ಅಂಶಗಳನ್ನು ತಿಳಿಯುವ ಅನಿವಾರ್ಯತೆಯಿದೆ.

- ಪ್ರಾದೇಶಿಕ ವೈಶಿಷ್ಟ್ಯತೆ ಹಾಗೂ ಸಮುದಾಯದ ಜೀವನ ಕ್ರಮವನ್ನು ಅಧ್ಯಯನ ಮಾಡುವುದು :

  ಹಳ್ಳಿಗಳ ದೇಶವಾದ ಭಾರತದಲ್ಲಿ ದೇಸೀಯತೆಯ ಸೊಗಡು ಇಂದಿಗೂ ಅಸ್ತಿತ್ವದಲ್ಲಿರುವುದು ಗ್ರಾಮಗಳಲ್ಲಿಯೇ. ಕೊಳ್ಳುಬಾಕ ಮಾರುಕಟ್ಟೆ ಸಂಸ್ಕೃತಿಯ ಎಷ್ಟೇ ಒತ್ತಡವಿದ್ದರೂ ಹಳ್ಳಿಗಳು ತನ್ನದೇ ಆದ ವೈಶಿಷ್ಟ್ಯತೆಯನ್ನು ಇಂದಿಗೂ ತಮ್ಮ ಒಡಲಲ್ಲಿ ಇರಿಸಿಕೊಂಡಿವೆ. ಭಾರತದ ಬಹುಮುಖಿ ಸಂಸ್ಕೃತಿಯು ಪಾಶ್ಚಾತ್ಯರಿಗೆ ಬೆರಗನ್ನುಂಟು ಮಾಡಿರುವುದು ಹೊಸತೇನಲ್ಲ. ಈ ಕಾರಣಕ್ಕಾಗಿಯೇ ಒಂದಿಲ್ಲೊಂದು ರೀತಿಯಲ್ಲಿ ಗ್ರಾಮಗಳನ್ನು ಸೂಕ್ಷ್ಮವಾಗಿ ಅಧ್ಯಯನಕ್ಕೆ ಒಳಪಡಿಸಲಾಗುತ್ತಿದೆ. ಹೀಗಾಗಿ ಪ್ರಾದೇಶಿಕ ವೈಶಿಷ್ಟ್ಯತೆ ಹಾಗೂ ಸಮುದಾಯದ ಜೀವನ ಕ್ರಮವನ್ನು ಅಧ್ಯಯನ ಮಾಡಬೇಕಿದೆ.

- ಮೌಖಿಕಕಾವ್ಯ ಮತ್ತು ಮೌಖಿಕ ಸಂಪ್ರದಾಯಗಳನ್ನು ಮುಂದುವರೆಸುವುದು :

  ಆಧುನಿಕರಣ, ಪಾಶ್ಚಾತ್ಯೀಕರಣ, ನಗರೀಕರಣದ ಪ್ರಭಾವದಿಂದಾಗಿ ಅಳಿವಿನ ಅಂಚಿನಲ್ಲಿರುವ ಮೌಖಿಕಕಾವ್ಯ ಮತ್ತು ಮೌಖಿಕ ಸಂಪ್ರದಾಯಗಳನ್ನು ದಾಖಲಿಸಿ ಅವುಗಳ

ಮಹತ್ವವನ್ನು ವಿಶ್ಲೇಷಿಸುವುದಲ್ಲದೆ ಮುಂದಿನ ಪೀಳಿಗೆಗೆ ಕೊಂಡೊಯ್ಯುವುದು ಈ ಸಂಶೋಧನೆಯ ಮೂಲ ಉದ್ದೇಶವಾಗಿದೆ.

- ಮೌಖಿಕ ಆಕರಗಳ ಸಾಂಸ್ಕೃತಿಕ ಆಯಾಮಗಳನ್ನು ಗುರುತಿಸುವುದು :

  ಜನಸಮುದಾಯಗಳ ಬದುಕಿನ ಅನುಭವಗಳ ನೆಲೆಯಲ್ಲಿ ಸೃಷ್ಟಿಸಿದ ಕಥೆಗಳು, ಹಾಡುಗಳು, ಆಚರಿಸುವ ಹಬ್ಬ ಹರಿದಿನಗಳು, ಮುಂತಾದವುಗಳು ಸ್ಥಳೀಯ ಪರಿಸರದ ಮೇಲೆ ಉಂಟು ಮಾಡಿರುವ ಪ್ರಭಾವ ಮತ್ತು ಸಾಂಸ್ಕೃತಿಕ ಆಯಾಮಗಳನ್ನು ಗುರುತಿಸುವುದು ಈ ಅಧ್ಯಯನದ ಉದ್ದೇಶವಾಗಿದೆ.

- ತುಮಕೂರು ಪರಿಸರದ ಮೌಖಿಕ ಆಕರಗಳಲ್ಲಿನ ಚಾರಿತ್ರಿಕ ಅಂಶಗಳನ್ನು ಗುರುತಿಸುವುದು :

  ತುಮಕೂರು ಜಿಲ್ಲೆಗೆ ಸಂಬಂಧಿಸಿದಂತೆ ಇದುವರೆಗೆ ನಡೆಸಿರುವ ಚಾರಿತ್ರಿಕ ಅಧ್ಯಯನಗಳು ಇಲ್ಲಿನ ಮೌಖಿಕ ಆಕರಗಳಿಗೆ ಹೆಚ್ಚಿನ ಆದ್ಯತೆಯನ್ನು ನೀಡಿರುವುದಿಲ್ಲ. ಹಾಗಾಗಿ ಈ ಪ್ರದೇಶದಲ್ಲಿ ಲಭಿಸುವ ಮೌಖಿಕ ಆಕರಗಳಲ್ಲಿನ ಚಾರಿತ್ರಿಕ ಅಂಶಗಳನ್ನು ಗುರುತಿಸುವುದು ಈ ಅಧ್ಯಯನದ ಉದ್ದೇಶವಾಗಿದೆ.

- ಸಮುದಾಯದ ಜೀವನ ಶೈಲಿಯ ಸ್ಥಿತ್ಯಂತರಗಳನ್ನು ಗುರುತಿಸುವುದು :

  ಬಹುಕಾಲದ ಹಿಂದಿನಿಂದಲೇ ರೂಪಿತವಾಗಿರುವ ಗ್ರಾಮೀಣ ಜೀವನ ಪದ್ದತಿ, ಸಮುದಾಯದ ರೀತಿ ನೀತಿಗಳು, ನಡೆ ನುಡಿಗಳು, ಹಾಗೂ ಉಡುಗೆ ತೊಡುಗೆಗಳು ದಿನದಿಂದ ದಿನಕ್ಕೆ ಸ್ಥಿತ್ಯಂತರಕ್ಕೆ ಒಳಗಾಗುತ್ತಿವೆ. ಹೀಗಾಗಿ ಇಲ್ಲಿನ ಜನರ ಜಾತಿಪದ್ದತಿ, ಆಹಾರಪದ್ದತಿ, ನ್ಯಾಯಪದ್ದತಿ, ಶಿಕ್ಷಣಪದ್ದತಿ, ಕೃಷಿಪದ್ದತಿ, ಆರ್ಥಿಕಪದ್ದತಿ, ಹಾಗೂ ಸಂಪ್ರದಾಯ, ಆಚರಣೆಗಳು ಸಮುದಾಯಗಳ ಜೀವನ ಶೈಲಿಯ ಮೇಲೆ ಉಂಟು ಮಾಡಿರುವ ಪ್ರಭಾವಗಳನ್ನು ಗುರುತಿಸುವ ಸಲುವಾಗಿ ಈ ಅಧ್ಯಯನವನ್ನು ಮಾಡಲಾಗಿದೆ.

## ೧.೩ ಅಧ್ಯಯನದ ವ್ಯಾಪ್ತಿ

**'ಮೌಖಿಕ ಆಕರಗಳಲ್ಲಿ ಚಾರಿತ್ರಿಕ ಅಂಶಗಳು – ತುಮಕೂರು ಜಿಲ್ಲೆಯನ್ನು ಅನುಲಕ್ಷಿಸಿ'** ಎಂಬುದು ಈ ಸಂಶೋಧನೆಯ ವಿಷಯವಾಗಿದೆ.

- **ಮೌಖಿಕ ಆಕರಗಳು** : ಜನಪದ ಸಮುದಾಯಗಳಲ್ಲಿ ಆಚರಣೆಯಲ್ಲಿರುವ ಮೌಖಿಕ ಸಂಪ್ರದಾಯಗಳಿಗೆ ಚಾರಿತ್ರಿಕ ಬುನಾದಿಗಳನ್ನು ಕಂಡುಕೊಳ್ಳುವ ಸಲುವಾಗಿ, ತುಮಕೂರಿನ ಭೌಗೋಳಿಕ ಪ್ರದೇಶದಲ್ಲಿರುವ ಜನಪದಕಾವ್ಯಗಳು, ಐತಿಹ್ಯಗಳು, ಪ್ರತೀತಿ, ಗಾದೆಗಳು, ಲಾವಣಿಗಳು, ಕಥನಗಳು, ಅಭಿಪ್ರಾಯಗಳು ಮುಂತಾದ ಮೌಖಿಕ ಆಕರಗಳನ್ನು ಬಳಸಿಕೊಳ್ಳಲಾಗಿದೆ.

- **ಪ್ರಾದೇಶಿಕ ವ್ಯಾಪ್ತಿ :** ಮೌಖಿಕ ಆಕರಗಳು ಭೌಗೋಳಿಕ ಚೌಕಟ್ಟನ್ನು ಮೀರಿರುತ್ತವೆ. ಹೀಗಾಗಿ ರಾಜಕೀಯ ಚರಿತ್ರೆಯಂತೆ ಸಾಂಸ್ಕೃತಿಕ ಚರಿತ್ರೆಯನ್ನು ನಿರ್ದಿಷ್ಟ ಪ್ರದೇಶಗಳಿಗೆ ಸೀಮಿತಗೊಳಿಸಿಕೊಳ್ಳಲು ಸಾಧ್ಯವಾಗುವುದಿಲ್ಲ. ಹಾಗಾಗಿ ಈ ಸಂಶೋಧನಾ ವಿಷಯದಲ್ಲಿ ಬಳಸಿಕೊಂಡಿರುವ 'ತುಮಕೂರು ಜಿಲ್ಲೆಯನ್ನು ಅನುಲಕ್ಷಿಸಿ' ಎಂಬ ವಾಕ್ಯದಲ್ಲಿನ 'ತುಮಕೂರು ಜಿಲ್ಲೆ' ಎಂಬ ಪದವನ್ನು 'ತುಮಕೂರು ಒಂದು ಆಡಳಿತಾತ್ಮಕ ಘಟಕ' ಎಂಬ ಅರ್ಥದಲ್ಲಿ ಗ್ರಹಿಸಿಕೊಂಡಿರುವುದಿಲ್ಲ. ಬದಲಾಗಿ 'ತುಮಕೂರು ಜಿಲ್ಲೆಯ ಪ್ರದೇಶಗಳು ಮತ್ತು ನೆರೆಯ ಪರಿಸರ' ಎಂದು ಅರ್ಥೈಸಿಕೊಳ್ಳಲಾಗಿದೆ.
- **ಕಾಲಮಾನ :** ಮೌಖಿಕ ಆಕರಗಳು ಕಾಲಾತೀತವಾಗಿದ್ದು ಅವು ಚರಿತ್ರೆ, ಪುರಾಣ ಹಾಗೂ ಸಮಕಾಲೀನ ಅಂಶಗಳನ್ನು ತಮ್ಮ ಒಡಲಲ್ಲಿರಿಸಿಕೊಂಡು ಸಾಗುತ್ತಿರುತ್ತವೆ. ಹೀಗಾಗಿ ಮೌಖಿಕ ಆಕರಗಳು ಯಾವ ಕಾಲಘಟ್ಟದಲ್ಲಿ ತಮ್ಮನ್ನು ಸೃಷ್ಟಿಸಿಕೊಂಡವು ಎಂಬುದನ್ನು ನಿಖರವಾಗಿ ತಿಳಿಯಲು ಸಾಧ್ಯವಾಗುವುದಿಲ್ಲ.

ಹೀಗಾಗಿ ಈ ಸಂಶೋಧನಾ ವಿಷಯದ ಕಾಲಘಟ್ಟವನ್ನು 'ಹೊಯ್ಸಳರ ಕಾಲಮಾನದಿಂದ ವಿಜಯನಗರೋತ್ತರ ಕಾಲದಲ್ಲಿ ಈ ಪ್ರದೇಶದಲ್ಲಿ ಆಳಿದ ತುಂಡರಸರ ಕಾಲಮಾನದವರೆಗೆ ಅಂದರೆ ಸುಮಾರು ೧೨ ನೇ ಶತಮಾನದಿಂದ ಸುಮಾರು ೧೮ ನೇ ಶತಮಾನದವರೆಗಿನ ಕಾಲಘಟ್ಟಕ್ಕೆ ಮಿತಿಗೊಳಿಸಿಕೊಳ್ಳಲಾಗಿದೆ. ಈ ಕಾಲದ ಜನಪದ ಬದುಕಿನ ಕಥನ, ಕಾವ್ಯಗಳನ್ನು ಚಾರಿತ್ರಿಕ ನೆಲೆಯಲ್ಲಿ ಅಧ್ಯಯನ ಮಾಡಲಾಗಿದೆ.

ತುಮಕೂರು ಪ್ರದೇಶದಲ್ಲಿನ ಜನರ ಜೀವನಪದ್ಧತಿ, ಸಂಪ್ರದಾಯಗಳು ಮತ್ತು ಸಮುದಾಯಗಳು ಆರಾಧಿಸುವ ಸಾಂಸ್ಕೃತಿಕ ನಾಯಕರನ್ನು ಚಾರಿತ್ರಿಕ ನೆಲೆಯಲ್ಲಿ ಅಧ್ಯಯನ ಮಾಡಲಾಗಿದೆ. ಜನಸಮುದಾಯದ ಬದುಕು ಜನರ ನೆನಪುಗಳಲ್ಲಿ ಅಡಗಿದೆಯೇ ಹೊರೆತು ಬರಹದ ದಾಖಲೆಗಳಲ್ಲಿ ಅಲ್ಲ ಎಂಬ ಮಾತಿನ ಹಿನ್ನೆಲೆಯಲ್ಲಿ ಆಡುವ ಭಾಷೆ, ಕಲೆ, ಕಸುಬು, ಆಚರಣೆಗಳು ಎಲ್ಲವೂ ಬದುಕಿನ ಭಾಗವಾಗಿರುತ್ತದೆ. ಮಾಡಿದ ಸಾಹಸ, ಅರಿತ ಜ್ಞಾನ ಹಾಗೂ ಬದುಕಿನ ವಿವಿಧ ಮಜಲುಗಳನ್ನು ಜನಪದರು ಕಥೆಗಳು, ಹಾಡುಗಳು, ಲಾವಣಿಗಳ ರೂಪದಲ್ಲಿ ಕಟ್ಟಿದರು. ಅವುಗಳು ನಂತರದ ಪೀಳಿಗೆಗೆ ಮೌಖಿಕ ರೂಪದಲ್ಲಿ ಸಾಗುತ್ತಾ ಉಳಿದು ಬಂದವು. ಹೀಗೆ ಉಳಿದು ಬಂದ ಮೌಖಿಕ ಚರಿತ್ರೆ ಮತ್ತು ಸಂಪ್ರದಾಯಗಳು ಸಂಪೂರ್ಣವಾಗಿ ಬರಹ ರೂಪಕ್ಕೆ ಬರದಿದ್ದರೂ ಸಹ ಅವು ಪೀಳಿಗೆಯಿಂದ ಪೀಳಿಗೆಗೆ ಮೌಖಿಕವಾಗಿ ಸಾಗುತ್ತಾ ಜನರ ಸ್ಮರಣೆಯಲ್ಲಿ ಉಳಿದುಕೊಂಡು ಬಂದಿರುತ್ತವೆ. ತುಮಕೂರು ಜಿಲ್ಲೆಯಲ್ಲಿ ಲಭಿಸುವ ಇಂತಹ ಐತಿಹ್ಯಗಳು, ಲಾವಣಿಗಳು, ಪುರಾಣಗಳು, ಜನಪದ ಕಥೆಗಳು, ಕೋಲಾಟದ ಪದಗಳು, ಸೋಭಾನೆ ಪದಗಳು, ಕಥನಗೀತೆಗಳು, ನಂಬಿಕೆಗಳು, ಗಾದೆಗಳು, ಒಗಟುಗಳು, ಪ್ರತೀತಿಗಳು, ಮುಂತಾದ ಮೌಖಿಕ ಆಕರಗಳು ಸಮುದಾಯಗಳ ನಾಯಕರ ಸಾಹಸಗಾಥೆ, ತ್ಯಾಗ, ಬಲಿದಾನಗಳನ್ನು ವ್ಯಕ್ತಪಡಿಸುತ್ತವೆ. ಈರುಗ್ಯಾತರಾಯ, ಕುರಂಕೋಟೆಯ ಕುರಂಗರಾಯ, ಎತ್ತಪ್ಪ, ಜುಂಜಪ್ಪ, ಮದ್ದೇ ಮತ್ತು ಕರೇಕ್ಯಾತನಹಳ್ಳಿಯ

ಸ್ವಾರಮ್ಮ, ಈರುನಾಗಮ್ಮ, ಬಂದಕುಂಟೆ ಈರುಚಿಕ್ಕಣ್ಣ, ಮಾಗೋಡು ರಂಗನಾಥ, ದಿಬ್ಬದ ವೀರಬಮ್ಮಣ್ಣ, ಶೂಲದ ಈರಣ್ಣ, ಬಳ್ಳೆಕಟ್ಟಿ ಈರಣ್ಣ, ಹೊನ್ನೇಮರದ ಈರಣ್ಣ, ವೀರಬಡಣ್ಣ, ಮರೂರು ವೀರನಾಗಪ್ಪ, ಬರಗೂರು ಈರಮ್ಮ, ಹುಳಿಯಾರು ಕೆಂಚಮ್ಮ, ವೀರಸೀಗಣ್ಣ, ಚಿತ್ರದೇವರು, ಜಲಧಿ ಬೊಪ್ಪರಾಯ, ಕೇತೇಲಿಂಗ, ಪಾತೇಲಿಂಗ, ವೀರಸೀಗಣ್ಣ, ಭೀಮಾಸತಿ ತೀಥಾರಾಜಸ್ವಾಮಿ, ಮದಲಿಂಗ ಮುಂತಾದ ಸಮುದಾಯದ ವೀರರ ಕಥನ ಮತ್ತು ಸಂಪ್ರದಾಯಗಳು ಪ್ರಚಲಿತವಾಗಿವೆ. ಇವರು ಸಮುದಾಯಗಳ ಸಂಸ್ಕೃತಿಯ ಪ್ರತಿನಿಧಿಗಳಾಗಿ ಕಂಡುಬರುವುದರಿಂದ ಇವರನ್ನು 'ಸಾಂಸ್ಕೃತಿಕ ನಾಯಕರು' ಅಥವಾ ಅವರ ಬಗೆಗಿನ ಸಾಹಸಗಾಥೆಗಳ ಸಲುವಾಗಿ 'ಸಾಂಸ್ಕೃತಿಕ ವೀರರು' ಎಂದು ಕರೆಯಲಾಗುತ್ತದೆ.

ಇಂತಹ ಕೆಲವು ಸಾಂಸ್ಕೃತಿಕ ನಾಯಕರನ್ನು ಮೌಖಿಕ ಆಕರಗಳಲ್ಲಿ ವ್ಯಕ್ತಪಡಿಸಲಾಗುತ್ತದೆ. ಸಾಂದರ್ಭಿಕವಾಗಿ ಲಿಖಿತ ದಾಖಲೆಗಳಲ್ಲಿಯೂ ಉಲ್ಲೇಖಿಸಲಾಗಿದೆ. ಹೀಗಾಗಿ ಇಂತಹ ಸಾಂಸ್ಕೃತಿಕ ವೀರರರಾದ ೧) ಈರುಗ್ಯಾತರಾಯ, ೨) ಈರುನಾಗಮ್ಮ, ೩) ಕುರಂಕೋಟೆಯ ಕುರಂಗರಾಯ, ೪) ಜುಂಜಪ್ಪ, ೫) ಮದ್ದೇ ಮತ್ತು ಕ್ಯಾತಗಾನಹಳ್ಳಿಯ ಸ್ವಾರಮ್ಮ, ೬) ಹುಳಿಯಾರು ಕೆಂಚಮ್ಮ, ೭) ದಿಬ್ಬದ ವೀರಬೊಮ್ಮಣ್ಣರನ್ನು ಚಾರಿತ್ರಿಕ ನೆಲೆಯಲ್ಲಿ ಅಧ್ಯಯನ ಮಾಡಲಾಗಿದೆ. ಹಾಗೂ ಇತರ ವೀರರಾದ ೧) ಜಲಧಿ ಬೊಪ್ಪರಾಯ, ೨) ಉಂಡೆತ್ರಾಯ ೩) ಬಂದ್ಕುಂಟೆ ಈರುಚಿಕ್ಕಣ್ಣ, ೪) ಬರಗೂರು ಈರಮ್ಮ, ೫) ಬಳ್ಳಕಟ್ಟೆ ಈರಣ್ಣ, ೬) ವೀರಸೀಗಣ್ಣ, ೭) ಶೂಲದ ಈರಣ್ಣ, ೮) ಹೊನ್ನೇಮರದ ಈರಣ್ಣ, ೯) ಭೀಮಾಸತಿ ತೀಥಾರಾಜಸ್ವಾಮಿ, ೧೦) ಮದಲಿಂಗ, ಮುಂತಾದವರ ಪರಿಚಯವನ್ನು ಮಾಡಿಕೊಳ್ಳಲಾಗಿದೆ.

ಮೌಖಿಕ ಆಕರಗಳು ಭೌಗೋಳಿಕ ಚೌಕಟ್ಟನ್ನು ಮೀರಿರುತ್ತವೆ. ಹೀಗಾಗಿ ರಾಜಕೀಯ ಚರಿತ್ರೆಯಂತೆ ಸಾಂಸ್ಕೃತಿಕ ಚರಿತ್ರೆಯನ್ನು ನಿರ್ದಿಷ್ಟ ಪ್ರದೇಶಗಳಿಗೆ ಸೀಮಿತಗೊಳಿಸಿಕೊಳ್ಳಲು ಸಾಧ್ಯವಾಗುವುದಿಲ್ಲ. ಉದಾಹರಣೆಗೆ : ಮದ್ದೇ ಮತ್ತು ಕರೇಕ್ಯಾತನಹಳ್ಳಿಯ ಸ್ವಾರಮ್ಮನ ಕಥನವು ತುಮಕೂರು ಜಿಲ್ಲೆಯ ಪಾವಗಡ ಮತ್ತು ಆಂಧ್ರಪ್ರದೇಶದ ಗಡಿಗೆ ಹೊಂದಿಕೊಂಡಂತೆ ಮಡಕಸಿರಾ ಪ್ರದೇಶಗಳಿಗೆ ವಿಸ್ತರಿಸಿದೆ. ಜುಂಜಪ್ಪನ ಕಾವ್ಯವು ಹಿರಿಯೂರು, ಚಿತ್ರದುರ್ಗ, ಬಳ್ಳಾರಿ ಪ್ರದೇಶಗಳವರೆಗೆ ವ್ಯಾಪಿಸಿದೆ. ಈರುಗ್ಯಾತರಾಯನ ದಿಗ್ವಿಜಯದಲ್ಲಿ ಪೆನುಗೊಂಡೆ ಮತ್ತು ನೆಲಮಂಗಲದ ಪ್ರಸ್ತಾಪಗಳು ಬರುತ್ತವೆ. ಹುಳಿಯಾರು ಕೆಂಚಮ್ಮನ ಕಾವ್ಯದಲ್ಲಿ ಸಾಂದರ್ಭಿಕವಾಗಿ ಕುಮಾರರಾಮನ ಉಲ್ಲೇಖವು ಬರುತ್ತದೆ. ಹೀಗಾಗಿ ಕಂಪಿಲಿಯ ಕುಮಾರರಾಮನ ನೆಲೆಯವರೆಗೆ ಅಧ್ಯಯನದ ಪ್ರಾದೇಶಿಕ ವ್ಯಾಪ್ತಿಯು ಹಬ್ಬಿದೆ. ಮತ್ತು ಸಿರಾದ ರಂಗಪ್ಪನ ಕಾರ್ಯಕ್ಷೇತ್ರವು ಆಂದ್ರಪ್ರದೇಶದ ರತ್ನಗಿರಿಯವರೆಗೆ ವಿಸ್ತರಿಸಿರುವುದನ್ನು ಗುರುತಿಸಬಹುದಾಗಿದೆ.

ಹೀಗಾಗಿ ಈ ಅಧ್ಯಯನವು ಪ್ರಮುಖವಾಗಿ ತುಮಕೂರು ಜಿಲ್ಲೆಯ ಪ್ರದೇಶಗಳ ವ್ಯಾಪ್ತಿಗೆ ಸೀಮಿತವಾಗಿದೆ. ಆದರೂ ಸಾಂದರ್ಭಿಕವಾಗಿ ತುಮಕೂರು ಜಿಲ್ಲೆಯ ಪ್ರಾದೇಶಿಕ

ಎಲ್ಲೆಯನ್ನು ಮೀರಿ ಚಿತ್ರದುರ್ಗ, ಬಳ್ಳಾರಿ, ಬೆಂಗಳೂರು ಜಿಲ್ಲೆಗಳ ಪ್ರದೇಶ ಹಾಗೂ ಆಂಧ್ರಪ್ರದೇಶದ ಪೆನುಗೊಂಡೆ, ರತ್ನಗಿರಿ, ಮಡಕಸಿರಾ ಪ್ರದೇಶಗಳವರೆಗೆ ತನ್ನ ವ್ಯಾಪ್ತಿಯನ್ನು ವಿಸ್ತರಿಸಿಕೊಂಡಿವೆ.

## ೧.೪ ಅಧ್ಯಯನದ ಸಮೀಕ್ಷೆ

ಇದುವರೆಗೆ ತುಮಕೂರು ಪ್ರದೇಶದ ವ್ಯಾಪ್ತಿಯಲ್ಲಿ ಘಟಿಸಿರುವ ಘಟನೆಗಳನ್ನು ಕುರಿತು ಇಡಿಯಾಗಿ ಮತ್ತು ಬಿಡಿಯಾಗಿ ಹಲವು ಅಧ್ಯಯನಗಳನ್ನು ಮಾಡಲಾಗಿದೆ. ಈ ಹಿನ್ನೆಲೆಯಲ್ಲಿ ಮೌಖಿಕ ಸಂಗ್ರಹಗಳು, ಗೆಜೆಟಿಯರ್, ಕೈಫಿಯತ್ತುಗಳು, ಎಫಿಗ್ರಾಫಿಯಾ ಕರ್ನಾಟಿಕ ಸಂಪುಟಗಳು, ಬುಕನಾನ್‌ರಂತಹ ಪ್ರವಾಸಿಗರ ವರದಿಗಳು, ಸಂಶೋಧನಾ ಪ್ರಬಂಧಗಳು, ಸ್ಮರಣ ಸಂಚಿಕೆಗಳು ಮತ್ತು ಪ್ರಕಟಿತ ಕೃತಿಗಳಲ್ಲಿ ದಾಖಲಿಸಿರುವ ತುಮಕೂರು ಪ್ರದೇಶದ ಚರಿತ್ರೆಯನ್ನು ಸಂಕ್ಷಿಪ್ತವಾಗಿ ವಿವರಿಸಲಾಗಿದೆ.

**ಮೌಖಿಕ ಸಂಗ್ರಹಗಳು :**

ತುಮಕೂರು ಜಿಲ್ಲೆಯಲ್ಲಿ ಜಾನಪದ ಸಂಗ್ರಹ ಕಾರ್ಯವು ೧೯೫೦ ರಿಂದ ಆರಂಭವಾದರೂ ಈ ಕೆಲಸವು ಬಿರುಸಾಗಿದ್ದು ೧೯೭೦ ರ ದಶಕದಲ್ಲಿ. ಡಾ. ಎಸ್. ವಿ ರಂಗಣ್ಣನವರ ಸಂಪಾದಕತ್ವದಲ್ಲಿ 'ಕೋಲ್ ಕೋಲ್ ಕೂಡಿ ಬರಲಿ' ಎಂಬ ಕೃತಿಯನ್ನು ಮೈಸೂರು ವಿಶ್ವವಿದ್ಯಾನಿಲಯವು ೧೯೭೬ ರಲ್ಲಿ ಪ್ರಕಟಿಸಿತು. ಈ ಕಿರುಹೊತ್ತಿಗೆಯನ್ನು ತುಮಕೂರು ಇಂಟರ್ ಮೀಡಿಯಟ್ ಕಾಲೇಜಿನ 'ಏಕಲವ್ಯ ರೋವರ್ ಸ್ಕೌಟ್ಸ್' ತಂಡಕ್ಕೆ ಅರ್ಪಿಸಲಾಗಿದೆ. ಈ ತಂಡದ ತರುಣರು ಹಾಡಿದ ಗೀತೆಗಳನ್ನು ಈ ಕೃತಿಯಲ್ಲಿ ಸಂಗ್ರಹಿಸಲಾಗಿದೆ. 'ಏಕಲವ್ಯ ರೋವರ್ ಸ್ಕೌಟ್ಸ್' ಎಂಬ ಸಂಸ್ಥೆಯು ೧೯೨೮ ರಲ್ಲಿ ಆರಂಭಗೊಂಡು ೧೯೩೩ ರಲ್ಲಿ ಮುಚ್ಚಲಾಗಿತ್ತು. ಡಾ. ಎಸ್. ವಿ ರಂಗಣ್ಣನವರು ಈ ಸಂಸ್ಥೆಯ ಮುಖ್ಯಾಧಿಕಾರಿಯಾಗಿದ್ದರು.

ತುಮಕೂರು ಜಿಲ್ಲೆಯ ಪ್ರಾದೇಶಿಕ ವ್ಯಾಪ್ತಿಯಲ್ಲಿ ಕಂಡುಬರುವ ಮೌಖಿಕ ಆಕರಗಳನ್ನು ಸಂಗ್ರಹಿಸಿರುವ ಪ್ರಮುಖರನ್ನು, ಅವರು ಸಂಗ್ರಹಿಸಿದ, ರಚಿಸಿದ ಸಾಹಿತ್ಯವನ್ನು ಆವರಣದಲ್ಲಿ ನೀಡಲಾಗಿದೆ.

ಕರಾಕೃ ಎಂಬ ನಾಮಾಂಕಿತದಿಂದ ಪ್ರಸಿದ್ಧರಾದ ಕೆ. ಆರ್. ಕೃಷ್ಣಸ್ವಾಮಿ (*ಪಾಳೆಯಗಾರರ ಪದಗಳು, ಸಂಪಿಗೆ ಅರಳ್ಯಾವೆ, ಹೆಣ್ಣು ಕೊಟ್ಟೇವು, ಕೋಲು ಮಲ್ಲಿಗೆ ಕೋಲೆ, ಮಲ್ಲಿಗೆ ಅರಳ್ಯಾವೆ*), ಎಸ್. ಕೆ. ಕರೀಂಖಾನ್ (*ಜನಪದಗೀತೆ, ಮೂಡಲ್ ಕುಣಿಗಲ್‌ಕೆರೆ*), ಜೀ. ಶಂ. ಪರಮಶಿವಯ್ಯ (*ಹುಳಿಯಾರು ಕೆಂಚಮ್ಮ, ದೊಂಬಿದಾಸರ ಪದಗಳು, ಜನಪದ ಖಂಡಕಾವ್ಯಗಳು, ಜನಪದ ವೀರಕಾವ್ಯಗಳು*), ಹನೂರು ಕೃಷ್ಣಮೂರ್ತಿ (*ಕತ್ತಲದಾರಿ ದೂರ, ಬಾರೋ ಗೀಜಗನೆ*), ಮತಿಘಟ್ಟ ಕೃಷ್ಣಮೂರ್ತಿ (*ಕನ್ನಡ ಜಾನಪದ*

*ಸಾಹಿತ್ಯ ಭಂಡಾರ*), ಬಿ. ಸಿದ್ದಗಂಗಯ್ಯ (*ರಾತರಿಗೆ ಬಾರೆ ಸ್ವಪನಾಕೆ, ಅಪ್ಪನವರ ಮನೆ ಅಪರಂಜಿ ಬೆಳಕು, ಮಾತಾಡ್ ಮಾತಾಡ್ ಮಲ್ಲಿಗೆ, ಬೇಡಕಣೋ ಈರಣ್ಣ ಬೇಡತಿ ಸಂಗ, ದೂಳುಗವುದಾವೆ ನಾಗಮ್ಮ, ಜುಂಜಣ್ಣ ನಿನಗಾಗಿ ಕೈಯ ಮುಗಿದಾವು*), ಅಗ್ರಹಾರ ಕೃಷ್ಣಮೂರ್ತಿ (*ಬೆಳದಿಂಗಳಪ್ಪನ ಪೂಜೆ*), ಕಾಳೇಗೌಡ ನಾಗವಾರ (*ಬೇವಿನಹಟ್ಟಿ ಒಂದು ಅಧ್ಯಯನ*), ಹಿ. ಚಿ. ಬೋರಲಿಂಗಯ್ಯ (*ಕುಣಿಗಲ್ ತಾಲೂಕಿನ ಉಜ್ಜನಿ ಚೌಡಲಮ್ಮ*), ಹರತಿ ವೀರನಾಯಕ (*ಗುಮ್ಮಳ್ಳಿ ಕದನ*), ಚೆಲುವರಾಜು (*ಜುಂಜಪ್ಪನ ಕಾವ್ಯ*), ವೈಜಯಂತಿಮಾಲ (*ವಡ್ಡಗೆರೆ ಈರುನಾಗಮ್ಮನ ಕಾವ್ಯ*), ದೊಡ್ಡರಂಗೇಗೌಡರು (*ಜಾನಪದ ಮನೋಧರ್ಮ*) ಇತ್ಯಾದಿ.

ಕೆಂಪನಂಜುಂಡ ಎಂಬ ಕವಿಯು ವಡ್ಡಗೆರೆ ವೀರನಾಗಮ್ಮನ ಭಕ್ತನಾಗಿದ್ದನು. ಈತನ ಮೂಲ ನೆಲೆಯು ತುಮಕೂರಿನ ತೋವಿನಕೆರೆ ಗ್ರಾಮವಾಗಿತ್ತು. ಈತನು ವಡ್ಡಗೆರೆ ವೀರನಾಗಮ್ಮನ ಹೆಸರಿನಲ್ಲಿ '*ವಡ್ಡಗೆರೆ ವೀರನಾಗಮ್ಮನವರ ಚರಿತ್ರೆ ಅಥವಾ ವೀರಕ್ಯಾತರಾಯನ ದಿಗ್ವಿಜಯ*' ಎಂಬ ಯಕ್ಷಗಾನ ಕೃತಿಯನ್ನು ರಚಿಸಿದ್ದಾನೆ. ಈ ಕೃತಿಯನ್ನು ಅದೇ ಹೆಸರಿನಲ್ಲಿ ಶಿಕ್ಷಕರಾಗಿದ್ದ ಮಧುಗಿರಿಯ ಎನ್. ನಾರಾಯಣರವರು ಸರಳಗನ್ನಡದಲ್ಲಿ ರಚಿಸಿದ್ದಾರೆ. ವಡ್ಡಗೆರೆ ಗ್ರಾಮದವರೇ ಆದ ಕಚೇರಿ ಕ್ಯಾತಯ್ಯನವರು '*ವೀರ ನಾಗಮ್ಮನವರ ಚರಿತೆ*' ಎಂಬ ಕೃತಿಯನ್ನು ರಚಿಸಿದ್ದಾರೆ. ನಂತರ ವಡ್ಡಗೆರೆ ನಾಗರಾಜಯ್ಯನವರು ತಮ್ಮ ತಾಯಿ ಕದರಮ್ಮ ಮತ್ತು ಅವರ ವಾರಿಗೆಯ ಜನಪದ ಕವಯತ್ರಿಯರಿಂದ ಹಾಡಿಸಿ '*ವಡ್ಡಗೆರೆ ನಾಗಮ್ಮ ಮಹಾಸತಿಕಾವ್ಯ*' ವನ್ನು ಸಂಪಾಧಿಸಿರುತ್ತಾರೆ. ಹಾಗೂ '*ವಡ್ಡಗೆರೆ ವೀರನಾಗಮ್ಮ ಕಾವ್ಯ*' ವನ್ನು ವೈಜಯಂತಿಮಾಲ ರವರ ಸಂಪಾದಕತ್ವದಲ್ಲಿ ಬೆಂಗಳೂರಿನ ಕನ್ನಡ ಸಾಹಿತ್ಯ ಪರಿಷತ್ತಿನ ವತಿಯಿಂದ ೧೯೮೧ ರಲ್ಲಿ ಪ್ರಕಟಿಸಲಾಗಿದೆ.

ನಿವೃತ್ತ ಪ್ರಾಂಶುಪಾಲರಾಗಿರುವ ಸಣ್ಣನಾಗಪ್ಪರವರು ಮದ್ದೆ ಗ್ರಾಮದ ಓಬಜ್ಜಿ, ಕರಿಯಮ್ಮ, ಮಲ್ಲಕ್ಕ, ತಿಮ್ಮಕ್ಕ ಎಂಬ ಸ್ಥಳೀಯರಿಂದ ಹಾಡಿಸಿ '*ಕರೇಕ್ಯಾತನಹಳ್ಳಿ ಮತ್ತು ಮದ್ದೇದ ಸ್ವಾರಮ್ಮನ ಪದನೂರು*' ಎಂಬ ಕಿರುಹೊತ್ತಿಗೆಯನ್ನು ಸಂಪಾದಿಸಿದ್ದಾರೆ. ಹಾಗೂ '*ನಿಡಗಲ್ಲು ಶೂಲದ ಈರಣ್ಣ*', '*ವೀರಸೀಗಣ್ಣ*' ಎಂಬ ಜನಪದ ಕಾವ್ಯಗಳನ್ನು ಸಂಗ್ರಹಿಸಿದ್ದಾರೆ.

ಉಪನ್ಯಾಸಕರಾಗಿರುವ ಮುದ್ದುವೀರಪ್ಪ ಕೆ. ವಿ. ರವರು ಸ್ಥಳೀಯರಾದ ತಿಮ್ಮಜ್ಜಿ, ಜಯಮ್ಮ, ಸಿಕ್ಕಜ್ಜಿ, ಈರಜ್ಜಿ, ನಿಂಗಜ್ಜಿರವರಿಂದ ಹಾಡಿಸಿ '*ದಿಬ್ಬದ ವೀರಬೊಮ್ಮಣ್ಣನ ಕಾವ್ಯ*' ಎಂಬ ಕೃತಿಯನ್ನು ಸಂಗ್ರಹಿಸಿದ್ದಾರೆ. ಮತ್ತು ಜಂಗಮರಹಳ್ಳಿಯ ವೆಂಕಟಜ್ಜಿ, ಈರಮ್ಮ, ಸಣ್ಣೀರಮ್ಮ, ಸಣ್ಣಮ್ಮರವರಿಂದ ಹಾಡಿಸಿ '*ಮರೂರು ವೀರನಾಗಪ್ಪನ ಕಾವ್ಯ*' ಗಳನ್ನು ಸಂಗ್ರಹಿಸಿದ್ದಾರೆ. ಹಾಗೂ ಓಬಳಾಪುರದ ಜಯಮ್ಮ, ಕೆಂಚಮ್ಮ, ಲಕ್ಷ್ಮೀದೇವಿ, ದೇವರಾಜಮ್ಮ ಎಂಬುವರಿಂದ '*ಬರಗೂರು ವೀರಮ್ಮನ ಕಾವ್ಯ*'ವನ್ನು ಹಾಡಿಸಿ ಸಂಗ್ರಹಿಸಿದ್ದಾರೆ.

ಉಪನ್ಯಾಸಕರಾಗಿರುವ ಹೊನ್ನಗಾನಹಳ್ಳಿ ಕರಿಯಣ್ಣನವರು 'ಬಂದಕುಂಟೆ ಈರುಚಿಕ್ಕಣ್ಣನ ಕಾವ್ಯ'ವನ್ನು, ಮನ್ಮಥ ಹೊಸಯಳನಡು ರವರು '*ವೀರಬಂಡಣ್ಣನ ಜನಪದ ಗೀತೆಗಳು*' ಕೃತಿಯನ್ನು, ಲಕ್ಷಣಯ್ಯರವರು '*ಹುಳಿಯಾರು ಕೆಂಚಮ್ಮನ ಕಾವ್ಯ*'ಗಳನ್ನು ಸಂಗ್ರಹಿಸಿದ್ದಾರೆ.

**ಗೆಜೆಟಿಯರ್ :**

ಬಿ. ಎಲ್. ರೈಸ್, ಹಯವದನರಾವ್, ಅಭಿಶಂಕರ್, ಹಾಗೂ ಚಂದ್ರಶೇಖರ್ (ಪರಿಷ್ಕೃತ ಆವೃತ್ತಿ ೨೦೧೭) ಸಂಪಾದಕತ್ವದಲ್ಲಿ '*ತುಮಕೂರು ಜಿಲ್ಲೆಯ ಗೆಜೆಟಿಯರ್*' ಪ್ರಕಟಗೊಂಡಿದೆ. ಇದರಲ್ಲಿ ತುಮಕೂರು ಜಿಲ್ಲೆಯ ಬಗ್ಗೆ ವಿಫುಲವಾದ ಮಾಹಿತಿಯನ್ನು ನೀಡಲಾಗಿದೆ.

**ಕೈಫಿಯತ್ತು :**

ಮೆಕೆಂಜಿಯ ಕೈಫಿಯತ್ತುಗಳಲ್ಲಿ (ಏಸಿಯಾಟಿಕ್ ಸೊಸೈಟಿ) ತಿಪಟೂರಿಗೆ ಸಂಬಂಧಿಸಿದ ಮಾಹಿತಿಯಿದೆ. ಉಮಾಪತಿ (ದಾಸಪ್ಪ ಎಂ. ಎನ್.) ರವರು '*ನಿಡಗಲ್ಲು ಕೈಫಿಯತ್ತು*' ನ್ನು ಸಂಗ್ರಹಿಸಿದ್ದಾರೆ. ಶಿವಲಿಂಗಯ್ಯ ಜಿ. ಎ. ರವರು ಸಂಪಾದಿಸಿರುವ '*ಯಾದಾಸ್ತು ಹೈದರ್ ನಾಮ*' ವನ್ನು ಕರ್ನಾಟಕ ಪತ್ರಾಗಾರ ಇಲಾಖೆಯು ೨೦೧೧ ರಲ್ಲಿ ಪ್ರಕಟಿಸಿದೆ. ಯೋಗೀಶ್ವರಪ್ಪ ಡಿ. ಎನ್. ರವರು '*ಚರಿತ್ರೆಯ ಆಕರ ಸಂಪುಟ*' ವನ್ನು ಸಂಪಾದಿಸಿದ್ದಾರೆ. ಇದರಲ್ಲಿ ಗುಬ್ಬಿಯ ಹಾಗಲವಾಡಿ, ಮಧುಗಿರಿ ಮಹಾನಾಡ ಪ್ರಭುಗಳು, ಗುಬ್ಬಿಹೊಸಹಳ್ಳಿಯ ಪಾಳೆಯಗಾರರ ಬಗೆಗಿನ ವಿವರಗಳು ಲಭಿಸುತ್ತವೆ.

**ಎಫಿಗ್ರಾಫಿಯಾ ಕರ್ನಾಟಿಕ :**

ಎಫಿಗ್ರಾಫಿಯಾ ಕರ್ನಾಟಿಕ ಸಂಪುಟ ೧೨ ಮತ್ತು ೧೬ ಹಾಗೂ ಮೈಸೂರು ವಿಶ್ವವಿದ್ಯಾನಿಲಯದ ಪರಿಷ್ಕೃತ ಆವೃತ್ತಿ ಸಂಪುಟ ៩ (ಬೇಲೂರು) ಮತ್ತು ಸಂಪುಟ ೨೪ (ತುಮಕೂರು) ಇವುಗಳಲ್ಲಿನ ವಿವರಗಳು ಮತ್ತು ಶಾಸನಗಳನ್ನು ಈ ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ. ಮತ್ತು ಇತರೆ ಎಫಿಗ್ರಾಫಿಯ ಕರ್ನಾಟಿಕ ಸಂಪುಟಗಳನ್ನು ಹಾಗೂ ಸೌತ್ ಇಂಡಿಯನ್ ಇನ್‌ಸ್ಕ್ರಿಪ್ಷನ್ಸ್ ಸಂಪುಟಗಳನ್ನು ಸಾಂದರ್ಭಿಕವಾಗಿ ಅಧ್ಯಯನ ಮಾಡಲಾಗಿದೆ.

**ಪ್ರವಾಸಿ ವರದಿ :**

ಬುಕನಾನ್-ರವರು ಕ್ರಿ. ಶ. ೧೮೦೦ ರಲ್ಲಿ ತುಮಕೂರು ಪ್ರದೇಶಗಳಲ್ಲಿ ಪ್ರವಾಸ ಮಾಡಿದ್ದಾರೆ. ಈ ಕುರಿತ *A JOURNEY FROM MADRAS THROUGH THE COUNTRIES OF MYSORE, CANARA AND MALABAR* ಎಂಬ ಪ್ರವಾಸಿ ವರದಿಯಲ್ಲಿ ಮಧುಗಿರಿ, ಸಿರಾ

ಪ್ರದೇಶದ ಜನಾಂಗಗಳು, ಬೆಳೆ, ವಾಯುಗುಣ, ಪಶುಪಾಲನೆ ಇತ್ಯಾದಿ ವಿವರಗಳು ಲಭಿಸುತ್ತವೆ.

**ಅಪ್ರಕಟಿತ ಸಂಶೋಧನಾ ಪ್ರಬಂಧಗಳು :**

ಅಯ್ಯಾಳಿ ಯರಿಸ್ವಾಮಿರವರು '*ಹೊಸಪೇಟೆ : ಐತಿಹ್ಯಗಳ ಸಾಂಸ್ಕೃತಿಕ ಅಧ್ಯಯನ*' ಎಂಬ ವಿಷಯದ ಕುರಿತು ಸಂಶೋಧನೆಯನ್ನು ಮಾಡಿದ್ದಾರೆ. ಈ ಅಧ್ಯಯನದಲ್ಲಿ ಐತಿಹ್ಯಗಳನ್ನು ವ್ಯಕ್ತಿ ಪ್ರಧಾನ, ಸ್ಥಳ ಪ್ರಧಾನ ( ಸ್ಥಳಪುರಾಣ, ಪವಾಡ, ನಂಬಿಕೆ, ಕೆರೆಸಂಬಂಧಿ), ಘಟನಾ ಪ್ರದಾನ ಐತಿಹ್ಯಗಳೆಂದು ವರ್ಗೀಕರಿಸಿರುತ್ತಾರೆ.

ಕರಿಬಸಪ್ಪ ಎ. ರವರು '*ಬಳ್ಳಾರಿ ಜಿಲ್ಲೆಯ ಐತಿಹ್ಯಗಳು*' ಎಂಬ ವಿಷಯದ ಕುರಿತು ಹಂಪಿಯ ಕನ್ನಡ ವಿಶ್ವವಿದ್ಯಾನಿಲಯಕ್ಕೆ (ಹಸ್ತಪ್ರತಿಶಾಸ್ತ್ರ ವಿಭಾಗ) ಸಲ್ಲಿಸಿದ ಪಿಎಚ್.ಡಿ. ಮಹಾಪ್ರಬಂಧದಲ್ಲಿ ಐತಿಹ್ಯಗಳನ್ನು ಸ್ಥಳ, ವ್ಯಕ್ತಿ, ಸಮುದಾಯ, ಘಟನೆ, ಪ್ರಕೃತಿ, ದೈವ ಸಂಬಂಧಿ ನೆಲೆಯಲ್ಲಿ ವರ್ಗೀಕರಿಸಿದ್ದಾರೆ.

ಜಗದೀಶ್‌ರವರು ಸಿದ್ಧರಬೆಟ್ಟ ಕುರಿತು ಬೆಂಗಳೂರು ವಿಶ್ವವಿದ್ಯಾನಿಲಯಕ್ಕೆ (ಕನ್ನಡ ವಿಭಾಗ) ಸಲ್ಲಿಸಿರುವ ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧದಲ್ಲಿ '*ಸಿದ್ದರಬೆಟ್ಟದ ಪರಿಸರದ ಆಚರಣೆಗಳು ಮತ್ತು ನಂಬಿಕೆಗಳು*' ಎಂಬ ವಿಷಯದ ಕುರಿತು ವಿವರಿಸಿರುತ್ತಾರೆ.

ನಿಂಗಪ್ಪ ಹೆಚ್. ರವರು '*ಕನ್ನಡ ಜನಪದ ಮಹಾಕಾವ್ಯಗಳಲ್ಲಿನ ಸಾಂಸ್ಕೃತಿಕ ವೀರರು*' ಎಂಬ ವಿಷಯದ ಕುರಿತು ಹಂಪಿಯ ಕನ್ನಡ ವಿಶ್ವವಿದ್ಯಾನಿಲಯಕ್ಕೆ (ಬುಡಕಟ್ಟು ಅಧ್ಯಯನ ವಿಭಾಗ) ಸಲ್ಲಿಸಿದ ಪಿಎಚ್.ಡಿ ಮಹಾಪ್ರಬಂಧದಲ್ಲಿ ಮೌಖಿಕ ರಚನೆ ಮತ್ತು ಬಹುಮುಖಿ ಸಂಸ್ಕೃತಿಯ ಅಧ್ಯಯನದ ಮೂಲ ತೊಡಕುಗಳು ಮತ್ತು ಸಾಧ್ಯತೆಗಳನ್ನು ವಿವರಿಸಿದ್ದಾರೆ. ಮೈಲಾರಲಿಂಗ, ಮಲೆಯಮಾದೇಶ್ವರ, ಮಂಟೇಸ್ವಾಮಿ, ಜುಂಜಪ್ಪನ ಕಾವ್ಯಗಳ ಕುರಿತು ವಿವರಿಸಿದ್ದಾರೆ. ಆಯಾ ಸಾಂಸ್ಕೃತಿಕ ವೀರರ ಕಾಲಘಟ್ಟದ ಬೇಟೆ, ಪಶುಪಾಲನೆ, ಬೇಸಾಯ, ಕಸುಬುದಾರಿಕೆಗಳ ಕುರಿತು ವಿವರಿಸಲಾಗಿದೆ.

ಪುಟ್ಟರಾಜುರವರು '*ಮೈಸೂರು ಸಂಸ್ಥಾನದ ಇತಿಹಾಸದಲ್ಲಿ ಜಾನುವಾರು ಅಮೃತಮಹಲ್ ತಳಿ*' ಎಂಬ ವಿಷಯದ ಕುರಿತು ಬೆಂಗಳೂರು ವಿಶ್ವವಿದ್ಯಾನಿಲಯಕ್ಕೆ (ಚರಿತ್ರೆ ವಿಭಾಗ) ಸಲ್ಲಿಸಿರುವ ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧದಲ್ಲಿ ಪಶುಪಾಲನೆಯ ಉಗಮ ಮತ್ತು ಬೆಳವಣಿಗೆ, ಪಶುಪಾಲನೆ ಮತ್ತು ದನಗಳ ಚಾರಿತ್ರಿಕ ಹಿನ್ನೆಲೆ ಹಾಗೂ ಮೈಸೂರು ಸಂಸ್ಥಾನದ ಪ್ರಮುಖ ದನಗಳ ತಳಿಗಳ ಬಗ್ಗೆ ವಿವರಿಸಿರುತ್ತಾರೆ

ಬಸವರಾಜ ಕೆ. ಪಿ. ರವರು '*ಸಿರಾ ಸೀಮೆಯ ಸಾಂಸ್ಕೃತಿಕ ವೀರರು*' ಎಂಬ ವಿಷಯದ ಬಗ್ಗೆ ಹಂಪಿಯ ಕನ್ನಡ ವಿಶ್ವವಿದ್ಯಾನಿಲಯಕ್ಕೆ (ಜನಪದ ಅಧ್ಯಯನ ವಿಭಾಗ) ಸಲ್ಲಿಸಿದ ಪಿಎಚ್.ಡಿ ಮಹಾಪ್ರಬಂಧದಲ್ಲಿ ವೀರನಾಯಕರ ಹುಟ್ಟು, ದೈವೀಕರಣ, ಆರಾಧನಾಕ್ಷೇತ್ರಗಳು, ಸಾಂಸ್ಕೃತಿಕ ನಾಯಕರ ಸಂಪ್ರದಾಯ, ಆಚರಣೆಗಳು ಹಾಗೂ

ಬದಲಾಗುತ್ತಿರುವ ಸಾಮಾಜಿಕ ಸಂದರ್ಭದಲ್ಲಿ ಸಾಂಸ್ಕೃತಿಕ ವೀರನಾಯಕರ ಅಸ್ತಿತ್ವವನ್ನು ಕುರಿತು ವಿಶ್ಲೇಷಿಸಿದ್ದಾರೆ.

ಬಸವರಾಜ ಸಿ. ರವರು ಇತಿಹಾಸ ಸಂಶೋಧಕರಾದ ಪ್ರೊ.ಲಕ್ಷ್ಮಣ್‌ತೆಲಗಾವಿ ರವರ ಕುರಿತು ಅಧ್ಯಯನವನ್ನು ಮಾಡಿರುತ್ತಾರೆ. ಈ ಅಧ್ಯಯನದಲ್ಲಿ ಸ್ಥಳೀಯ ಚರಿತ್ರೆಯ ಸ್ವರೂಪ, ಅಗತ್ಯತೆ, ತಾತ್ವಿಕತೆಯನ್ನು ವಿವರಿಸಲಾಗಿದೆ. ಹಿಂದುಳಿದ, ಅಲಕ್ಷಿತರ ಬಗೆಗೆ ಲಕ್ಷ್ಮಣ್‌ತೆಲಗಾವಿ ರವರಿಗಿದ್ದ ಕಾಳಜಿ ಹಾಗೂ ಸ್ಥಳೀಯ ಚರಿತ್ರೆ, ಮೌಖಿಕ ಚರಿತ್ರೆ, ಸಮಕಾಲೀನ ಚರಿತ್ರೆ, ಸಾಮಾಜಿಕ ಚಿಂತನೆಗಳನ್ನು ಕುರಿತು ವಿಶ್ಲೇಷಣೆಯನ್ನು ಮಾಡಲಾಗಿದೆ.

ಶಿವತಾರಕ್ ಕೆ. ಬಿ. ರವರು ತುಮಕೂರು ಜಿಲ್ಲೆಯ ಪ್ರಾಕ್ತನ ನೆಲೆಗಳ ಕುರಿತು ಸಂಶೋಧನೆಯನ್ನು ಮಾಡಿರುತ್ತಾರೆ. ಈ ಅಧ್ಯಯನದಲ್ಲಿ ತುಮಕೂರು ಜಿಲ್ಲೆಯ ವಿವಿಧ ಹಂತದ ಶಿಲಾಯುಗದ ತಾಣಗಳನ್ನು ಗುರುತಿಸಲಾಗಿದೆ. ಈ ಶಿಲಾಯುಗದ ತಾಣಗಳಲ್ಲಿ ಸಿಕ್ಕಿರುವ ಆಯುಧಗಳ ಸ್ವರೂಪಕ್ಕೆ ಅನುಗುಣವಾಗಿ ಆ ಸ್ಥಳಗಳನ್ನು ಹಳೆಯ, ಮಧ್ಯ, ನವಶಿಲಾಯುಗದ ತಾಣಗಳೆಂದು ವರ್ಗೀಕರಿಸಿದ್ದಾರೆ. ಇದು ಇಲ್ಲಿನ ಪ್ರಾದೇಶಿಕ ಹಿನ್ನೆಲೆಯನ್ನು ತಿಳಿಯಲು ಸಹಾಯಕವಾಗಿದೆ.

ಸತೀಶ ಪಿ. ರವರು ಮಲೆಮಾದೇಶ್ವರ ಕಾವ್ಯವನ್ನು ಕುರಿತು ಹಂಪಿಯ ಕನ್ನಡ ವಿಶ್ವವಿದ್ಯಾನಿಲಯಕ್ಕೆ (ಬುಡಕಟ್ಟು ಅಧ್ಯಯನ ವಿಭಾಗ) ಸಲ್ಲಿಸಿದ ಪಿಎಚ್.ಡಿ. ಮಹಾಪ್ರಬಂಧದಲ್ಲಿ ಕಾವ್ಯದ ನಾಯಕನಾಗಿ ಹಾಗೂ ಸಾಂಸ್ಕೃತಿಕ ವೀರನಾಗಿ ಮಾದೇಶ್ವರನ ಮತ್ತು ಆತನ ಕ್ಷೇತ್ರ ಪರಿಚಯವನ್ನು ವಿವರಿಸಲಾಗಿದೆ. ಬುಡಕಟ್ಟು ಜನಾಂಗವಾದ ದೇವರಗುಡ್ಡರು, ಅವರ ಜೀವನ ಕ್ರಮ ಅವರ ಗಾಯಕ ವೃತ್ತಿಯನ್ನು ಕುರಿತ ಅಂಶಗಳನ್ನು ವಿವರಿಸಿದ್ದಾರೆ. ಅಲ್ಲದೇ ಮಾದಪ್ಪನ ಹುಟ್ಟು, ಪವಾಡಗಳು, ಕಾವ್ಯದಲ್ಲಿನ ಸಾಂಸ್ಕೃತಿಕ ಮುಖಾಮುಖಿಗಳನ್ನು ವಿಶ್ಲೇಷಿಸಲಾಗಿದೆ.

ಹೇಮಾವತಿ ಟಿ. ಆರ್. ರವರು '*ಜನಪದ ಮಹಾಕಾವ್ಯಗಳಲ್ಲಿ ಸ್ತ್ರೀ ಸಂವೇದನೆ*' ಎಂಬ ವಿಷಯದ ಕುರಿತು ಹಂಪಿಯ ಕನ್ನಡ ವಿಶ್ವವಿದ್ಯಾನಿಲಯಕ್ಕೆ (ಜನಪದ ಅಧ್ಯಯನ ವಿಭಾಗ) ಸಲ್ಲಿಸಿದ ಪಿಎಚ್.ಡಿ ಮಹಾಪ್ರಬಂಧದಲ್ಲಿ ಮಲೆಯಮಾದೇಶ್ವರ, ಮಂಟೇಸ್ವಾಮಿ, ಜುಂಜಪ್ಪನ ಕಾವ್ಯಗಳನ್ನು ಸಮೀಕ್ಷೆ ಮಾಡಿದ್ದಾರೆ. ಈ ಕಾವ್ಯಗಳಲ್ಲಿನ ಸ್ತ್ರೀ ಪಾತ್ರದ ಸ್ವರೂಪ, ಮಾತೃ ಪ್ರಧಾನ ವ್ಯವಸ್ಥೆ, ಪಶುಪಾಲಕ ಸಮಾಜದಲ್ಲಿ ಸ್ತ್ರೀ ಆರಾಧನೆ, ಜುಂಜಪ್ಪನ ಕಾವ್ಯದಲ್ಲಿ ತಾಯಿಯ ಸ್ಥಾನಮಾನಗಳನ್ನು ಕುರಿತು ಅಧ್ಯಯನ ಮಾಡಿದ್ದಾರೆ. ಜನಪದ ರಾಮಾಯಣದಲ್ಲಿ ಸೀತೆ, ಜನಪದ ಮಹಾಭಾರತದಲ್ಲಿ ದ್ರೌಪದಿ, ಬುರ್ರಕಥಾಕಾವ್ಯದ ಸಿನ್ನಮ್ಮಳನ್ನು ಕುರಿತು ವಿಶ್ಲೇಷಿಸಿದ್ದಾರೆ.

**ಸ್ಮರಣ ಸಂಚಿಕೆಗಳು :**

ವಿವಿಧ ಸಂಘ, ಸಂಸ್ಥೆಗಳು ಕಾಲಕಾಲಕ್ಕೆ ನಡೆಸಿದ ಸಮ್ಮೇಳನ, ಆಚರಣೆಗಳ ಸ್ಮರಣಾರ್ಥವಾಗಿ ತುಮಕೂರು ಜಿಲ್ಲೆಗೆ ಸಂಬಂಧಿಸಿದಂತೆ ಹಲವು ಲೇಖನಗಳನ್ನು ಒಳಗೊಂಡ ಸ್ಮರಣ ಸಂಚಿಕೆಗಳನ್ನು ಪ್ರಕಟಿಸಲಾಗಿದೆ. ಪ್ರಮುಖವಾದ ಸ್ಮರಣ ಸಂಚಿಕೆಗಳೆಂದರೆ,

ಕರ್ನಾಟಕ ಇತಿಹಾಸ ಕಾಂಗ್ರೇಸ್‌ನ ೧೯ನೇ ಸಮ್ಮೇಳನದ ಸ್ಮರಣಾರ್ಥವಾಗಿ ಓ. ಅನಂತರಾಮಯ್ಯನವರ ಸಂಪಾದಕತ್ವದಲ್ಲಿ '*ಜ್ಞಾನಾದ್ರಿ*' ಸ್ಮರಣ ಸಂಚಿಕೆ. *ಇತಿಹಾಸ ದರ್ಶನ ಸಂಪುಟಗಳು*. ಅಖಿಲ ಭಾರತ ೬೯ ನೇ ಕನ್ನಡ ಸಾಹಿತ್ಯ ಸಮ್ಮೇಳನದ ಸಲುವಾಗಿ ಕವಿತಾಕೃಷ್ಣ ರವರು '*ಜಯಮಂಗಲಿ*' ಯನ್ನು, ನಂಜುಂಡಸ್ವಾಮಿ ಬಿ. ರವರು '*ಕಲ್ಪಸಿರಿ*' ಯನ್ನು, ಕೊರಟಗೆರೆ ತಾಲೂಕಿನ ಅಗ್ರಹಾರದ ಶ್ರೀವೀರಭದ್ರಸ್ವಾಮಿ ಸೇವಾ ಸಮಿತಿಯ ವತಿಯಿಂದ ಚನ್ನಪ್ಪ ಟಿ. ಆರ್. ರವರು '*ವೀರಜ್ಯೋತಿ*' ಯನ್ನು, ಸಿರಾ ತಾಲೂಕು ೪ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಂಗವಾಗಿ ನಂದೀಶ್ವರ ಎನ್. ರವರು '*ಸೀರೆನಾಡು*' ನ್ನು ಸಂಪಾದಿಸಿದ್ದಾರೆ. ತುಮಕೂರಿನ ನಿದ್ರಘಟ್ಟ-ಗೊಲ್ಲಹಳ್ಳಿಯಲ್ಲಿ ನಡೆಸಿದ್ದ ಎರಡನೇ ಗಡಿನಾಡ ಕನ್ನಡ ಸಾಹಿತ್ಯ ಸಮ್ಮೇಳನದ ಸಲುವಾಗಿ ಮರಿದೇವರು ಸಿ. ಹೆಚ್. ರವರು '*ಹೆಂಜೇರು*' ನೆನಪಿನ ಸಂಚಿಕೆಯನ್ನೂ, ಕೊರಟಗೆರೆ ತಾಲೂಕು ಪ್ರಥಮ ಕನ್ನಡ ಸಾಹಿತ್ಯ ಸಮ್ಮೇಳನದ ಸಲುವಾಗಿ ಮಯೂರ ಗೋವಿಂದರಾಜು ರವರ ಸಂಪಾದಕತ್ವದಲ್ಲಿ '*ಸುವರ್ಣಮುಖಿ*' ಯನ್ನೂ, ಕುಂಚಿಟಿಗರ ಮಹಾಸಮ್ಮೇಳನದ ಅಂಗವಾಗಿ '*ಕುಂಚಿಟಿಗರು*' ಎಂಬ ಸ್ಮರಣ ಸಂಚಿಕೆಯನ್ನು ಮೀರಾಸಾಬಿಹಳ್ಳಿ ಶಿವಣ್ಣ ನವರು ಸಂಪಾದಿಸಿದ್ದಾರೆ. ಮಧುಗಿರಿ ತಾಲೂಕಿನ ೪ನೇ ಕನ್ನಡ ಸಾಹಿತ್ಯ ಸಮ್ಮೇಳನದ ನೆನಪಿನ ಸಂಚಿಕೆ '*ಗಿರಿಸಿರಿ*' ಯನ್ನು ಸುಬ್ರಮಣ್ಯ ಪ. ವಿ. ರವರು ಸಂಪಾದಿಸಿದ್ದಾರೆ. ಕಾಡಶೆಟ್ಟಿಹಳ್ಳಿ ಸತೀಶ್ ರವರ ಸಂಪಾದಕತ್ವದಲ್ಲಿ '*ಗುಬ್ಬಿಯಪ್ಪ*'. ಇದು ಗುಬ್ಬಿ ಗೋಸಲ ಶ್ರೀಚನ್ನಬಸವೇಶ್ವರಸ್ವಾಮಿ ನೂತನ ಶಿಲಾ ದೇಗುಲದ ಉದ್ಘಾಟನಾ ಸಮಾರಂಭದ ಸ್ಮರಣ ಸಂಚಿಕೆಯಾಗಿದೆ.

**ಪ್ರಕಟಿತ ಕೃತಿಗಳು :**

ಕಮಲೇಶ್ ರವರು '*ಚಿಕ್ಕನಾಯಕನಹಳ್ಳಿ ತಾಲೂಕಿನ ಕ್ರಿ.ಶ ೧೭೨೦ ರಿಂದ ಕ್ರಿ.ಶ ೧೯೦೦ ರವರೆಗಿನ ಐತಿಹಾಸಿಕ ಮತ್ತು ಸಾಂಸ್ಕೃತಿಕ ಅಧ್ಯಯನ*' ಎಂಬ ಕೃತಿಯನ್ನು ರಚಿಸಿದ್ದಾರೆ. ಈ ಕೃತಿಯಲ್ಲಿ ಚಿಕ್ಕನಾಯಕನಹಳ್ಳಿ ತಾಲೂಕು ಭೌಗೋಳಿಕ ವ್ಯಾಪ್ತಿಯಲ್ಲಿನ ಭೌಗೋಳಿಕ, ಪೌರಾಣಿಕ, ಪ್ರಾಗೈತಿಹಾಸಿಕ ಪರಿಚಯ, ಇಲ್ಲಿ ಆಳ್ವಿಕೆಯನ್ನು ಮಾಡಿದ ಹಾಗಲವಾಡಿ ಸಂಸ್ಥಾನದ ಪಾಳೆಯಗಾರರ ರಾಜಕೀಯ, ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ, ಪರಿಚಯವನ್ನು ಮತ್ತು ಸಾಂದರ್ಭಿಕವಾಗಿ ಮೈಸೂರು ಅರಸರು, ಮರಾಠರ ಕುರಿತ ಸಂಕ್ಷಿಪ್ತ

ವಿವರಗಳನ್ನು ಹಾಗೂ ಕೃಷಿ, ಪಶುಸಂಗೋಪನೆ, ತೋಟಗಾರಿಕೆ, ಗುಡಿ ಕೈಗಾರಿಕೆ, ಜನಪದ ಆಚರಣೆಗಳು, ಕಲೆ, ವೃತ್ತಿರಂಗಭೂಮಿ, ಕುರಿತ ವಿಫುಲವಾದ ಮಾಹಿತಿಯನ್ನು ನೀಡಲಾಗಿದೆ.

ಕಾವಲ್ಲಮ್ಮ ಆರ್. ರವರು *'ಮಧುಗಿರಿ ಮಹಾನಾಡು ಪ್ರಭುಗಳು'* ಎಂಬ ಗ್ರಂಥವನ್ನು ರಚನೆ ಮಾಡಿದ್ದಾರೆ. ಮಧುಗಿರಿಯ ಅರಸರ ಸ್ಥಾನಿಕ ನೆಲೆ, ಹಾಗೂ ಅವರ ಪೂರ್ವ ಚರಿತ್ರೆಯನ್ನು ವಿವರಿಸಿದ್ದಾರೆ. ಈ ಕೃತಿಯ ರಚನೆಯಲ್ಲಿ ಇಮ್ಮಡಿ ಚಿಕ್ಕಭೂಪಾಲನ ಸಾಂಗತ್ಯ ಕೃತಿ, ಶಾಸನಗಳು ಹಾಗೂ ಐತಿಹ್ಯಗಳನ್ನು ಆಧಾರವಾಗಿ ಬಳಸಿಕೊಂಡಿದ್ದಾರೆ. ಮಧುಗಿರಿ ಮಹಾನಾಡಪ್ರಭುಗಳ ರಾಜಕೀಯ, ವಂಶಾವಳಿ, ಆಡಳಿತ, ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳು, ಸಾಹಿತ್ಯ, ಕಲೆ ಮತ್ತು ವಾಸ್ತುಶಿಲ್ಪಗಳ ಕುರಿತು ಮಾಹಿತಿಯನ್ನು ನೀಡಿದ್ದಾರೆ.

ಕೆಂಕೆರೆ ಹನುಮಂತೇಗೌಡರು *'ತುಮಕೂರು ಜಿಲ್ಲೆಯ ಸಾಂಸ್ಕೃತಿಕ ವೀರರಕಾವ್ಯ ಮತ್ತು ಮಹಾಸತಿಯರ ಕಾವ್ಯ'* ಎಂಬ ಗ್ರಂಥವನ್ನು ಸಂಪಾದಿಸಿದ್ದಾರೆ. ಸದರಿ ಗ್ರಂಥದಲ್ಲಿ ವೀರಬಂಡಣ್ಣ ಸ್ವಾಮಿಯ ಜನಪದ ಗೀತೆಗಳು, ದಿಬ್ಬದ ವೀರಬೊಮ್ಮಣ್ಣನ ಕಾವ್ಯ, ವೀರನಾಗಪ್ಪನ ಪದ, ನಿಡಗಲ್ಲು ಶೂಲದ ಈರಣ್ಣನ ಕಾವ್ಯ, ಹುಳಿಯಾರು ಕೆಂಚಮ್ಮನ ಕಾವ್ಯ, ಮದ್ದೇ ಮತ್ತು ಕರೇಕ್ಯಾತನ ಹಳ್ಳಿಯ ಸ್ವಾರಮ್ಮನ ಪದಗಳು, ವಡ್ಡಗೆರೆ ಈರುನಾಗಮ್ಮನ ಕಾವ್ಯ, ಬರಗೂರು ವೀರಮ್ಮನ ಗೀತೆಗಳನ್ನು ಪ್ರಕಟಿಸಿದ್ದಾರೆ. *'ಸ್ಥಳೀಯ ಇತಿಹಾಸ ಹೊಸ ಶೋಧಗಳು'* ಎಂಬ ಇವರ ಇನ್ನೊಂದು ಕೃತಿಯಲ್ಲಿ ನಿಡಗಲ್ಲು ಚೋಳರ ಇತಿಹಾಸ, ನೊಳಂಬ ಶಬ್ದ ನಿಷ್ಪತ್ತಿಯ ಮೂಲ, ಹುಳಿಯಾರ ಪ್ರಭುಗಳು, ದೇವಗುಂದ ನಾಡ ಪ್ರಭುಗಳು, ಯಲಹಂಕ ನಾಡಪ್ರಭುಗಳು, ಗುಜ್ಜನಾಡು ಪ್ರಭುಗಳು, ಮಹಾಸಾಮಂತ ಆಲೂರು ಭೀಮನಾಯಕ, ಚಿತ್ರದೇವರ ಕಾವ್ಯ, ವೀರಕೇತರಾಯ, ಕುಂಚಿಟಿಗರ ಜಾನಪದದ ಸತ್ಯಾಂಶಗಳು, ಗಡಿನಾಡು ಮಡಕಸಿರಾದ ಸಾಂಸ್ಕೃತಿಕ ನೆಲೆಗಳು, ತುಮಕೂರು ಧಾರ್ಮಿಕ ಪರಂಪರೆ, ಗಡಿನಾಡ ಭಾಷಾ ಬಾಂಧವ್ಯ, ಎಂಬ ಲೇಖನಗಳನ್ನು ಪ್ರಕಟಿಸಲಾಗಿದೆ.

ಗಂಗಾಧರಯ್ಯ ಪಿ. ಎಂ. ರವರು ದೇವತೆಗಳ ಕುರಿತು *'ದೇವಗಾನಿಕೆಯರು', 'ಕಾಡು ಗೊಲ್ಲರು'* ಕೃತಿಗಳನ್ನು ರಚಿಸಿದ್ದಾರೆ.

ಗೋಪಾಲ್ ಆರ್. ರವರು 'ತುಮಕೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ' ಎಂಬ ಗ್ರಂಥವನ್ನು ಸಂಪಾದಿಸಿದ್ದಾರೆ. ಈ ಕೃತಿಯು ತುಮಕೂರು ಜಿಲ್ಲೆಗೆ ಸಂಬಂಧಿಸಿದಂತೆ ಬಿಡಿಯಾದ ಲೇಖನಗಳ ಸಂಗ್ರಹವಾಗಿದೆ.

ಚಿಕ್ಕಣ್ಣಯಣ್ಣೆಕಟ್ಟೆ ರವರು ಸಿರಾ ತಾಲೂಕಿನ ಜಾನಪದ ಕಾವ್ಯಗಳನ್ನು ಸಂಗ್ರಹಿಸಿದ್ದಾರೆ. ಚಿತ್ರದೇವರಕಾವ್ಯ, ಮಾಗೋಡು ರಂಗನಾಥನ ಕಾವ್ಯ, ಹಾಗೂ ಜುಂಜಪ್ಪನ ಕುರಿತು ಅಧ್ಯಯನವನ್ನು ಮಾಡಿರುತ್ತಾರೆ. ಇವರ *'ಕಿನ್ನರಿಯ ಮೇಲೆ ಕಿರುಗೆಜ್ಜೆ'* ಕೃತಿಯಲ್ಲಿ ಕುರುಬರ ಚರಿತ್ರೆ, ಗ್ರಾಮೀಣ ಬದುಕಿನ ಅಸಲಿ ಕಥೆಗಾರರಾಗಿ ಬೆಸಗರಹಳ್ಳಿ ರಾಮಣ್ಣರವರ ಕುರಿತು. ತುಮಕೂರು ಜಿಲ್ಲೆಯ ಹವ್ಯಾಸಿ ರಂಗಭೂಮಿ. ತುಮಕೂರು ತಾಲೂಕಿನ ಐತಿಹಾಸಿಕ ಪರಿಚಯ. ಸಮಾಜಮುಖಿಯಾಗಿ ದೊಡ್ಡರಂಗೇಗೌಡರ ಬಗೆಗೆ ವಿವರಣೆಯನ್ನೂ ಹಾಗೂ

ಇತರ ಬಿಡಿಯಾದ ಲೇಖನಗಳನ್ನು ರಚಿಸಿದ್ದಾರೆ. ಇವರು ತಮ್ಮ '*ತುಮಕೂರು ಜಿಲ್ಲೆಯ ಜಾತ್ರೆಗಳು*' ಕೃತಿಯಲ್ಲಿ ಇಲ್ಲಿನ ಪ್ರಾದೇಶಿಕ ವ್ಯಾಪ್ತಿಯಲ್ಲಿ ಆಚರಿಸಲಾಗುವ ಗ್ರಾಮದೇವತೆಗಳ ಜಾತ್ರೆಗಳನ್ನು ಕುರಿತು ವಿವರಿಸಿದ್ದಾರೆ. ಇವರ ಇತರ ಕೃತಿಗಳೆಂದರೆ '*ತುಮಕೂರು ಜಿಲ್ಲೆಯ ಜಾನಪದೀಯ ನೆಲೆಗಳು*', '*ಹೋಳೆದಂಡೆ ಕರಿಕೆ*', '*ಸಿರಾ ಸೀಮೆಯ ಕುರುಬರು*', '*ಜಾನಪದೀಯ ನೋಟ*', '*ಗೊರವರ ಶವಸಂಸ್ಕಾರ*', '*ಯಕ್ಷಗಾನ ಕಲಾವಿದರು*', '*ಇಟ್ಟಿಗೆ ಗೂಡು*', '*ಹರಿಶಿಣ ಕುರುಬ*' ಮುಂತಾದುವು.

ಚಿತ್ತಯ್ಯ ಪೂಜಾರ್‌ರವರು ಜನಪದೀಯ ನೆಲೆಯಲ್ಲಿ '*ನಿಡಗಲ್ಲು ದುರ್ಗದ ಕಥನ–ಸ್ಥಳೀಯ ಸಂಸ್ಕೃತಿ ಚರಿತ್ರೆಯ ನಿರ್ವಚನ*' ಎಂಬ ಸಂಶೋಧನಾ ಕೃತಿಯನ್ನು ರಚಿಸಿದ್ದಾರೆ. ನೊಳಂಬ ಪಲ್ಲವರು, ಚೋಳರು, ಕಲ್ಯಾಣದ ಚಾಲುಕ್ಯರು, ವಿಜಯನಗರ ಸಾಮ್ರಾಜ್ಯದ ಅರಸರು, ನಿಡಗಲ್ಲಿನ ಪಾಳೆಯಗಾರರ ಕುರಿತು ಸಂಕ್ಷಿಪ್ತವಾದ ವಿವರಗಳನ್ನು ನೀಡಿದ್ದಾರೆ. ನಿಡಗಲ್ಲು ಸಂಸ್ಥಾನಕ್ಕೆ ಸಂಬಂಧಿಸಿದ ದಾನಶಾಸನಗಳು, ವೀರಶಾಸನಗಳು, ವೀರಗಲ್ಲು, ನಿಡಗಲ್ಲು ದುರ್ಗಕ್ಕೆ ಸಂಬಂಧಿಸಿದ ಗ್ರಂಥಸ್ಥ ಚರಿತ್ರೆ, ಶಾಸನ ಸಾಹಿತ್ಯ, ಜಾನಪದ ಸಾಹಿತ್ಯವನ್ನು ಸಂಗ್ರಹಿಸಿದ್ದಾರೆ. ಇಲ್ಲಿನ ದೇವಾಲಯಗಳು, ಅಚರಣೆಗಳು ಅವುಗಳ ಬಗೆಗಿನ ವಿವರ, ಇಲ್ಲಿನ ಅವಶೇಷಗಳು ಕೋಟೆ ಕೊತ್ತಲ, ಫಿರಂಗಿಗಳು, ಕಣಜಗಳು, ಜಲಮೂಲಗಳು, ಸ್ಮಾರಕಗಳನ್ನು, ಹಾಗೂ ಇಲ್ಲಿನ ಆರ್ಥಿಕ ಅಂಶಗಳಾದ ವೃತ್ತಿ, ಕೃಷಿ ವ್ಯವಸ್ಥೆಯನ್ನು ಕುರಿತು ಅಧ್ಯಯನ ಮಾಡಿದ್ದಾರೆ. '*ಬಿಸಿಲಬೇವು*' ಇವರ ಇನ್ನೊಂದು ಕೃತಿಯಾಗಿದೆ. ಈ ಕೃತಿಯಲ್ಲಿ ಪಾವಗಡ ತಾಲೂಕಿನ ಸಾಂಸ್ಕೃತಿಕ ವೈಶಿಷ್ಟ್ಯಗಳು, ಜನಪದ ಕಲೆಗಳು, ಜಾತ್ರೆ ಮತ್ತು ಆಚರಣೆಗಳಂತಹ ಮೌಖಿಕ ಸಂಪ್ರದಾಯಗಳನ್ನು ಹಾಗೂ ಐತಿಹ್ಯಗಳು, ಜನಪದ ಗೀತೆಗಳು, ಲಾವಣಿಗಳು, ಒಗಟು, ಗಾದೆಗಳಂತಹ ಮೌಖಿಕ ಆಕರಗಳನ್ನು ಸಂಗ್ರಹಿಸಲಾಗಿದೆ.

ನಂಜುಂಡಸ್ವಾಮಿ ಬಿ. ತುಮಕೂರು ಸ್ಥಳೀಯ ಚರಿತ್ರೆಯ ಕುರಿತು ಹಲವು ಲೇಖನಗಳನ್ನು ರಚಿಸಿರುತ್ತಾರೆ '*ಕಲ್ಪಸಿರಿ*' ಇವರ ಸಂಪಾದಿತ ಕೃತಿಯಾಗಿದೆ. ಸೀಬಿ ನರಸಿಂಹದೇವಾಲಯದ ಕುರಿತು ಹಲವು ದಾಖಲೆಗಳನ್ನು ಪತ್ತೆ ಹಚ್ಚಿದ್ದಾರೆ. ಅಲ್ಲದೇ ವೀರಶೈವ ಸಾಹಿತ್ಯದ ಬಗ್ಗೆ ವಿಶೇಷವಾಗಿ ಅಧ್ಯಯನ ಮಾಡುವ ಮೂಲಕ ಜಿಲ್ಲೆಯ ಚರಿತ್ರೆಗೆ ಕೊಡುಗೆಯನ್ನು ನೀಡಿದ್ದಾರೆ.

ನಂದೀಶ ಸಿ. ಎನ್. ರವರು ರಚಿಸಿರುವ '*ಸಿರಾ ತಾಲೂಕು ದರ್ಶನ*' ಎಂಬ ಕೃತಿಯಲ್ಲಿ ಸಿರಾ ತಾಲೂಕಿನ ಭೌಗೋಳಿಕ ವ್ಯಾಪ್ತಿ, ಸನ್ನಿವೇಶ, ಇಲ್ಲಿನ ಪ್ರಾಗೈತಿಹಾಸಿಕ ಚರಿತ್ರೆ, ಇಲ್ಲಿನ ಜನಸಮುದಾಯಗಳ ಸಾಮಾಜಿಕ ಜೀವನ, ಭಾರತದ ಸ್ವಾತಂತ್ರ್ಯ ಹೋರಾಟದ ಸನ್ನಿವೇಶಕ್ಕೆ ಅವರು ಸ್ಪಂಧಿಸಿದ ರೀತಿ, ಧಾರ್ಮಿಕ ಆಚರಣೆಗಳು, ಕ್ರೀಡೆಯಲ್ಲಿ ಸಾಧನೆ, ಕ್ರೀಡೆಯ ಸ್ವರೂಪ, ಇಲ್ಲಿನ ಕಲೆ ಮತ್ತು ಕಲಾವಿದರ ವಿವರ, ಸಿರಾ ತಾಲೂಕಿನ ರಾಜಕೀಯ ಆಡಳಿತದ ಘಟಕಗಳು, ಸಿರಾದ ಸಾಹಿತ್ಯ ಮತ್ತು ಸಾಂಸ್ಕೃತಿಕ ಸಂಘ ಸಂಸ್ಥೆಗಳು,

ಪತ್ರಿಕೋದ್ಯಮ, ಹಾಗೂ ವಿದೇಶೀಯರು ಮತ್ತು ವಿದ್ವತ್ ವರ್ಗದ ದೃಷ್ಟಿಕೋನದಲ್ಲಿ ಸಿರಾ ಸೀಮೆಯ ಚರಿತ್ರೆಯನ್ನು ಕುರಿತು ಈ ಕೃತಿಯಲ್ಲಿ ವಿವರಿಸಲಾಗಿದೆ. ಅಂತೆಯೇ '*ಸಿರಾ ತಾಲೂಕಿನ ಶಾಸನಗಳು ಮತ್ತು ಸ್ಮಾರಕಗಳು*' ಎಂಬ ಇವರ ಇನ್ನೊಂದು ಕೃತಿಯಲ್ಲಿ ಸಿರಾ ತಾಲೂಕಿನಲ್ಲಿ ಲಭಿಸಿರುವ ಶಾಸನಗಳ ಪಾಠ ಮತ್ತು ವಿವರಗಳನ್ನು ಸಂಗ್ರಹಿಸಿದ್ದಾರೆ. ಸಿರಾ ತಾಲೂಕು ವ್ಯಾಪ್ತಿಯಲ್ಲಿನ ಸ್ಮಾರಕಗಳಾದ ದೇವಸ್ಥಾನಗಳು, ಮಸೀದಿ ಮತ್ತು ದರ್ಗಾಗಳು, ಚರ್ಚ್‌ಗಳು, ಹಾಗೂ ಸಿರಾದ ಕೋಟೆಯ ಬಗೆಗಿನ ಮಾಹಿತಿಯನ್ನು ನೀಡಿದ್ದಾರೆ.

ನಾಗರತ್ನಮ್ಮ ಎಸ್. ರವರು ತುಮಕೂರು ಜಿಲ್ಲೆಯಲ್ಲಿ ಸ್ವಾಂತಂತ್ರ್ಯ ಚಳವಳಿಯ ಬಗ್ಗೆ ಸಂಶೋಧನೆಯನ್ನು ಮಾಡಿದ್ದಾರೆ.

ನಾಗರಾಜು ಎಂ. ಹೆಚ್. ರವರು ಸಾಂಸ್ಕೃತಿಕ ನೆಲೆಯಲ್ಲಿ ಕುಂಚಿಟಿಗರ ಬಗ್ಗೆ ಅಧ್ಯಯನ ಮಾಡಿ '*ಕುಂಚಿಟಿಗರ ಸಾಂಸ್ಕೃತಿಕ ಇತಿಹಾಸ*' ಎಂಬ ಕೃತಿಯನ್ನು ರಚಿಸಿದ್ದಾರೆ. ತುಮಕೂರು ಜಿಲ್ಲೆಯ ಸಾಂಸ್ಕೃತಿಕ ನಾಯಕರಾದ ಈರುಗ್ಯಾತರಾಯ, ಈರುನಾಗಮ್ಮ, ಹುಳಿಯಾರು ಕೆಂಚಮ್ಮ, ವೀರನಾಗಪ್ಪ, ದಿಬ್ಬದ ವೀರಬೊಮ್ಮಣ್ಣ, ಮುಂತಾದವರು ಕುಂಚಿಟಿಗ ಸಮುದಾಯಕ್ಕೆ ಸೇರಿದವರೆಂಬ ನಂಬಿಕೆಯ ನೆಲೆಯಲ್ಲಿ ಇವರನ್ನು ಆರಾಧಿಸಲಾಗುತ್ತಿದೆ. ಈ ಸಂಶೋಧನಾ ವಿಷಯದ ವಿಶ್ಲೇಷಣೆಗೆ ಹಾಗೂ ಕುಂಚಿಟಿಗರ ಕುರಿತ ಸಾಂಸ್ಕೃತಿಕ ಒಳನೋಟಗಳನ್ನು ಅರಿಯಲು ಈ ಕೃತಿಯು ನೆರವಾಗಿದೆ.

ನಾಗರಾಜು ಓ. ರವರು ತುಮಕೂರು ಜಿಲ್ಲೆಯ ಗ್ರಾಮದೇವತೆಗಳ ಕುರಿತು ಅಧ್ಯಯನ ಮಾಡಿರುತ್ತಾರೆ ಇವರು ಹಲವು ದೃಷ್ಟಿಕೋನದಲ್ಲಿ ಗ್ರಾಮದೇವತೆಗಳು ಸಮಾಜದ ಮೇಲೆ ಪ್ರಭಾವಿಸಿರುವ ರೀತಿಯನ್ನು ವಿವರಿಸಿದ್ದಾರೆ. ಇವರ ಇನ್ನೊಂದು ಐತಿಹಾಸಿಕ ಕಾದಂಬರಿ '*ಕುರಂಗರಾಜ ವೈಭವ*' ದಲ್ಲಿ ಕುರಂಗರಾಯ ಎಂಬ ತಲಸಮುದಾಯದ ರಾಜನು ಆಳ್ವಿಕೆ ಮಾಡಿದ್ದರ ಬಗ್ಗೆ ವಿವರಿಸಿದ್ದಾರೆ. ಇದು ಚಾರಿತ್ರಿಕ ಸೂಕ್ಷ್ಮತೆಗಳನ್ನು ಒಳಗೊಂಡಿರುವ ಕೃತಿಯಾಗಿದೆ.

ಪರಮಶಿವಮೂರ್ತಿರವರು ಸಹ ಈ ಪ್ರದೇಶದ ಕುರಿತು ಅಧ್ಯಯನ ಮಾಡಿರುವ ವಿದ್ವಾಂಸರಲ್ಲಿ ಪ್ರಮುಖರಾಗಿದ್ದಾರೆ. ಇವರು ಈ ನೆಲೆಯ ಶಾಸನಗಳನ್ನು ಸೂಕ್ಷ್ಮವಾಗಿ ವಿಶ್ಲೇಷಿಸುತ್ತಿದ್ದಾರೆ. ಶಾಸನಗಳು ಮತ್ತು ಜನಪದೀಯ ಆಕರಗಳ ನೆಲೆಯಲ್ಲಿ ಇವರು ರಚಿಸಿರುವ '*ತುರುಗೋಳ್ ಸಂಕಥನ*' ಕೃತಿಯ ಮೂಲಕ ತುಮಕೂರಿನ ಸಾಂಸ್ಕೃತಿಕ ವೀರರ ಬಗ್ಗೆ ದೃಢೀಕರಿಸುವ ಪ್ರಯತ್ನ ಮಾಡಬಹುದಾಗಿದೆ.

ಮ. ಲ. ನ. ಮೂರ್ತಿ ರವರು ಮಧುಗಿರಿಯ ದಂಡಿನಮಾರಮ್ಮ ದೇವತೆಯ ಕುರಿತು ವಿಶೇಷವಾಗಿ ಅಧ್ಯಯನ ಮಾಡಿರುತ್ತಾರೆ.

ಮೀರಾಸಾಬಿಹಳ್ಳಿ ಶಿವಣ್ಣನವರು ಕಾಡುಗೊಲ್ಲರ ಸಾಂಸ್ಕೃತಿಕ ವೀರರಾದ '*ಎತ್ತಪ್ಪ ಜುಂಜಪ್ಪ ಸಾಂಸ್ಕೃತಿಕ ಅಧ್ಯಯನ*' ದಲ್ಲಿ ಕಾಡುಗೊಲ್ಲರ ಬುಡಕಟ್ಟು ವೀರರು, ಪಶುಪಾಲಕ ವೀರರ ಕಥೆಗಳ ಕುರಿತು ವಿವರಗಳನ್ನು ಒದಗಿಸಿದ್ದಾರೆ. '*ಗೊಲ್ಲಕವಾಗ*', '*ದುರ್ಗ ಜಾನಪದ*',

ಇವರ ಇತರ ಕೃತಿಗಳಾಗಿವೆ. ಪಾವಗಡ ತಾಲೂಕಿನ ಸಾಂಸ್ಕೃತಿಕ ವೀರರ ಬಗ್ಗೆ ರಂಗಲಕ್ಷ್ಮಿರವರು ಅಧ್ಯಯನ ಮಾಡಿರುತ್ತಾರೆ. ಹಾರ್ಲಹಳ್ಳಿ ಯಲ್ಲಮ್ಮ, ಸಾಸುವುಲ ಚಿನ್ನಮ್ಮ, ಗುಂಡ್ಲಹಳ್ಳಿ ಈರಣ್ಣ ಮುಂತಾದ ಸಾಂಸ್ಕೃತಿಕ ನಾಯಕರನ್ನು ಕುರಿತು ವಿವರಣೆಯನ್ನು ನೀಡಿದ್ದಾರೆ.

ಮುದ್ದುವೀರಪ್ಪ ಕೆ. ವಿ. ರವರು ತುಮಕೂರು ಜಿಲ್ಲೆಯ ಕೋಟೆ ಕೊತ್ತಲುಗಳ ಬಗ್ಗೆ ಜಾನಪದೀಯ ನೆಲೆಯಲ್ಲಿ ಅಧ್ಯಯನ ಮಾಡಿದ್ದಾರೆ. ಸದರಿ ಸಂಶೋಧನಾ ಪ್ರಬಂಧವನ್ನು '*ತುಮಕೂರು ಜಿಲ್ಲೆಯ ಕೋಟೆಗಳ ಸಾಂಸ್ಕೃತಿಕ ಒಳನೋಟಗಳು*' ಎಂಬ ಗ್ರಂಥವನ್ನು ಪ್ರಕಟಿಸಲಾಗಿದೆ. ಈ ಕೃತಿಯಲ್ಲಿ ತುಮಕೂರು ಜಿಲ್ಲೆಯ ಚಾರಿತ್ರಿಕ ಹಿನ್ನೆಲೆ, ಲಿಖಿತ ಸಾಹಿತ್ಯದಲ್ಲಿ ಮತ್ತು ಮೌಖಿಕ ಸಾಹಿತ್ಯದಲ್ಲಿ ಕೋಟೆಗಳ ಬಗೆಗಿನ ಉಲ್ಲೇಖಗಳನ್ನು ಸಂಗ್ರಹಿಸಿದ್ದಾರೆ. ಚನ್ನರಾಯನದುರ್ಗ, ಮಿಡಿಗೇಶಿ, ಕೊರಟಗೆರೆ, ಸಿರಾ, ದೇವರಾಯನದುರ್ಗ, ಹುಲಿಯೂರು ದುರ್ಗ, ಹುತ್ರಿದುರ್ಗ, ಹಾಗಲವಾಡಿ, ನಿಡಗಲ್ಲು, ದೇವರಬೆಟ್ಟದಕೋಟೆ, ಬಂಗಾರನಾಯಕನ ದುರ್ಗ, ಭಸ್ಮಾಂಗಿ ಕೋಟೆಗಳನ್ನು ಅಧ್ಯಯನ ಮಾಡಿದ್ದಾರೆ. ಕೋಟೆಗಳಿರುವ ಸ್ಥಳಗಳ ಹೆಸರಿನ ನಿಷ್ಪತ್ತಿ, ಸಂಸ್ಥಾನಗಳ ಹುಟ್ಟು, ಕೋಟೆಗಳ ನಿರ್ಮಾಣದ ಬಗೆಗಿನ ಮೌಖಿಕ ಕಥನಗಳು, ಬಲಿ ಹಾಗೂ ಇತರ ಆಚರಣೆಗಳಿಗೆ ಸಂಬಂಧಿಸಿದ ಮಾಹಿತಿಯನ್ನು ನೀಡಿದ್ದಾರೆ.

ಯೋಗೀಶ್ವರಪ್ಪ ಡಿ. ಎನ್. ರವರು '*ಹಾಗಲವಾಡಿ ನಾಯಕರು*' ಎಂಬ ಸಂಶೋಧನಾತ್ಮಕ ಕೃತಿಯನ್ನು ರಚಿಸಿರುತ್ತಾರೆ. ಈ ಕೃತಿಯಲ್ಲಿ ರಾಜಕೀಯ ಚರಿತ್ರೆ, ಆಡಳಿತದ ಸ್ವರೂಪ, ಆರ್ಥಿಕ ನೆಲೆಗಟ್ಟು, ಸಾಮಾಜಿಕ ಸ್ಥಿತಿಗತಿ, ಧಾರ್ಮಿಕ ಸ್ವರೂಪ, ಹಾಗಲವಾಡಿ ನಾಯಕರ ಕಾಲದ ಸಾಹಿತ್ಯ, ಕಲೆ ಮತ್ತು ವಾಸ್ತುಶಿಲ್ಪಗಳನ್ನು ಕುರಿತು ವಿವರಿಸಿದ್ದಾರೆ. ಇವರು ರಚಿಸಿರುವ '*ಮಧ್ಯಕಾಲೀನ ಕರ್ನಾಟಕದ ಪಾಳೆಯಗಾರರು*' ಎಂಬ ಇನ್ನೊಂದು ಕೃತಿಯಲ್ಲಿ ಅಮರನಾಯಕ, ಪಾಳೆಯಗಾರ ಪರಿಕಲ್ಪನೆಗಳ ಕುರಿತು ವಿವರಿಸಿದ್ದಾರೆ. ವಿಜಯನಗರ ಸಾಮ್ರಾಜ್ಯ ಕಾಲದ ಕೆಲವು ನಾಯಕ ಮನೆತನಗಳಾದ ಹೊಳೆನರಸೀಪುರದ ಪ್ರಭುಗಳು, ಬೇಲೂರು ನರಸೀಪುರ ಮತ್ತು ಶೆಂಜಿ ನಾಯಕ ಮನೆತನಗಳು, ಜರಿಮಲೆ ನಾಯಕರು, ಚಿತ್ರದುರ್ಗ ಜಿಲ್ಲೆಯ ಹಟ್ಟಿ ಪಾಳೆಯಗಾರರು, ಗುಡೇಕೋಟೆ ಪಾಳೆಯಗಾರರು, ನಿಡಗಲ್ಲು ನಾಯಕರು, ಹೊಳವನಹಳ್ಳಿ–ಕೊರಟಗೆರೆಯ ಸ್ಥಾನಿಕ ಪ್ರಭುಗಳು, ಮತ್ತೋಡು ಗಿರಿಯಪ್ಪ ಮತ್ತು ವಿಜಯನಗರದ ವೆಂಕಟಪತಿರಾಯರ ಬಗ್ಗೆ ವಿವರಿಸಿದ್ದಾರೆ. ಚಿತ್ರದುರ್ಗದ ಭರಮಣ್ಣನಾಯಕರ ಕೌಟುಂಬಿಕ ಜೀವನ ಸಮೀಕ್ಷೆಯನ್ನೂ, ಪೆನುಗೊಂಡೆ ರಾಜ್ಯ ಮತ್ತು ಅದರ ಮಹಾಮಾಂಡಲೇಶ್ವರರ ಬಗ್ಗೆ ವಿವರಿಸಿದ್ದಾರೆ. '*ಕಲ್ಪಶೋಧ*' ಎಂಬ ಇವರ ಮತ್ತೊಂದು ಗ್ರಂಥವು ತುಮಕೂರು ಜಿಲ್ಲೆಯ ಸಂಶೋಧನಾ ಲೇಖನಗಳ ಸಂಗ್ರಹವಾಗಿದೆ. ಇಲ್ಲಿನ ಹೊಯ್ಸಳ ಪ್ರತಿನಿಧಿಗಳಾದ ಕೈದಾಳ ಸಾಮಂತರು, ಬಿಳಿಗೆರೆಯ ಹೊಯ್ಸಳ ಸಾಮಂತರು, ಶೆಟ್ಟಿಕೆರೆಯ ಗೋಪಾಲದಣ್ಣಾಯಕರ ಬಗ್ಗೆ ಮಾಹಿತಿಯಿದೆ. ಚರಿತ್ರೆಯನ್ನು

ಕಟ್ಟಿದ ಚಿಕ್ಕ ಅರಸರು ಎಂಬ ಶೀರ್ಷಿಕೆಯಡಿಯಲ್ಲಿ ವಿಜಯನಗರ ಕಾಲದ ನಾಯಕರು, ಹಾಗಲವಾಡಿ ಅಮರ ನಾಯಕರು, ನಿಡಗಲ್ಲು ನಾಯಕರು, ಬಿಜ್ಜಾವರದ ಪ್ರಭುಗಳು, ಮಿಡಿಗೇಶಿ ನಾಯಕರು ಹಾಗೂ ಸಿರಾ ನವಾಬರ ಕುರಿತು ಮಾಹಿತಿಯನ್ನು ನೀಡಿದ್ದಾರೆ. ಅಲ್ಲದೇ ಈ ಕೃತಿಯಲ್ಲಿ ಸಿದ್ಧಗಂಗಾಮಠದ ಸ್ಥಾಪನೆಯ ಬಗ್ಗೆ, ಎಡೆಯೂರು ಸಿದ್ಧಲಿಂಗೇಶ್ವರ, ತೋಂಠದ ಸಿದ್ಧಲಿಂಗೇಶ್ವರರು, ಕುರಿತು ವಿವರಣೆಯನ್ನು ನೀಡಿದ್ದಾರೆ. ಇಲ್ಲಿನ ಕೋಟೆಗಳು, ಕೆರೆಗಳ ಹಾಗೂ ಶಾಸನೋಕ್ತ ಸ್ಥಳನಾಮಗಳನ್ನು ಕುರಿತು ವಿವರಿಸಲಾಗಿದೆ.

ಯೋಗೀಶ್ ಎನ್. ರವರು ಪುರವರ ಗ್ರಾಮದ ಕುರಿತು ಸಂಶೋಧನಾ ಕೃತಿಯನ್ನು ರಚಿಸಿದ್ದಾರೆ. ಈ ಗ್ರಾಮ ಪರಿಸರದ ಸಾಂಸ್ಕೃತಿಕ ಅಂಶಗಳನ್ನು ಈ ಕೃತಿಯಲ್ಲಿ ವಿವರಿಸಿದ್ದಾರೆ.

ಲಕ್ಷ್ಮಣ್ ತೆಲಗಾವಿರವರು ೧೯೮೭ ರಲ್ಲಿ ಹೆಚ್. ವಿ. ವೀರನಾಯಕ ರವರ ಸ್ಮರಣಾರ್ಥ *'ಹರತಿಸಿರಿ'* ಎಂಬ ಕೃತಿಯನ್ನು ಸಂಪಾದಿಸಿದ್ದಾರೆ. ಈ ಕೃತಿಯನ್ನು ಹರತಿ ನೆನಪಿನ ಸಂಪುಟ ಪ್ರಕಟಣಾ ಸಮಿತಿ ಪರವಾಗಿ ವಾಲ್ಮೀಕಿ ಸಾಹಿತ್ಯ ಸಂಪದ ಹರ್ತಿಕೋಟೆ, ಹಿರಿಯೂರು ತಾಲೂಕು ರವರು ಪ್ರಕಟಿಸಿದ್ದಾರೆ. ಈ ಕೃತಿಯಲ್ಲಿ ಗುಂಡಬ್ರಹ್ಮಯ್ಯಗಳ ಐತಿಹ್ಯಗಳು, ವೀರಶೈವ ಪುರಾಣಗಳಲ್ಲಿ ಚಾರಿತ್ರಿಕ ಅಂಶಗಳು, ಕುಮಾರರಾಮನಿಗೆ ಸಂಬಂಧಿಸಿದ ಉಲ್ಲೇಖಗಳನ್ನು ದಾಖಲಿಸಲಾಗಿದೆ. ಹಾಗೂ ಐತಿಹ್ಯಗಳ ಐತಿಹಾಸಿಕ ವಿಶ್ಲೇಷಣೆಗಳನ್ನು ಮಾಡಲಾಗಿದೆ. ಮೌಖಿಕ ಆಕರಗಳ ನೆಲೆಯಲ್ಲಿ ಚರಿತ್ರೆಯನ್ನು ಕಟ್ಟಲು ಪ್ರಯತ್ನಿಸಿರುವ ಕೃತಿಗಳಲ್ಲಿ ಇದು ಪ್ರಮುಖವಾಗಿದೆ.

ಲಕ್ಷ್ಮಿದೇವಿ ಎಲ್. ರವರು '*ಕೋಲಾರ ಜಿಲ್ಲೆಯ ಐತಿಹ್ಯಗಳು*' ಎಂಬ ವಿಷಯದ ಕುರಿತು ಹಂಪಿಯ ಕನ್ನಡ ವಿಶ್ವವಿದ್ಯಾನಿಲಯಕ್ಕೆ (ಜನಪದ ಅಧ್ಯಯನ ವಿಭಾಗ) ಮಹಾಪ್ರಬಂಧವನ್ನು ಸಲ್ಲಿಸಿರುತ್ತಾರೆ. ಇದು ಪ್ರಕಟವಾಗಿರುತ್ತದೆ. ಈ ಕೃತಿಯಲ್ಲಿ ಐತಿಹ್ಯದ ಲಕ್ಷಣಗಳು, ವೈಶಿಷ್ಟ್ಯಗಳನ್ನು ವಿವರಿಸಲಾಗಿದೆ. ಸ್ಥಳಪುರಾಣಗಳು, ವಿಧಿ-ನಿಷೇಧಗಳು, ನಂಬಿಕೆಗಳು, ಪೌರಾಣಿಕ ಅಂಶಗಳನ್ನು ಕುರಿತು ವಿವರಿಸಿದ್ದಾರೆ. ವಿಶೇಷವಾಗಿ ಕೌಟುಂಬಿಕ, ಪ್ರಾಕೃತಿಕ, ಸಾಮುದಾಯಿಕ, ದೈವಸಂಬಂಧಿ ಐತಿಹ್ಯಗಳನ್ನು ವಿವರಿಸಿದ್ದಾರೆ.

ವಡ್ಡಗೆರೆ ನಾಗರಾಜಯ್ಯನವರು ತಮ್ಮ ತಾಯಿ ಕದರಮ್ಮ ಮತ್ತು ಅವರ ವಾರಿಗೆಯ ಜನಪದ ಕವಯತ್ರಿಯರಿಂದ ಹಾಡಿಸಿ '*ವಡ್ಡಗೆರೆ ನಾಗಮ್ಮ ಮಹಾಸತಿಕಾವ್ಯ*' ವನ್ನು ಸಂಪಾದಿಸಿರುತ್ತಾರೆ. ಹಾಗೂ '*ವಡ್ಡಗೆರೆ ವೀರನಾಗಮ್ಮ ಕಾವ್ಯ*' ವನ್ನು ವೈಜಯಂತಿಮಾಲ ರವರ ಸಂಪಾದಕತ್ವದಲ್ಲಿ ಬೆಂಗಳೂರಿನ ಕನ್ನಡ ಸಾಹಿತ್ಯ ಪರಿಷತ್ತಿನ ವತಿಯಿಂದ ೧೯೮೮ ರಲ್ಲಿ ಪ್ರಕಟಿಸಲಾಗಿದೆ.

ಶಂಕರನಾರಾಯಣ ತೀ. ನಂ. ರವರು ಪೂಜಾರಿ ಶಿವಣ್ಣ ರವರಿಂದ ಜುಂಜಪ್ಪನ ಕಾವ್ಯವನ್ನು ಹಾಡಿಸಿ ಸಂಗ್ರಹಿಸಿದ್ದಾರೆ. *'ಕಾಡುಗೊಲ್ಲರ ಸಂಪ್ರದಾಯಗಳು ಮತ್ತು ನಂಬಿಕೆಗಳು'* ಕೃತಿಯಲ್ಲಿ ಕಾಡುಗೊಲ್ಲರ ಸಂಸ್ಕೃತಿ, ಸಂಪ್ರದಾಯಗಳ ಕುರಿತು ಮಾಹಿತಿಯನ್ನು ನೀಡಿದ್ದಾರೆ.

ಈ ಕೃತಿಯನ್ನು ಆಂಗ್ಲಭಾಷೆಗೆ ಅನುವಾದಿಸಿ ಜನಪದ ವಿಶ್ವವಿದ್ಯಾನಿಲಯವು ಪ್ರಕಟಿಸಿದೆ. *'ಜಾನಪದ ಮೈಲಿಗಲ್ಲುಗಳು', 'ಜಾನಪದ ವಿಚಾರ',* ಇವರ ಇತರ ಕೃತಿಗಳಾಗಿವೆ.

ಶಂಕರಪ್ಪ ಎಂ. ಪಿ. ರವರು ಅಧ್ಯಯನ ಮಾಡಿರುವ ಸಮಾಜಶಾಸ್ತ್ರೀಯ ನೆಲೆಯಲ್ಲಿ ನೊಳಂಬರ ಕುರಿತು ಮಾಹಿತಿಯನ್ನು ನೀಡಿದ್ದಾರೆ.

ಶ್ರೀಪಾದಭಟ್ ಮತ್ತು ಪುಟ್ಟರಾಜು ಎನ್. ರವರು *'ತುಮಕೂರು ಜಿಲ್ಲೆಯ ಸ್ಥಳನಾಮಗಳು'* ಎಂಬ ಕೃತಿಯನ್ನು ರಚಿಸಿರುತ್ತಾರೆ. ಈ ಕೃತಿಯಲ್ಲಿ ತುಮಕೂರು ಜಿಲ್ಲೆಯ ಗ್ರಾಮಗಳ ಹೆಸರಿನ ವೈಶಿಷ್ಟ್ಯತೆ ಮತ್ತು ಅವುಗಳ ಚಾರಿತ್ರಿಕ ಹಿನ್ನೆಲೆಯನ್ನು ನೀಡಿರುತ್ತಾರೆ. ಅವರು ಇಲ್ಲಿನ ಸ್ಥಳನಾಮಗಳನ್ನು ವಸತಿ, ಭೌಗೋಳಿಕ, ಪ್ರಾಣಿವಾಚಕ, ಸಸ್ಯವಾಚಕ, ಐತಿಹಾಸಿಕ, ಜನಾಂಗೀಯ ಸ್ಥಳನಾಮಗಳು, ಹಾಗೂ ಇತರೆ ಸ್ಥಳನಾಮಗಳು ಎಂದು ವರ್ಗೀಕರಿಸಿರುತ್ತಾರೆ.

## ೧.೫ ಅಧ್ಯಯನದ ವಿಧಾನ

ಈ ಸಂಶೋಧನೆಯಲ್ಲಿ ಇತಿಹಾಸ ಸಂಶೋಧನಾ ಮಾರ್ಗದ ನಿಯಮಗಳನ್ನು ಅನುಸರಿಸಲಾಗಿದೆ. ಇತಿಹಾಸದ ಸಂಶೋಧನಾ ಮಾರ್ಗದ ಸೂತ್ರಗಳಿಗೆ ಅನುಗುಣವಾಗಿ

ವಿಷಯ ಸಂಗ್ರಹಣೆ
ದತ್ತಾಂಶಗಳ / ಆಕರಗಳ ಬಾಹ್ಯ ಮತ್ತು ಆಂತರಿಕ ವಿಮರ್ಶೆ
ದತ್ತಾಂಶಗಳ ವಿಶ್ಲೇಷಣೆ
ಜೋಡಣೆ

ಈ ಸಂಶೋಧನಾ ಮಾರ್ಗಗಳನ್ನು ಅನುಸರಿಸಿ ನಿರೂಪಣಾ ಶೈಲಿಗೆ ಅನುಗುಣವಾಗಿ ಈ ಮಹಾಪ್ರಬಂಧವನ್ನು ರಚನೆ ಮಾಡಲಾಗಿದೆ.

- ಹೊಸದಾದ ಮಾಹಿತಿಗಳನ್ನು ಸಂಗ್ರಹಿಸಿ ಜ್ಞಾನದ ದಿಗಂತವನ್ನು ವಿಸ್ತರಿಸುವುದು,
- ಸಂಗ್ರಹಿಸಿದ ಮಾಹಿತಿಗಳನ್ನು ವಿಭಿನ್ನ ದೃಷ್ಟಿಕೋನಗಳಿಂದ ವಿಶ್ಲೇಷಿಸುವ ಮೂಲಕ ಹೊಸ ವಿಚಾರಗಳನ್ನು ಕಂಡುಕೊಳ್ಳುವುದು,
- ದತ್ತಾಂಶಗಳನ್ನು ಪರಿಷ್ಕರಿಸಿ ವಾಸ್ತವಾಂಶಗಳನ್ನು ಸಿದ್ಧಾಂತಗಳಾಗಿ ನಿರೂಪಿಸುವುದು,

ಮೇಲ್ಕಂಡ ಈ ಮೂರು ಸಂಶೋಧನಾ ವಿಧಾನಗಳಲ್ಲಿ ಎರಡನೆಯದಾದ, ಸಂಗ್ರಹಿಸಿದ ಮಾಹಿತಿಗಳನ್ನು ವಿಭಿನ್ನ ದೃಷ್ಟಿಕೋನಗಳಿಂದ ವಿಶ್ಲೇಷಿಸುವ ಮೂಲಕ ಹೊಸ ವಿಚಾರಗಳನ್ನು ಕಂಡುಕೊಳ್ಳಲಾಗಿದೆ. ಇದಕ್ಕಾಗಿಯೇ ಸಂಶೋಧನಾ ವಿಷಯಕ್ಕೆ ಪೂರಕವಾದ ಅಪ್ರಕಟಿತ ಸಂಶೋಧನಾ ಪ್ರಬಂಧಗಳು, ಪ್ರಕಟಿತ ಕೃತಿಗಳು, ಸ್ಮರಣ ಸಂಚಿಕೆಗಳು, ಪತ್ರಿಕೆಗಳು, ನಿಯತಕಾಲಿಕೆಗಳನ್ನು ಅಭ್ಯಸಿಸುವ ಮೂಲಕ ದತ್ತಾಂಶಗಳನ್ನು ಸಂಗ್ರಹ ಮಾಡಿಕೊಂಡು ಮೌಖಿಕ ಮತ್ತು ಲಿಖಿತ ಆಕರಗಳೊಂದಿಗೆ ತುಲನೆ ಮಾಡಲಾಗಿದೆ. ಕ್ಷೇತ್ರಕಾರ್ಯವನ್ನು ಕೈಗೊಂಡು ಸಂಬಂಧಿತ ವಿಷಯಾಸಕ್ತ ವ್ಯಕ್ತಿಗಳು, ವಿದ್ವಾಂಸರನ್ನು ಭೇಟಿಯಾಗಿ ಅವರೊಂದಿಗೆ ಸಂದರ್ಶನ ಮತ್ತು ಚರ್ಚೆ ಮಾಡಲಾಗಿದೆ. ಮೌಖಿಕ ಆಕರಗಳಾದ

ಲಾವಣಿಗಳು, ಕಥನ ಗೀತೆಗಳು, ಐತಿಹ್ಯಗಳು, ಪುರಾಣ, ಪ್ರತೀತಿ, ಸಾಮಾನ್ಯ ನಂಬಿಕೆಗಳು, ಜನಪದ ಕಥೆಗಳು, ಮಹಾಕಾವ್ಯಗಳನ್ನು ಸಂಗ್ರಹ ಮಾಡಿಕೊಳ್ಳಲಾಗಿದ್ದು, ಮೌಖಿಕ ವಿವರಗಳನ್ನು ದೃಕ್ ಶ್ರವಣೋಪಕರಣಗಳ ಮೂಲಕ ದಾಖಲಿಸಿಕೊಳ್ಳಲಾಗಿದೆ. ಇವುಗಳನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಆ ಮೂಲಕ ಅಧ್ಯಯನದ ಫಲಿತಗಳನ್ನು ಹಾಗೂ ಸಮುದಾಯದ ನೆಲೆಯ ಚರಿತ್ರೆಯಲ್ಲಿ ವೈಶಿಷ್ಟ್ಯತೆಗಳನ್ನು ಗುರುತಿಸಲಾಗಿದೆ.

ತುಮಕೂರು ಜಿಲ್ಲೆಯ ವ್ಯಾಪ್ತಿಯಲ್ಲಿ ಲಭ್ಯವಾಗುವ ಕಾವ್ಯಗಳು, ಐತಿಹ್ಯಗಳು, ಹಾಗೂ ಜನಾಭಿಪ್ರಾಯಗಳಲ್ಲಿ ವ್ಯಕ್ತಪಡಿಸಿರುವ ಮಾಹಿತಿಯನ್ನು ಲಿಖಿತ ಆಕರಗಳೊಂದಿಗೆ ತುಲನೆ ಮಾಡುವ ಮೂಲಕ ಸಮುದಾಯಗಳ ಚರಿತ್ರೆಯನ್ನು ರಚಿಸುವ ಪ್ರಯತ್ನವನ್ನು ಮಾಡಲಾಗಿದೆ. ಸಮುದಾಯದ ನಾಯಕರನ್ನು ಚಾರಿತ್ರಿಕ ನೆಲೆಯಲ್ಲಿ ವಿಶ್ಲೇಷಿಸುವ ಸಲುವಾಗಿ ಮೌಖಿಕ ಆಕರಗಳಲ್ಲಿ ವ್ಯಕ್ತವಾಗುವ ಅಂಶಗಳಿಗೆ ಪೂರಕವಾಗಿ ಸಮಕಾಲೀನ ಅಭಿಪ್ರಾಯಗಳು, ಸಾಹಿತ್ಯಿಕ ಆಕರಗಳನ್ನು ಸಾಂದರ್ಭಿಕವಾಗಿ ಬಳಸಿಕೊಳ್ಳಲಾಗಿದೆ. ತುಮಕೂರು ಪರಿಸರದ ಜನಸಮುದಾಯದಲ್ಲಿ ಲಭಿಸುವ ಮೌಖಿಕ ಮತ್ತು ಲಿಖಿತ ಆಕರಗಳನ್ನು ಅಧ್ಯಯನ ಮಾಡಲಾಗಿದೆ. ಚಾರಿತ್ರಿಕ ಸಂಶೋಧನಾ ವಿಧಾನ ಮತ್ತು ಸ್ವರೂಪಕ್ಕೆ ಅನುಗುಣವಾಗಿ ಭಾಷೆ, ಪ್ರದೇಶ, ಜಾತಿ, ಮತ, ಕಾಲ, ಸನ್ನಿವೇಶಕ್ಕೆ ಸಂಬಂಧಿಸಿದಂತೆ ಅಧ್ಯಯನವನ್ನು ಮಾಡಲಾಗಿದೆ.

## ೧.೬ ಅಧ್ಯಯನದ ಸ್ವರೂಪ

ಇತಿಹಾಸಕಾರನು ಗತಕಾಲದ ನಿರೂಪಕನಷ್ಟೇ ಆಗಿರದೇ ಆತನು ಇತಿಹಾಸದ ಕಟ್ಟುಗನಾಗಿರುತ್ತಾನೆ. ಇ. ಎಚ್. ಕಾರ್‌ರವರು ಅಭಿಪ್ರಾಯಪಡುವಂತೆ ಚರಿತ್ರೆಯು ವರ್ತಮಾನ ಮತ್ತು ಭೂತಕಾಲದ ನಡುವೆ ನಡೆಯುವ ಮುಕ್ತಾಯವಿಲ್ಲದ ಸಂವಾದವಾಗಿದೆ. ಈ ಹಿನ್ನೆಲೆಯಲ್ಲಿ ಇತಿಹಾಸವನ್ನು ಕಟ್ಟಿಕೊಡುವಾತನು ತಾನು ಅಂತಹ ನೆಲದ ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ ತಲ್ಲಣಗಳನ್ನು ಅರಿತಿರಬೇಕು. ಆ ನೆಲದ ಚರಿತ್ರೆ ಆತನ ದೃಷ್ಟಿಕೋನದಿಂದ ಪ್ರಭಾವಿತವಾಗಿರುತ್ತದೆ. ಈ ಹಿನ್ನೆಲೆಯಲ್ಲಿ ಎ. ವಿ. ನಾವಡರವರು ಅಭಿಪ್ರಾಯಪಡುವಂತೆ ಇತಿಹಾಸದ ಆಕರಗಳಾದ ನಿರೂಪಿತ ಪಠ್ಯ, ಹಾಗೂ ಹಾಡಿದ ಪಠ್ಯಗಳ ನಡುವೆ ವ್ಯತ್ಯಾಸವು ಕಂಡುಬರುತ್ತದೆ. ಇದಕ್ಕೆ ಗಾಯಕರ ಕಾವ್ಯ ನಿರ್ವಹಣದಲ್ಲಿ ರೂಪುಗೊಳ್ಳುವ ಬಹುರೂಪತೆ, ಪುನರಾವೃತ್ತಿ, ಹಾಗೂ ಅಲಂಕಾರಿಕತೆಗಳು ಕಾರಣವಾಗಿರುತ್ತವೆ. ಇದನ್ನೇ ಲಾರಿಹ್ಯಾಂಕೋ ರವರು ಮೌಖಿಕ ಕಾವ್ಯವೊಂದು ಬಹುರೂಪತೆಯಲ್ಲಿ ಉಸಿರಾಡುತ್ತದೆ ಎಂಬುದನ್ನು ಗುರುತಿಸಿದ್ದಾರೆ. ಸದರಿ ತುಮಕೂರು ಜಿಲ್ಲೆಯಲ್ಲಿ ಲಭ್ಯವಿರುವ ಮೌಖಿಕ ಆಕರಗಳನ್ನು ಅಧ್ಯಯನ ವಿಷಯದ ಚಾರಿತ್ರಿಕ ವಿಶ್ಲೇಷಣೆಗಾಗಿ ಈ ಕೆಳಕಂಡಂತೆ ಅಧ್ಯಾಯಗಳಾಗಿ ವರ್ಗೀಕರಿಸಲಾಗಿದೆ.

ಮೊದಲನೆಯ ಅಧ್ಯಾಯ **'ಪ್ರಸ್ತಾವನೆ'** ಯಲ್ಲಿ ಮೌಖಿಕ ಇತಿಹಾಸದ ಪೀಠಿಕೆ, ಅಧ್ಯಯನದ ಉದ್ದೇಶ, ಅಧ್ಯಯನದ ವ್ಯಾಪ್ತಿ, ಅಧ್ಯಯನದ ಸಮೀಕ್ಷೆ, ಅಧ್ಯಯನದ ವಿಧಾನ ಹಾಗೂ ಅಧ್ಯಯನದ ಸ್ವರೂಪಗಳನ್ನು ಕುರಿತು ವಿವರಿಸಲಾಗಿದೆ.

ಎರಡನೆಯ ಅಧ್ಯಾಯ **'ಮೌಖಿಕ ಚರಿತ್ರೆ'** ಯಲ್ಲಿ ಮೌಖಿಕ ಚರಿತ್ರೆಯ ಅರ್ಥ ಮತ್ತು ಸ್ವರೂಪ, ಮೌಖಿಕ ಚರಿತ್ರೆ ಮತ್ತು ಇತಿಹಾಸ ಲೇಖನ ಕಲೆ, ಮೌಖಿಕ ಚರಿತ್ರೆಯ ಮಹತ್ತ್ವ, ಮೌಖಿಕ ಚರಿತ್ರೆ ಮತ್ತು ಮೌಖಿಕ ಸಂಪ್ರದಾಯ, ಹಾಗೂ ಮೌಖಿಕ ಚರಿತ್ರೆಯ ಮಿತಿಗಳನ್ನು ಕುರಿತು ಅಧ್ಯಯನ ಮಾಡಲಾಗಿದೆ.

ಮೂರನೆಯ ಅಧ್ಯಾಯ **'ತುಮಕೂರು : ಪ್ರಾದೇಶಿಕ ಪರಿಚಯ'** ದಲ್ಲಿ ತುಮಕೂರು ಜಿಲ್ಲೆಯ ಸಂಕ್ಷಿಪ್ತ ರಾಜಕೀಯ ಚರಿತ್ರೆ, ಸ್ಥಳನಾಮಗಳು, ಮೌಖಿಕ ಆಕರಗಳನ್ನು ಕುರಿತು ಚರ್ಚಿಸಲಾಗಿದೆ.

ನಾಲ್ಕನೆಯ ಅಧ್ಯಾಯ **'ಸಾಂಸ್ಕೃತಿಕ ವೀರರ ಚಾರಿತ್ರಿಕ ವಿಶ್ಲೇಷಣೆ'** ಯಲ್ಲಿ ತುಮಕೂರು ಪ್ರದೇಶದಲ್ಲಿ ಅಸ್ತಿತ್ವದಲ್ಲಿರುವ ವಡ್ಡಗೆರೆಯ ಈರುಗ್ಯಾತರಾಯ, ಈರುನಾಗಮ್ಮ, ಮದ್ದೆ ಮತ್ತು ಕರೆಕ್ಯಾತನಹಳ್ಳಿಯ ಸ್ವಾರಮ್ಮ, ಕುರಂಕೋಟೆಯ ಕುರಂಗರಾಜ, ಕಳುವರಹಳ್ಳಿಯ ಜುಂಜಪ್ಪ, ಹುಳಿಯಾರು ಕೆಂಚಮ್ಮ, ದಿಬ್ಬದ ವೀರಬೊಮ್ಮಣ್ಣ ಇವರನ್ನು ಚಾರಿತ್ರಿಕ ನೆಲೆಯಲ್ಲಿ ಹಾಗೂ ಇತರೆ ಸಾಂಸ್ಕೃತಿಕ ನಾಯಕರಾದ ಉಂಡೇತ್ರಾಯ, ಜಲಧಿ ಬೊಪ್ಪರಾಯ, ಬರಗೂರು ವೀರಮ್ಮ, ಬಳ್ಳಕಟ್ಟೆ ಈರಣ್ಣ, ಭೀಮಾಸತಿ, ಮದಲಿಂಗ, ಶೂಲದ ಈರಣ್ಣ, ಹೊನ್ನೆಮರದ ಈರಣ್ಣ, ಬಳ್ಳಕಟ್ಟೆ ಈರಣ್ಣ, ವೀರಸೀಗಣ್ಣ ಇವರನ್ನು ಕುರಿತ ಕಥನಗಳನ್ನು ವಿವರಿಸಲಾಗಿದೆ.

ಐದನೆಯ ಅಧ್ಯಾಯ **'ಮೌಖಿಕ ಆಕರಗಳಲ್ಲಿ ಆರ್ಥಿಕ ವ್ಯವಸ್ಥೆ'** ಯಲ್ಲಿ ತುಮಕೂರು ಪ್ರದೇಶದಲ್ಲಿನ ಮೌಖಿಕ ಆಕರಗಳಲ್ಲಿ ಆರ್ಥಿಕ ವ್ಯವಸ್ಥೆಯನ್ನು ಕುರಿತಂತೆ ವ್ಯವಸಾಯ, ನೀರಾವರಿ, ಪಶುಪಾಲನೆ, ವ್ಯಾಪಾರ ಮತ್ತು ವಾಣಿಜ್ಯ ಹಾಗೂ ಕೋಟೆಗಳ ಬಗೆಗೆ ಅಧ್ಯಯನ ಮಾಡಲಾಗಿದೆ.

ಆರನೆಯ ಅಧ್ಯಾಯ **'ಮೌಖಿಕ ಆಕರಗಳಲ್ಲಿ ಸಾಮಾಜಿಕ ವ್ಯವಸ್ಥೆ'** ಯಲ್ಲಿ ತುಮಕೂರು ಪ್ರದೇಶದ ಮೌಖಿಕ ಆಕರಗಳಲ್ಲಿನ ಸಾಮಾಜಿಕ ವ್ಯವಸ್ಥೆಯನ್ನು ಕುರಿತಂತೆ ಸ್ತ್ರೀ ಸ್ಥಾನಮಾನ, ಜನಾಂಗೀಯ ಸಂಘರ್ಷ, ಜನಾಂಗೀಯ ಸಾಮರಸ್ಯ, ಸಂಪ್ರದಾಯ ಆಚರಣೆಗಳು, ಮತ್ತು ನಂಬಿಕೆಗಳನ್ನು ಗುರುತಿಸಲಾಗಿದೆ. ಹಾಗೂ ಕ್ರೈಸ್ತ, ಜೈನ, ಮುಸ್ಲಿಂ ಆಯಾ ಸಮುದಾಯಗಳ ನೆಲೆಯಲ್ಲಿ ಜನಸಾಮಾನ್ಯರ ಜೀವನಶೈಲಿಯನ್ನು ಕುರಿತು ವಿವರಿಸಲಾಗಿದೆ.

ಏಳನೆಯ ಅಧ್ಯಾಯ **'ಉಪಸಂಹಾರ'** ದಲ್ಲಿ ಅಧ್ಯಯನದ ತಾತ್ವಿಕ ನೆಲೆಗಳನ್ನು ಚರ್ಚಿಸಲಾಗಿದೆ. ಮೌಖಿಕ ಆಕರಗಳಲ್ಲಿ ಚಾರಿತ್ರಿಕ ನೆಲೆಗಳು, ಸಂಶೋಧನೆಯ ಫಲಿತಗಳು ಹಾಗೂ ಮುಂದಿನ ಅಧ್ಯಯನದ ಸಾಧ್ಯತೆಗಳನ್ನು ಪಟ್ಟಿ ಮಾಡಲಾಗಿದೆ.

ಅನುಬಂಧದಲ್ಲಿ ತುಮಕೂರು ಜಿಲ್ಲೆಯಲ್ಲಿ ಪ್ರಚಲಿತವಿರುವ ಗಾದೆಗಳು, ಪ್ರಮುಖ ಸಾಂಸ್ಕೃತಿಕ ಕೇಂದ್ರಗಳು, ಅಧ್ಯಯನಕ್ಕೆ ಬಳಸಿಕೊಳ್ಳಲಾಗಿರುವ ಆಕರ ಗ್ರಂಥಗಳ ವಿವರಗಳು, ಸಮುದಾಯದ ಚರಿತ್ರೆಯನ್ನು ಕಟ್ಟಲು ಅನಿವಾರ್ಯವಾಗಿದ್ದ ಹಾಗೂ ಅಗತ್ಯವಾದ ಮಾಹಿತಿಗಳನ್ನು ಪಡೆಯಲು ಸಂದರ್ಶಿಸಿದ ವ್ಯಕ್ತಿಗಳ ವಿವರಗಳನ್ನು, ಸಂಬಂಧಿತ ಛಾಯಾಚಿತ್ರಗಳನ್ನು ಹಾಗೂ ತುಮಕೂರು ಪ್ರದೇಶದ ನಕಾಶೆಗಳನ್ನು ನೀಡಲಾಗಿದೆ.

-000-

# ಅಧ್ಯಾಯ : ೨

## ಮೌಖಿಕ ಚರಿತ್ರೆ

೨.೧ ಮೌಖಿಕ ಚರಿತ್ರೆಯ ಅರ್ಥ ಮತ್ತು ಸ್ವರೂಪ

೨.೨ ಮೌಖಿಕ ಚರಿತ್ರೆ ಮತ್ತು ಇತಿಹಾಸ ಲೇಖನ ಕಲೆ

೨.೩ ಮೌಖಿಕ ಚರಿತ್ರೆಯ ಮಹತ್ತ್ವ

೨.೪ ಮೌಖಿಕ ಚರಿತ್ರೆ ಮತ್ತು ಮೌಖಿಕ ಸಂಪ್ರದಾಯ

೨.೫ ಮೌಖಿಕ ಚರಿತ್ರೆಯ ಮಿತಿಗಳು

# ಅಧ್ಯಾಯ : ೨
# ಮೌಖಿಕ ಚರಿತ್ರೆ

## ೨.೧ ಮೌಖಿಕ ಚರಿತ್ರೆಯ ಅರ್ಥ ಮತ್ತು ಸ್ವರೂಪ

ಆಕರಗಳು ಚರಿತ್ರೆಯ ಆಧಾರ ಸ್ಥಂಭಗಳು, ಚರಿತ್ರೆಯ ರಚನೆಯಲ್ಲಿ ಆಧರಿಸುವ ಇಂತಹ ಆಕರಗಳನ್ನು ಅವುಗಳು ಹೊಂದಿರುವ ಮಾಹಿತಿಯ ಸ್ವರೂಪ ಮತ್ತು ಸನ್ನಿವೇಶವನ್ನು ಆಧರಿಸಿ ಎರಡು ರೀತಿಯಾಗಿ ವರ್ಗೀಕರಿಸಲಾಗುತ್ತದೆ ಅವುಗಳೆಂದರೆ :

**ಪ್ರಾಥಮಿಕ ಆಕರಗಳು** : ಪುರಾತತ್ವೀಯ ಅವಶೇಷಗಳು, ವಾಸ್ತುಶಿಲ್ಪ ಸ್ಮಾರಕಗಳು, ಸಮಕಾಲೀನ ದಾಖಲೆ, ಪತ್ರಗಳು, ಶಾಸನಗಳು, ನಾಣ್ಯಗಳು, ದಿನಚರಿಗಳು, ಮುಂತಾದವುಗಳು.

**ಆನುಷಂಗಿಕ ಆಕರಗಳು** : ಪ್ರಕಟಗೊಂಡಿರುವ ಕೃತಿಗಳು.

ಚರಿತ್ರೆಯ ಆಕರಗಳ ಸ್ವರೂಪವನ್ನು ಆಧರಿಸಿ **ಲಿಖಿತ** ಮತ್ತು **ಮೌಖಿಕ** ಆಕರಗಳೆಂದು ವರ್ಗೀಕರಿಸಲಾಗುತ್ತದೆ. ಪ್ರಕಟಿತ ಕೃತಿಗಳು, ಶಾಸನಗಳು, ಕೈಫಿಯತ್ತುಗಳು, ವಂಶಾವಳಿಗಳು, ನಾಮೆ, ಕುಂಡಲಿ, ಬಖೈರುಗಳನ್ನು ಲಿಖಿತ ಆಕರಗಳೆಂದೂ, ಲಾವಣಿಗಳು, ಕಥನ ಗೀತೆಗಳು, ಐತಿಹ್ಯಗಳು, ನಂಬಿಕೆಗಳು, ಜನಪದ ಕಥೆಗಳು, ಕೋಲಾಟ ಪದಗಳು, ಸೋಬಾನೆ ಪದಗಳು, ಗಾದೆಗಳು, ಒಗಟುಗಳು, ಪ್ರತೀತಿ ಮುಂತಾದುವುಗಳನ್ನು ಮೌಖಿಕ ಆಕರಗಳೆಂದು ಗುರುತಿಸಲಾಗಿದೆ.[೧] ಮೌಖಿಕ ಆಕರಗಳು ಪೀಳಿಗೆಯಿಂದ ಪೀಳಿಗೆಗೆ ಸಾಗಿ ಬಂದ ಕಂಠಸ್ಥವಾಗಿರುತ್ತವೆ. ಜನಸಮುದಾಯದಲ್ಲಿ ಜೀವಂತವಾಗಿ ಲಭಿಸುವ ಧ್ವನಿ ಮಾಹಿತಿಯನ್ನು ಆಧರಿಸಿ, ಅದರ ಸತ್ಯಾಸತ್ಯತೆಯನ್ನು ಪರಿಶೋಧಿಸಿ ಮೌಖಿಕ ಚರಿತ್ರೆಯನ್ನು ರಚಿಸಲಾಗುತ್ತದೆ. ಇದು ನಿರ್ಜೀವ ಭೌತಿಕ ಆಕರಗಳಿಗೆ ಬದಲಾಗಿ ಸಜೀವ ವ್ಯಕ್ತಿಗಳೊಡನೆ ವ್ಯವಹರಿಸುತ್ತದೆ.

ಕನ್ನಡದ ಸಂದರ್ಭದಲ್ಲಿ ಶಿಷ್ಟಸಾಹಿತ್ಯ ಮತ್ತು ಪರಿಶಿಷ್ಟ ಸಾಹಿತ್ಯವೆಂದು ವರ್ಗೀಕರಿಸಿರುವುದು ಕಂಡು ಬರುತ್ತದೆ. ಅಕ್ಷರ ರೂಪದಲ್ಲಿರುವುದು ಶಾಶ್ವತವೆಂದೂ. ಧ್ವನಿ ಅಥವಾ ಮೌಖಿಕ ರೂಪದಲ್ಲಿ ಇರುವುದು ಅಶಾಶ್ವತ ಎಂಬುದು ಕೆಲವರ ಸಾಮಾನ್ಯವಾದ

ಅಭಿಪ್ರಾಯವಾಗಿದೆ. ಆದರೆ ವಾಸ್ತವಿಕವಾಗಿ ಮೌಖಿಕ ರೂಪದಲ್ಲಿರುವ ಮಾಹಿತಿಯು ಅಶಾಶ್ವತವಾಗಿರದೇ ಕಂಠಸ್ಥ ಪರಂಪರೆಯಲ್ಲಿ ಉಳಿದಿರುತ್ತದೆ. ಅದು ಅಕ್ಷರದ ಬಂಧನಕ್ಕೆ ಒಳಪಡದೆ ಬಹುರೂಪತೆಯನ್ನು ಪಡೆದುಕೊಂಡು ಲವಲವಿಕೆಯಿಂದ ಕೂಡಿರುತ್ತದೆ. ಅಕ್ಷರಸ್ಥ ಸಮಾಜವೇ ರೂಪಿಸಿದ ಯಜಮಾನಿಕೆಯು ಸಾಮಾನ್ಯ ಅಕ್ಷರಸ್ಥರ ಜೊತೆಗೆ ಅನಕ್ಷರಸ್ಥ ಸಮುದಾಯವನ್ನೂ ಸಹ ತನ್ನ ನಿಯಂತ್ರಣದಲ್ಲಿ ಇಟ್ಟುಕೊಂಡಿರುತ್ತದೆ. ಶಿಷ್ಟ ಆಕರ ಮತ್ತು ಪರಿಶಿಷ್ಟ ಆಕರಗಳೆರಡನ್ನೂ ಪರಸ್ಪರ ಪೂರಕವಾಗಿಸಿಕೊಂಡು ಚರಿತ್ರೆಯನ್ನು ಪುನರ್ ರಚಿಸುವ ಸವಾಲು ಚರಿತ್ರಕಾರನಿಗೆ ಇರುತ್ತದೆ. ಶಿಷ್ಟ ಮತ್ತು ಪರಿಶಿಷ್ಟವನ್ನು ಮುಖಾಮುಖಿಯಾಗಿ ನಿಲ್ಲಿಸುವ ಬದಲು ಅವುಗಳನ್ನು ಪೂರಕವಾಗಿ ಅಭ್ಯಾಸ ಮಾಡುವುದು ಸಮಂಜಸ ಎನಿಸುವುದು.[೨]

ಆಧುನಿಕ ಸಂದರ್ಭದಲ್ಲಿ ಮೌಖಿಕ ಇತಿಹಾಸಕ್ಕೆ ಮೊದಲು ಚಾಲನೆಯನ್ನು ಕೊಟ್ಟವರು ಪಾಶ್ಚಿಮಾತ್ಯರು ಅದರಲ್ಲೂ ಅಮೇರಿಕಾದ ವಿದ್ವಾಂಸರೆಂದರೆ ತಪ್ಪಾಗಲಾರದು.[೩] ಮೌಖಿಕ ಇತಿಹಾಸಕ್ಕೆ ಅಥವಾ **ಮೌಖಿಕ ಚರಿತ್ರೆ**ಗೆ ಸಮಾನಾರ್ಥದಲ್ಲಿ **'ಓರಲ್‌ಹಿಸ್ಟ್ರಿ'** ಎಂಬ ಪಾರಿಭಾಷಿಕ ಪದದೊಂದಿಗೆ ಅದನ್ನೊಂದು ಅಧಿಕೃತ ಶಾಖೆಯಾಗಿ ಬೆಳೆಸುತ್ತಾ ಬರಲಾಗಿದೆ. ಇದನ್ನು ಬಾಯಿಮಾತು, ಗ್ರಂಥಸ್ಥವಲ್ಲದ ಜನರ ಅಭಿಪ್ರಾಯ, ತಲ-ತಲಾಂತರದಲ್ಲಿ ಸಾಗುತ್ತ ಬಂದಂತಹ ಮಾಹಿತಿ ಅಥವಾ ಪ್ರತ್ಯಕ್ಷದರ್ಶಿಯಿಂದ ಪಡೆದ ಮಾಹಿತಿ ಎಂದೂ ಗುರುತಿಸಲಾಗಿದ್ದು, ಇವುಗಳನ್ನು ಮೌಖಿಕ ಆಕರಗಳೆಂದು ಅರ್ಥೈಸಲಾಗಿದೆ.

ಅಂತೆಯೇ **ಮೌಖಿಕ ಸಂಪ್ರದಾಯ** ಎಂದರೆ ಆಂಗ್ಲಭಾಷೆಯಲ್ಲಿ **'ಓರಲ್ ಟ್ರೆಡಿಷನ್'** ಎಂದು ಕರೆಯಲಾಗಿದೆ. ಇದನ್ನು ಮೌಖಿಕ ಸಂಪ್ರದಾಯ, ಮೌಖಿಕ ಪರಂಪರೆ, ತೋಂಡಿ ಸಂಸ್ಕೃತಿ ಎಂದು ಗುರುತಿಸಲಾಗುತ್ತದೆ. ಮೌಖಿಕ ಚರಿತ್ರೆಯನ್ನು ಸ್ಮರಣೆಯಲ್ಲಿರುವ, ಲಿಖಿತವಲ್ಲದ ಮಾಹಿತಿಯೆಂದೂ, ಮೌಖಿಕ ಸಂಪ್ರದಾಯವನ್ನು ಪರಂಪರಾನುಗತವಾಗಿ ಆಚರಿಸಿಕೊಂಡು ಬಂದಿರುವ ಆಚರಣೆ ಎಂದು ಗುರುತಿಸಲಾಗಿದೆ. ಮೌಖಿಕ ಇತಿಹಾಸದ ರಚನೆಯ ಕಾರ್ಯದಲ್ಲಿ ಚಾರಿತ್ರಿಕ ಘಟನೆಯೊಂದರಲ್ಲಿ ಪಾಲ್ಗೊಂಡಂತಹ ವ್ಯಕ್ತಿಯೇ ಜೀವಂತ ಆಕರವಾಗಿರುತ್ತಾನೆ.

### ಮೌಖಿಕ ಚರಿತ್ರೆಯ ವ್ಯಾಖ್ಯಾನಗಳು :

ಚರಿತ್ರಕಾರರು ಮೌಖಿಕ ಚರಿತ್ರೆಯನ್ನು ತಮ್ಮದೇ ಅಭಿಪ್ರಾಯಗಳ ಹಿನ್ನೆಲೆಯಲ್ಲಿ ಅರ್ಥೈಸಿದ್ದಾರೆ. **ಅಮೇರಿಕಾ ಸಂಯುಕ್ತ ಸಂಸ್ಥಾನದ ಲೈಬ್ರರಿ ಆಫ್ ಕಾಂಗ್ರೇಸ್**ನ ಪ್ರಕಾರ[೪] ಯೋಜಿತ ಸಂದರ್ಶನಗಳ ಮೂಲಕ ಸಾಮಾನ್ಯವಾಗಿ, ಧ್ವನಿ ಸುರುಳಿಯಲ್ಲಿ ಸಂಗ್ರಹಿಸಿದ ಮೌಖಿಕ ಮಾಹಿತಿಯ ದಾಖಲೆಯು ಮೌಖಿಕ ಇತಿಹಾಸವಾಗಿದೆ. **ಲೂಯಿಸ್ಟಾರ್‌**ರವರ ಪ್ರಕಾರ[೫] ವ್ಯಕ್ತಿಗಳು ಆಡಿದ ಮಾತುಗಳನ್ನು ಯೋಜಿತ ಸಂದರ್ಶನದ ಮೂಲಕ ಧ್ವನಿ ಸುರುಳಿಯಲ್ಲಿ ದಾಖಲಿಸಿದ ಪ್ರಾಥಮಿಕ ಆಧಾರವೇ ಮೌಖಿಕ ಇತಿಹಾಸ. ಆಫ್ರಿಕಾ ಖಂಡದ

ಚರಿತ್ರೆಯನ್ನು ರಚಿಸಿದಂತಹ **ಜಾನ್‌ವ್ಯಾನ್‌ಸಿನ್**‌ರವರು ವ್ಯಾಖ್ಯಾನಿಸಿರುವಂತೆ[೬] ಮೌಖಿಕ ಆಧಾರವೆಂದರೆ ಬದುಕಿರುವ ಮಾನವರಿಂದ ಸಂಗ್ರಹಿಸಿರುವ ಆಧಾರ. ಹಾಗಾಗಿ ಇತಿಹಾಸದ ರಚನೆಗೆ ಇದು ನಿರ್ಜೀವ ಆಕರಗಳೆಂದು ವಾದಿಸುವುದು ಸರಿಯಲ್ಲ ಎಂದು ಪ್ರತಿಪಾದಿಸಿದ್ದಾನೆ. ಅಲ್ಲದೇ ಆತನು ಮೌಖಿಕ ಪರಂಪರೆ ಮತ್ತು ವ್ಯಕ್ತಿಯ ಸ್ಮೃತಿಕೋಶದ ನೆನಪುಗಳನ್ನು ಮೌಖಿಕ ಸಾಕ್ಷ್ಯ ಎಂದು ಪರಿಗಣಿಸುತ್ತಾನೆ. **ಜೇಮ್ಸ್‌ಬಾನೆಟ್**‌ರವರ ಪ್ರಕಾರ[೭] ಜೀವನಚರಿತ್ರೆ, ಸ್ವ ರಚಿತ ದಾಖಲೆ, ವೈಯಕ್ತಿಕ ವಿವರಗಳು, ಜೀವನಗಾಥೆ, ಮೌಖಿಕ ನೆಲೆಯ ಜೀವನದ ಅನುಭವಗಳು, ಸ್ಮರಣೆಗಳು ಮೌಖಿಕ ಆಕರಗಳಾಗಿರುತ್ತವೆ.

ಲೂಯಿಸ್ಟಾರ್‌ರವರ ವ್ಯಾಖ್ಯಾನವು ಮೌಖಿಕ ಚರಿತ್ರೆಗೆ ಬಹುತೇಕ ವಿವರಣಾತ್ಮಕ ಅರ್ಥವನ್ನು ಕಲ್ಪಿಸಿದೆ. ಜೇಮ್ಸ್‌ಬಾನೆಟ್‌ರವರು ಕ್ರಿ. ಶ. ೧೯೮೭ ರಲ್ಲಿ ಓರಲ್ ಹಿಸ್ಟ್ರಿ ಅಸೋಸಿಯೇಷನ್‌ನ ವಾರ್ಷಿಕ ಸಮಾವೇಶದಲ್ಲಿ ಮಾತನಾಡುವ ಸಂದರ್ಭದಲ್ಲಿ ಈ ಮೇಲಿನ ವ್ಯಾಖ್ಯಾನವನ್ನು ನೀಡಿದ್ದಾರೆ. ಈ ವಿದ್ವಾಂಸರ ಅಭಿಪ್ರಾಯಗಳ ಹಿನ್ನೆಲೆಯಲ್ಲಿ ಬದುಕಿರುವ ಜನರ ಸ್ಮೃತಿಯು ಮೌಖಿಕ ಇತಿಹಾಸವಾಗಿರುತ್ತದೆ. ಮಾನವನ ಸ್ಮೃತಿಯಲ್ಲಿ ಇರಬಹುದಾದ ಅಸ್ಥಿರತೆ, ಮನೋವಿಕಲ್ಪಗಳ ಸಲುವಾಗಿ ಮೌಖಿಕ ಆಕರಗಳು ನಾಶವಾಗುವ ಸಂಭವವಿರುವುದರಿಂದ ಇವುಗಳನ್ನು ಸಂರಕ್ಷಿಸಬೇಕಾದ ಅನಿವಾರ್ಯತೆಯಿದೆ. ಇಲ್ಲದಿದ್ದಲ್ಲಿ ಮೌಖಿಕ ಆಕರಗಳು ನಾಶವಾಗುವ ಅಥವಾ ಲಭಿಸದೇ ಹೋಗಬಹುದಾದ ಸಾಧ್ಯತೆಯಿರುತ್ತದೆ. ಈ ಕಾರಣದಿಂದಾಗಿ ಮೌಖಿಕ ಚರಿತ್ರೆಗೆ ಮಹತ್ವವನ್ನು ನೀಡಬೇಕಾದ ಅನಿವಾರ್ಯತೆಯಿದ್ದು ಆ ಮೂಲಕ ಜನಸಮುದಾಯ ಕೇಂದ್ರಿತವಾದ ಚರಿತ್ರೆಯನ್ನು ರಚಿಸುವ ಹಾಗೂ ಜ್ಞಾನಭಂಡಾರವನ್ನು ವಿಸ್ತರಿಸುವ ಅಗತ್ಯವಿದೆ.

## ಮೌಖಿಕ ಆಕರಗಳು

ಮೌಖಿಕ ಆಕರಗಳು ಸಮುದಾಯಗಳ ಸಾಂಸ್ಕೃತಿಕ ಆತ್ಮಕಥನಗಳಾಗಿರುತ್ತವೆ. ಇವುಗಳು ಗ್ರಂಥಸ್ಥ, ಲಿಖಿತ, ಆಕರಗಳಿಗಿಂತ ಭಿನ್ನವಾಗಿರುತ್ತವೆ. ಹಾಗೂ ಪರಿವರ್ತನಾಶೀಲವಾಗಿರುತ್ತವೆ. ಇವುಗಳಲ್ಲಿ ಸಮುದಾಯಗಳ ಬದುಕಿನ ಶೈಲಿ, ಸಂಪ್ರದಾಯ, ಆಚರಣೆಗಳು ಕಂಡುಬರುತ್ತವೆ. ಜನಪದ ಕಾವ್ಯಗಳು, ಐತಿಹ್ಯಗಳು, ಲಾವಣಿಗಳು, ಕೋಲಾಟ ಪದಗಳು, ಸೋಭಾನೆ ಪದಗಳು, ಕಥನ ಗೀತೆಗಳು, ಸಾಮಾನ್ಯ ನಂಬಿಕೆಗಳು, ಗಾದೆಗಳು, ಒಗಟುಗಳು, ಮತ್ತು ಪ್ರತೀತಿಗಳನ್ನು ಮೌಖಿಕ ಆಕರಗಳೆಂದು ಗುರುತಿಸಲಾಗಿದೆ. ಇವುಗಳ ಸಂಕ್ಷಿಪ್ತ ಪರಿಚಯವನ್ನು ಮಾಡಿಕೊಳ್ಳಲಾಗಿದೆ.

**ಜನಪದ ಕಾವ್ಯಗಳು** : ಒಂದು ಘಟನೆಯ ಮಹತ್ವವನ್ನು ಹಾಗೂ ಒಬ್ಬ ವೀರನ ವಿಶೇಷ ಸಾಧನೆಯನ್ನು ಕುರಿತಂತೆ ರಾಗಬದ್ಧವಾಗಿ ಹಾಡಬಹುದಾದ ಪದ್ಯಗಳನ್ನು ಸಮುದಾಯದಲ್ಲಿ ಸೃಷ್ಟಿಸಲಾಗುತ್ತದೆ. ಇವು ಮೌಖಿಕವಾಗಿದ್ದು, ಪಾರಂಪರಿಕವಾಗಿ ಜನಸ್ಮರಣೆಯಲ್ಲಿ

ಸಾಗುತ್ತಿರುತ್ತವೆ. ಮೂಲದಲ್ಲಿ ಐತಿಹಾಸಿಕ ಮಹತ್ವವುಳ್ಳ ಸಂಗತಿಗಳನ್ನೇ ಹೊಂದಿರುವ ಕಾವ್ಯಗಳು ಸ್ಥಿರವಾಗಿರದೇ ಕಾಲಾನಂತರದಲ್ಲಿ ಹಲವು ಪಠ್ಯಗಳನ್ನು ತನ್ನೊಳಗೆ ಸಮ್ಮಿಳಿತಗೊಳಿಸಿಕೊಂಡು ಸಾಗುತ್ತಿರುತ್ತವೆ. ಅವು ಲಿಖಿತರೂಪವನ್ನು ಪಡೆದಾಗ ಮಾತ್ರ ಕಾವ್ಯಗಳ ಸ್ಥಿರವಾದ ಪಾಠವೊಂದು ಲಭ್ಯವಾಗುತ್ತದೆ. ಲಾರಿಹ್ಯಾಂಕೋರವರು ಕಾವ್ಯಗಳನ್ನು ಮೂರು ರೀತಿಯಲ್ಲಿ ವರ್ಗೀಕರಿಸಿದ್ದಾರೆ.[೮]

೧) ಸಾಹಿತ್ಯಿಕ ಕಾವ್ಯಗಳು. ಉದಾಹರಣೆಗೆ : ಏನಿಯಡ್, ಪ್ಯಾರಡೈಸ್‌ಲಾಸ್ಟ್

೨) ಅರೆಸಾಹಿತ್ಯಿಕ ಕಾವ್ಯಗಳು. ಉದಾಹರಣೆಗೆ : ಕಲೆವಲ.[೯]

೩) ಶುದ್ಧ ಮೌಖಿಕ ಕಾವ್ಯಗಳು. ಇವು ಸಾಂಪ್ರದಾಯಿಕವಾದುವು.

ಜನಪದ ಕಾವ್ಯಗಳನ್ನು ನಿರ್ಬಂಧಿತ ಚೌಕಟ್ಟಿನಲ್ಲಿ ಶಾಸನ ಮತ್ತು ಕಡತಗಳಂತೆ ಗ್ರಹಿಸಿದರೆ ಆ ಮೂಲಕ ಚರಿತ್ರೆಯನ್ನು ಗ್ರಹಿಸಲು ಸಾಧ್ಯವಾಗುವುದಿಲ್ಲ. ಅದೇ ಕಾವ್ಯದ ಅಂತರ್ ಸಂಬಂಧ ಮತ್ತು ಸನ್ನಿವೇಶಗಳ ಮೂಲಕ ಸೂಕ್ಷ್ಮವಾಗಿ ಗ್ರಹಿಸಿದಾಗ ಮಾತ್ರ ಚರಿತ್ರೆಯನ್ನು ಸಮರ್ಥವಾಗಿ ಪುನರ್‌ಕಟ್ಟಲು ಸಾಧ್ಯವಾಗುತ್ತದೆ. ಇವು ಸಮುದಾಯದಲ್ಲಿ ಸೃಷ್ಟಿಯಾಗಿರುವುದರಿಂದ ಸಮುದಾಯದ ಬದುಕು, ಸಂಸ್ಕೃತಿ ಮತ್ತು ಇತಿಹಾಸದ ಆಗರವಾಗಿದ್ದು, ಆ ಸಮುದಾಯದ ಬದುಕಿಗೆ ಮಾರ್ಗದರ್ಶಿಯೂ ಹಾಗೂ ಆದರ್ಶಪ್ರಾಯವಾಗಿಯೂ ಇರುತ್ತವೆ. ಇಂತಹ ಮೌಖಿಕ ಕಾವ್ಯಗಳು ಬೆಳೆದು ಬಂದ ಬಗ್ಗೆ ಎರಡು ವಾದಗಳಿವೆ. ಅವುಗಳೆಂದರೆ :

೧. ಚದುರಿದ್ದ ಕಥನಗಳನ್ನು ಕ್ರೂಢೀಕರಿಸಿದ್ದರಿಂದಾಗಿ ರೂಪುಗೊಂಡ ಜನಪದ ಕಥನಗಳು ಹಾಗೂ ಕಾವ್ಯಗಳು.

೨. ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ವಲಸೆಯ ಪರಿಣಾಮದಿಂದಾಗಿ ಮೂಲದಲ್ಲಿ ಚಿಕ್ಕದಾಗಿದ್ದು ಕಾಲಾನಂತರ ವಿಸ್ತೃತವಾಗಿ ರಚಿತವಾದವುಗಳು.

ಇವುಗಳು ಬದುಕಿನ ಅನುಭವದಿಂದ ಪ್ರೇರಿತವಾಗಿರುತ್ತವೆ, ಆದರೆ ಭೌತಿಕವಾದವುಗಳಲ್ಲ. ಬದಲಾಗಿ ಭಾವನೆಗಳಿಗೆ ಸಂಬಂಧಿಸಿದ್ದವು. ಭಾವನೆ ಎಂದರೆ ಮನುಷ್ಯನ ಮನಸ್ಸಿನ ಸ್ಥಿತಿಯಾಗಿರುತ್ತದೆ. ಇದು ವರ್ತಮಾನದೊಂದಿಗೆ ಭೂತ ಮತ್ತು ಭವಿಷ್ಯತ್ತುಗಳನ್ನು ಕಟ್ಟಿಕೊಡುವ ಕೆಲಸವನ್ನು ಮಾಡುತ್ತವೆ. ಇವುಗಳಲ್ಲಿ ಸಮುದಾಯದ ನೋವು ನಲಿವಿನ ವಿಚಾರಗಳು ಅಡಗಿರುತ್ತವೆ. ಜನರಿಗೆ ಕಾವ್ಯವನ್ನು ಕಟ್ಟುವ ಗುಣ ಮತ್ತು ಸಾಮರ್ಥ್ಯವಿತ್ತೆಂಬುದು ವಾಸ್ತವಿಕವಾದ ಸಂಗತಿಯಾಗಿದೆ. ಇಂತಹ ಕಾವ್ಯಗಳು ಒಂದು ನಿರ್ದಿಷ್ಟ ಕಾಲಮಾನದಲ್ಲಿ ಸೃಷ್ಟಿಯಾದವುಗಳಲ್ಲ. ಇವುಗಳು ನಿರಂತರವಾಗಿ ಪರಿವರ್ತನೆಗೆ ಒಳಪಡುತ್ತಲೇ ಇರುತ್ತವೆ. ಇಂತಹವುಗಳನ್ನು ಲಿಖಿತ ರೂಪಕ್ಕೆ ತಂದ ಮನ್ನಣೆ ಮಾತ್ರ ರಾಮಾಯಣದ ವಾಲ್ಮೀಕಿ, ಮಹಾಭಾರತದ ವ್ಯಾಸಮಹರ್ಷಿಯಂತಹವರಿಗೆ ಸಲ್ಲುತ್ತದೆ. ಇವುಗಳ ಮೌಖಿಕ ಸಂಪ್ರದಾಯದಲ್ಲಿಯೂ ಕೂಡ ಹಿಂದಿನ ಮೂಲ ಆಶಯವನ್ನು ಉಳಿಸಿಕೊಂಡು ಸಮಾಜದ ಸನ್ನಿವೇಶಕ್ಕೆ ತಕ್ಕಂತೆ ಪಾತ್ರಧಾರಿಗಳ ಚಿತ್ರಣವು ಬದಲಾಗುತ್ತದೆ.

ಜನಪದ ಕಾವ್ಯದಲ್ಲಿನ ಮಹಿಳೆಯು ತನಗಾಗುತ್ತಿರುವ ಅವಮಾನವನ್ನು ಸಹಿಸದೇ ಪ್ರತಿಭಟಿಸಿದರೆ, ಶಿಷ್ಟಕಾವ್ಯದಲ್ಲಿ ಮಹಿಳೆಯನ್ನು ಅಬಲೆಯಂತೆ ಚಿತ್ರಿಸಲಾಗಿದೆ. ಇಲ್ಲಿ ಜನಪದ ಮಹಾಕಾವ್ಯಗಳಲ್ಲಿನ ಪಾತ್ರಧಾರಿಗಳ ಮೇಲೆ ಸ್ಥಳೀಯ ಸನ್ನಿವೇಶ ಮತ್ತು ಪೂರ್ವಾಗ್ರಹಗಳ ಪ್ರಭಾವವಿರುವುದನ್ನು ಗುರುತಿಸಬಹುದಾಗಿದೆ.

ಉದಾಹರಣೆಗೆ : ಉತ್ತರ ಕನ್ನಡ ಜಿಲ್ಲೆಯ ಗಾಮೊಕ್ಕಲ ಭಾರತದಲ್ಲಿ ಪಾಂಡವರು ದ್ರೌಪದಿಯನ್ನು ಪಣಕ್ಕಿಟ್ಟು ಪಗಡೆಯಾಟದಲ್ಲಿ ಸೋಲುತ್ತಾರೆ. ನಂತರ ದುಶ್ಯಾಸನನು ಆಕೆಯನ್ನು ಸಭೆಗೆ ಕರೆತರುತ್ತಾನೆ. ಈ ಸಂದರ್ಭದಲ್ಲಿ ದ್ರೌಪದಿಯು ಪಾಂಡವರಿಗೆ ಛೀಮಾರಿ ಹಾಕುತ್ತಾಳೆ.[೧೦] ಹಾಗೂ ಕೌರವರ ವಿರುದ್ಧ ಪ್ರತಿಭಟಿಸುತ್ತಾಳೆ. ಆದರೆ ಭಾಗವತದ ಪ್ರಭಾವಕ್ಕೆ ಒಳಗಾದ ಕವಿಗಳು ಅವಳ ಸೀರೆಯನ್ನು ಅಪರಿಮಿತವಾಗಿ ಹೆಚ್ಚಿಸಿದ್ದಾರೆ. ರಾಮಾಯಣದಲ್ಲಿ ಸೀತೆಯು ಅಗ್ನಿಪ್ರವೇಶ ಮಾಡುವ ಪ್ರಸಂಗವೂ ಕೂಡ ಸ್ತ್ರೀದೌರ್ಬಲ್ಯ, ಪುರುಷ ಪ್ರಧಾನ್ಯತೆಯನ್ನು ಪ್ರದರ್ಶಿಸುವ ಪ್ರಯತ್ನವೇ ಆಗಿದೆ. ಅಂತೆಯೇ ರಾಮಾಯಣ ಅಥವಾ ಮಹಾಭಾರತದಂತಹ ಕಾವ್ಯಗಳು ಕೂಡ ತಮ್ಮ ಮೂಲ ತಿರುಳಿನೊಂದಿಗೆ ಸಾಗುತ್ತಿದ್ದರೂ, ಸದರಿ ಕಥೆಯನ್ನೇ ವಸ್ತುವನ್ನಾಗಿ ಮಾಡಿಕೊಂಡು ನಾಡಿನ ಬಯಲು ಸೀಮೆಯಲ್ಲಿ ಪೌರಾಣಿಕ ನಾಟಕಗಳನ್ನು ಅಭಿನಯಿಸಲಾಗುತ್ತದೆ. ಈ ನಾಟಕ ಕಲೆಗೂ, ಕರಾವಳಿಯ ಯಕ್ಷಗಾನದ ನಡುವೆ ಸ್ಥಳೀಯ ಭಿನ್ನತೆಯನ್ನು ಗುರುತಿಸಬಹುದು. ಉದಾಹರಣೆಗೆ : ಶ್ರೀಕೃಷ್ಣಸಂಧಾನದಂತಹ ಇತರ ಪೌರಾಣಿಕ ನಾಟಕಗಳ ಆಸ್ಥಾನದ ದೃಶ್ಯಗಳಲ್ಲಿ ಸಮಕಾಲೀನ ರಾಜಕೀಯ, ಸಾಮಾಜಿಕ ಸಂಬಂಧಿತ ವಿಚಾರ, ವಸ್ತುವನ್ನು ಕೆಲವೊಮ್ಮೆ ಸಂಭಾಷಣೆಗಳಲ್ಲಿ ಬಳಸಿಕೊಳ್ಳಲಾಗುತ್ತದೆ. ಈ ರೀತಿಯಾಗಿ ಮೌಖಿಕ ಆಕರಗಳು ಸ್ಥಳೀಯ ಸನ್ನಿವೇಶದಿಂದ ಪ್ರಭಾವಿತವಾಗಿರುತ್ತವೆ.

**ಐತಿಹ್ಯಗಳು :** ಐತಿಹ್ಯ ಎಂಬ ಪದವು ಲ್ಯಾಟಿನ್ ಭಾಷೆಯ ಮೂಲದಿಂದ ಬಂದಿದೆ.[೧೧] ಇದು ಪರಂಪರೆಯಿಂದ ಸಾಗುತ್ತಾ ಬಂದಿರುತ್ತದೆ. ಐತಿಹ್ಯವನ್ನು ಕನ್ನಡ ಸಾಹಿತ್ಯ ಪರಿಷತ್ತಿನ ನಿಘಂಟುವಿನಲ್ಲಿ 'ಐತಿಹ್ಯಂ ಇತಿಹಾಸವೆನಿಸುಗುಂ' ಎನ್ನಲಾಗಿದೆ. ಕಿಟಲ್ ನಿಘಂಟುವಿನಲ್ಲಿ[೧೨] ಓರಲ್ ಟ್ರೆಡಿಷನ್, ಲೆಜೆಂಡ್, ಎ ಟೇಲ್ ಎಂದು ಅರ್ಥೈಸಲಾಗಿದೆ. ಕನ್ನಡ ಅಭಿವೃದ್ಧಿ ಪ್ರಾಧಿಕಾರದ ನಿಘಂಟು '*ಕನ್ನಡ ರತ್ನಕೋಶದಲ್ಲಿ*'[೧೩] '*ಪರಂಪರೆಯಿಂದ ಸಾಗುತ್ತಾ ಬಂದದ್ದು*' ಎಂಬ ಅರ್ಥವಿದೆ.

ಒಂದು ಐತಿಹ್ಯವು, ಘಟಿಸಿತ್ತೆಂದು ಹೇಳಲಾದ ಘಟನೆ, ಸ್ಥಳ, ಅಥವಾ ವ್ಯಕ್ತಿಯ ಸುತ್ತ ಹುಟ್ಟಿಕೊಂಡಿರುವ ಕಟ್ಟುಕಥೆಯಾಗಿರುತ್ತದೆ. ಪೌರಾಣಿಕ ಹಾಗೂ ಐತಿಹಾಸಿಕ ಘಟನೆಗಳನ್ನು ಕಥನಕ್ರಿಯೆಯ ಮೂಲಕ ಜನಪದರ ದೃಷ್ಟಿಯಿಂದ ಅಭಿವ್ಯಕ್ತಿಸಲಾಗಿರುವುದು. ಇದು ಮೌಖಿಕ ಪರಂಪರೆಯ ಒಂದು ಭಾಗವಾಗಿರುತ್ತದೆ. ಅಲ್ಲದೇ ಚಾರಿತ್ರಿಕ ಅಂಶಗಳನ್ನು ಒಳಗೊಂಡಿರುತ್ತದೆ. ಇದು ಸಂಸ್ಕೃತಿಯೊಂದರ ಪ್ರತಿನಿಧಿಯಾಗಿ ತನ್ನೊಳಗೆ ನಂಬಿಕೆ,

ಆಚರಣೆ, ಪುರಾಣ, ವ್ಯಕ್ತಿ, ಘಟನೆ ಹೀಗೆ ಹಲವಾರು ವಸ್ತುವಿಷಯಗಳನ್ನು ಒಳಗೊಂಡಿರುತ್ತದೆ. ಶ್ರಮಿಕ ವರ್ಗಗಳ ನೈಜ ಬದುಕನ್ನು ಸಾಂಸ್ಕೃತಿಕ ನೆಲೆಯ ಮೂಲಕ ಬದುಕಿಗೆ ನೈತಿಕ ಮೌಲ್ಯಗಳನ್ನು ಕಟ್ಟಿಕೊಡುತ್ತದೆ. ಐತಿಹ್ಯಗಳು ಸ್ಥಳನಾಮ, ಸ್ಥಳದ ಮಹತ್ವ, ಘಟನೆಯ ಹಿನ್ನೆಲೆಯನ್ನು ಅರಿಯಲು ಸಹಾಯಕವಾಗುತ್ತವೆ. ಐತಿಹ್ಯಗಳನ್ನು ಸ್ಥಳ ಐತಿಹ್ಯ, ವ್ಯಕ್ತಿಕೇಂದ್ರಿತ ಐತಿಹ್ಯ, ಘಟನೆ ಪ್ರಧಾನ ಐತಿಹ್ಯ, ಸಮುದಾಯ ಸಂಬಂಧಿತ ಐತಿಹ್ಯ, ದೈವೀಸಂಬಂಧಿ ಐತಿಹ್ಯ, ಪ್ರಾಕೃತಿಕ ಐತಿಹ್ಯ ಎಂದು ವರ್ಗೀಕರಿಸಬಹುದಾಗಿದೆ.

**ಲಾವಣಿಗಳು** : ಸ್ಥಳೀಯ ಚರಿತ್ರೆಯ ಸಂಗತಿಗಳನ್ನು ಗರ್ಭೀಕರಿಸಿಕೊಂಡಿರುವ ಹಾಗೂ ಸಾಮಾನ್ಯ ವ್ಯಕ್ತಿಯಿಂದ ಅಸಾಮಾನ್ಯ ವ್ಯಕ್ತಿಯವರೆಗೆ ಅವರ ಉದಾತ್ತ ಮೌಲ್ಯಗಳನ್ನು ಕೊಂಡಾಡುವ ಕಥಾನಕ ಲಾವಣಿಗಳು ಅಪಾರ ಪ್ರಮಾಣದಲ್ಲಿ ದೊರಕುತ್ತವೆ. ಮೌಖಿಕ ಸಾಹಿತ್ಯ ಪ್ರಕಾರದ ಲಾವಣಿಗಳು ಚರಿತ್ರೆಯ ಸಂಗತಿಗಳನ್ನು ಮೈಗೂಡಿಸಿಕೊಂಡಿರುತ್ತವೆ. ಬ್ರಿಟಿಷ್ ಆಳುವವರ್ಗದ ವಿರುದ್ಧ ಸ್ಥಳೀಯರ ಬಂಡಾಯವನ್ನು ಬಹುತೇಕ ಲಾವಣಿಗಳಲ್ಲಿ ವ್ಯಕ್ತಪಡಿಸಲಾಗಿದೆ. ತುಮಕೂರು ಜಿಲ್ಲೆಗೆ ಸಂಬಂಧಿಸಿದಂತೆ ಸಿರಾದ ರಂಗಪ್ಪನಾಯಕನ ಲಾವಣಿ, ನಿಡಗಲ್ಲು ಹೊಟ್ಟೆಣ್ಣನಾಯಕನ ಲಾವಣಿಗಳು ಸ್ಥಳೀಯ ಚರಿತ್ರೆ ರಚನೆಗೆ ಸಹಕಾರಿಯಾಗಿರುವ ಆಕರಗಳಾಗಿವೆ.

**ಪ್ರತೀತಿ** : ಪ್ರತೀತಿ ಎಂದರೆ ಹಿಂದಿನದು, ಹಳೆಯಕಥೆ ಎನ್ನಲಾಗುತ್ತದೆ. ಇದು ಸಂಭವಿಸಿದ ಘಟನೆಗೆ ಸ್ಥಳೀಯವಾಗಿ ಕಟ್ಟಿಕೊಡುವ ಕಥೆಯಾಗಿದೆ. ಪುರಾಣವು ಸಾಮಾನ್ಯ ನಂಬಿಕೆಗಳಂತೆ ಜನರ ಸ್ಮರಣೆಯಲ್ಲಿರುವ ಆಚರಣೆ, ಸಂಪ್ರದಾಯವಾಗಿದೆ. ಅಲ್ಲದೇ ಇತಿಹಾಸದ ವಿಸ್ತೃತ ರೂಪವಾಗಿರುತ್ತದೆ. ಕೆಲವೊಮ್ಮೆ ಚಾರಿತ್ರಿಕ ವ್ಯಕ್ತಿ, ಅಥವಾ ವಿಷಯಗಳಿಗೂ ಪುರಾಣದ ವಿನ್ಯಾಸವನ್ನು ಒದಗಿಸಿರುವುದು ಕಂಡುಬರುತ್ತದೆ. ಉದಾಹರಣೆಗೆ : ೧೨ನೆಯ ಶತಮಾನದಲ್ಲಿ ಬಾಳಿ ಬದುಕಿದ ಬಸವೇಶ್ವರರು ಒಬ್ಬ ಚಾರಿತ್ರಿಕ ವ್ಯಕ್ತಿಯಾಗಿದ್ದಾರೆ. ಆದರೆ ಹರಿಹರನ ಬಸವದೇವರಾಜ ರಗಳೆಯಲ್ಲಿ ಬಸವೇಶ್ವರರನ್ನು ಪವಾಡ ಪರಿವೇಶದ ಮೂಲಕ ಪುರಾಣ ಪುರುಷನನ್ನಾಗಿ ಚಿತ್ರಿಸಲಾಗಿದೆ.[೧೪] ಅಂತೆಯೇ ಕುಮಾರರಾಮನ ಕಥೆಯನ್ನು ಹೆಣೆಯಲಾಗಿದೆ. ಈ ಹಿನ್ನೆಲೆಯಲ್ಲಿ ಪುರಾಣಗಳಲ್ಲಿಯೂ ಚಾರಿತ್ರಿಕ ಅಂಶಗಳನ್ನು ಗುರುತಿಸಬಹುದಾಗಿದೆ. ಇದೇ ರೀತಿಯಾಗಿ ಪವಾಡಗಳೂ ಸಹ. ಇವುಗಳಿಗೆ ವೈಜ್ಞಾನಿಕ ನೆಲೆಯಿಲ್ಲವೆಂಬ ಅಭಿಪ್ರಾಯಗಳಿವೆ. ಆದರೂ ನಂಬಲಾಗದ ಈ ವಿವರಣೆಯನ್ನು ಒಂದು ರೂಪಕವೆಂದು ಭಾವಿಸುವಾಗ ಒಳಸತ್ಯಗಳು ತೆರೆದುಕೊಳ್ಳುತ್ತವೆ.

**ಜನಪದ ಕಥೆಗಳು** : ಇವು ಪರಂಪರೆಯಲ್ಲಿ ತಲೆಮಾರುಗಳಿಂದ ಸಾಗಿಬಂದಂತಹ ಜನಪದರ ಸಾಂಸ್ಕೃತಿಕ ಕಥನಗಳಾಗಿವೆ. ಇವು ಮೌಖಿಕ ಸಾಹಿತ್ಯದಲ್ಲಿ ರಂಜನೀಯ ಎನಿಸುತ್ತವೆ. ವಿಶೇಷವಾದ ಸಾಧನೆಗೈದು ಜೀವಂತವಿರುವ ಅಥವಾ ಮರೆಯಾದ ವ್ಯಕ್ತಿಗಳು, ಸ್ಥಳಗಳು,

ಘಟನೆಗಳ ಬಗ್ಗೆ ಕಥೆಗಳನ್ನು ಸೃಷ್ಟಿಸಿಕೊಂಡು ಪರಂಪರಾನುಗತವಾಗಿ, ಮೌಖಿಕ ನೆಲೆಯಲ್ಲಿ ಸಾಗುತ್ತಿರುತ್ತವೆ. ಕೆಲವೊಮ್ಮೆ ಚಾರಿತ್ರಿಕತೆಯನ್ನು ಮೈಗೂಡಿಸಿಕೊಂಡು ಸಾಗುವುದು ಕೂಡ ಕಂಡುಬರುತ್ತದೆ. ಇದರಿಂದಾಗಿ ಇವುಗಳನ್ನು ಮೌಖಿಕ ಆಕರಗಳಾಗಿ ಪರಿಗಣಿಸಲಾಗಿದೆ.

**ಕೋಲಾಟ ಪದಗಳು** : ಕೋಲಾಟವು ಮನರಂಜನೆಯ ಕ್ರೀಡೆಯಾಗಿದೆ. ಕೋಲಾಟದ ಸಂದರ್ಭದಲ್ಲಿ ಹಾಡಲಾಗುವ ಪದಗಳನ್ನು ಕೋಲಾಟದ ಪದಗಳು ಎಂದು ಕರೆಯಲಾಗುತ್ತದೆ.[೧೫] ಇವುಗಳು ವ್ಯಕ್ತಿ, ಅಥವಾ ಸಮುದಾಯ ಕೇಂದ್ರಿತವಾಗಿರುತ್ತವೆ. ಕೆಲವು ಸಂದರ್ಭಗಳಲ್ಲಿ ಇವು ಆಳುವವರ್ಗದ ಸಂಬಂಧಿತ ಘಟನಾವಳಿಗಳ ವಿವರಗಳನ್ನು ಒಳಗೊಂಡಿರುತ್ತವೆ. ಹಾಗಾಗಿ ಸಂವೇದನಾಶೀಲವಾದ ಇವುಗಳು ಚರಿತ್ರೆಯ ರಚನೆಗೆ ಪೂರಕವಾಗಿರುತ್ತವೆ.

**ಸೋಭಾನೆ ಪದಗಳು** : ಹೆಣ್ಣುಮಗಳು ಋತುಮತಿಯಾದ ಸಂದರ್ಭದಲ್ಲಿ ನಡೆಸುವ ಆಚರಣೆಗಳಲ್ಲಿ ಹಾಡಲಾಗುವ ಮಹಿಳಾ ಸಂವೇಧಿ ಪದಗಳನ್ನು ಸೋಭಾನೆ ಪದಗಳು ಎನ್ನಲಾಗುವುದು. ತಲಸಮುದಾಯಗಳಾದ ಮಹಿಳೆಯ ಸಂವೇದನೆಗಳನ್ನು ಗುರುತಿಸುವಲ್ಲಿ ಇವು ಸಹಾಯಕವಾಗಿವೆ. ಸ್ತ್ರೀ ಪಾತ್ರವನ್ನು ಚರಿತ್ರೆಯ ಪ್ರಧಾನ ಧಾರೆಗೆ ತಂದು ಅಧ್ಯಯನ ಮಾಡಬೇಕಾದ ಅಗತ್ಯವಿರುವ ಈ ಸನ್ನಿವೇಶದಲ್ಲಿ ಸೋಭಾನೆ ಪದಗಳು ಮಹಿಳೆಯ ಬದುಕಿನ ವಿವಿಧ ಮಜಲುಗಳನ್ನು ಅರಿಯಲು ಸಹಕಾರಿಯಾಗಿವೆ. ಇವುಗಳನ್ನು ಸೂಕ್ಷ್ಮವಾಗಿ ಗ್ರಹಿಸಿದಾಗ ಇವುಗಳಲ್ಲಿ ಚಾರಿತ್ರಿಕ ಅಂಶಗಳನ್ನು ಗುರುತಿಸಬಹುದಾಗಿದೆ.

ಇವುಗಳೊಂದಿಗೆ ಕಥನಗೀತೆಗಳು, ನಂಬಿಕೆಗಳು, ಗಾದೆಗಳು, ಒಗಟುಗಳನ್ನು ಕೂಡ ಮೌಖಿಕ ಆಕರಗಳೆಂದು ಪರಿಗಣಿಸಲಾಗಿದೆ.

## ೨.೨ ಮೌಖಿಕ ಚರಿತ್ರೆ ಮತ್ತು ಇತಿಹಾಸ ಲೇಖನ ಕಲೆ

ಗ್ರೀಕ್‌ನಲ್ಲಿ ಚರಿತ್ರೆಯು ಒಂದು ಸ್ವತಂತ್ರ ಅಧ್ಯಯನದ ಶಿಸ್ತಾಗಿ ಆರಂಭಗೊಂಡಿತು. ಈ ಸನ್ನಿವೇಶದಲ್ಲಿ ಕಲ್ಪನೆಯನ್ನು ಹೊರತುಪಡಿಸಿದ ವಾಸ್ತವ ಘಟನೆಗಳನ್ನು ಆಧರಿಸಿ ಹೆರೋಡೆಟಸ್ ರವರು "ಹಿಸ್ಟೋರಿಯಾ" ಎಂಬ ಕೃತಿಯನ್ನು ರಚಿಸಿದರು. ಈತನು ಗ್ರೀಕ್ ಮತ್ತು ಪರ್ಷಿಯನ್ನರ ನಡುವಿನ ಕದನದ ಮಾಹಿತಿಯು ಈ ಕೃತಿಯ ವಿಷಯ ವಸ್ತುವಾಗಿದೆ. ನಂತರದಲ್ಲಿ ಥ್ಯೂಸಿಡೈಡಸ್‌ನು ಹೆರೊಡೆಟಸ್‌ನ ಕಾವ್ಯದ ಭಾಷೆಗೆ ಪರ್ಯಾಯವಾಗಿ ವೈಜ್ಞಾನಿಕ ನೆಲೆಯಲ್ಲಿ "ಪೆಲೊಪನೇಷಿಯನ್ ವಾರ್ಸ್" ಎಂಬ ಕೃತಿಯನ್ನು ರಚಿಸುವಾಗಲೂ ಸಹ ಆಕರಗಳನ್ನಾಗಿ ಪ್ರತ್ಯಕ್ಷದರ್ಶಿಗಳಿಂದ ಮೌಖಿಕವಾಗಿ ಪಡೆದ ಮಾಹಿತಿಯನ್ನೇ ಆಧರಿಸಿದ್ದನು.[೧೬] ಅಂದರೆ ಮೌಖಿಕ ಆಕರಗಳ ಹಿನ್ನೆಲೆಯ ಚರಿತ್ರೆಯು ಇತಿಹಾಸ ಬರವಣಿಗೆಯಷ್ಟೇ ಪ್ರಾಚೀನವಾದುದು ಎಂಬುದಾಗಿ ತಿಳಿಯಬಹುದಾಗಿದೆ. ಇವರು

ಮಾನವನ ಬದುಕಿನ ವಿವಿಧ ಮಜಲುಗಳನ್ನು ತಮ್ಮದೇ ದೃಷ್ಟಿಕೋನಗಳ ಮೂಲಕ ಚರಿತ್ರೆಯ ದಾಖಲೀಕರಣ ಕ್ರಿಯೆಗೆ ಮುನ್ನುಡಿ ಬರೆದರು.

ಮೌಖಿಕ ಆಕರಗಳಾದ ವೈಧಿಕ ಸಾಹಿತ್ಯದಂತಹ ಸ್ಮೃತಿಗಳು, ವೇದಗಳು, ಪುರಾಣಗಳು, ಉಪನಿಷತ್ತುಗಳು ಸಹ ಪ್ರಾಚೀನ ಭಾರತದ ಚರಿತ್ರೆಯನ್ನು ಪುನರ್‌ರಚಿಸಲು ಸಹಕಾರಿಯಾಗಿವೆ. ಅಂತೆಯೇ ಬ್ರಿಟೀಷ್ ಅಧಿಕಾರಿ ಕರ್ನಲ್ ಮೆಕೆಂಜಿಯು ಕೈಫಿಯತ್ತುಗಳ ರಚನೆಗೆ ತಮ್ಮ ಕ್ಷೇತ್ರ ಕಾರ್ಯದಲ್ಲಿ ಮೌಖಿಕ ಹೇಳಿಕೆಗಳನ್ನೇ ಪ್ರಮುಖ ಆಕರಗಳನ್ನಾಗಿ ಬಳಸಿಕೊಂಡರು ಎಂಬುದು ಇಲ್ಲಿ ಸ್ಮರಿಸಬೇಕಾದ, ಗಮನಾರ್ಹ ವಿಚಾರವಾಗಿದೆ.

ಇತಿಹಾಸಕಾರನು ಗತಕಾಲದ ನಿರೂಪಕನಷ್ಟೇ ಆಗಿರುವುದಿಲ್ಲ. ಆತನು ಇತಿಹಾಸದ ನಿರ್ಮಾಪಕನಾಗಿರುತ್ತಾನೆ. ಇ. ಎಚ್. ಕಾರ್ ರವರು ಹೇಳುವಂತೆ ಚರಿತ್ರೆಯು ವರ್ತಮಾನ ಮತ್ತು ಭೂತಕಾಲದ ನಡುವೆ ನಡೆಯುವ ಮುಕ್ತಾಯವಿಲ್ಲದ ಸಂವಾದವಾಗಿದೆ. ಚರಿತ್ರಕಾರನೊಬ್ಬನು ತಾನು ಬಳಸಿದ ಆಕರ ಪರಿಕರಗಳೆಲ್ಲವನ್ನೂ ಸತ್ಯವೆಂದೇ ನಂಬಿರುತ್ತಾನೆ. ಗ್ರಹಿಕೆ ಹಾಗೂ ದೃಷ್ಟಿಕೋನವು ಅಧಿಕೃತವಾದುದು ಎಂಬ ತನ್ನದೇ ಆದ ಭ್ರಮೆಗೆ ಒಳಗಾಗುತ್ತಾನೆ. ಆಗ ಅಕ್ಷರಬದ್ದಗೊಂಡ ದಾಖಲೆಗಳೇ ಅಧಿಕೃತವೆಂದು ಭಾವಿಸಲಾಗಿರುತ್ತದೆ. ಆದರೆ ಕೆಲವೊಮ್ಮೆ ಅಕ್ಷರಬದ್ಧಗೊಂಡ ದಾಖಲೆಗಳೇ ಅಧಿಕೃತವೆಂಬ ನಿಲುವನ್ನು ಹೊಂದಿರುವುದರಿಂದ ಮೌಖಿಕ ಆಕರಗಳು ಹೊಂದಿರುವ ಚರಿತ್ರೆಯ ಕಥನಗಳು ವ್ಯಕ್ತಗೊಳ್ಳಲು ಇರುವ ಪರ್ಯಾಯ ಮಾರ್ಗಗಳು ಮುಚ್ಚಿ ಹೋಗುತ್ತವೆ.[೧೭] ಆದರೆ ಅಕ್ಷರದಿಂದ ವಂಚಿತರಾಗಿರುವ ಬಹುಸಂಖ್ಯಾತ ಅನಕ್ಷರಸ್ಥರು, ಲಿಖಿತ ಆಕರಗಳು ಮಾತ್ರವೇ ಚರಿತ್ರೆ ಕಟ್ಟಲು ಇರುವ ಆಕರಗಳೆಂದು ಭಾವಿಸದೇ, ಮೌಖಿಕ ಅಭಿವ್ಯಕ್ತಿಯು ಕೂಡ ಅಧಿಕೃತವೆಂದು ಭಾವಿಸಿದರು. ಹೀಗಾಗಿ ಮೌಖಿಕ ಆಕರಗಳು ಸಮುದಾಯದ ಚರಿತ್ರೆಗಳನ್ನೇ ಹೊಂದಿದ್ದವು. ಆದ್ದರಿಂದ ಮೌಖಿಕ ಆಕರಗಳು ಸ್ಥಳೀಯ ಸಮುದಾಯಗಳ ಚರಿತ್ರೆಯನ್ನು ರಚಿಸಲು ಪೂರಕವಾಗಿ ಸ್ಪಂಧಿಸಿದವು.

೧) ಮೆಕಾಲೆಯು ರಚಿಸಿದ ಕೃತಿ "HISTORY OF ENGLAND 1848-55"

೨) ಎಂಟನೆಯ ಶತಮಾನದ ಮೊದಲಾರ್ಧದಲ್ಲಿ ಯೂರೋಪಿನ ಚೆಡೆ ಎಂಬ ಚರಿತ್ರಕಾರನು ರಚಿಸಿದ "HISTORY OF THE CHURCH AND THE PEOPLE"

೩) ಹತ್ತೊಂಬತ್ತನೆಯ ಶತಮಾನದ ಮಧ್ಯಭಾಗದಲ್ಲಿ ರಚಿಸಲಾದ ಕೃತಿ "HISTORY OF THE FRENCH REVOLUTION ೧೮೪೭–೫೩"

ಯೂರೋಪಿನಲ್ಲಿ ರಚಿಸಲ್ಪಟ್ಟ ಈ ಮೇಲ್ಕಂಡ ಕೃತಿಗಳ ರಚನೆಯಲ್ಲಿಯೂ ಸಹ ಕಾವ್ಯ, ಕಾದಂಬರಿ, ದಿನಚರಿ, ಸ್ಮರಣೆ, ಆಚರಣೆಗಳಂತಹ ಮೌಖಿಕ ಆಕರಗಳು ಮತ್ತು ಮೌಖಿಕ ಸಂಪ್ರದಾಯಗಳನ್ನೇ ಆಧಾರವಾಗಿ ಬಳಸಿಕೊಂಡಿರುವುದು ಕಂಡುಬರುತ್ತದೆ.[೧೮]

ರೋಮನ್ ಸಾಮ್ರಾಜ್ಯದ ಬಹುತೇಕ ವಿದ್ವಾಂಸರು ಆಸ್ಥಾನದಲ್ಲಿ ಕುಳಿತು ಜನಸಾಮಾನ್ಯರ ಭಾವನೆ ಹಾಗೂ ಅಭಿಪ್ರಾಯಗಳಿಗೆ ಮನ್ನಣೆಯನ್ನು ನೀಡದೇ, ಆಸ್ಥಾನದ

ದಾಖಲೆಗಳು, ವಂಶಾವಳಿಗಳನ್ನು ಆಧರಿಸಿ ಮಹಾರಾಜರ ವೀರಗಾಥೆಗಳನ್ನು ಬರೆಯತೊಡಗಿದರು.[೧೯] ಇದರಿಂದಾಗಿ ಇತಿಹಾಸದ ಆಕರಗಳ ವಾರಸುದಾರಿಕೆಯು ಲಿಖಿತ ದಾಖಲೆಗಳ ಪಾಲಾಯಿತು. ಹೀಗಾಗಿ ಹತ್ತೊಂಬತ್ತನೆಯ ಶತಮಾನದಲ್ಲಿ ಲಿಖಿತ ದಾಖಲೆಗಳು ಮಾತ್ರ ಅಧಿಕೃತವಾದುವು ಎಂದು ಪರಿಗಣಿಸಲಾಯಿತು. ಅಕ್ಷರಸ್ಥ ವರ್ಗವು ಮೌಖಿಕತೆಯನ್ನು ಅಲಕ್ಷಿಸಿತು. ಅಲಿಖಿತ ಆಕರಗಳನ್ನು ಚರಿತ್ರಹೀನವೆಂದು ನಿರ್ಲಕ್ಷಿಸಿ, ಅನಕ್ಷರತೆಯು ಅನಾಗರೀಕತೆಯ ಸೂಚನೆ, ಅಕ್ಷರವು ಸಾಂಸ್ಕೃತಿಕ ಪ್ರಗತಿಯ, ಆಧುನಿಕತೆಯ ಸಂಕೇತ ಎಂಬಂತೆ ಭ್ರಮಿಸಲಾಯಿತು.

೧೮೨೪ ರ ವೇಳೆಗೆ ಬರ್ಲಿನ್ ವಿಶ್ವವಿದ್ಯಾನಿಲಯದಲ್ಲಿ ಇತಿಹಾಸ ಪ್ರಾಧ್ಯಾಪಕರಾಗಿದ್ದ ರಾಂಕೆಯವರು ಐತಿಹಾಸಿಕ ಘಟನೆಗಳ ಮೂಲವನ್ನು ನಿರ್ಧರಿಸುವ ತೊಂದರೆಯನ್ನು ಇತಿಹಾಸಕಾರನು ತೆಗೆದುಕೊಳ್ಳಬಾರದು ಎಂಬ ನಿಲುವನ್ನು ಹೊಂದಿದ್ದರು. ಪಾರಮಾರ್ಥಿಕ ಸಮಸ್ಯೆಗಳಿಗಿಂತ ರಾಜಕೀಯ ಸಮಸ್ಯೆಗಳ ಕಡೆಗೆ ತಮ್ಮ ಗಮನವನ್ನು ಹರಿಸಿದ್ದ ರಾಂಕೆಯವರು ವಿದ್ವಾಂಸರೂ, ವಿಮರ್ಶಾತ್ಮಕ ಚರಿತ್ರಕಾರರೂ ಆಗಿದ್ದರು. ಅವರ ಬಹುತೇಕ ಕೃತಿಗಳು ರಾಯಭಾರದ ಮತ್ತು ರಾಜ್ಯದ ದಾಖಲೆಗಳ ಮೇಲೆ ಅವಲಂಭಿತವಾಗಿದ್ದವು.[೨೦] ಈ ಕಾಲದಲ್ಲಿ ಲಿಖಿತ ದಾಖಲೆಗಳ ಬಳಕೆಗೆ ಹೆಚ್ಚಿನ ಮಹತ್ವವನ್ನು ನೀಡಿದರು. ಆಕರಗಳನ್ನು ಕಟುವಾದ ವಿಮರ್ಶೆಗೆ ಒಳಪಡಿಸುವ ಮೂಲಕ ಮಾಡುವ ಸಂಶೋಧನೆಯನ್ನು ಮಾತ್ರ ವೈಜ್ಞಾನಿಕ ಸಂಶೋಧನೆ ಎಂಬ ಚಿಂತನಾ ವಿಧಾನವನ್ನು ಚರಿತ್ರೆಗೆ ನೀಡಿದರು.

ಫ್ರಾನ್ಸಿನ ಡೆಕಾರ್ಟೆರವರು ರೂಪಿಸಿದ ತತ್ವಗಳನ್ನು ಮೂಲವಸ್ತುವನ್ನಾಗಿಸಿಕೊಂಡು ಹದಿನೇಳನೆಯ ಶತಮಾನದ ಉತ್ತರಾರ್ಧದಲ್ಲಿ ಹೊಸ ಇತಿಹಾಸ ಚಿಂತನಾ ಕ್ರಮವೊಂದು ಅಸ್ತಿತ್ವಕ್ಕೆ ಬಂದಿತು. ಇದನ್ನು ಕಾಲಿಂಗ್‌ವುಡ್‌ರವರು ಕಾರ್ಟೀಸಿಯನ್ ಇತಿಹಾಸ ಲೇಖನಾಕ್ರಮ[೨೧] ಎಂದು ಗುರುತಿಸಿದ್ದಾರೆ. ಮೂಲತಃ ಗಣಿತಜ್ಞನು, ಭೌತವಿಜ್ಞಾನಿಯು ಆಗಿದ್ದ ಡೆಕಾರ್ಟೆರವರು ಇತಿಹಾಸದ ಬಗ್ಗೆ ತಾತ್ಸಾರ ಭಾವನೆಯನ್ನು ಹೊಂದಿದ್ದರು. ಇತಿಹಾಸವು ಐತಿಹಾಸಿಕ ಪಾರಾಗುವಿಕೆ, ಸಂಶಯಾತ್ಮಕತೆ, ಉಪಯುಕ್ತತೆಯ ವಿರೋಧಿ ಭಾವನೆ ಮತ್ತು ಭ್ರಮೆ ಹುಟ್ಟಿಸುವ ಗುಣಗಳನ್ನು ಹೊಂದಿದೆ ಎಂಬ ನೇರವಾದ ಆರೋಪಗಳನ್ನು ಮಾಡಿದರು. ಇವರ ಸಂದೇಹವಾದವು ಚರಿತ್ರಕಾರರನ್ನು ಎದೆಗುಂದಿಸುವುದರ ಬದಲಿಗೆ ಚಾರಿತ್ರಿಕ ಉಪಯುಕ್ತತೆಯ ಬಗ್ಗೆ ವಿಮರ್ಶಾತ್ಮಕವಾಗಿ ಚಿಂತಿಸುವಂತೆ ಮಾಡಿತು.

ಇಟಲಿಯ ನೇಪಲ್ಸ್‌ನ ವೀಕೋರವರು ಕಾರ್ಟೀಸಿಯನ್ ಸಿದ್ಧಾಂತವನ್ನು ಅಲ್ಲಗಳೆಯುತ್ತಾ ಗತಕಾಲವು, ಗತಕಾಲವನ್ನು ಕುರಿತದ್ದು ಎಂದು ಇತಿಹಾಸವು ಭಾವಿಸುವುದಿಲ್ಲ. ಅದು ನಾವು ವಾಸಿಸುವ ಸಮಾಜದ ವಾಸ್ತವಿಕ ಚೌಕಟ್ಟು ಮತ್ತು ನಮ್ಮ ಸುತ್ತಮುತ್ತಲು ಇರುವ ಜನರೊಂದಿಗೆ ಪಾಲ್ಗೊಳ್ಳುವ ನಡಾವಳಿ ಮತ್ತು ಸಂಪ್ರದಾಯಗಳನ್ನು ಕುರಿತದ್ದು ಆಗಿದೆ. ಇವುಗಳ ಅಧ್ಯಯನ ಮಾಡುವಾಗ ಅವು ನಿಜವಾಗಿಯೂ ಅಸ್ತಿತ್ವದಲ್ಲಿ ಇದ್ದವೇ? ಎಂದು ಕೇಳುವುದು ಅನವಶ್ಯಕವಾದುದು.[೨೨]

ನಂತರದ ೧೮ ನೆಯ ಶತಮಾನದ ಉತ್ತರಾರ್ಧ ಮತ್ತು ೧೯ ನೆಯ ಶತಮಾನದ ಪೂರ್ವಾರ್ಧದ ಚರಿತ್ರೆಯನ್ನು ಕುರಿತ ಚಿಂತನಾ ಕ್ರಮವನ್ನು ಜ್ಞಾನೋದಯಯುಗ ಎಂದು ಕರೆಯಲಾಗಿದೆ. ನ್ಯೂಟನ್ ಮತ್ತು ಲಾಕ್‌ರವರನ್ನು ಈ ಚಳವಳಿಯ ಸ್ಥಾಪಕರೆಂದು ಗುರುತಿಸಲಾಗಿದೆ.[೨೩] ಜ್ಞಾನೋದಯವು ಮಾನವ ಜೀವನ ಹಾಗೂ ಚಿಂತನೆಯ ಪ್ರತಿಯೊಂದು ಅಂಶವನ್ನು ಲೌಕಿಕಗೊಳಿಸುವ ಪ್ರಯತ್ನವೆಂದು ಅರ್ಥೈಸಲಾಗಿದೆ. ಗಿಬನ್, ಮಾಂಟೆಸ್ಕೋ ರವರು ಈ ಪಂಥದ ಮುಖ್ಯಸ್ಥರಾಗಿದ್ದರು. ನಂತರದಲ್ಲಿ ಅಸ್ತಿತ್ವಕ್ಕೆ ಬಂದ ಚಾರಿತ್ರಿಕ ಚಿಂತನಾ ಕ್ರಮಗಳಲ್ಲಿ ಮಾರ್ಕ್ಸ್‌ವಾದ, ರಚನಾವಾದ, ಆಧುನಿಕವಾದ, ಆಧುನಿಕೋತ್ತರವಾದ, ನವಚಾರಿತ್ರಿಕವಾದ, ರಾಷ್ಟ್ರೀಯವಾದ, ಸಬಾಲ್ಟ್ರನ್‌ವಾದ ಮುಂತಾದುವು ಪ್ರಮುಖವಾಗಿವೆ.

ಇಟಲಿಯ ಆಂಟಾನಿಯೋಗ್ರಾಂಸಿ ರವರು ಸಬಾಲ್ಟ್ರನ್ ಚರಿತ್ರೆ ರಚನಾ ಶೈಲಿಗೆ ಅಡಿಪಾಯವನ್ನು ಹಾಕಿದರು. ಏಷ್ಯಾದಲ್ಲಿ ರಣಜಿತ್‌ಗುಹಾ ರವರು ಈ ಚಿಂತನಾಕ್ರಮದ ಪ್ರಮುಖರಾಗಿದ್ದಾರೆ.[೨೪] ಕೊಸಾಂಬಿಯವರು ೧೯೫೦ ರ ದಶಕದಲ್ಲಿ ಭಾರತೀಯ ಇತಿಹಾಸದ ಬರಹದ ಒಂದು ಪರ್ಯಾಯ ಮಾದರಿಯನ್ನು ರಚಿಸಿಕೊಂಡಿದ್ದರು. ರಣಜಿತ್‌ಗುಹಾರವರ ಬರಹಗಳ ಉದ್ದಕ್ಕೂ ವ್ಯಕ್ತವಾಗುವ ಇತಿಹಾಸ ರಚನೆಯ ಪರಿಕಲ್ಪನೆಯನ್ನು ಗಮನಿಸಿದರೆ ಸಬಾಲ್ಟ್ರನ್ ಸ್ಟಡೀಸ್ ಆರಂಭವಾಗುವುದಕ್ಕಿಂತ ಮೂರು ದಶಕಗಳ ಮೊದಲೇ ತಳಸಮುದಾಯದ ಚರಿತ್ರೆ ರಚನೆಯ ಚಿಂತನಾ ಕ್ರಮವೊಂದನ್ನು ಕೊಸಾಂಬಿರವರು ಆರಂಭಿಸಿದ್ದರು ಎಂಬ ಅಭಿಪ್ರಾಯವಿದೆ.[೨೫] ದಲಿತ, ಕಾರ್ಮಿಕ, ರೈತ, ಮಹಿಳೆ, ಆದಿವಾಸಿ, ಬುಡಕಟ್ಟು ಇತ್ಯಾದಿ ಸಮಾಜದ ಮುಖ್ಯವಾಹಿನಿಯಿಂದ ಅಂಚಿಗೆ ಸರಿಸಲ್ಪಟ್ಟಿರುವ ಸಮುದಾಯಗಳನ್ನು ಸಬಾಲ್ಟ್ರನ್ ನೆಲೆಯಲ್ಲಿ ಗುರುತಿಸಲಾಗಿದೆ.

DAVID K DUNAWAY, WILLA K BAUM ರವರು AN INTER DISCIPLINARY ANTOLOGY ಎಂಬ ಗ್ರಂಥವನ್ನು ೧೯೮೪ ರಲ್ಲಿ ಸಂಪಾದಿಸಿ ಪ್ರಕಟಿಸಿದರು. ೧೯೯೬ ರಲ್ಲಿ ಇದರ ಪುನರಾವೃತ್ತಿ ಪ್ರಕಟವಾಯಿತು. ಈ ಗ್ರಂಥದಲ್ಲಿ ಅಲೆನ್ ನೇವಿಸ್ ರವರು ORAL HISTORY HOW AND WHY IT WAS BORN ಎಂಬ ಲೇಖನ ಮತ್ತು ಲೂಯಿ ಸ್ಟಾರ್ ರವರು ORAL HISTORY ಎಂಬ ಲೇಖನಗಳನ್ನು ಬರೆದಿದ್ದಾರೆ. ಚರಿತ್ರಕಾರ, ಜೀವನ ಚರಿತ್ರಕಾರ ಹಾಗೂ ಪತ್ರಿಕೋದ್ಯಮಿಯೂ ಆಗಿದ್ದ ಅಲೆನ್ ನೇವಿಸ್‌ರವರು ೧೯೩೮ ರಲ್ಲಿ ಹಾರ್ವರ್ಡ್ ಬ್ಯುಸಿನೆಸ್ ಸ್ಕೂಲ್‌ನ ಅಡಾಲ್ಫ್ ಬರ್ಲೆ ಮತ್ತು ಡೀನ್ ಎಡ್ವಿನ್ ಎಫ್ ಗೇ ರವರೊಂದಿಗೆ ಚರ್ಚಿಸುವ ಮೂಲಕ ತಮ್ಮ ಲೇಖನಗಳಲ್ಲಿ ಮೌಖಿಕ ಚರಿತ್ರೆಯ ಆರಂಭಕ್ಕೆ ಮುನ್ನುಡಿಯನ್ನು ಬರೆದರು. ಹಾಗೂ ಚರಿತ್ರೆಯನ್ನು ಜನಪ್ರಿಯಗೊಳಿಸುವ ಮತ್ತು ಮೌಖಿಕ ಚರಿತ್ರೆಯನ್ನು ರಚಿಸುವ, ಕುರಿತು ಅನ್ವೇಷಣೆ ಮಾಡುವ ಅಗತ್ಯತೆಯಿದೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದರು.[೨೬] ಇದರ ಸಲುವಾಗಿಯೇ ೧೯೪೮ ರಲ್ಲಿ ಕೊಲಂಬಿಯಾ

ವಿಶ್ವವಿದ್ಯಾನಿಲಯದಲ್ಲಿ ಆರಂಭಿಸಲಾಗಿದ್ದ ದೇಶದ ಮೊದಲ ಮೌಖಿಕ ಚರಿತ್ರೆಯ ಪ್ರಾಜೆಕ್ಟ್‌ನ ಅಧ್ಯಕ್ಷರಾಗಿದ್ದರು.[೨೭] ಈ ORAL HISTORY RESEARCH OFFICE ನ್ನು ಇಂದು COLUMBIA CENTRE FOR ORAL HISTORY ಎಂದು ಕರೆಯಲಾಗುತ್ತದೆ. ಅಲೆನ್ ನೇವಿಸ್ ರವರು ೧೯೪೮ ರಲ್ಲಿ ಕೊಲಂಬಿಯಾದಲ್ಲಿ ಸ್ಥಾಪಿಸಿದ್ದ ORAL HISTORY RESEARCH OFFICE ನಲ್ಲಿ ೨೫ ವರ್ಷಗಳ ಕಾಲ ನಿರ್ದೇಶಕರಾಗಿದ್ದ ಲೂಯಿಸ್ಟಾರ್‌ರವರು BAHAMIAN BRIGADES: CIVIL WAR NEWSMAN IN ACTION ಎಂಬ ಪ್ರೌಢಪ್ರಬಂಧವನ್ನು ರಚಿಸಿದರು.

ಕ್ರಿ. ಶ. ೧೯೫೪ ರಲ್ಲಿ ಕ್ಯಾಲಿಪೋರ್ನಿಯಾ ವಿಶ್ವವಿದ್ಯಾನಿಲಯದಲ್ಲಿ REGIONAL ORAL HISTORY OFFICE ನ್ನು ಸ್ಥಾಪಿಸಲಾಯಿತು. ಕ್ರಿ. ಶ. ೧೯೬೦ ರಲ್ಲಿ ಕೊಲಂಬಿಯಾ ವಿಶ್ವವಿದ್ಯಾನಿಲಯದ ಸಹಯೋಗದಲ್ಲಿ ಸಂಕ್ಷಿಪ್ತ ವಿವರಣೆಗಳನ್ನು ಒಳಗೊಂಡ ೧೩೦೦೦ ಪುಟಗಳ ಮಾಹಿತಿಯನ್ನು ಸಂಗ್ರಹಿಸಲಾಯಿತು. ಇದನ್ನು ORAL HISTORY COLLECTIONS ಎಂಬ ಶೀರ್ಷಿಕೆಯಲ್ಲಿ ಕ್ರೋಢೀಕರಿಸಲಾಗಿತ್ತು. ಕ್ರಿ. ಶ. ೧೯೬೬ ಸೆಪ್ಟೆಂಬರ್‌ನಲ್ಲಿ ಸ್ಯಾನ್‌ಬರ್ನಾಡಿನೊ ಎಂಬಲ್ಲಿ ನಡೆಸಿದ ಮೂರು ದಿನಗಳ ಚರ್ಚಾಗೋಷ್ಠಿಯ ಸಲುವಾಗಿ ಮ್ಯಾನ್‌ಫ್ರೆಡ್ ವಾಷರ್‌ಮೆನ್‌ರವರ ಸಂಪಾದಕತ್ವದಲ್ಲಿ QUARTERLY NEWS LETTER: A BIBLIOGRAPHY ON ORAL HISTORY ಯನ್ನು ಪ್ರಕಟಿಸಲಾಯಿತು.[೨೮]

ಕ್ರಿ.ಶ. ೧೯೬೭ ರಲ್ಲಿ ಅಮೇರಿಕಾದ ಇತಿಹಾಸಕಾರರು ORAL HISTORY ASSOCIATION ನ್ನು, ಹಾಗೂ ೧೯೭೩ ರಲ್ಲಿ ಬ್ರಿಟಿಷ್ ಚರಿತ್ರಕಾರರು ORAL HISTORY SOCIETY ಯನ್ನು ಸ್ಥಾಪಿಸಿದರು.[೨೯] "ಹಿಸ್ಟರಿ ಫ್ರಂ ಬಿಲೋ" ಎಂಬ ಧ್ಯೇಯದೊಂದಿಗೆ ಎಲೈಟ್ ಚರಿತ್ರೆಯಿಂದ ಮರೆಯಾಗಿದ್ದ (ಹಿಡನ್ ಫ್ರಂ ಹಿಸ್ಟರಿ) ತಳಸಮುದಾಯದ ಚರಿತ್ರೆಯನ್ನು ರಚಿಸುವ ಸಲುವಾಗಿ ವ್ಯಕ್ತಿಗಳನ್ನು ಸಂದರ್ಶನದ ಮೂಲಕ ಅವರ ಬದುಕಿನ ವಿವಿದ ಮಜಲುಗಳನ್ನು ಅಧ್ಯಯನ ಮಾಡುವ ಪ್ರಯತ್ನಗಳು ನಡೆದವು. ಇದಕ್ಕೆ ಪೂರಕವೆಂಬಂತೆಯೇ ಭಾರತದಲ್ಲಿ ವೆಂಡಿಸಿಂಗರ್ ರವರು CREATING HISTORIES ಎಂಬ ಕೃತಿಯನ್ನು ೧೯೯೭ ರಲ್ಲಿ ರಚಿಸಿದರು.[೩೦] ಇದು ಬಿಹಾರದ ಮಿಥಿಲಾ ಪ್ರದೇಶಕ್ಕೆ ಸೇರಿದ ಅಧ್ಯಯನವಾಗಿದೆ. ಇದರಲ್ಲಿ ಸಮುದಾಯ, ಜಾತಿಗಳ ಚರಿತ್ರೆಯ ರಚನೆಯ ಮೂಲಗಳು, ಲಿಖಿತ ದಾಖಲೆಗಳ ಮಹತ್ವ, ಮೌಖಿಕ ಆಕರಗಳಲ್ಲಿ ರಾಜಕೀಯ, ರೈತ ಪ್ರತಿಭಟನೆಗಳ ಕುರಿತ ವಿವರಗಳನ್ನು ದಾಖಲಿಸಲಾಗಿದೆ.

ಸಮಕಾಲೀನ ಇತಿಹಾಸ ಮತ್ತು ಮೌಖಿಕ ಚರಿತ್ರೆಯನ್ನು 'ನ್ಯೂ ನ್ಯೂ ಹಿಸ್ಟರಿ', 'ಇಮ್ಮಿಡಿಯೆಟ್ ಹಿಸ್ಟರಿ', ಎಂದು ಕರೆಯಲಾಗಿದೆ. ತಲ-ತಲಾಂತರದಲ್ಲಿ ಸಾಗಿ ಬಂದಂತಹ ವಿಚಾರ ಸಮಾಜದ ಅನುಭವ, ಕಲೆ, ಸಾಹಿತ್ಯ ಮತ್ತು ಪರಂಪರೆಯ ಸ್ವರೂಪದ ದಾಖಲೀಕರಣವು ಮೌಖಿಕ ಚರಿತ್ರೆಯ ಮುಖ್ಯ ಉದ್ದೇಶವಾಗಿರುತ್ತದೆ.

## ೨.೩ ಮೌಖಿಕ ಚರಿತ್ರೆಯ ಮಹತ್ವ

ಮೌಖಿಕ ಚರಿತ್ರೆಯು ಕೇವಲ ಇತಿಹಾಸದ ಪುನರ್ರಚನೆಗೆ ಮಾತ್ರವೇ ಸೀಮಿತವಾಗಿರದೇ ಅನ್ಯಶಿಸ್ತುಗಳಾದ ಸಮಾಜಶಾಸ್ತ್ರ, ಮಾನವಶಾಸ್ತ್ರ, ಜೀವನಚರಿತ್ರೆ, ಜಾನಪದಶಾಸ್ತ್ರ ಇಂತಹವುಗಳ ಅಧ್ಯಯನದಲ್ಲಿಯೂ ಸಹಕಾರಿಯಾಗಿದೆ. ಮೌಖಿಕ ಆಕರಗಳು ಜನಪದರ ಒಡಲಿನಿಂದ ಹುಟ್ಟು ಪಡೆಯುತ್ತವೆ. ಈ ಹಿನ್ನೆಲೆಯಲ್ಲಿ ಅಲೆನ್‌ನೇವಿಸ್ ರವರು All history upon the great use of memories, autobiographies dependence often obsolute. Yet are they more trust worthy than oral history memories? Not a bit! Often much less trust worthy.[೩೧] ಎಂಬುದಾಗಿ ಅಭಿಪ್ರಾಯಪಡುತ್ತಾರೆ. ಮೌಖಿಕ ಆಕರಗಳು ಜಾತಿ, ಧರ್ಮ, ಲಿಂಗ ಮತ್ತು ಭೌಗೋಳಿಕ ಎಲ್ಲೆಯನ್ನು ಮೀರಿದ ಮನಸ್ಸಿನ ಪಾರದರ್ಶಕ ಅಭಿವ್ಯಕ್ತಿಗಳಾಗಿರುತ್ತವೆ. ಈ ಹಿನ್ನೆಲೆಯಲ್ಲಿ ಮೌಖಿಕ ಚರಿತ್ರೆಯು ಅನುಭವದ ಸ್ಮರಣೆಯಾಗಿರುತ್ತದೆ. ಅನುಭವಗಳ ಕಥನಗಳು ವ್ಯಕ್ತಿಯ ಮೂಲಕ ಮರೆಯಾಗಬಹುದಾದ ಸಂಭವವನ್ನು ಇದು ತಪ್ಪಿಸುತ್ತದೆ.

ಪ್ರಾಚೀನ ಭಾರತದಲ್ಲಿ ಮನುಷ್ಯರಿಗೆ ಹಾಗೂ ಜಾನುವಾರುಗಳಿಗೆ ಬರಬಹುದಾದ ರೋಗ-ರುಜಿನಗಳಿಗೆ ಸ್ಥಳೀಯ ವೈದ್ಯರು ಗಿಡಮೂಲಿಕೆಗಳಿಂದ ತಯಾರಿಸಿದ ನಾಟಿ ಔಷಧಿಯನ್ನು ನೀಡುವಂತಹ ಜ್ಞಾನವನ್ನು ಹೊಂದಿದ್ದರು. ಅನ್ಯರಿಗೆ ಈ ಜ್ಞಾನವನ್ನು ತಿಳಿಸುವಲ್ಲಿ ಅವರಲ್ಲಿ ಸಂಕುಚಿತ ಭಾವನೆಯಿತ್ತು. ಇಂತಹ ಜ್ಞಾನವನ್ನು ಅನ್ಯರಿಗೆ ತಿಳಿಸಿದರೆ ರೋಗವು ವಾಸಿಯಾಗುವುದಿಲ್ಲ, ಎಂಬ ಮೂಢನಂಬಿಕೆಯು ವೈದ್ಯಕೀಯ ಕ್ಷೇತ್ರಕ್ಕೆ ತುಂಬಲಾರದ ನಷ್ಟವನ್ನು ಉಂಟುಮಾಡಿದೆ. ಇಂತಹ ಅಳಿವಿನ ಅಂಚಿನಲ್ಲಿರುವ ಜ್ಞಾನವನ್ನು ಉಳಿಸುವ, ಬೆಳೆಸುವ ಮೂಲಕ ಸಮುದಾಯದ ಹಿತವನ್ನು ಕಾಪಾಡಬೇಕಾಗುತ್ತದೆ. ಆಧುನಿಕರಣ, ಪಾಶ್ಚಾತ್ಯೀಕರಣ, ನಗರೀಕರಣದ ಪ್ರಭಾವದಿಂದ ಹಾಗೂ ತಂತ್ರಜ್ಞಾನದ ಬೆಳವಣಿಗೆಯಿಂದಾಗಿ ಅಳಿವಿನ ಅಂಚಿನಲ್ಲಿರುವ ಇಂತಹ ಜ್ಞಾನವನ್ನು ಉಳಿಸುವ ಅಗತ್ಯವಾದ ಕಾರ್ಯವು ಮೌಖಿಕ ಚರಿತ್ರೆಯಿಂದ ಸಾಧ್ಯವಾಗುತ್ತದೆ.

ಪೀಳಿಗೆಯಿಂದ ಪೀಳಿಗೆಗೆ ಸಾಗಿ ಬಂದಂತಹ ಘಟನೆಯಲ್ಲಿ ಸತ್ಯಾಂಶವು ಇರುವುದರಿಂದಲೇ ಅದು ಸಮುದಾಯದ ಸ್ಮರಣೆಯಲ್ಲಿರುತ್ತದೆ. ಕೆಲವೊಮ್ಮೆ ಈ ಸನ್ನಿವೇಶದಲ್ಲಿ ತನ್ನ ಸುತ್ತಲೂ ಹಲವಾರು ಕಥೆಗಳನ್ನು ಸೃಷ್ಟಿಸಿಕೊಂಡು ಸಾಗುತ್ತಿರುತ್ತದೆ. ಇವುಗಳು ಭಾವನಾತ್ಮಕ ಅಂಶಗಳಾದ ತ್ಯಾಗ, ಬಲಿದಾನ, ಶೋಷಣೆ, ನೋವು, ನಲಿವುಗಳ ಪ್ರತಿಧ್ವನಿಯಾಗಿರುತ್ತವೆ. ಚರಿತ್ರೆಯ ಪುನರ್ರಚನೆಯ ಸಂದರ್ಭದಲ್ಲಿ ಇಂತಹ ಅಂಶಗಳ ನೆಲೆಯಲ್ಲಿ ಮೌಖಿಕ ಚರಿತ್ರೆ ಮತ್ತು ಮೌಖಿಕ ಸಂಪ್ರದಾಯಗಳನ್ನು ಭಿನ್ನ ಸ್ತರದಲ್ಲಿ ವಿಶ್ಲೇಷಣೆ ಮಾಡಬೇಕಾಗಿರುತ್ತದೆ. ಮೌಖಿಕ ಚರಿತ್ರೆಯ ಸತ್ಯಾಸತ್ಯತೆಯನ್ನು ಅರಿಯಲು ಸಮಕಾಲೀನ ಆಧಾರಗಳ ತುಲನೆ ಮಾಡಲಾಗಿದೆ. ಒಬ್ಬ ವ್ಯಕ್ತಿಯು ಹೇಳಿದಂತಹ ವಿಚಾರವನ್ನು ಹಲವು ಜನರಲ್ಲಿ ಅಥವಾ ಇತರ ಕೃತಿಗಳ ಮೂಲಕ ಅರಿಯುವ ಕಾರ್ಯವು ಅವಶ್ಯಕವಾಗಿರುತ್ತದೆ.

ಘಟನೆಯ ನಿಖರತೆಗಿಂತ ಸಮಾಜದ ಪ್ರತಿಕ್ರಿಯೆ, ಅಭಿಪ್ರಾಯ ಮತ್ತು ಸಮಾಜದ ಮೇಲಣ ಪ್ರಭಾವವು ಗಮನೀಯವಾಗಿರುತ್ತದೆ.

ಅವ್ಯಕ್ತ ಸಂಸ್ಕೃತಿಯನ್ನು ಭೌತಿಕವಾಗಿ ಗುರುತಿಸುವುದು ಸೂಕ್ತವಲ್ಲ. ಅದು ಪ್ರಯಾಸದಾಯಕವಾದ ಕೆಲಸವಾಗಿದೆ. ಜನಪದರಲ್ಲಿ ಮುಕ್ತವಾದ ಅಭಿವ್ಯಕ್ತಿಗೆ ಯಾವ ಆತಂಕವೂ ಇರುವುದಿಲ್ಲ. ಆದರೇ ಜನಪದರು ಎಲ್ಲವನ್ನೂ ಮುಕ್ತವಾಗಿ ಅಭಿವ್ಯಕ್ತಿಸಲು ಸಾಧ್ಯವಿರಲಿಲ್ಲ.[೨] ಪ್ರಭುತ್ವದ ಯಜಮಾನಿಕೆಯು ಈ ಎಲ್ಲವನ್ನೂ ನಿಯಂತ್ರಿಸುತ್ತಿತ್ತು. ಪ್ರಭುತ್ವಕ್ಕೆ ಪ್ರತಿಕ್ರಿಯಿಸುವಷ್ಟೂ ಸ್ವಾತಂತ್ರ್ಯವು ಜನಸಾಮಾನ್ಯರಿಗೆ ಇರಲಿಲ್ಲ. ಲಿಖಿತ ಪರಂಪರೆಯ ವ್ಯಕ್ತ ಸ್ವರೂಪಕ್ಕೆ ಇದು ಕಾರಣವೂ ಆಗಿದೆಯೆಂದು ಭಾವಿಸಬಹುದು. ಬೀದಿಯಲ್ಲಿ ಬೇಡುವ ಹಾಡುಗಾರನು ಆಸ್ಥಾನದ ಅಂತರಂಗವನ್ನು ಹಾಡುವುದು ಸಾಮ್ರಾಜ್ಯದ ಘನತೆಗೆ ತಕ್ಕುದಾದ ವಿಷಯವಾಗಿರಲಿಲ್ಲ. ಹೀಗಾಗಿಯೇ ಲಿಖಿತ ಪರಂಪರೆಯು ಅತ್ಯಂತ ಬಲಿಷ್ಠವಾದ ವ್ಯಕ್ತ ಪರಂಪರೆ ಅಥವಾ ವ್ಯಕ್ತ ಸಂಸ್ಕೃತಿಯಾಯಿತು.

ಚರಿತ್ರೆಯು ಆಯಾಯ ಕಾಲಘಟ್ಟದ ಸಾಮಾಜಿಕ, ರಾಜಕೀಯ, ಆರ್ಥಿಕ, ಸಾಂಸ್ಕೃತಿಕ ಮತ್ತು ಧಾರ್ಮಿಕ ಸಂಗತಿಗಳ ಹಾಗೂ ಪರಸ್ಪರ ಪ್ರತಿಕ್ರಿಯೆಗಳ ಒಟ್ಟು ಮೊತ್ತವಾಗಿರುತ್ತದೆ. ವರ್ತಮಾನದ ಪ್ರತಿಯೊಂದು ಆರಾಧನಾ ಜಗತ್ತಿಗೂ ಚಾರಿತ್ರಿಕವಾದ ಹಿನ್ನೆಲೆಯು ಇರುತ್ತದೆ. ಅದು ಪ್ರಧಾನವಾಗಿ ಪ್ರಭುತ್ವ ಮೂಲದ ರಾಜಕೀಯ ಮತ್ತು ಮತ ಮೂಲದ ತಾತ್ವಿಕತೆಗಳನ್ನು ಮೈಗೂಡಿಸಿಕೊಂಡಿರುತ್ತದೆ.[೩೩] ಸಮುದಾಯಗಳ ಬದುಕಿನೊಂದಿಗೆ ನಿಕಟವಾದ ಸಂಬಂಧವನ್ನು ಹೊಂದಿರುತ್ತದೆ. ಆರಾಧನಾ ಜಗತ್ತಿನ ಬಹುಮುಖಿ ಮೌಖಿಕ ಪಠ್ಯಗಳನ್ನು ವಿಶ್ಲೇಷಿಸುವುದರಿಂದ ಅವುಗಳ ಹಿಂದಿರುವ ರಾಜಕೀಯ, ಸಾಮಾಜಿಕ, ಆರ್ಥಿಕ, ಧಾರ್ಮಿಕ ನೆಲೆಯ ನೈಜ ಅಂಶಗಳನ್ನು ಕಂಡುಕೊಳ್ಳಲು ಸಾಧ್ಯವಾಗುತ್ತದೆ.

## ೨.೪ ಮೌಖಿಕ ಚರಿತ್ರೆ ಮತ್ತು ಮೌಖಿಕ ಸಂಪ್ರದಾಯ

ಮೌಖಿಕ ಚರಿತ್ರೆ ಮತ್ತು ಮೌಖಿಕ ಸಂಪ್ರದಾಯ ಇವೆರಡರ ಮೂಲವೂ ಮೌಖಿಕತೆಯೇ ಅಗಿದೆ. ಆದರೂ ಅವೆರಡರ ಆಂತರ್ಯವು ಬೇರೆಯೇ ಆಗಿದೆ. ಹಾಗೂ ಮಾಹಿತಿಯನ್ನು ಸಂಗ್ರಹಿಸುವ ಮಾದರಿ ಒಂದೇ ಆದರೂ ಒಳವಿಚಾರವು ಸಹ ಬೇರೆಯೇ ಆಗಿರುತ್ತದೆ.

**ಮೌಖಿಕ ಚರಿತ್ರೆ** : ಇದು ವ್ಯಕ್ತಿಯ ಅಥವಾ ಸಮುದಾಯದ ಬದುಕಿನ ಅನುಭವ, ಕೇಳಿದ ವಿಚಾರ, ಮತ್ತು ಪೂರ್ವಸ್ಮೃತಿಯು ಮೌಖಿಕ ಚರಿತ್ರೆಯಾಗಿರುತ್ತದೆ. ವ್ಯಕ್ತಿಯ ಪೂರ್ವಸ್ಮೃತಿಗಳು, ಪ್ರತ್ಯಕ್ಷದರ್ಶಿಯ ಅನುಭವಗಳು ಹಾಗೂ ಸಮಾಜದಲ್ಲಿ ಕೇಳಿ ಬಂದ ವದಂತಿಗಳು ಮೌಖಿಕ ಚರಿತ್ರಕಾರನಿಗೆ ಆಕರಗಳಾಗಿರುತ್ತವೆ. ವಿಚಾರವೊಂದು ಮೌಖಿಕ ಸಂಪ್ರದಾಯವಾಗಿ ಬಾಯಿಂದ ಬಾಯಿಗೆ, ಪೀಳಿಗೆಯಿಂದ ಪೀಳಿಗೆಗೆ ಮೌಖಿಕವಾಗಿ ಸಾಗುತ್ತಾ ಬಂದಿರುತ್ತದೆ. ಅಂದರೆ ಜನಪದ ಗೀತೆ, ಗಾದೆ, ಒಗಟುಗಳ ಸ್ವರೂಪವನ್ನು ಪಡೆಯುತ್ತಾ

ಸಾಗುತ್ತದೆ. ಪ್ರತ್ಯಕ್ಷದರ್ಶಿಯ ಮಾಹಿತಿ, ಪೂರ್ವಸ್ಮೃತಿ, ವದಂತಿ, ಸುದ್ಧಿ, ಭಾಷಣಗಳು ಮೌಖಿಕ ಚರಿತ್ರೆಯಾಗಿರುತ್ತವೆ.

**ಮೌಖಿಕ ಸಂಪ್ರದಾಯ** : ಕ್ರಿಯಾತ್ಮಕ ರೂಢಿ, ಸಂಪ್ರದಾಯ, ವೃತ್ತಿ, ಹಾಗೂ ಜನಪದ ಆಚರಣೆಗಳು ಮೌಖಿಕ ಸಂಪ್ರದಾಯಗಳಾಗಿರುತ್ತವೆ. ಮೌಖಿಕ ಚರಿತ್ರೆ ಮತ್ತು ಸಂಪ್ರದಾಯವನ್ನು ಈ ನಕ್ಷೆಯ ಸಹಾಯದಿಂದ ಅರಿಯಬಹುದಾಗಿದೆ.[೩೪]




ಚರಿತ್ರೆಯನ್ನು ಪುನರ್ ರಚಿಸುವಲ್ಲಿ ಲಿಖಿತ ಮತ್ತು ಅಲಿಖಿತ ಆಕರಗಳೆರಡನ್ನೂ ಪೂರಕವಾಗಿ ಬಳಸಿಕೊಳ್ಳಬೇಕಾಗುತ್ತದೆ. ಚರಿತ್ರೆಯು ವೈವಿಧ್ಯಮಯವಾಗಿರುವಂತೆ ಆಕರಗಳೂ ವೈವಿಧ್ಯಮಯವಾಗಿವೆ. ಶಿಷ್ಟವರ್ಗದಿಂದ ರಚಿಸಲ್ಪಟ್ಟಿರುವ ಇವುಗಳನ್ನು ಮುಂದಿನಂತೆ ವರ್ಗೀಕರಿಸಬಹುದಾಗಿದೆ.[೩೫]

- ಶಿಷ್ಟ ಮೌಖಿಕ ಪರಂಪರೆ– ವೇದಗಳು, ಉಪನಿಷತ್ತುಗಳು, ಸ್ಮೃತಿಗಳು.
- ಶಿಷ್ಟ ಲಿಖಿತ ಪರಂಪರೆ– ಶಾಸನಗಳು, ಲಿಖಿತರೂಪದ ಶಾಸ್ತ್ರ ಗ್ರಂಥಗಳು.
- ಶಿಷ್ಟ ಕ್ರಿಯಾ ಪರಂಪರೆ– ಯಾಗ, ಯಜ್ಞ, ಯೋಗ.
- ಶಿಷ್ಟ ಭೌತಿಕ ಪರಂಪರೆ– ವಾಸ್ತುಶಿಲ್ಪಕ್ಕೆ ಅನುಸಾರವಾಗಿ ನಿರ್ಮಿಸಲಾದ ಕಟ್ಟಡ, ದೇವಾಲಯ, ಕೋಟೆಗಳು.
- ಶಿಷ್ಟ ಕಲಾ ಪರಂಪರೆ– ಭರತನಾಟ್ಯ, ಶಾಸ್ತ್ರೀಯ ಸಂಗೀತ. ಜನಪದರಿಂದ ಸೃಷ್ಟಿಸಲ್ಪಟ್ಟಿದ್ದು,

ಅದೇ ರೀತಿಯಾಗಿ ಪರಂಪರಾನುಗತವಾಗಿ ರೂಢಿಯಲ್ಲಿರುವ ಮೌಖಿಕ ಆಕರ ಮತ್ತು ಮೌಖಿಕ ಸಂಪ್ರದಾಯಗಳನ್ನು ಕೆಳಕಂಡಂತೆ ವರ್ಗೀಕರಿಸಬಹುದಾಗಿದೆ.

- ಜಾನಪದ ಮೌಖಿಕ ಪರಂಪರೆ– ಲಾವಣಿ, ಕಥೆ, ಗಾದೆ, ಒಗಟು.
- ಜಾನಪದ ಕ್ರಿಯಾ ಪರಂಪರೆ– ವೃತ್ತಿಗಳು, ಕೃಷಿ, ಕಮ್ಮಾರಿಕೆ.
- ಜಾನಪದ ಭೌತಿಕ ಪರಂಪರೆ– ಗುಡಿಸಲು, ಜೋಪಡಿ.
- ಜಾನಪದ ಕಲಾಪರಂಪರೆ– ಬಯಲಾಟ, ಕೋಲಾಟ, ರಂಗೋಲಿ.

ಮೇಲ್ಕಂಡ ಆಕರಗಳು ಸ್ಥಳೀಯ ಚರಿತ್ರೆಯ ರಚನೆಯಲ್ಲಿ ಪರಸ್ಪರ ಪೂರಕವಾಗಿ ಸ್ಪಂಧಿಸುತ್ತವೆ. ಹಾಗೂ ಇವುಗಳ ಸಂಪೂರ್ಣ ಬಳಕೆಯು ಸ್ಥಳೀಯ ಚರಿತ್ರೆಯ ಅಧ್ಯಯನವನ್ನು ಪರಿಪೂರ್ಣಗೊಳಿಸುತ್ತದೆ ಎಂಬ ಅರಿವು ಚರಿತ್ರಕಾರನಿಗೆ ಇರಬೇಕಾಗುತ್ತದೆ.

### ೨.೫ ಮೌಖಿಕ ಚರಿತ್ರೆಯ ಮಿತಿಗಳು

ರಾಷ್ಟ್ರೀಯ ಪ್ರಾದೇಶಿಕ ವ್ಯಾಪ್ತಿಯಲ್ಲಿ ನಡೆದಂತಹ ಹಾಗೂ ಪ್ರಭುತ್ವಕ್ಕೆ ಸಂಬಂಧಿಸಿದ ಘಟನೆಗಳನ್ನೇ ಒಳಗೊಂಡಿರುವ ರಾಷ್ಟ್ರೀಯ ಚರಿತ್ರೆಯು ಅಧಿಕೃತವಾದುದು, ವಸ್ತುನಿಷ್ಟವಾದುದು ಎಂದು ಭಾವಿಸುವ ಮೂಲಕ ಲಿಖಿತ ದಾಖಲೆಗಳನ್ನು ಮಾತ್ರ ಅಧಿಕೃತವೆಂದು ಬಹುತೇಕವಾಗಿ ಪರಿಗಣಿಸಲಾಗಿತ್ತು. ಈ ಹಿನ್ನೆಲೆಯಲ್ಲಿ ಮೌಖಿಕ ಆಕರಗಳನ್ನು ಅಲಕ್ಷಿಸಲಾಯಿತು. ಲಿಖಿತವಲ್ಲದ ಮೌಖಿಕ ಸಮಾಜವನ್ನು ಚರಿತ್ರಹೀನವಾದ ಇತಿಹಾಸ ಪೂರ್ವ ಸಮಾಜಗಳೆಂದು ನಿರ್ಲಕ್ಷಿಸಲಾಯಿತು. ಘಟನೆಗಳು ಹೇಗೆ ನಡೆದವೋ ಹಾಗೆಯೇ ಕಾಲಾನುಕ್ರಮಣಿಕೆಯಲ್ಲಿ ಅಧಿಕೃತವಾಗಿ, ವೈಜ್ಞಾನಿಕವಾಗಿ ಪುನರ್‌ರಚಿಸುವಲ್ಲಿ ಲಿಖಿತ ದಾಖಲೆಗಳು ಮಾತ್ರ ನೈಜವಾದುವು ಎಂಬ ಅಭಿಪ್ರಾಯವನ್ನು, ಹೊಂದಿದ್ದು ಅಲಿಖಿತವಾದುವು, ಕಾಲ್ಪನಿಕವಾದುವು, ಅನಧಿಕೃತವಾದುವು, ಅವೈಜ್ಞಾನಿಕವಾದುವು ಎಂಬ ಅಭಿಪ್ರಾಯವನ್ನು ಕೆಲವರು ಹೊಂದಿದ್ದರು.

ಈ ಹಿನ್ನೆಲೆಯಲ್ಲಿ ಲಿಖಿತ ಆಕರಗಳಿಗೆ ಹೋಲಿಸಿದಲ್ಲಿ ಮೌಖಿಕ ಆಕರಗಳು ದುರ್ಬಲವಾಗಿ ಕಾಣಿಸುತ್ತವೆ. ಮೌಖಿಕ ಆಕರಗಳಿಗೆ ನಿಶ್ಚಿತ ಆಕಾರವಿಲ್ಲ, ಹಾಗೂ ಅವುಗಳ ಕಾಲವೂ ಅನಿಶ್ಚಿತವಾದುದೆಂಬ ಅಭಿಪ್ರಾಯವನ್ನು ಕೆಲವು ಇತಿಹಾಸಕಾರರು ಹೊಂದಿದ್ದುದರಿಂದ ಮೌಖಿಕ ಆಕರಗಳ ಸ್ವರೂಪ ಮತ್ತು ಕಾಲದ ನೆಲೆಯಲ್ಲಿ ಲಿಖಿತವು ಪವಿತ್ರವೂ, ಅಧಿಕೃತವೂ, ಎಂದೂ ಹಾಗೂ ಅಲಿಖಿತ ಅಥವಾ ಮೌಖಿಕತೆಯು ಅಪವಿತ್ರವೂ, ಅನಧಿಕೃತವೂ, ಎಂಬುದಾಗಿ ವರ್ಗೀಕರಿಸಲಾಯಿತು. ಇದರಿಂದಾಗಿ ಮೌಖಿಕ ಆಕರಗಳು ಮೌಲ್ಯಾತ್ಮಕವಾಗಿ ತಿರಸ್ಕರಿಸಲ್ಪಟ್ಟವು. ವಿದ್ವಾಂಸರು ಸಾಮ್ರಾಜ್ಯದ ಆಸ್ಥಾನದಲ್ಲಿ ಕುಳಿತು ಜನಸಾಮಾನ್ಯರ ಭಾವನೆ, ಅಭಿಪ್ರಾಯಗಳಿಗೆ ಮನ್ನಣೆಯನ್ನು ನೀಡದೇ ಆಸ್ಥಾನದ ದಾಖಲೆಗಳು, ವಂಶಾವಳಿಗಳನ್ನು ಮಾತ್ರ ಆಧರಿಸಿ ಆಳುವ ವರ್ಗದ ಕೇಂದ್ರೀಕೃತವಾದ ಎಲೈಟ್ ಚರಿತ್ರೆಯನ್ನು ರಚಿಸಲು ಆರಂಭಿಸಿದಂತೆ ಇತಿಹಾಸದ ಆಕರಗಳ ವಾರಸುದಾರಿಕೆಯು ಲಿಖಿತ ದಾಖಲೆಗಳ ಪಾಲಾಯಿತು. ಇದರಿಂದಾಗಿ ಮೌಖಿಕ ಆಕರಗಳನ್ನು ಕಡೆಗಣಿಸಲಾಯಿತು. ಹಾಗಾಗಿ ಜನಸಾಮಾನ್ಯರ ಬದುಕಿನ ಭಾಗವಾಗಿ ಅವರ ಭಾವನೆಗಳು ಮತ್ತು ಅಭಿಪ್ರಾಯಗಳನ್ನು ಕಡೆಗಣಿಸಲಾಯಿತು.

ಪ್ರಭುತ್ವದ ಮುಲಾಜಿಗೆ ಒಳಗಾಗಿ ಸೃಷ್ಟಿಸಲಾಗಿರುವ ಆಕರಗಳನ್ನು ಆಧರಿಸಿ ರಚಿಸಲಾಗಿರುವ ಚರಿತ್ರೆಯನ್ನು ಪ್ರಸ್ತುತದಲ್ಲಿ ಪುನರ್‌ಪರಿಶೀಲಿಸುವ ಅಗತ್ಯವಿದೆ. ಅಂದರೆ ಎಲೈಟ್ ಇತಿಹಾಸದಲ್ಲಿರುವ 'ಆಳುವ ವರ್ಗದ ಕಥನಗಳಷ್ಟೇ ಇತಿಹಾಸ' ಎನ್ನುವ

ಅಭಿಪ್ರಾಯವನ್ನು ಮುರಿಯುವುದಾಗಿದೆ. ಹಾಗೂ ಇದನ್ನು ವಿಮರ್ಶೆಗೊಳಪಡಿಸುವ ಅವಶ್ಯಕತೆಯಿದೆ. ಮೇಲ್ವರ್ಗದ ಚರಿತ್ರೆಗಳಿಗೆ ಪರ್ಯಾಯವಾಗಿ ಜನಸಮುದಾಯ ಕೇಂದ್ರಿತವಾದ ಚರಿತ್ರೆಯನ್ನು ಕಟ್ಟುವುದು ಅನಿವಾರ್ಯವೂ, ಅಗತ್ಯವೂ ಆಗಿದೆ.

ಎಲ್ಲರಂತೆ ಸಹಜವಾಗಿ ಬಾಳಿ ಬದುಕಿದ, ನಂತರದಲ್ಲಿ ಅವರು ಮಾಡಿದ ವಿಶೇಷ ಸಾಧನೆಗಳಿಂದಾಗಿ ವ್ಯಕ್ತಿಯನ್ನು ಮಹಾತ್ಮನೆಂದು ಪರಿಗಣಿಸಲಾಗುತ್ತದೆ. ಆತನನ್ನು ಸಾಮಾನ್ಯ ಜನರಂತೆ ಗುರುತಿಸದೇ ಉಳಿದವರಿಗಿಂತ ವಿಶೇಷನಾದವನು ಅಥವಾ ಅಸಾಮಾನ್ಯ ವ್ಯಕ್ತಿ ಎಂಬುದಾಗಿ ಭಾವಿಸಲಾಗುತ್ತದೆ. ಆ ವ್ಯಕ್ತಿಯನ್ನು ಸಾಂಸ್ಕೃತಿಕ ವೀರನೆಂದು ಪರಿಗಣಿಸಿ ಆರಾಧಿಸುವುದು ಕಂಡುಬರುತ್ತದೆ. ಸಾಂಸ್ಕೃತಿಕ ವೀರನು ಕೆಲವೊಮ್ಮೆ ಚಾರಿತ್ರಿಕವಾದ ಅಥವಾ ಪುರಾಣೀಕರಿಸಲ್ಪಟ್ಟ ವ್ಯಕ್ತಿಯೂ ಆಗಿರುತ್ತಾನೆ. ಇದೇ ರೀತಿಯಾಗಿ ಕೆಲವು ಮಹತ್ವದ ಘಟನೆಗಳು ಅಥವಾ ವಿಷಯಗಳಿಗೂ ಪುರಾಣದ ವಿನ್ಯಾಸವನ್ನು ಒದಗಿಸಲಾಗುತ್ತದೆ. ಉದಾಹರಣೆಗೆ : ಹನ್ನೆರಡನೆಯ ಶತಮಾನದಲ್ಲಿ ಜೀವಿಸಿದ್ದ ಚಾರಿತ್ರಿಕ ವ್ಯಕ್ತಿಯಾದ ಬಸವೇಶ್ವರರನ್ನು ಹರಿಹರನ ಬಸವರಾಜದೇವರ ರಗಳೆಯಲ್ಲಿ ಪುರಾಣೀಕರಿಸಲಾಗಿದೆ.[೩೬] ಇಲ್ಲಿ ದೈವೀಕೃತನಾದ ಆತನು ವೈಜ್ಞಾನಿಕ ನೆಲೆಯಿಲ್ಲದ ಹಲವು ಪವಾಡಗಳನ್ನು ಮಾಡುತ್ತಾನೆ. ಅಲ್ಲದೇ ಬಸವೇಶ್ವರರು ಕೈಲಾಸದಲ್ಲಿ ಮಾಡಿದ ಅಪರಾಧಕ್ಕಾಗಿ ಶಿಕ್ಷೆಯ ಜೀವನವನ್ನು ಕಳೆಯಲು ಭೂಲೋಕದಲ್ಲಿ ಅವತರಿಸಿದರು ಎಂದು ವರ್ಣಿಸಲಾಗಿದೆ. ಇಂತಹ ಸನ್ನಿವೇಶದಲ್ಲಿ ಚರಿತ್ರಕಾರನು ಎಚ್ಚರಿಕೆಯಿಂದ ಆಕರಗಳನ್ನು ವಿಮರ್ಶೆಗೆ ಒಳಪಡಿಸಬೇಕಾಗುತ್ತದೆ. ಹಾಗೂ ಸಮಕಾಲೀನ ಜ್ಞಾನವನ್ನು ಹೊಂದಿರುವುದು ಕೂಡ ಅಗತ್ಯವಾಗಿರುತ್ತದೆ.

ಗತಚರಿತ್ರೆಯನ್ನು ಪುನರ್ ರಚಿಸುವುದು ಚರಿತ್ರೆಕಾರನಿಗೆ ಜವಾಬ್ದಾರಿಯುತವಾದ ಸಂಗತಿಯಾಗಿದೆ. ಚಾರಿತ್ರಿಕ ಘಟನೆಗಳ ಮೇಲೆ ಕಾಲ ಮತ್ತು ಪ್ರದೇಶಗಳು ಪ್ರಭಾವಿಸುತ್ತವೆ. ಘಟನೆಗಳ ಬಗ್ಗೆ ಕಾಲಾನಂತರದಲ್ಲಿ ಹಬ್ಬಿಕೊಂಡ ಪರ ಮತ್ತು ವಿರೋಧದ ಕಲ್ಪನೆಗಳಿಂದಾಗಿ, ಹಾಗೂ ಅವುಗಳೊಳಗೆ ಅಂತರ್ಗತವಾದ ಜನರ ಭಾವನೆಗಳಿಂದಾಗಿ ಇತಿಹಾಸವು ಜನಪದವಾಗಿ ವೈಭವೀಕೃತವಾಗುತ್ತದೆ. ಕಲ್ಪನೆಗಳ ಮಿಥ್ಯೆಗಳಿಂದ ಆವೃತವಾದ ಚಾರಿತ್ರಿಕ ಸಂಗತಿಗಳ ನಿಜ ಸ್ವರೂಪವನ್ನು ಬಯಲು ಮಾಡುವುದು ಚರಿತ್ರೆಕಾರನ ಜವಾಬ್ದಾರಿಯಾಗಿದೆ. ವಸ್ತುನಿಷ್ಠವಾಗಿ ರಚಿಸಲ್ಪಟ್ಟ ಆಕರಗಳು ಮಾತ್ರ ಸತ್ಯ ಸಂಗತಿಗಳನ್ನು ತೆರೆದಿಡಲು ಸಾಧ್ಯವಾಗುತ್ತವೆ. ಇಂತಹ ಸನ್ನಿವೇಶದಲ್ಲಿ ಸಮುದಾಯಗಳ ಸಾಂಸ್ಕೃತಿಕ ಆತ್ಮ ಕಥನವಾಗಿರುವ ಮೌಖಿಕ ಆಕರಗಳನ್ನು ಪೂರಕವಾಗಿ ಬಳಸಿಕೊಳ್ಳಬೇಕಾಗುತ್ತದೆ. ಅಂದರೆ ಮೌಖಿಕ ಚರಿತ್ರೆಯ ಸತ್ಯಾಸತ್ಯತೆಯನ್ನು ಆತ್ಮಕಥೆಗಳ ಸತ್ಯಾಸತ್ಯತೆಯ ಮಟ್ಟಕ್ಕೆ ಹೋಲಿಸಬಹುದಾಗಿದೆ. ಆದರೆ ಆತ್ಮಕಥೆಯೇ ಚರಿತ್ರೆಯಲ್ಲ ಎಂಬುದು ಚರಿತ್ರೆಯ ಶಿಸ್ತಿನ ಒನ್ನೆಲೆಯಲ್ಲಿ ಸ್ಪಷ್ಟವಾಗಿದೆ. ಹಾಗಾಗಿ ಆತ್ಮಕಥೆಯು ಚರಿತ್ರೆಗೆ ಆಕರವೆಂದು ಮಾನ್ಯ ಮಾಡಿರುವಾಗ ಮೌಖಿಕ ಕಥನವನ್ನೂ ಮಾನ್ಯ ಮಾಡಬೇಕಾಗಿದೆ.

ಮೌಖಿಕ ಚರಿತ್ರೆಯಲ್ಲಿ ಅಸತ್ಯದ ಅಂಶಗಳು ಸೇರಿ ಹೋಗುವುವು ಎಂಬ ಅಭಿಪ್ರಾಯವೂ ಇದೆ. ಆದರೆ ಲಿಖಿತ ದಾಖಲೆಯಲ್ಲಿಯೂ ಅಸತ್ಯದ ಅಂಶಗಳು ಸೇರಿರುವ ಸಂಭವವಿರುತ್ತದೆ ಎಂಬುದನ್ನು ಮರೆಯಬಾರದು. ಬರಹಗಾರನ ಹಿನ್ನೆಲೆ, ಸ್ಥಾನ, ಹಿತಾಸಕ್ತಿಗಳು ಹಾಗೂ ಇತರ ಪೂರ್ವಾಗ್ರಹಗಳು ಇದಕ್ಕೆ ಕಾರಣವಾಗಿರುತ್ತವೆ. ಅಂದರೆ ಮೌಖಿಕ ಆಕರಗಳು ಲಿಖಿತ ದಾಖಲೆಗಳಷ್ಟೇ ಅಧಿಕೃತವೇ? ಎಂದು ಪ್ರಶ್ನಿಸಿಕೊಂಡಾಗ ಸಂಶೋಧಕನು ಆಕರಗಳಿಗಿಂತ ಅವುಗಳ ಸೃಷ್ಟಿಕರ್ತನನ್ನು ಸಂದೇಹಿಸಬೇಕಾಗುತ್ತದೆ. ಅಂದರೆ ಇತಿಹಾಸದ ಪುನರ್‌ರಚನಾ ಕಾರ್ಯದಲ್ಲಿ ಆಕರ, ಮತ್ತು ಅದರ ಮಾಧ್ಯಮಕ್ಕಿಂತ ಅದರ ರಚನಾಕಾರನ ಪೂರ್ವಾಪರಗಳನ್ನು ಅರಿಯಲೇ ಬೇಕಾಗಿರುತ್ತದೆ. ಈ ಹಿನ್ನೆಲೆಯಲ್ಲಿ ಐತಿಹಾಸಿಕ ಅಂಶಗಳನ್ನು ರಮ್ಯರೋಮಂಚನ ಗೊಳಿಸುವುದಕ್ಕಿಂತ ಅಪಾಯಕಾರಿಯಾದುದು, ಕಲ್ಪನೆಗಳನ್ನೇ ಸತ್ಯವೆಂದು ಪ್ರತಿಪಾದಿಸುವುದು. ಈ ನೆಲೆಯಲ್ಲಿ ಇತಿಹಾಸ ಸಂಶೋಧನಾ ವಿಧಾನಗಳಲ್ಲಿನ ಬಾಹ್ಯವಿಮರ್ಶೆ ಮತ್ತು ಆಂತರಿಕ ವಿಮರ್ಶೆಯನ್ನು ಪಾಲಿಸಬೇಕಾಗುತ್ತದೆ. ಇತಿಹಾಸ ರಚನೆಯಲ್ಲಿ ಅಕರಗಳ ಸ್ವರೂಪಕ್ಕಿಂತ ಬಹುಮುಖ್ಯವಾಗಿ ಅವುಗಳನ್ನು ಒದಗಿಸುವಂತಹ ವ್ಯಕ್ತಿ ಆತನ ನಂಬಿಕೆಯ ಅರ್ಹತೆಯನ್ನು ಪ್ರಶ್ನಿಸಬೇಕಾಗುತ್ತದೆ. ಅಂದರೆ ಆ ವ್ಯಕ್ತಿಯ ಪೂರ್ವಾಪರಗಳನ್ನು ಅರಿತಿರಬೇಕಾಗುತ್ತದೆ. ಇಲ್ಲಿ ಸಂಶೋಧಕ ಮತ್ತು ಆಕರದ ಮನಃಸಾಕ್ಷಿಯು ಮಹತ್ವದ ಪಾತ್ರವಹಿಸುತ್ತದೆ.

ಸಾಮಾನ್ಯವಾಗಿ ಅಲಕ್ಷಿತ ಸಮುದಾಯಗಳ ಧ್ವನಿಯೇ ಉಡುಗಿ ಹೋಗಿರುವುದು ರಾಷ್ಟ್ರೀಯ ಚರಿತ್ರೆಯಲ್ಲಿ ಕಂಡುಬರುವ ಬಹುಮುಖ್ಯವಾದ ಲೋಪವಾಗಿದೆ. ಸಮುದಾಯಗಳ ಸಾಕ್ಷಿಪ್ರಜ್ಞೆ ಇಲ್ಲದೆ ರೂಪುಗೊಂಡ ಚರಿತ್ರೆಯು ಜನವಿರೋಧಿಯಾಗಿದ್ದು ಪ್ರಭುತ್ವದ ವೈಭವವನ್ನು ಪ್ರಧಾನವಾಗಿ ಇರಿಸಿಕೊಂಡಿರುತ್ತದೆ. ಭಾರತದಂತಹ ರಾಷ್ಟ್ರವೊಂದರ ಚರಿತ್ರೆಯ ಪುನರ್‌ರಚನೆಯಲ್ಲಿ ಮೌಖಿಕ ಆಕರಗಳನ್ನು ಬಳಸದಿರುವುದು ಜನತೆಯ ಸಾಕ್ಷಿ ಪ್ರಜ್ಞೆಯನ್ನೇ ಅಪಮಾನಿಸಿದಂತೆ ಆಗುತ್ತದೆ. ನಿರ್ದಿಷ್ಟ ವಿನ್ಯಾಸಕ್ಕೆ ಸಿಲುಕಿದ ಮೌಖಿಕತೆಯು ಚಾರಿತ್ರಿಕ ಸತ್ಯದ ಘಟನೆಗಳಿಗೆ ಪೂರಕವಾಗಿ ಪ್ರತಿಕ್ರಿಯಿಸುವುದಕ್ಕೆ ಬದಲಾಗಿ ಪುರಾಣವನ್ನೇ ವ್ಯಕ್ತಪಡಿಸಲು ಮುಂದಾಗುವ ಸಾಧ್ಯತೆಯೇ ಹೆಚ್ಚು. ಆದರೆ ಇಲ್ಲಿ ಮನಃಸಾಕ್ಷಿಯು ಕ್ರಿಯಾಶೀಲವಾಗಿ ಇರಬೇಕಾಗುತ್ತದೆ. ಭೌತಿಕ ವಿನ್ಯಾಸಕ್ಕಿಂತ ಭಾವವಿನ್ಯಾಸ ಮತ್ತು ನಂಬಿಕೆಯನ್ನು ಅಂತರ್ಗತಗೊಳಿಸಿಕೊಳ್ಳಬೇಕಿದೆ. ಜನಪದರ ಮೌಖಿಕ ಕಥನಗಳು ಮೂಲ ಸತ್ಯ ಘಟನೆಗೆ ಪೂರಕ ಅಥವಾ ಭಿನ್ನವಾಗಿಯೂ ಇರಬಹುದಾಗಿದೆ. ಇಲ್ಲಿ ಚರಿತ್ರಕಾರನು ನ್ಯಾಯಾಧೀಶನ ಜವಾಬ್ದಾರಿಯನ್ನು ನಿರ್ವಹಿಸಬೇಕಾಗಿದೆ.

ಚರಿತ್ರೆಯನ್ನು ಪುನರ್‌ರಚಿಸುವ ಇಂದಿನ ಸಾಮಾಜಿಕ ಸನ್ನಿವೇಶದಲ್ಲಿ ಮೌಖಿಕ ಆಕರವೆಂದು ಯಾವುದನ್ನು ಪರಿಗಣಿಸಬೇಕು ಎಂಬುದು ತೊಡಕಿನ ವಿಷಯವಾಗಿದೆ. ಅಕ್ಷರಮಾಲೆಯ ಲಿಪಿ ವ್ಯವಸ್ಥೆಯಲ್ಲಿರುವ ಇಂದು ಬರವಣಿಗೆಯ ಮೂಲಕ ಸಂವಹನ ನಡೆಸುತ್ತಿದ್ದೇವೆ. ಸಮೂಹ ಸಾಕ್ಷರತೆಯ ವರ್ತಮಾನದ ಸಾಮಾಜಿಕ ಸ್ಥಿತಿಯ ಪೂರ್ವದಲ್ಲಿ

ಸಂಸ್ಕೃತಿಯ ಸಂವಹನದ ವಿಧಾನಗಳನ್ನು ಗುರುತಿಸಿಕೊಳ್ಳಬಹುದಾಗಿದೆ. ಅವುಗಳೆಂದರೆ ಮೌಖಿಕ ಸಂಸ್ಕೃತಿ, ಬರಹ ಸಂಸ್ಕೃತಿ ಮತ್ತು ಸಂಮಿಶ್ರ ಸಂಸ್ಕೃತಿ. ಮೌಖಿಕ ಸಂಸ್ಕೃತಿಯಲ್ಲಿ ಭಾಷೆಗಳು ಸಂಪೂರ್ಣವಾಗಿ ಮೌಖಿಕ ರೂಪದಲ್ಲಿರುತ್ತವೆ. ಉದಾಹರಣೆಗೆ : ತುಳುಭಾಷೆ. ಅಂತೆಯೇ ಬರಹ ಸಂಸ್ಕೃತಿಯಲ್ಲಿ ಭಾಷೆಗಳು ಬರಹರೂಪದಲ್ಲಿದ್ದು ಮೌಖಿಕ ರೂಪವು ಚಾಲನೆಯಲ್ಲಿ ಇರುವುದಿಲ್ಲ. ಉದಾಹರಣೆಗೆ : ಸಂಸ್ಕೃತ, ಲ್ಯಾಟಿನ್ ಭಾಷೆಗಳು. ಸಂಮ್ಮಿಶ್ರ ಸಂಸ್ಕೃತಿಯಲ್ಲಿ ಭಾಷೆಗಳು ಬರಹ ಮತ್ತು ಮೌಖಿಕ ರೂಪದಲ್ಲಿರುತ್ತವೆ.

## ಟಿಪ್ಪಣಿಗಳು

೧. ಲಕ್ಷ್ಮಣ್ ತೆಲಗಾವಿ ಸಂ) ೨೦೦೩ ***"ಸ್ಥಳೀಯ ಚರಿತ್ರೆ-ಅಧ್ಯಯನದ ತಾತ್ವಿಕತೆ ಮತ್ತು ಸ್ವರೂಪ"*** ಹಂಪಿ, ಕ. ವಿ. ವಿ. ಪುಟ-೨೦
೨. ವಿಜಯ್ ಪೂಣಚ್ಚ ತಂಬಂಡ ೨೦೦೪ ***"ಪಳಮೆ-ಮೌಖಿಕ ಆಕರಗಳು ಕಟ್ಟಿಕೊಡುವ ಕನ್ನಡ-ಕೊಡಗು-ತುಳುನಾಡಿನ ಅಧ್ಯಯನ"*** ಹಂಪಿ, ಕ. ವಿ. ವಿ. ಪುಟ ೫-೬
೩. ವಸು ಎಂ. ವಿ. ೨೦೦೪ ***"ಮೌಖಿಕ ಇತಿಹಾಸ"*** ಬೆಂಗಳೂರು, ಅಂಕಿತ ಪುಸ್ತಕ, ಪುಟ-೧೪
೪. ***ಅದೇ*** ಪುಟ-೯
೫. ***ಅದೇ*** ಪುಟ-೯
೬. ಲಕ್ಷ್ಮಣ್ ತೆಲಗಾವಿ (ಸಂ) ೨೦೦೩ ***'ಪೂರ್ವೋಕ್ತ'*** ಪುಟ-೪೭
೭. ವಲೆರಿಯೋ ರಲಿ ಯೋ ೧೯೯೪ ***"ರೆಕಾರ್ಡಿಂಗ್ ಓರಲ್ ಹಿಸ್ಟ್ರಿ" ಎ ಪ್ರಾಕ್ಟಿಕಲ್ ಗೈಡ್ ಫಾರ್ ಸೋಶಿಯಲ್ ಸೈಂಟಿಸ್ಟ್ಸ್"*** ಕ್ಯಾಲಿಫೋರ್ನಿಯಾ, ನ್ಯೂಡೆಲ್ಲಿ, ಎಸ್ಎಜಿಇ ಪಬ್ಲಿಕೇಷನ್ಸ್, ಪುಟ-೪
೮. ಲಾರಿಹ್ಯಾಂಕೋ, ಜವಾಹರ್‌ಲಾಲ್ ಹೊಂಡೂ, ಜಾನಿ ಮೈಲ್ಸ್‌ಫಾಲಿ (ಸಂ) ೧೯೯೮ ***"ದಿ ಎಫಿಕ್ ಓರಲ್ ಅಂಡ್ ರಿಟನ್"*** ಮೈಸೂರು ಸೆಂಟ್ರಲ್ ಇನ್ಸ್ಟಿಟ್ಯೂಟ್ ಆಫ್ ಇಂಡಿಯನ್ ಲಾಂಗ್ವೇಜಸ್ ಪುಟ-೧೦.
೯. ಶಂಕರನಾರಾಯಣ ತೀ.ನಂ ೨೦೦೧ ***"ಫಿನ್ಲೆಂಡಿನ ಜಾನಪದ ವಿದ್ವಾಂಸರು"*** ಬೆಂಗಳೂರು, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ- ಕಲೆವಲ ಎಂಬುದು ಫಿನ್ಲೆಂಡಿನ ಜನಪದ ಕಾವ್ಯ. ಇದರ ಸಂಗ್ರಹಕಾರರು ಎಲಿಯಾಸ್ ಲೆನ್ರೂಟ್. ಕಲೆವಲ ಎಂಬ ಕಾವ್ಯದಲ್ಲಿ ಈ ಒಂದು ಪಾತ್ರವು ಸಾಂಸ್ಕೃತಿಕ ನಾಯಕನ ಪಾತ್ರವಾಗಿದ್ದರೂ ಇದೊಂದು ಮೌಲ್ಯದ ಪ್ರತೀಕವಾಗಿದೆ. ವೈನೆಮಾರಿನೆನ್, ಇಲ್ಲ್‌ಮಾರಿನೆನ್ ಮತ್ತು ಲೆಮ್ಮಿನ ಕಾಯಿನೆನ್ ಈತನ ಮಕ್ಕಳಾಗಿದ್ದಾರೆ. ಇಲಿಯಾಸ್ ಲಾನ್‌ರಾಟ್ ರವರು ಕಲೆವಲ ಕಾವ್ಯವನ್ನು ಕುರಿತು ಹೆಲ್ಸಿಂಕಿ ವಿಶ್ವವದ್ಯಾಲಯದಲ್ಲಿ ಹಲವು ಉಪನ್ಯಾಸಗಳನ್ನು ನೀಡಿದ್ದಾರೆ. ಹಾಗೂ ಕೆಲವು ಸಂಪುಟಗಳಲ್ಲಿ ಈ ಕಾವ್ಯವನ್ನು ಪ್ರಕಟಿಸಿದಾರೆ.
೧೦. ವಸು ಮಳಲಿ ೦೫ ಆಗಸ್ಟ್ ೨೦೧೪, ಪ್ರಜಾವಾಣಿ ***"ಮಹಾಕಾವ್ಯಗಳ ಬಹುಮುಖಿ ಜಗತ್ತು"***
೧೧. ಲಕ್ಷ್ಮಣ್ ತೆಲಗಾವಿ (ಸಂ) ೨೦೦೩ ***'ಪೂರ್ವೋಕ್ತ'*** ಪುಟ-೨೭
೧೨. ರೆ.ಎಫ್ ಕಿಟಲ್ ೧೯೯೯ ***"ಕನ್ನಡ-ಇಂಗ್ಲೀಷ್ ಡಿಕ್ಷನರಿ"*** ಏಷಿಯನ್ ಎಜುಕೇಷನಲ್ ಸರ್ವೀಸ್ ನ್ಯೂಡೆಲ್ಲಿ, ಮದ್ರಾಸ್
೧೩. ***"ಕನ್ನಡ ರತ್ನಕೋಶ"*** , ಬೆಂಗಳೂರು, ಕನ್ನಡ ಅಭಿವೃದ್ಧಿ ಪ್ರಾಧಿಕಾರ
೧೪. ಚಿನ್ನಸ್ವಾಮಿ ಸೋಸಲೆ. ಎನ್ (ಸಂ) ೨೦೧೬ ಜುಲೈ-ಡಿಸೆಂಬರ್ "*ಚರಿತ್ರೆ ಅಧ್ಯಯನ*" (ನರ್ಕಳ ರಾಘನಾಥಶೆಟ್ಟಿ ಲೇ. ***"ಚರಿತ್ರೆಯಲ್ಲಿ ಪುರಾಣ, ಪುರಾಣದಲ್ಲಿ ಚರಿತ್ರೆ ಎಂಬ ಸತ್ಯಾನ್ವೇಷಣೆಯ ಸಂಕಥನ"***) ಹಂಪಿ, ಪ್ರಸಾರಾಂಗ ಕವಿವಿ
೧೫. ಲಕ್ಷ್ಮಣ್ ತೆಲಗಾವಿ (ಸಂ) ೨೦೦೩ ***"ಪೂರ್ವೋಕ್ತ"*** ಪುಟ-೨೯
೧೬. ವಸು ಎಂ.ವಿ. ೨೦೦೪ ***"ಪೂರ್ವೋಕ್ತ"*** ಪುಟ-೧೬

೧೭. ರಮೇಶ್‌ನಾಯಕ್ (ಸಂ) ೨೦೦೭ ***"ಕರ್ನಾಟಕದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನಗಳ ಮರುಚಿಂತನೆ"*** ಪುಟ-೪೯

೧೮. ವಸು ಎಂ. ವಿ ೨೦೦೪ ***"ಪೂರ್ವೋಕ್ತ"*** ಪುಟ-೧೭

೧೯. ***ಅದೇ*** ಪುಟ-೧೬

೨೦. ವಿಜಯ್ ಪೂಣಚ್ಚ ತಂಬಂಡ (ಸಂ) ೨೦೧೦ ***"ಚರಿತ್ರೆ ಸಂಪುಟ ೦೧ "*** ಪುಟ-೧೨೩

೨೧. ***ಅದೇ*** ಪುಟ-೮೭

೨೨. ***ಅದೇ*** ಪುಟ-೯೧

೨೩. ***ಅದೇ*** ಪುಟ-೯೬

೨೪. ***ಅದೇ*** ಪುಟ-೨೧೫

೨೫. ಡಿ. ಡಿ. ಕೊಸಾಂಬಿ (ಅನು. ಟಿ.ಎಸ್.ವೇಣುಗೋಪಾಲ್ ಮತ್ತು ಶೈಲಜಾ) ೨೦೦೩, ೨೦೧೩ ***"ಪುರಾಣ ಮತ್ತು ವಾಸ್ತವ"*** ಬೆಂಗಳೂರು, ಚಿಂತನ ಪುಸ್ತಕ. ಪುಟ ೬-೭

೨೬. ಡೇವಿಡ್ ಕೆ. ದುನವೇ, ವಿಲ್ಲ ಕೆ. ಬಾಮ್(ಸಂ) ೧೯೯೬ **"ಅನ್ ಇಂಟರ್ ಡಿಸಿಪ್ಲಿನರಿ ಅಂಥೋಲಜಿ"** ಕ್ಯಾಲಿಫೋರ್ನಿಯ, ಲಂಡನ್, ನ್ಯೂಡೆಲ್ಲಿ, ಅಲ್ತಮಿರ ಪ್ರೆಸ್, ಎ ಡಿವಿಜನ್ ಆಫ್ ಎಸ್.ಎಜಿ.ಇ ಪಬ್ಲಿಕೇಷನ್ಸ್. ಪುಟ-೩

೨೭. ಡೇವಿಡ್ ಕೆ. ದುನವೇ, ವಿಲ್ಲ ಕೆ. ಬಾಮ್(ಸಂ) ೧೯೯೬ ***"ಅದೇ"*** ಪುಟ-೨೯

೨೮. **ಅದೇ** ಪುಟ-೩೩

೨೯. ಅಂತರ್ಜಾಲ ***"ವಿಕಿಪೀಡಿಯಾ"***

೩೦. ವೆಂಡಿಸಿಂಗರ್ ೧೯೯೭ ***"ಕ್ರಿಯೇಟಿಂಗ್ ಹಿಸ್ಟರೀಸ್: ಓರಲ್ ನರೇಟಿವ್ಸ್ ಅಂಡ್ ದಿ ಪಾಲಿಟಿಕ್ಸ್ ಆಫ್ ಹಿಸ್ಟರಿ ಮೇಕಿಂಗ್"*** ನ್ಯೂಡೆಲ್ಲಿ, ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್

೩೧. ಡೇವಿಡ್ ಕೆ. ದುನವೇ, ವಿಲ್ಲ ಕೆ. ಬಾಮ್ (ಸಂ) ೧೯೯೬ ***"ಪೂರ್ವೋಕ್ತ"*** ಪುಟ ೩ ಮತ್ತು ೨೯

೩೨. ಮೊಗಳ್ಳಿ ಗಣೇಶ್ ೨೦೦೯ ***"ಅವ್ಯಕ್ತ ಚರಿತ್ರೆ"*** ಹಂಪಿ, ಪ್ರಸಾರಾಂಗ ಕವಿವಿ, ಪುಟ-೨೮

೩೩. ಪೂವಪ್ಪ ಕಣಿಯೂರು ೨೦೦೯ ***"ಮೌಖಿಕ ಸಂಕಥನ"*** ಸುಳ್ಯ ದಕ, ತರಂಗಿಣಿ ಪ್ರಕಾಶನ

೩೪. ವಸು ಎಂ. ವಿ. ೨೦೦೪ ***"ಪೂರ್ವೋಕ್ತ"*** ಪುಟ-೮೦

೩೫. ***ಅದೇ*** ಪುಟ-೮೨

೩೬. ಚಿನ್ನಸ್ವಾಮಿ ಸೋಸಲೆ (ಸಂ) ೨೦೧೭ ***"ಚರಿತ್ರೆ ಅಧ್ಯಯನ"*** ಜುಲೈ-ಡಿಸೆಂಬರ್ ೨೦೧೬ ಹಂಪಿ, ಕವಿವಿ ಪುಟ-೧೬೩

-೦೦೦-

## ಅಧ್ಯಾಯ : ೩

## ತುಮಕೂರು : ಪ್ರಾದೇಶಿಕ ಪರಿಚಯ

೩.೧ ಭೌಗೋಳಿಕ ನೆಲೆ

೩.೨ ಸಂಕ್ಷಿಪ್ತ ಚರಿತ್ರೆ

೩.೩ ಸ್ಥಳನಾಮಗಳು

೩.೪ ಮೌಖಿಕ ಆಕರಗಳು

# ಅಧ್ಯಾಯ : ೩

# ತುಮಕೂರು : ಪ್ರಾದೇಶಿಕ ಪರಿಚಯ

## ೩.೧ ಭೌಗೋಳಿಕ ನೆಲೆ

ತುಮಕೂರು ಪರಿಸರವು ಭೌಗೋಳಿಕವಾಗಿ ಮತ್ತು ಜನಾಂಗೀಯವಾಗಿ ಹಲವು ವೈವಿಧ್ಯಮಯವಾದ ಸನ್ನಿವೇಶಗಳನ್ನು ಹೊಂದಿದೆ. ರಾಷ್ಟ್ರೀಯ ಹೆದ್ದಾರಿಯು ಈ ಪ್ರದೇಶದಲ್ಲಿ ಉತ್ತರ-ದಕ್ಷಿಣಾಭಿಮುಖವಾಗಿ ಚಿತ್ರದುರ್ಗದಿಂದ ಬೆಂಗಳೂರಿಗೆ ಹಾದು ಹೋಗುತ್ತದೆ. ಚಿಕ್ಕನಾಯಕನಹಳ್ಳಿಯನ್ನು ಹೊರೆತು ಪಡಿಸಿ ಈ ಹೆದ್ದಾರಿಯ ಪಶ್ಚಿಮಕ್ಕೆ ಗುಬ್ಬಿ, ತುಮಕೂರು, ಕುಣಿಗಲ್, ತುರುವೇಕೆರೆ, ತಿಪಟೂರು ತಾಲೂಕುಗಳ ಬಹುತೇಕ ಪ್ರದೇಶಗಳಿವೆ, ಹೆದ್ದಾರಿಯ ಪೂರ್ವಕ್ಕೆ ಚಿಕ್ಕನಾಯಕನಹಳ್ಳಿಯನ್ನು ಸೇರಿದಂತೆ ಕೊರಟಗೆರೆ, ಮಧುಗಿರಿ, ಸಿರಾ, ಪಾವಗಡ ತಾಲೂಕುಗಳ ಬಹುತೇಕ ಪ್ರದೇಶಗಳು ಹಬ್ಬಿವೆ.

ಮಂಡ್ಯ, ಹಾಸನ ಜಿಲ್ಲೆಗಳಿಗೆ ಹೊಂದಿಕೊಂಡಂತೆ ಇರುವ ಪಶ್ಚಿಮದ ಪ್ರದೇಶವು ಸ್ವಲ್ಪ ಮಟ್ಟಿಗೆ ನೀರಾವರಿ ಆಧಾರಿತ ಕೃಷಿಯನ್ನು ಹೊಂದಿದೆ. ಇಲ್ಲಿ ಸಿದ್ದಗಂಗೆ, ಗುಬ್ಬಿಚನ್ನಬಸವೇಶ್ವರ, ಯಡೆಯೂರು, ಕಗ್ಗರೆ, ಕ್ಷೇತ್ರಗಳಿವೆ. ಇಲ್ಲಿ ಬಹಳ ಹಿಂದೆಯೇ ಅಪಾರವಾದ ಸಾಹಿತ್ಯ ಸಂಪತ್ತು ರಚನೆಯಾಗಿರುವುದನ್ನು ಕಾಣಬಹುದು. ಪಶ್ಚಿಮದ ಈ ಪ್ರದೇಶವು ಆಡಳಿತಾತ್ಮಕವಾಗಿ, ಆರ್ಥಿಕವಾಗಿ, ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಪೂರ್ವಕ್ಕಿಂತ ಭಿನ್ನವಾದ ಸನ್ನಿವೇಶವನ್ನು ಹೊಂದಿದೆ.

ಪೂರ್ವದ ಪ್ರದೇಶವು ಬೆಟ್ಟಗುಡ್ಡಗಳಿಂದ ಕೂಡಿದ ಭೂ ಮೇಲ್ಮೈಯನ್ನು ಹೊಂದಿದ್ದು, ಕೃಷಿಗೆ ಮಳೆಯನ್ನೇ ಪ್ರಧಾನವಾಗಿ ಆಶ್ರಯಿಸಿವೆ. ಇವು ತೆಲುಗಿನ ಪ್ರಭಾಕ್ಕೆ ಒಳಗಾಗಿದ್ದು ಪಶ್ಚಿಮದ ಪ್ರದೇಶಕ್ಕಿಂತ ಭಿನ್ನವಾದ ಸನ್ನಿವೇಶವನ್ನು ಹೊಂದಿವೆ. ಸಮುದಾಯದ ಬದುಕು ಪಶ್ಚಿಮಕ್ಕಿಂತ ಕಷ್ಟದಾಯಕವಾಗಿದೆ. ಹಾಗಾಗಿ ಈ ಪ್ರದೇಶವನ್ನು 'ಹಸಿವಿನ ಪ್ರದೇಶ'

ಎಂಬುದಾಗಿ ಕರೆಯಬಹುದಾಗಿದೆ. ಇಲ್ಲಿನ ಕೇರಿಗಳಲ್ಲಿ ಕಂಡುಬರುವ 'ಇಟ್ಟು ಬಟ್ಟೆಗೆ ಬಿದ್ದಿದ್ದೀನಿ' ಎಂಬ ನಾಣ್ಣುಡಿಗಳು ಹಸಿವಿನ ಕಾರಣ ಬಿಟ್ಟಿ ಚಾಕರಿ ಮಾಡಬೇಕಾಗಿದ್ದ ಸನ್ನಿವೇಶವನ್ನು ಹೇಳುವ ದಾಖಲೆಗಳಂತಿವೆ. ಬಡತನವು ಜನತೆಯನ್ನು ಅಕ್ಷರದಿಂದ ವಂಚಿತರನ್ನಾಗಿಸುವುದು. ಹಾಗಾಗಿ ಇಲ್ಲಿನ ಜನತೆಯು ತಮ್ಮ ಅನುಭವಗಳನ್ನು ದಾಖಲಿಸಲು ಸಾಧ್ಯವಾಗಲಿಲ್ಲ. ಹೀಗಾಗಿಯೇ ಪಶ್ಚಿಮಕ್ಕಿಂತ ವಿಫುಲವಾದ ಮೌಖಿಕ ಆಕರಗಳು ಈ ಪ್ರಾದೇಶಿಕ ಭಾಗದಲ್ಲಿ ಕಂಡುಬರುತ್ತವೆ. ಸನ್ನಿವೇಶಗಳಿಗೆ ಪೂರಕವಾಗಿಯೇ ಇಲ್ಲಿ ಸೃಷ್ಟಿಸಿಕೊಂಡ ಮೌಖಿಕ ಆಕರಗಳು ಜನಸಾಮಾನ್ಯರ ಬದುಕಿನ ಭಾಗವಾಗಿ ಕಂಡುಬರುತ್ತವೆ. ಅಂದರೆ ಇಲ್ಲಿನ ವಿಫುಲವಾದ ಮೌಖಿಕ ಪರಂಪರೆಯು ಸ್ಥಳೀಯ ಬದುಕಿನ ಧ್ವನಿಯಾಗಿದೆ. ಉದಾಹರಣೆಗೆ : ಈರುಗ್ಯಾತರಾಯ, ಈರುನಾಗಮ್ಮ, ಸ್ವಾರಮ್ಮ, ಕುರಂಗರಾಜ, ಜುಂಜಪ್ಪ, ದಿಬ್ಬದ ವೀರಬೊಮ್ಮಣ್ಣ, ಬಂದ್ಕುಂಟೆ ಈರುಚಿಕ್ಕಣ್ಣ, ಬರಗೂರು ಈರಮ್ಮ, ಬಳ್ಳಕಟ್ಟೆ ಈರಣ್ಣ, ವೀರಸೀಗಣ್ಣ, ಶೂಲದ ಈರಣ್ಣ, ಚಿಕ್ಕನಾಯಕನಹಳ್ಳಿ ಪರಿಸರದ ಕೆಂಚಮ್ಮ, ಭೀಮಾಸತಿ, ಮದಲಿಂಗ, ಹೊನ್ನೇಮರದ ಈರಣ್ಣ ಮುಂತಾದ ಸಾಂಸ್ಕೃತಿಕ ವೀರರ ಮಹಾಕಾವ್ಯಗಳು ಕಂಡು ಬರುತ್ತವೆ.

ತುಮಕೂರು, ಕರ್ನಾಟಕ ರಾಜ್ಯದ ಜಿಲ್ಲಾ ಕೇಂದ್ರವಾಗಿದೆ. ಬೆಂಗಳೂರಿಗೆ ಉತ್ತರ ಭಾಗದಲ್ಲಿ ಸುಮಾರು ೭೦ ಕಿ. ಮೀ. ದೂರದಲ್ಲಿದೆ. ಇದು ಚಿತ್ರದುರ್ಗ, ಹಾಸನ, ಮಂಡ್ಯ, ಬೆಂಗಳೂರು ಗ್ರಾಮಾಂತರ, ಚಿಕ್ಕಬಳ್ಳಾಪುರ ಜಿಲ್ಲೆಗಳ ನಡುವೆ ಇದ್ದು ಆಂಧ್ರಪ್ರದೇಶಕ್ಕೆ ಹೊಂದಿಕೊಂಡಿದೆ. ರೇಖಾಂಶ ೭೬ ಡಿಗ್ರಿ ಪೂರ್ವದಿಂದ ೭೮ ಡಿಗ್ರಿ ಪೂರ್ವದವರೆಗೆ ಹಾಗೂ ಅಕ್ಷಾಂಶ ೧೧.೫ ಡಿಗ್ರಿ ಉತ್ತರದಿಂದ ೧೪.೫ ಡಿಗ್ರಿ ಉತ್ತರದವರೆಗೆ ಹಬ್ಬಿದೆ. ಉತ್ತರದಿಂದ ದಕ್ಷಿಣಕ್ಕೆ ಗರಿಷ್ಟ ೧೬೪.೧೫ ಕಿ. ಮೀ. ಪೂರ್ವದಿಂದ ಪಶ್ಚಿಮಕ್ಕೆ ೧೦೭.೮೨ ಕಿ. ಮೀ. ಹಬ್ಬಿದೆ. ರಾಜ್ಯದ ಒಟ್ಟಾರೆ ವಿಸ್ತೀರ್ಣದ ಶೇ.೫.೫೨ ಭೂ ಭಾಗವನ್ನು ಹೊಂದಿದ್ದು, ೧೦೫೯೭ ಚ.ಕಿ.ಮೀ ಭೌಗೋಳಿಕ ವ್ಯಾಪ್ತಿಯನ್ನು ಹೊಂದಿದೆ. ಇದು ಭೂ ವಿಸ್ತೀರ್ಣದಲ್ಲಿ ರಾಜ್ಯದ ಮೂರನೇ ದೊಡ್ಡ ಜಿಲ್ಲೆಯಾಗಿದೆ.[೧]

ಸಮುದ್ರಮಟ್ಟದಿಂದ ಸರಾಸರಿ ಸುಮಾರು ೨೪೫೦ ಅಡಿ ಎತ್ತರದ ಏರು-ತಗ್ಗಿನ ಮೇಲ್ಮೈ ಪ್ರದೇಶದಿಂದ ಕೂಡಿದೆ. ದಖನ್ ಪ್ರಸ್ಥಭೂಮಿಯ ಮೃದುವಾದ ಶಿಲೆಯಿಂದ ರಚಿತವಾಗಿರುವ ತುಮಕೂರು ಭಾಗದಲ್ಲಿರುವ ಈ ಪ್ರದೇಶವು ಸ್ಪಟಿಕಶಿಲಾ ರೂಪದ ಬಂಡೆಗಳಿಂದ ಕೂಡಿದೆ. ಇಲ್ಲಿ ಮರಳು ಮಿಶ್ರಿತ ಕೆಂಪು ಮಣ್ಣು ಕಂಡುಬರುತ್ತದೆ. ಇಲ್ಲಿ ವಾರ್ಷಿಕ ಸರಾಸರಿ ಸುಮಾರು ೬೯ ಸೆ.ಮೀ ಮಳೆ ಬೀಳುತ್ತದೆ. ವಾಯುಗುಣವು ಚಳಿಗಾಲ, ಬೇಸಿಗೆಕಾಲ, ಮುಂಗಾರು ಮತ್ತು ಹಿಂಗಾರು ಮಳೆಗಾಲ ಹೀಗೆ ಋತುಗಳನ್ನು ಹೊಂದಿದೆ. ಜೂನ್ ತಿಂಗಳಿನಲ್ಲಿ ಸರಾಸರಿ ಉಷ್ಣಾಂಶವು ಸುಮಾರು ೩೨ ಡಿಗ್ರಿ ಮತ್ತು ಜುಲೈ ತಿಂಗಳಲ್ಲಿ ಸುಮಾರು ೩೦ ಡಿಗ್ರಿ ಸೆಂಟಿ ಗ್ರೇಡ್ ಆಗಿದ್ದು, ಆಗಸ್ಟ್ ತಿಂಗಳ ನಂತರ ಉಷ್ಣಾಂಶವು

ಕಡಿಮೆಯಾಗಿ, ಚಳಿಗಾಲವು ಆರಂಭವಾಗುತ್ತದೆ. ಜಿಲ್ಲೆಯ ವಾಯುಗುಣವು ಉಷ್ಣವಲಯದ ಮಾನ್ಸೂನ್ ಮಾದರಿಯ ಸ್ವರೂಪದ್ದಾಗಿದೆ.

೨೦೧೧ ರ ಜನಗಣತಿಯ ಪ್ರಕಾರ ಜಿಲ್ಲೆಯಲ್ಲಿ ಸುಮಾರು ೨೬೭೮೯೮೦ ಜನಸಂಖ್ಯೆಯಿದೆ. ಇವರಲ್ಲಿ ೧೩೫೦೫೯೪ ಮಂದಿ ಪುರುಷರು, ೧೩೨೮೩೮೬ ಮಂದಿ ಮಹಿಳೆಯರಿದ್ದಾರೆ. ಈ ಜಿಲ್ಲೆಯ ಜನಸಾಂದ್ರತೆ ೨೫೩/ಚ.ಕಿ.ಮೀ. ಇದೆ.

**ಬೆಟ್ಟಗುಡ್ಡಗಳು** : ಈ ಜಿಲ್ಲೆಯ ಪಶ್ಚಿಮ ಭಾಗದಲ್ಲಿ ದಕ್ಷಿಣದಿಂದ ಆಗ್ನೇಯ ದಿಕ್ಕಿನ ಕಡೆಗೆ ಬೆಟ್ಟಗಳ ಸಾಲುಗಳಿವೆ. ಪೂರ್ವ ಭಾಗದಲ್ಲಿಯೂ ಗ್ರಾನೈಟ್ ಶಿಲೆಗಳಿಂದಾದ ಕಡಿದಾದ ಬೆಟ್ಟಗಳಿವೆ. ಕುಣಿಗಲ್ ತಾಲೂಕಿನ ದಕ್ಷಿಣ ಮತ್ತು ಮಧ್ಯಭಾಗದಲ್ಲಿ ಬೆಟ್ಟಗಳ ಗುಂಪು ಕಂಡುಬರುತ್ತದೆ. ಇವುಗಳೆಂದರೆ, ತುಮಕೂರು ತಾಲೂಕಿನ ದೇವರಾಯನದುರ್ಗ, ರಾಮದೇವರಬೆಟ್ಟ, ಮಂದರಗಿರಿ, ಸೀತಕಲ್ಲುಬೆಟ್ಟ, ಮಧುಗಿರಿಯ ಕೋಟೆ, ಮಿಡಿಗೇಶಿದುರ್ಗ, ದೊಡ್ಡನಾರಮಂಗಲ, ಬ್ಯಾಲ್ಯ, ಕೋಡಗದಾಲ, ಭಸ್ಮಾಂಗಿ ಕೋಟೆ, ಕೊರಟಗೆರೆಯ ಗಂಗಾಧರೇಶ್ವರನ ಬೆಟ್ಟ, ಚೆನ್ನರಾಯನದುರ್ಗ, ಸಿದ್ಧರಬೆಟ್ಟ, ಅಮ್ಮನವರಬೆಟ್ಟ, ಥರಟಿ ಬೆಟ್ಟ, ಹಿರೇಬೆಟ್ಟ, ಕವರಗಲ್ಲುಬೆಟ್ಟ, ತಿಮ್ಮಪ್ಪನಬೆಟ್ಟ, ಪಾವಗಡದ ಪಾಗೊಂಡೆಬೆಟ್ಟ, ಕಾಮನದುರ್ಗ, ನಿಡಗಲ್ಲುಬೆಟ್ಟ, ಯಲ್ಲಪ್ಪನಾಯಕನ ಹೊಸಕೋಟೆ ಬೆಟ್ಟ, ಕರೇಕ್ಯಾತನಹಳ್ಳಿ ಗಾರೆಬೆಟ್ಟ, ತಿಪಟೂರಿನ ಬೊಮ್ಮನಹಳ್ಳಿಬೆಟ್ಟ, ಚೌಡನಹಳ್ಳಿಬೆಟ್ಟ, ಕುಣಿಗಲ್‌ನ ಹುತ್ರಿದುರ್ಗ, ಹುಲಿಯೂರುದುರ್ಗ, ಹೇಮಗಿರಿ, ರಂಗಸ್ವಾಮಿಬೆಟ್ಟ, ಸಿರಾದ ಮರಡಿಗುಡ್ಡ, ಮುಂತಾದುವು ಪ್ರಮುಖವಾಗಿವೆ.

**ಆಡಳಿತ ಕೇಂದ್ರಗಳು** : ತುಮಕೂರು ಪ್ರದೇಶವು ರಾಜಮನೆತನಗಳ ಆಳ್ವಿಕೆಯ ನಂತರದಲ್ಲಿ ಮೈಸೂರು ಒಡೆಯರ ಆಳ್ವಿಕೆಗೆ ಒಳಪಟ್ಟು ಬ್ರಿಟಿಷ್ ಕಮೀಷನರುಗಳ ಅವಧಿಯಲ್ಲಿ ಇದು ಸ್ವತಂತ್ರ ಆಡಳಿತ ಕೇಂದ್ರವಾಗಿತ್ತು. ನಂತರ ಮುಮ್ಮಡಿಕೃಷ್ಣರಾಜ ಒಡೆಯರ ಆಳ್ವಿಕೆಯ ಅವಧಿಯಲ್ಲಿ ಬೆಂಗಳೂರು, ತುಮಕೂರಿನ ಮದ್ದಗಿರಿ, ಚಿತ್ರದುರ್ಗ, ಅಷ್ಟಗ್ರಾಮ, ನಗರ ಮತ್ತು ಮಂಜರಾಬಾದ್ ಎಂಬ ಆರು ಫೌಜುದಾರಿಗಳಿದ್ದವು. ಕ್ರಿ. ಶ. ೧೮೩೨ ರಲ್ಲಿ ಮಾರ್ಕ್‌ಕಬ್ಬನ್‌ರವರ ಕಾಲದಲ್ಲಿ ಚಿತ್ರದುರ್ಗ ಜಿಲ್ಲೆಯ ಬಹುತೇಕ ಪ್ರದೇಶವನ್ನೂ ಒಳಗೊಂಡಂತೆ ಮೇಜರ್ ಜನರಲ್ ರಿಚರ್ಡ್ ಸ್ಟೀವರ್ಟ್ ಡೋಬ್ಸ್‌ರವರ ನೇತೃತ್ವದಲ್ಲಿ ತುಮಕೂರು ಡಿವಿಜನ್ ರಚನೆಯಾಗಿ ಜಿಲ್ಲೆಯ ಮುಖ್ಯ ಆಡಳಿತ ಕೇಂದ್ರವು ತುಮಕೂರಿನಲ್ಲಿ ಸ್ಥಾಪಿಸಲಾಗಿತ್ತು.[೨] ಕ್ರಿ. ಶ. ೧೮೩೪ ರಲ್ಲಿ ಫೌಜುದಾರಿಗಳನ್ನು ನವೀಕರಿಸಲಾಗಿ ಬೆಂಗಳೂರು, ನಗರ, ಅಷ್ಟಗ್ರಾಮ, ಚಿತ್ರದುರ್ಗಗಳು ಅಸ್ತಿತ್ವದಲ್ಲಿದ್ದವು. ಚಿತ್ರದುರ್ಗ ವಿಭಾಗದ ಆಡಳಿತ ಕೇಂದ್ರವು ತುಮಕೂರು ಆಗಿತ್ತು. ಆದರೆ ಕ್ರಿ. ಶ. ೧೮೬೩ ರಲ್ಲಿ ಮತ್ತೆ ಚಿತ್ರದುರ್ಗ ವಿಭಾಗವನ್ನು ವಿಭಜಿಸಿ ನಗರ ವಿಭಾಗಕ್ಕೆ ಸೇರಿಸಲಾಗಿ ತುಮಕೂರನ್ನು ನಂದಿದುರ್ಗ ವಿಭಾಗಕ್ಕೆ ಸೇರಿಸಲಾಯಿತು. ಕ್ರಿ. ಶ. ೧೮೬೬ ರಲ್ಲಿ ಸಿರಾ ತಾಲೂಕನ್ನು ಚಿತ್ರದುರ್ಗದಿಂದ

ಬೇರ್ಪಡಿಸಿ ತುಮಕೂರು ಜಿಲ್ಲೆಯಲ್ಲಿ ಸೇರಿಸಲಾಯಿತು. ಹಾಗೂ ಚಿತ್ರದುರ್ಗ ಜಿಲ್ಲೆಯ ಬೂದಿಹಾಳು ತಾಲೂಕಿನ ಆಡಳಿತ ಕೇಂದ್ರವಾಗಿದ್ದ ಹುಳಿಯಾರನ್ನು ಚಿಕ್ಕನಾಯಕನಹಳ್ಳಿ ತಾಲೂಕಿನಲ್ಲಿ ವಿಲೀನಗೊಳಿಸಲಾಯಿತು. ಕ್ರಿ. ಶ. ೧೮೬೬ ರವರೆಗೆ ಇಂದಿನ ಗುಬ್ಬಿ ತಾಲೂಕನ್ನು ಕಡಬ ತಾಲೂಕು ಎಂದೂ, ತಿಪಟೂರು ತಾಲೂಕನ್ನು ಹೊನ್ನವಳ್ಳಿ ತಾಲೂಕು ಎಂದು ಕರೆಯಲಾಗುತ್ತಿತ್ತು. ನಂತರ ೧೮೮೬ರಲ್ಲಿ ಚಿತ್ರದುರ್ಗವನ್ನು ಜಿಲ್ಲೆಯನ್ನಾಗಿ ಮಾಡಿ ಪಾವಗಡ ತಾಲೂಕನ್ನು ತುಮಕೂರು ಜಿಲ್ಲೆಗೆ ಸೇರಿಸಲಾಯಿತು. ಇಂದಿನ ತಾಲೂಕು ಕೇಂದ್ರವಾಗಿರುವ ಮಧುಗಿರಿಯಲ್ಲಿ ಕ್ರಿ. ಶ. ೧೯೨೭ ರಲ್ಲಿ ಕಲೆಕ್ಟರ್ ಆಗಿದ್ದ ಮಾಸ್ತಿ ವೆಂಕಟೇಶ ಅಯ್ಯಂಗಾರ್‌ರವರ ಉಪಸ್ಥಿತಿಯಲ್ಲಿ ಮದ್ದಗಿರಿ ಎಂಬ ನಾಮಧೇಯವನ್ನು ಮಧುಗಿರಿ ಎಂದು ಬದಲಾಯಿಸಲಾಯಿತು. ಕ್ರಿ. ಶ. ೧೯೨೮ ರಲ್ಲಿ ಕೊರಟಗೆರೆ ಉಪತಾಲೂಕನ್ನು ಹಾಗೂ ಕ್ರಿ. ಶ. ೧೯೩೮ ರಲ್ಲಿ, ಉಪತಾಲೂಕು ಆಗಿದ್ದ ತುರುವೇಕೆರೆಯನ್ನು ತಾಲೂಕು ಕೇಂದ್ರಗಳನ್ನಾಗಿ ರೂಪಿಸಲಾಯಿತು.

ಇಂದು ತುಮಕೂರು ಜಿಲ್ಲೆಯ ವ್ಯಾಪ್ತಿಯಲ್ಲಿರುವ ತಾಲೂಕು ಮತ್ತು ಹೋಬಳಿ ಕೇಂದ್ರಗಳೆಂದರೆ, ಕುಣಿಗಲ್ ತಾಲೂಕಿನ ಕಸಬಾ, ಎಡೆಯೂರು, ಅಮೃತೂರು, ಹುಲಿಯೂರುದುರ್ಗ, ಕೊತ್ತಗೆರೆ, ಹುತ್ರಿದುರ್ಗ. ಕೊರಟಗೆರೆ ತಾಲೂಕಿನ ಕಸಬಾ, ಚನ್ನರಾಯನದುರ್ಗ, ಹೊಳವನಹಳ್ಳಿ, ಕೋಳಾಲ. ಗುಬ್ಬಿ ತಾಲೂಕಿನ ಕಸಬಾ, ಚಂದ್ರಶೇಖರಪುರ, ಚೇಳೂರು, ಹಾಗಲವಾಡಿ, ನಿಟ್ಟೂರು, ಕಡಬ. ಚಿಕ್ಕನಾಯಕನಹಳ್ಳಿ ತಾಲೂಕಿನ ಕಸಬಾ, ಶೆಟ್ಟಿಕೆರೆ, ಕಂದಿಕೆರೆ, ಹಂದನಕೆರೆ, ಹುಳಿಯಾರು. ತಿಪಟೂರು ತಾಲೂಕಿನ ಕಸಬಾ, ಕಿಬ್ಬನಹಳ್ಳಿ, ನೊಣವಿನಕೆರೆ, ಹೊನ್ನವಳ್ಳಿ. ತುರುವೇಕೆರೆ ತಾಲೂಕಿನ ಕಸಬಾ, ದಂಡಿನಶಿವರ, ಮಾಯಸಂದ್ರ, ದಬ್ಬೇಘಟ್ಟ. ತುಮಕೂರು ತಾಲೂಕಿನ ಕಸಬಾ, ಹೆಬ್ಬೂರು, ಕೋರ, ಗೂಳೂರು, ಬೆಳ್ಳಾವಿ, ಊರ್ಡಿಗೆರೆ. ಪಾವಗಡ ತಾಲೂಕಿನ ಕಸಬಾ, ನಿಡಗಲ್ಲು, ಯಲ್ಲಪ್ಪನಾಯಕನ ಹೊಸಕೋಟೆ, ನಾಗಲಮಡಿಕೆ. ಮಧುಗಿರಿ ತಾಲೂಕಿನ ಕಸಬಾ, ದೊಡ್ಡೇರಿ, ಮಿಡಿಗೇಶಿ, ಇಟಕದಿಬ್ಬನಹಳ್ಳಿ, ಕೊಡಿಗೇನಹಳ್ಳಿ, ಪುರವರ. ಸಿರಾ ತಾಲೂಕಿನ ಕಸಬಾ, ಕಳ್ಳಂಬೆಳ್ಳ, ಬುಕ್ಕಾಪಟ್ಟಣ, ಹುಲಿಕುಂಟೆ, ಗೌಡನಗೆರೆ. ಹೀಗೆ ಒಟ್ಟು ಹತ್ತು ತಾಲೂಕುಗಳು ಹಾಗೂ ಐವತ್ತು ಹೋಬಳಿ ಕೇಂದ್ರಗಳಿವೆ.

**ನದಿಗಳು** : ತುಮಕೂರು ಜಿಲ್ಲೆಯಲ್ಲಿ ಕೆಲವು ನದಿಗಳು ಹಾಗೂ ಹಳ್ಳಗಳು ಇಲ್ಲಿನ ಬೆಟ್ಟ ಗುಡ್ಡಗಳಲ್ಲಿ ಹುಟ್ಟಿ ಹರಿಯುತ್ತವೆ. ಇವು ಇಲ್ಲಿನ ಬಹುತೇಕ ಕೆರೆಗಳಿಗೆ ನೀರಿನ ಮೂಲಗಳಾಗಿವೆ. ಜಯಮಂಗಲೀ, ಸುವರ್ಣಮುಖಿ, ಗರುಡಾಚಲ, ಉತ್ತರಪಿನಾಕಿನಿ, ಶಿಂಷಾ ಮುಂತಾದುವು ಇಲ್ಲಿ ಹರಿಯುವ ಪ್ರಮುಖ ನದಿಗಳಾಗಿದ್ದು, ಮಳೆಗಾಲದಲ್ಲಿ ಮಾತ್ರವೇ ತುಂಬಿ ಹರಿಯುತ್ತವೆ. ಪ್ರಸ್ತುತ ಹೇಮಾವತಿ ನದಿಯ ನೀರನ್ನು ಕಾಲುವೆಗಳ ಮೂಲಕ ಹರಿಸಿ ಕೃಷಿ ಮತ್ತು ಕುಡಿಯುವ ಉದ್ದೇಶಕ್ಕಾಗಿ ಬಳಸಲಾಗುತ್ತದೆ. ಇಲ್ಲಿ ಹರಿಯುವ ನದಿಗಳ ಸಂಕ್ಷಿಪ್ತ

ಮಾಹಿತಿಯನ್ನು ತಿಳಿಯಬಹುದಾಗಿದೆ.[೨] **ಉತ್ತರಪಿನಾಕಿನಿ** ನದಿಯನ್ನು 'ಉತ್ತರಪೆನ್ನಾರ್' ಎಂದು ಸಹ ಕರೆಯಲಾಗುತ್ತದೆ. ಚಿಕ್ಕಬಳ್ಳಾಪುರ ಜಿಲ್ಲೆಯ ನಂದಿಬೆಟ್ಟದ ವಾಯುವ್ಯಕ್ಕಿರುವ ಚೆನ್ನಕೇಶವ ಬೆಟ್ಟದಲ್ಲಿ ಹುಟ್ಟುತ್ತದೆ. ಪಾವಗಡ ತಾಲೂಕಿನಲ್ಲಿ ಕೆಲವೇ ಮೈಲುಗಳ ದೂರ ಹರಿದು ಪಾಂಡಿಗಿರಿ ಎಂಬಲ್ಲಿ ಪೆನುಗೊಂಡೆಯನ್ನು ಪ್ರವೇಶಿಸುತ್ತದೆ. **ಕುಮುದ್ವತಿ** ನದಿಯನ್ನು 'ಕುಂದಾರ' ಎಂದು ಸಹ ಕರೆಯಲಾಗಿದೆ. ದೊಡ್ಡಬಳ್ಳಾಪುರದ ಮಾಕಳಿದುರ್ಗದಲ್ಲಿ ಹುಟ್ಟಿ ಗೌರಿಬಿದನೂರು ಮೂಲಕ ಮಧುಗಿರಿ ತಾಲೂಕಿನಲ್ಲಿ ಹರಿದು ಉತ್ತರ ಪಿನಾಕಿನಿಯನ್ನು ಸೇರುತ್ತದೆ. **ಗರುಡಾಚಲ** ನದಿಯು ದೇವರಾಯನದುರ್ಗದ ಬೆಟ್ಟಸಾಲುಗಳಲ್ಲಿ ಹುಟ್ಟಿ ಕೊರಟಗೆರೆ ಮೂಲಕ ಹೊಳವನಹಳ್ಳಿಯ ಬಳಿ ಜಯಮಂಗಲಿಯನ್ನು ಸೇರುತ್ತದೆ. **ಜಯಮಂಗಲೀ** ನದಿಯು ಉತ್ತರ ಪಿನಾಕಿನಿ ಅಥವಾ ಪೆನ್ನಾರ್ ನದಿಯ ಉಪನದಿಯಾಗಿದೆ. ಅಲ್ಲದೇ 'ಜಯ' ಮತ್ತು 'ಮಂಗಳಾ' ಎಂಬ ೨ ನದಿಗಳ ಸಂಗಮವಾಗಿದೆ. ಜಯ ಎಂಬ ನದಿಯು ದೇವರಾಯನದುರ್ಗದ ಮೇಲ್ಭಾಗದಲ್ಲಿರುವ 'ಜಲದಗೊಂಡಿ' ಎಂಬ ಗಿರಿಕಂದರದಲ್ಲಿರುವ 'ಜಯತೀರ್ಥ' ದಲ್ಲಿಯೂ, ಮಂಗಳಾ ಎಂಬ ನದಿಯು ದುರ್ಗದ ಇಳಿಜಾರಿನಲ್ಲಿರುವ 'ಮಂಗಲಾ' ಎಂಬ ಕೊಳದಲ್ಲಿ ಹುಟ್ಟಿ ಹರಿಯುತ್ತದೆ. ದುರ್ಗದ ತಪ್ಪಲಿನ ದೇವರಾಯನದುರ್ಗದ ಪೂರ್ವಕ್ಕಿರುವ ಇರಕಸಂದ್ರ ಕಾಲೋನಿಯ ಬಳಿ ಎರಡು ನದಿಗಳು ಸಂಗಮವಾಗಿ 'ಜಯಮಂಗಲೀ' ಎಂಬ ಹೆಸರಿನಲ್ಲಿ ಹರಿಯುತ್ತವೆ. ಉತ್ತರಕ್ಕೆ ಹರಿಯುವ ಈ ನದಿಯು ಕೊರಟಗೆರೆ, ಮಧುಗಿರಿ ತಾಲೂಕುಗಳಲ್ಲಿ ಹರಿದು ಆಂಧ್ರದ ಅನಂತಪುರ ಜಿಲ್ಲೆಯ ಪರಗಿಯ ಬಳಿ ಉತ್ತರ ಪಿನಾಕಿನಿಯನ್ನು ಸೇರುತ್ತದೆ. ಈ ನದಿಗೆ ತೀತಾ ಗ್ರಾಮದ ಬಳಿ ಜಲಾಶಯವನ್ನು ನಿರ್ಮಾಣ ಮಾಡಲಾಗಿದೆ. ಹೊಳವನಹಳ್ಳಿಯ ಬಳಿ ಪೂರ್ವದಿಂದ ಬರುವ ಗರುಡಾಚಲವನ್ನು (ಉಪನದಿ), ಅಕ್ಕಿರಾಂಪುರದ ಬಳಿ ಪಶ್ಚಿಮದಿಂದ ಸುವರ್ಣಮುಖಿ (ಉಪನದಿ) ಯನ್ನು ತನ್ನೊಂದಿಗೆ ಸೇರಿಸಿಕೊಳ್ಳುತ್ತದೆ. **ನಾಗಿನಿ** ನದಿಯು ಕುಣಿಗಲ್‌ನ ದೊಡ್ಡಕೆರೆಯಲ್ಲಿ ಹುಟ್ಟುತ್ತದೆ. ಹಾಗೂ ಇದು ಹನುಮಾಪುರದ ಹತ್ತಿರ ಶಿಂಷಾ ನದಿಯನ್ನು ಸೇರುತ್ತದೆ. ಕುಣಿಗಲ್‌ನ ಸಂಕಾಪುರದ ಬಳಿ ೧೯೦೧ ರಲ್ಲಿ ಈ ನದಿಗೆ ಅಣೆಕಟ್ಟೆಯನ್ನು ನಿರ್ಮಿಸಲಾಗಿದೆ. ಅದರ ಅಚ್ಚುಕಟ್ಟು ಪ್ರದೇಶವು ಸುಮಾರು ೬೦೦ ಎಕರೆಗಳಷ್ಟಿದೆ. **ಶಿಂಷಾ** ನದಿಯನ್ನು 'ಶಿಂಶೂಪ', 'ಕದಂಬ', 'ಕಡಬಕೊಳ' ಎಂದು ಸಹ ಕರೆಯಲಾಗುತ್ತದೆ. ಇದು ಕಾವೇರಿ ನದಿಯ ಉಪನದಿಯಾಗಿದೆ. ದೇವರಾಯನದುರ್ಗದ ಪಶ್ಚಿಮದಲ್ಲಿ ಹುಟ್ಟಿ ಗುಬ್ಬಿ, ಮೂಲಕ ಕಲ್ಲೂರು ಬಳಿ ನಾಗಿನಿ ನದಿಯನ್ನು ಸೇರಿ ಕುಣಿಗಲ್, ಹುಲಿಯೂದುರ್ಗದ ಮೂಲಕ ಮಂಡ್ಯ ಜಿಲ್ಲೆಯನ್ನು ಸೇರುತ್ತದೆ. ಈ ನದಿಗೆ ೧೯೩೯ ರಲ್ಲಿ ಮಾರ್ಕೋನಹಳ್ಳಿಯ ಸಮೀಪ ಜಲಾಶಯವನ್ನು ನಿರ್ಮಾಣ ಮಾಡಲಾಗಿದೆ. ಪ್ರಸ್ತುತ ಇದರ ಅಚ್ಚುಕಟ್ಟು ಪ್ರದೇಶವು ಸುಮಾರು ೧೧೦೦೦ ಎಕರೆಗಳಾಗಿದೆ. **ಸುವರ್ಣಮುಖಿ** ಎಂಬ ಒಂದೇ ಹೆಸರಿನ ಎರಡು ನದಿಗಳು ಈ ಪ್ರದೇಶದಲ್ಲಿ ಹರಿಯುತ್ತವೆ. ೧) **ಪೂರ್ವದ ಸುವರ್ಣಮುಖಿ**, ದೇವರಾಯನದುರ್ಗದಲ್ಲಿ ಹುಟ್ಟುವ ಇದು ಜಯಮಂಗಲಿ ನದಿಯ

ಉಪನದಿಯಾಗಿದೆ. ಕೊರಟಗೆರೆ ತಾಲೂಕಿನ ಕೊಳಿಕಲ್ ಅರಣ್ಯ ಪ್ರದೇಶದಿಂದ ಹರಿದು ಬರುವ ದೊಡ್ಡಹಳ್ಳಗಳನ್ನು ತನ್ನೊಂದಿಗೆ ಸೇರಿಸಿಕೊಂಡು ಅಕ್ಕಿರಾಂಪುರದ ಬಳಿ ಪೂರ್ವದ ಸುವರ್ಣಮುಖಿ ನದಿಯಾಗಿ ರೂಪುಗೊಳ್ಳುತ್ತದೆ. ನಂತರ ಕ್ಯಾಸವಾರ ಗ್ರಾಮದ ಬಳಿ ಜಯಮಂಗಲಿ ನದಿಯನ್ನು ಸೇರುತ್ತದೆ. ಕೊರಟಗೆರೆ ಮತ್ತು ಮಧುಗಿರಿ ತಾಲೂಕುಗಳಲ್ಲಿ ಹರಿಯುವ ಈ ನದಿಯ ಪಾತ್ರವು ಸುಮಾರು ೨೫ ಕಿ.ಮೀ ಆಗಿದೆ. ೨) **ಪಶ್ಚಿಮದ ಸುವರ್ಣಮುಖಿ,** ಈ ನದಿಯು ಚೆನ್ನರಾಯನದುರ್ಗದ ಪ್ರದೇಶದ ಹಲವು ಹೊಳೆಗಳ ಸಂಗಮದಿಂದ ಬಡಮುದ್ದನಹಳ್ಳಿಯ ಬಳಿ ರೂಪುಗೊಳ್ಳುತ್ತದೆ. ಇದು ವೇದಾವತಿ ನದಿಯ ಉಪನದಿಯಾಗಿದೆ. ಕೊರಟಗೆರೆ, ಮಧುಗಿರಿ, ಆಂದ್ರಪ್ರದೇಶದ ಗಡಿಯಲ್ಲಿ ಹರಿದು ಮತ್ತೆ ಸಿರಾದ ಮದಲೂರು ಬಳಿಯಲ್ಲಿ ಪಶ್ಚಿಮಾಭಿಮುಖವಾಗಿ ಹರಿಯುತ್ತದೆ. ಸಿರಾದ ಅದಲೂರ ಬಳಿ ಬರುವ ದೊಡ್ಡಹಳ್ಳಿ ಮತ್ತು ಚಿಕ್ಕನಾಯಕನಹಳ್ಳಿಯ ಶೆಟ್ಟಿಕೆರೆಯ ಕಿರುತೊರೆಯನ್ನು ಸೇರಿಕೊಂಡು ಸುವರ್ಣಮುಖಿ ಎಂಬ ಹೆಸರಿನಿಂದ ಹರಿದು ಹಿರಿಯೂರಿನ ವೇದಾವತಿ ನದಿಯನ್ನು ಸೇರುತ್ತದೆ. ಬೋರನಕಣಿವೆಯ ಹತ್ತಿರ ಇದಕ್ಕೆ ೧೮೮೮-೧೮೯೨ ರಲ್ಲಿ ಅಣೆಕಟ್ಟೆಯನ್ನು ನಿರ್ಮಿಸಲಾಗಿದೆ. ಇದರ ಅಚ್ಚುಕಟ್ಟು ಪ್ರದೇಶ ೬೦೦ ಹೆಕ್ಟೇರುಗಳಷ್ಟಿದೆ. ಇದು ತುಮಕೂರು ಜಿಲ್ಲೆಯಲ್ಲಿ ಒಟ್ಟು ಸುಮಾರು ಒಂದು ನೂರು ಕಿ.ಮೀ ದೂರ ಹರಿಯುತ್ತದೆ.

## ೩.೨ ಸಂಕ್ಷಿಪ್ತ ಚರಿತ್ರೆ

ತುಮಕೂರು ಜಿಲ್ಲೆಯ ಭೌಗೋಳಿಕ ಪ್ರದೇಶದಲ್ಲಿ ಇತಿಹಾಸ ಪೂರ್ವ ಕಾಲದ ಅವಶೇಷಗಳು, ಶಿಲಾಯುಗಕ್ಕೆ ಸಂಬಂಧಿಸಿದಂತೆ ಆಯುಧಗಳು, ಶಾಸನಗಳು. ದೇವಸ್ಥಾನಗಳು, ಕೋಟೆ ಕೊತ್ತಲಗಳು, ಪುಷ್ಕರಣಿಗಳು, ಶಿಲ್ಪಗಳು ಇತ್ಯಾದಿ ಪುರಾತತ್ವ ಸ್ಮಾರಕಗಳನ್ನು ಈ ಪ್ರದೇಶದಲ್ಲಿ ಕಾಣಬಹುದಾಗಿದೆ. ತುಮಕೂರು ಪ್ರದೇಶವು ಪ್ರಸಿದ್ಧ ರಾಜಮನೆತನಗಳ ಮೂಲ ನೆಲೆಯಲ್ಲದಿದ್ದರೂ ಗಂಗವಾಡಿಯ ಗಂಗರು, ನೊಳಂಬರು, ರಾಷ್ಟ್ರಕೂಟರೂ, ಹೊಯ್ಸಳರು, ವಿಜಯನಗರದ ಸಾಮ್ರಾಟರು, ಮುಸ್ಲಿಂ ಸುಲ್ತಾನರೂ, ಹಾಗೂ ಇತರ ಮನೆತನಗಳ ನೇರ ಆಳ್ವಿಕೆಗೆ ಒಳಪಟ್ಟಿತ್ತು. ಕೆಲವೊಮ್ಮೆ ಅವರ ಸಾಮಂತರು ಈ ಪ್ರದೇಶದಲ್ಲಿ ಆಡಳಿತ ನಡೆಸಿದ್ದಾರೆ.

ಈ ಪ್ರದೇಶದಲ್ಲಿ ಪೌರಾಣಿಕ ಕಥನಗಳು, ಇತಿಹಾಸ ಪೂರ್ವ ಕಾಲವನ್ನು ವಿವರಿಸಲಾಗಿದೆ. ಇಲ್ಲಿ ಆಳ್ವಿಕೆಯನ್ನು ಮಾಡಿದ ಕದಂಬರು, ಗಂಗರು, ರಾಷ್ಟ್ರಕೂಟರು, ನೊಳಂಬರು, ಚೋಳರು, ನಿಡಗಲ್ ಚೋಳರು, ಕಾಕತೀಯರು, ಹೊಯ್ಸಳರು, ವಿಜಯನಗರದ ಅರಸರು ಮತ್ತು ವಿಜಯನಗರೋತ್ತರ ತುಂಡರಸರ ಚರಿತ್ರೆಯನ್ನು ಸಂಕ್ಷಿಪ್ತವಾಗಿ ವಿವರಿಸಲಾಗಿದೆ.

**ಪೌರಾಣಿಕ ಹಿನ್ನಲೆ :** ತುಮಕೂರು ಜಿಲ್ಲೆಯ ಬಹುತೇಕ ಸ್ಥಳಗಳ ಬಗ್ಗೆ ಪುರಾಣದ ಕಥೆಗಳನ್ನು ಸೃಷ್ಟಿಸಲಾಗಿದೆ. ಇಲ್ಲಿನ ಕೆಲವು ಸ್ಥಳಗಳು ರಾಮಾಯಣ ಮತ್ತು ಮಹಾಭಾರತದ ಘಟನೆಗಳೊಂದಿಗೆ ತಳಕು ಹಾಕಿಕೊಂಡಿವೆ. ಐತಿಹ್ಯದಂತೆ ಕಡಬ ಗ್ರಾಮವು ಶಿಂಷಾ ನದಿಯ ದಂಡೆಯ ಮೇಲಿದ್ದು, ಇಲ್ಲಿನ ಆಶ್ರಮದಲ್ಲಿ ಕದಂಬ ಎಂಬ ಋಷಿಯು ವಾಸ ಮಾಡುತ್ತಿದ್ದರಿಂದ ಈ ನೆಲೆಗೆ ಕಡಬ ಎಂಬ ಹೆಸರು ಬಂದಿದೆ. ಕುಣಿಗಲ್ ತಾಲೂಕಿನಲ್ಲಿ ಹರಿಯುವ ನಾಗಿಣಿ ನದಿಯಲ್ಲಿ ಸ್ನಾನ ಮಾಡಿ ನೃಗನೆಂಬ ರಾಜರ್ಷಿಯು ಮುಕ್ತಿ ಪಡೆದನೆಂಬ ನಂಬಿಕೆಯಿದೆ. ತುರುವೇಕೆರೆ ತಾಲೂಕಿನ ತಂಡಗವು ದೊರೆಯಾಗಿದ್ದ ಶಾಲೀವಾಹನನ ಜನ್ಮಸ್ಥಳವೆಂದೂ, ಕುಂಬಾರ ಮಹಿಳೆಯ ಗರ್ಭದಲ್ಲಿ ಜನಿಸಿದನೆಂಬ ನಂಬಿಕೆಯಿದೆ. ತುರುವೇಕೆರೆಯ ಸಮೀಪದಲ್ಲಿ ಪಂಚಲಿಂಗಗಳಿದ್ದು ಇವುಗಳ ಪೂಜೆಗಾಗಿ ಇಲ್ಲಿಯೇ ಕೈಕಂಡು ಮಹರ್ಷಿಯು ಪರ್ಣಶಾಲೆಯನ್ನು ನಿರ್ಮಿಸಿಕೊಂಡು ವಾಸಿಸುತ್ತಿದ್ದನು. ತನ್ನ ತಪಸ್ಸಿದ್ಧಿಯಿಂದ ಈತನು ಮುಕ್ತಿ ಪಡೆದನೆಂಬ ಪ್ರತೀತಿಯಿದೆ. ತುರುವೇಕೆರೆ ತಾಲೂಕಿನ ಸಂಪಿಗೆ ಗ್ರಾಮವು ಪುರಾಣ ಕಾಲದ ಚಂಪಕಾ ನಗರವಾಗಿತ್ತು. ಇದು ಮಹಾಭಾರತದ ಹಂಸಧ್ವಜನ ಮಗ ಸುಧನ್ವನ ರಾಜಧಾನಿಯಾಗಿತ್ತೆಂಬ ಪ್ರತೀತಿಯಿದೆ. ಮಿಡಿಗೇಶಿ ಸಮೀಪದ ಕತ್ತಿರಾಜನಹಳ್ಳಿ ಬೆಟ್ಟಗಳಲ್ಲಿ ಕೊಂತಿಬಂಡೆ ಮತ್ತು ಭೀಮನ ಗವಿಗಳೆಂದು ಕರೆಯುವ ಪ್ರದೇಶಗಳಿವೆ. ಇವು ಮಹಾಭಾರತಕ್ಕೆ ಸಂಬಂಧಿಸಿವೆ. ದ್ವಾಪರಯುಗದಲ್ಲಿ ಮೃಖಂಡ ಮತ್ತು ಚಂದ್ರಚೂಡಾ ಮುನಿಗಳು ಬದರಿಯಿಂದ ತೀರ್ಥಯಾತ್ರೆ ಹೊರಟು ತುರುವೇಕೆರೆಗೆ ಆಗಮಿಸಿ ತಪಸ್ಸು ಮಾಡುತ್ತಿದ್ದರು. ಆಗ ಇಲ್ಲಿಯೇ ಅಡಗಿದ್ದ ಮಹಾ ಮಾಯಾವಿ ರಾಕ್ಷಸರು ಮೃಗರೂಪವನ್ನು ಧರಿಸಿ ತಪಸ್ಸಿಗೆ ಭಂಗ ತರಲಾರಂಭಿಸಿದರು. ಆಗ ಪರಮಾತ್ಮನು ಮುನಿಗಳ ಪ್ರಾರ್ಥನೆಗೆ ಪ್ರಸನ್ನನಾಗಿ ಅಶ್ವಾರೂಢನಾಗಿ ಆಗಮಿಸಿ ರಾಕ್ಷಸರನ್ನು ಸಂಹರಿಸಿ ಮುನಿಗಳಿಗೆ ದರ್ಶನವನ್ನು ನೀಡಿ ಆಶೀರ್ವದಿಸಿದನೆಂಬ ಪ್ರತೀತಿಯಿದೆ. ಸಾಕ್ಷಾತ್ ಭಗವಂತನೇ ಮೃಗರೂಪವನ್ನು ಧರಿಸಿ ಬೇಟೆಯಾಡಿ ರಾಕ್ಷಸರನ್ನು ಕೊಂದಿದ್ದರಿಂದ ಆತನಿಗೆ ವರದಬೇಟೆರಾಯಸ್ವಾಮಿ ಎಂಬ ಹೆಸರಿದೆ. ವರದಬೇಟೆರಾಯಸ್ವಾಮಿಯ ದೇವಾಲಯವು ತುರುವೇಕೆರೆ ಪಟ್ಟಣದಲ್ಲಿದೆ.

ಶ್ರೀರಾಮಚಂದ್ರನು ಸೀತೆಯೊಂದಿಗೆ ಕೊರಟಗೆರೆ ತಾಲೂಕಿನ ಸಿದ್ಧರಬೆಟ್ಟಕ್ಕೆ ಆಗಮಿಸಿದ್ದನೆಂಬ ನಂಬಿಕೆಯಿದೆ. ಇಲ್ಲಿ ವಾಸಿಸುತ್ತಿದ್ದ ಕಾಕಾಸುರನು ಇವರಿಗೆ ತೊಂದರೆ ನೀಡಿದನೆಂದೂ, ಆಗ ಶ್ರೀರಾಮಚಂದ್ರನು ಕಾಕಾಸುರನ ಗರ್ವಭಂಗ ಮಾಡಿ ಇಲ್ಲಿ ಸುಳಿಯದಂತೆ ಆಜ್ಞೆ ಮಾಡಿದನೆಂಬ ಐತಿಹ್ಯವಿದೆ. ಇಲ್ಲಿ ಕಾಗೆಗಳ ಸಂಚಾರವೇ ಇಲ್ಲದಿರುವುದರ ಹಿನ್ನೆಲೆಯಲ್ಲಿ ಈ ನೆಲೆಯನ್ನು ಕಾಕನಗಟ್ಟಲು ಎಂದು ಕರೆಯಲಾಗುತ್ತದೆ. ವನವಾಸದ ಸನ್ನಿವೇಶದಲ್ಲಿ ಶ್ರೀರಾಮಚಂದ್ರನು ಪಾವಗಡ ತಾಲೂಕಿನ ತಿರುಮಣಿ ಹತ್ತಿರದ ಕಾಮನಬೆಟ್ಟಕ್ಕೆ ಆಗಮಿಸಿದ್ದನು. ಈ ಬೆಟ್ಟವನ್ನು ಕಾಪಿನಬೆಟ್ಟ, ಕಾಕಾದ್ರಿಗಿರಿ, ಕಾಕಾದ್ರಿಪರ್ವತ, ಕಾಮಿನಿಕೊಂಡ, ಕಾಪಿನಕೊಂಡ ಎಂದು ವಿವಿಧ ಹೆಸರುಗಳಿಂದ ಕರೆಯಲಾಗುತ್ತದೆ. ಇಲ್ಲಿ

ಶ್ರೀರಾಮನು ಸೀತೆಯ ತೊಡೆಯಮೇಲೆ ಪವಡಿಸಿರಲು ಕಾಕರಾಜನು ಸೀತೆಗೆ ಹಿಂಸೆಯನ್ನು, ಶ್ರೀರಾಮನಿಗೆ ನಿದ್ರಾಭಂಗವನ್ನು ಉಂಟುಮಾಡಿದನು. ಇದರಿಂದ ಕುಪಿತನಾದ ಶ್ರೀರಾಮನು ಕಾಕಾಸುರನ ಗರ್ವಭಂಗ ಮಾಡಿ ಇಲ್ಲಿಗೆ ಸುಳಿಯದಂತೆ ಆಜ್ಞೆ ಮಾಡಿದನೆಂದು ಐತಿಹ್ಯವಿದೆ. ಇಲ್ಲಿಯು ಕೂಡ ಕೊರಟಗೆರೆ ತಾಲೂಕಿನ ಸಿದ್ಧರಬೆಟ್ಟದಂತೆಯೇ ರಸಸಿದ್ಧ ಸಿದ್ಧರಗವಿಯಲ್ಲಿ ಸಿದ್ಧಯೋಗಿಯೊಬ್ಬರು ತಪಸ್ಸನ್ನು ಮಾಡಿದ್ದರೆಂಬ ಐತಿಹ್ಯವೂ ಇದೆ. ಗುಬ್ಬಿ ತಾಲೂಕಿನ ಕಡಬ ಗ್ರಾಮದ ಹತ್ತಿರ ಶ್ರೀರಾಮಚಂದ್ರನು ಲಂಕೆಯಿಂದ ಅಯೋಧ್ಯೆಗೆ ವಾಪಾಸ್ಸಾಗುತ್ತಿದ್ದಾಗ ಸೀತೆಯ ಪ್ರಾರ್ಥನೆಯಂತೆ ಇಲ್ಲಿ ಹರಿಯುತ್ತಿದ್ದ ನದಿಗೆ ಅಡ್ಡಲಾಗಿ ಕೆರೆಯೊಂದನ್ನು ನಿರ್ಮಿಸಿದನು ಎಂದೂ ಹೇಳಲಾಗುತ್ತದೆ. ಅಯೋಧ್ಯೆಗೆ ತನ್ನ ಪರಿವಾರದೊಂದಿಗೆ ಹೋಗುವಾಗ ಶ್ರೀರಾಮಚಂದ್ರನು ತುಮಕೂರಿನ ದೇವರಾಯನದುರ್ಗದ ಅರಣ್ಯದ ಮಧ್ಯೆ ತನ್ನ ಪರಿವಾರದವರ ಬಾಯಾರಿಕೆಯ ದಾಹವನ್ನು ನೀಗಿಸಲು ಹಾಗೂ ತಿಲಕವನ್ನು ಇಟ್ಟುಕೊಳ್ಳಲು ಬಾಣದಿಂದ ಚಿಲುಮೆಯನ್ನು ಸೃಷ್ಟಿಸಿದನು. ಇದಕ್ಕೆ ಪೂರಕವೆಂಬಂತೆ ಇಂದಿಗೂ ಇಲ್ಲಿ ನಾಮದ ಚಿಲುಮೆ ಎಂಬ ಜಲಮೂಲವಿದೆ. ಸರ್ವಕಾಲಿಕವಾಗಿ ಈ ಚಿಲುಮೆಯಿಂದ ನೀರು ಹರಿಯುತ್ತದೆ.

**ಇತಿಹಾಸ ಪೂರ್ವಕಾಲ :** ಪ್ರೊ. ಸಂಪತ್‌ಅಯ್ಯಂಗಾರ್, ಜಿ. ರಾಮರಾವ್, ಶ್ರೀಮತಿ ಅಲ್ಚಿನ್, ಪ್ರೊ. ಎಂ. ಶೇಷಾದ್ರಿ, ಕೆ. ಬಿ. ಶಿವತಾರಕ್‌ರವರು ತುಮಕೂರು ಪ್ರದೇಶದ ಶಿಲಾಯುಗಕ್ಕೆ ಸಂಬಂಧಿಸಿದಂತೆ ಸಂಶೋಧನೆಯನ್ನು ಮಾಡಿದ್ದಾರೆ. ಈ ಪ್ರದೇಶದಲ್ಲಿ ಹಳೆಶಿಲಾಯುಗ ಸಂಸ್ಕೃತಿಯ ೯೬, ಸೂಕ್ಷ್ಮಶಿಲಾಯುಗದ ೬೯, ನವಶಿಲಾಯುಗದ ೩೪, ತಾಮ್ರಯುಗದ ೦೨ ಹಾಗೂ ಕಬ್ಬಿಣಯುಗದ ೪೫ ನೆಲೆಗಳನ್ನು ಗುರುತಿಸಿದ್ದಾರೆ. ಸೂಕ್ಷ್ಮಶಿಲಾಯುಗ, ನವಶಿಲಾಯುಗ, ಬೃಹತ್‌ಶಿಲಾ ಸಂಸ್ಕೃತಿಯ ನೆಲೆಗಳನ್ನು ತುಮಕೂರು ಪ್ರದೇಶದಲ್ಲಿ ಗುರುತಿಸಲಾಗಿದೆ. ಆದ್ದರಿಂದ ತುಮಕೂರು ಪ್ರದೇಶದಲ್ಲಿ ಪ್ರಾಚೀನ ಕಾಲದಿಂದಲೂ ಜನಜೀವನ ವ್ಯವಸ್ಥೆಯು ಅಸ್ತಿತ್ವದಲ್ಲಿತ್ತು.

ತುಮಕೂರು ಜಿಲ್ಲೆಯಲ್ಲಿನ ಶಿಲಾಯುಗದ ನೆಲೆಗಳಲ್ಲಿ ಪ್ರಮುಖವಾದುವುಗಳೆಂದರೆ, ತುಮಕೂರಿನ ಸೀಗೆಹಳ್ಳಿ, ಧಣಾಕಪುರ. ತಿಪಟೂರಿನ ಬಾಣಸಂದ್ರ, ಕಿಬ್ಬನಹಳ್ಳಿ, ಬಿಳಿಗೆರೆ, ಕರಡಿ, ಹರೇನಹಳ್ಳಿ, ಹೊನ್ನಮಾರನಹಳ್ಳಿ, ಬೊಮ್ಮನಹಳ್ಳಿ, ಸಿಡ್ಲೇಹಳ್ಳಿ. ಮಧುಗಿರಿಯ ಅವರಗಲ್ಲುಗುಟ್ಟೆ, ಚಿಕ್ಕಗೌಡನರೊಪ್ಪ, ಮಿಡಿಗೇಶಿ. ಪಾವಗಡದ ನಾಗಲಾಪುರ, ನಿಡಗಲ್ಲು, ಯಲ್ಲಪ್ಪನಾಯಕನ ಹೊಸಕೋಟೆ. ಗುಬ್ಬಿಯ ಅಪ್ಪಾನಹಳ್ಳಿ, ದೊಡ್ಡಗುಣಿ, ಉನಗನಹಾಳ, ಕಾರೇಕುರ್ಚಿ, ತ್ಯಾಗಟೂರು, ತಿಪ್ಪಸಂದ್ರ, ಯಕ್ಕಲಕಟ್ಟೆ, ಮುದಿಪುರ, ವೀರಾಪುರ, ಸಾರನಕಟೆ, ಹೂವಿನಕಟ್ಟೆ, ಹೊಸಕೆರೆ, ಮೂಗನಾಯ್ಕನಕೋಟೆ, ಮಾರಶೆಟ್ಟಿಹಳ್ಳಿ, ಶಿವಪುರ, ಓಬಳಾಪುರ, ಮಂಚಲದೊರೆ, ಗಳಿಗೆಕೆರೆ, ತಿಪ್ಪಸಂದ್ರ, ಬಣ್ಣಿಗಾನಹಳ್ಳಿ, ಬೋಗಸಂದ್ರ, ಬಂಡನಹಳ್ಳಿ, ಚಿಕ್ಕನಾಯಕನಹಳ್ಳಿಯ ಅಂಕನಬಾವಿ, ಸಾಲ್ಕಟ್ಟೆ, ಹೊಸಹಳ್ಳಿ, ಕೊರಟಗೆರೆಯ

ಇರಕಸಂದ್ರಕಾಲೋನಿ, ಕತ್ತಿರಾಜನಹಳ್ಳಿ, ಗೊಲ್ಲರಹಟ್ಟಿ ಮುಂತಾದುವು. ಈ ನೆಲೆಗಳಲ್ಲಿ ಶಿಲಾಯುಗದಲ್ಲಿ ಬಳಸುತ್ತಿದ್ದ ಕೈಗೊಡಲಿ, ಸೀಳುಗತ್ತಿ, ಈಟಿ, ದುಂಡಾದ ಚಪ್ಪಟೆ ಆಯುಧ, ಕೊಚ್ಚುಗತ್ತಿ, ತೆಳುಚಕ್ಕೆ ಕಲ್ಲಿನ ಆಯುಧ, ಅರ್ಧಚಂದ್ರಾಕೃತಿ ಮತ್ತು ಬಾಣದಮೊನೆ ಮಾದರಿಯ ಆಯುಧಗಳು ಮುಂತಾದ ಶಿಲಾಯುಧಗಳನ್ನು ಪತ್ತೆಹಚ್ಚಲಾಗಿದೆ. ಹೀಗಾಗಿ ತುಮಕೂರಿನ ಪರಿಸರದಲ್ಲಿ ಹಳೆಯ ಶಿಲಾಯುಗದಿಂದಲೂ ಜನವಸತಿಯಿತ್ತೆಂದು ತಿಳಿದು ಬರುತ್ತದೆ.

ಇಲ್ಲಿ ಬೃಹತ್‌ಶಿಲಾಯುಗ ಸಂಸ್ಕೃತಿಯನ್ನು ಪ್ರಥಮವಾಗಿ ಶೋಧಿಸಿದ ಕೀರ್ತಿಯು ಬಿ. ಎಲ್. ರೈಸ್ ರವರಿಗೆ ಸಲ್ಲುತ್ತದೆ.[೪] ನಂತರದಲ್ಲಿ ಹೆಚ್. ಕೆ. ಸ್ಲೇಟ್, ಕೆ. ವಿ. ರಾವ್ ಮುಂತಾದವರು ಈ ಕುರಿತು ಅಧ್ಯಯನ ಮಾಡಿದ್ದಾರೆ. ಈ ವರೆಗೆ ಶೋಧಿಸಿರುವ ಒಟ್ಟು ೩೮ ನೆಲೆಗಳಲ್ಲಿ ೨೧ ಗೋರಿಯ ನೆಲೆಗಳಾಗಿದ್ದು, ೧೭ ವಸತಿ ನೆಲೆಗಳಾಗಿವೆ. ಈ ಪ್ರದೇಶದಲ್ಲಿನ ಬೃಹತ್‌ಶಿಲಾ ಸಂಸ್ಕೃತಿಯ ನೆಲೆಗಳಲ್ಲಿ ತಿಪಟೂರಿನ ಕೇರಳಕಟ್ಟೆ, ತುಮಕೂರಿನ ಹಿರೇಗುಂಡಗಲ್ಲು, ಚಿನಗ, ಕೊರಟಗೆರೆಯ ಅಗ್ರಹಾರ, ಇರಕಸಂದ್ರಕಾಲೋನಿ, ಕತ್ತಿರಾಜನಹಳ್ಳಿ, ಗೌಡನಕಟ್ಟೆ ಪಾವಗಡದ ಯಲ್ಲಪ್ಪನಾಯಕನ ಹೊಸಕೋಟೆ, ರಾಚಮಾರನಹಳ್ಳಿಗಳು ಪ್ರಮುಖವಾಗಿವೆ. ಇಲ್ಲಿನ ಬೃಹತ್ ಶಿಲಾಯುಗದ ನಿವೇಶನಗಳು ಬೆಟ್ಟದ ತಪ್ಪಲು ಮತ್ತು ಮೈದಾನ ಪ್ರದೇಶದಲ್ಲಿವೆ. ಹೆಚ್ಚಿನ ನಿವೇಶನಗಳು ಕೃಷಿ ಭೂಮಿಯಲ್ಲಿದ್ದು ನಾಶವಾಗಿವೆ. ಆದರೆ ಬಹುತೇಕ ಅವಶೇಷಗಳನ್ನು ಪಾವಗಡ, ಮಧುಗಿರಿ, ಕೊರಟಗೆರೆ ತಾಲೂಕುಗಳಲ್ಲಿ ಕಾಣಬಹುದಾಗಿದೆ. ಇಲ್ಲಿನ ಬೃಹತ್ ಶಿಲಾ ಗೋರಿಗಳನ್ನು ಸ್ಥಳೀಯರು ಮೋರ್‍ಯರಗುಡಿ, ಮೋರ್‍ಯರಮನೆ, ಪಾಂಡವರಮನೆ, ಭಸ್ಮದಕಟ್ಟೆ, ಮುನಿವಾಸದಗುಹೆ, ಪಾಂಡವರಕಲ್ಲು ಮುಂತಾದ ಹೆಸರುಗಳಿಂದ ಗುರುತಿಸುವರು.

**ಇತಿಹಾಸದ ಆರಂಭದ ಕಾಲ :** ಭಾರತದ ಮೊದಲ ಐತಿಹಾಸಿಕ ಸಾಮ್ರಾಜ್ಯಗಳಾದ ಮೌರ್ಯರ ಅಥವಾ ಶಾತವಾಹನರ ಆಳ್ವಿಕೆಗೆ ಸಂಬಂಧಿಸಿದ ದಾಖಲೆಗಳಾಗಲೀ, ಅವಶೇಷಗಳಾಗಲೀ ಈ ಪ್ರದೇಶದಲ್ಲಿ ಲಭಿಸಿಲ್ಲ. ಆದರೆ ಚಂದ್ರಗುಪ್ತಮೌರ್ಯನು ತುಮಕೂರಿನ ಪಶ್ಚಿಮಕ್ಕಿರುವ ಹಾಸನದ ಶ್ರವಣಬೆಳಗೊಳದಲ್ಲಿ ತನ್ನ ಕೊನೆಯ ದಿನಗಳನ್ನು ಕಳೆದನು. ಇದಕ್ಕೆ ಪೂರಕವೆಂಬಂತೆ ತುಮಕೂರಿನ ಉತ್ತರಕ್ಕಿರುವ ಚಿತ್ರದುರ್ಗ ಜಿಲ್ಲೆಯ ಬ್ರಹ್ಮಗಿರಿ, ಸಿದ್ಧಾಪುರ, ಜಟ್ಟಿಂಗ ರಾಮೇಶ್ವರಗಳಲ್ಲಿ ಅಶೋಕನ ದಾಖಲೆಗಳು ಲಭಿಸಿವೆ. ಇದರಿಂದಾಗಿ ತುಮಕೂರು ಜಿಲ್ಲೆಯ ಪ್ರದೇಶಗಳೂ ಕೂಡ ಮೌರ್‍ಯರ ಆಡಳಿತಕ್ಕೆ ಒಳಪಟ್ಟಿದ್ದವು.

**ಕದಂಬರು** – ಈ ಪ್ರದೇಶದಲ್ಲಿ ಕದಂಬರ ಆಳ್ವಿಕೆಯನ್ನು ದೃಢೀಕರಿಸುವ ಯಾವುದೇ ದಾಖಲೆಗಳು ಲಭಿಸಿಲ್ಲ. ಆದರೆ ತುಮಕೂರಿನ ಉತ್ತರ ಭಾಗದ ಉಚ್ಚಂಗಿಯು ಇವರ

ಇನ್ನೊಂದು ರಾಜಧಾನಿಯಾಗಿತ್ತು. ಇದರಿಂದಾಗಿ ತುಮಕೂರಿನ ಕೆಲವು ಪ್ರದೇಶಗಳು ಕದಂಬರ ಆಳ್ವಿಕೆಗೆ ಒಳಪಟ್ಟಿದ್ದವು ಎಂಬುದಾಗಿ ತಿಳಿದು ಬರುತ್ತದೆ.

**ಗಂಗರು ಮತ್ತು ರಾಷ್ಟ್ರಕೂಟರು** – ಕ್ರಿ. ಶ. ಸುಮಾರು ೬೨೫ ರಿಂದ ೬೬೦ ರವರೆಗೆ ಈ ಪ್ರದೇಶವನ್ನು ಗಂಗರ ದೊರೆ ಇಮ್ಮಡಿ ಬೂತುಗನು ಆಳಿದನು. ಸೋಮೇಶ್ವರ ದೇವಾಲಯದಲ್ಲಿನ ಶಾಸನವು ಉಲ್ಲೇಖಿಸಿರುವಂತೆ ಈತನ ಕಾಲದಲ್ಲಿ ಸೋಮೆಕಟ್ಟೆ ಕೆರೆಯ ಉಸ್ತುವಾರಿಯನ್ನು ನೋಡಿಕೊಳ್ಳುವುದಕ್ಕಾಗಿ "ಬಿಟ್ಟಿಯಣ್ಣ" ಎಂಬುವವನನ್ನು ಅಧಿಕಾರಿಯಾಗಿ ನೀಮಿಸಲಾಗಿತ್ತು. ಬ್ರಹ್ಮಪುತ್ರ (ಬ್ರಹ್ಮವುತ್ತರ) ಸಹ ಕಂದಮಯ್ಯನ ಮಗ ಅಜ್ಜವಯ್ಯನು ಆತನಿಗೆ ೧೨ ಖಂಡುಗ ಭಿತ್ತುವಷ್ಟು ಭೂಮಿಯನ್ನು ನೀಡಿದ್ದನು. ಇದು ತುಮಕೂರನ್ನು ಉಲ್ಲೇಖಿಸಿರುವ ಮೊದಲ ಶಾಸನವಾಗಿದೆ.[೫] ಕ್ರಿ. ಶ. ೭೨೫ ರಿಂದ ೭೮೮ ರವರೆಗೆ ಗಂಗರ ಶ್ರೀಪುರುಷನ ಆಳ್ವಿಕೆಯಲ್ಲಿ ಕ್ರೀಡಾಪುರದ ಸುತ್ತಮುತ್ತಲಿನ ಪ್ರದೇಶವು ಸೇರಿತ್ತು. ಅಂದು ತುಮಕೂರು ಗ್ರಾಮವು ಕ್ರೀಡಾಪುರದ ಭಾಗವಾಗಿತ್ತು. ಆಗ ಗಂಗವಾಡಿಯಲ್ಲಿ ಚಾಕಿರಾಜ[೬] ಎಂಬುವನನ್ನು ರಾಜಪ್ರತಿನಿಧಿಯಾಗಿ ನೇಮಿಸಲಾಗಿತ್ತು. ಇವನ ಅಧಿಕಾರಿಯಾಗಿದ್ದ ಚಾಲುಕ್ಯರ ವಿಮಲಾದಿತ್ಯನು ಕುಣಿಗಲ್‌ನಲ್ಲಿ ಆಳುತ್ತಿದ್ದನು.[೭] ಶ್ರೀಪುರುಷನ ಮಗ ಶಿವಮಾರನಿಗೂ ರಾಷ್ಟ್ರಕೂಟರ ಮುಮ್ಮಡಿ ಗೋವಿಂದನಿಗೂ ನಡೆದ ಹಿರೇಗುಂಡಗಲ್ ಬಳಿಯ ಕಾಳಗದಲ್ಲಿ ಶಿವಮಾರನು ಸೋತು ಹೋದನು. ಹಾಗೂ ನಂತರದ ಕಾಲದಲ್ಲಿ ಮರಣ ಹೊಂದಿದನು. ಹೀಗಾಗಿ ಗಂಗವಾಡಿಯ ಕ್ರೀಡಾಪುರವು ರಾಷ್ಟ್ರಕೂಟರ ವಶವಾಯಿತು. ಗೋವಿಂದನು ಚಾಕಿರಾಜನ ನಂತರ ಆತನ ಉತ್ತರಾಧಿಕಾರಿಯಾಗಿ ಕ್ರೀಡಾಪುರದಲ್ಲಿ ಕಂಭರಸನನ್ನು ನೇಮಿಸಿದ್ದನು. ಶಿವಮಾರನ ತಮ್ಮನ ಮಗ ರಾಚಮಲ್ಲ ಸತ್ಯವಾಕ್ಯನು ಕ್ರೀಡಾಪುರ ಮತ್ತು ನೊಳಂಬವಾಡಿಗಳು ಗಂಗರ ಸಾಮಂತ ರಾಷ್ಟ್ರಗಳೆಂದು ಸಾರಿ ರಾಷ್ಟ್ರಕೂಟರ ಮೇಲೆ ಯುದ್ಧ ಸಾರಿದನು. ಕ್ರಿ. ಶ.೮೧೫ ರಿಂದ ೮೧೭ ರವರೆಗೆ ನಡೆದ ಗಡಿ ಕದನಗಳಲ್ಲಿ ಗಂಗರಿಗೆ ಜಯವಾಗಿ ರಾಚಮಲ್ಲಮನು ದಕ್ಷಿಣ ಭಾರತದ ಸಾರ್ವಭೌಮನಾಗಿ ಪಲ್ಲವರೊಂದಿಗೆ ವೈವಾಹಿಕ ಸಂಬಂಧವನ್ನು ಏರ್ಪಡಿಸಿಕೊಂಡನು. ಗಂಗರು ಮತ್ತು ಪಲ್ಲವರ ಸಂಬಂಧಗಳನ್ನು ಸಹಿಸದ ರಾಷ್ಟ್ರಕೂಟರ ಮೂರನೇ ಗೋವಿಂದನ ಉತ್ತರಾಧಿಕಾರಿಯಾದ ಅಮೋಘವರ್ಷನು ಗಂಗವಾಡಿ ಮತ್ತು ನೊಳಂಬವಾಡಿಗಳ ನಡುವಿನ ಕ್ರೀಡಾಪುರವನ್ನು ನಾಶ ಮಾಡುವಂತೆ ಸೂಚಿಸಿ ತನ್ನ ಮಂತ್ರಿ ಬಂಕೇಶನ ನೇತೃತ್ವದಲ್ಲಿ ಸೈನ್ಯವನ್ನು ಕಳುಹಿಸಿದನು. ಕ್ರಿ. ಶ. ೮೪೦ರ ವೇಳೆಗೆ ಬಂಕೇಶನು ಕ್ರೀಡಾಪುರವನ್ನು ನಾಶಪಡಿಸಿದನು. ಈ ರೀತಿಯಾಗಿ ಕ್ರಿ. ಶ. ೮೪೦ ರಿಂದ ೮೭೮ ರವರೆಗೆ ರಾಷ್ಟ್ರಕೂಟರ ಆಳ್ವಿಕೆಯಲ್ಲಿದ್ದ ಈ ಪ್ರದೇಶವು ಕ್ರಿ. ಶ. ೮೭೮ ರಲ್ಲಿ ಮತ್ತೆ ಗಂಗರ ವಶವಾಯಿತು.[೮] ಇಲ್ಲಿನ ವರ್ತಕರು ಟಂಕಿಹಳ್ಳಿಯಲ್ಲಿ ನೆಲೆಸಿದರು. ನೂಲು ಮತ್ತು ಹತ್ತಿಯ ವ್ಯಾಪಾರವನ್ನು ಮಾಡುತ್ತಿದ್ದ ವರ್ತಕರು ನೆಲೆಸಿದ್ದರಿಂದಲೇ ಇಂದಿಗೂ ತುಮಕೂರಿನಲ್ಲಿ ಅರಳೇಪೇಟೆ ಎಂಬ ಬೀದಿಯಿದೆ.

ಆರಂಭದಲ್ಲಿ ಅರಳೇಪೇಟೆ ಮತ್ತು ಟುಂಕಿಹಳ್ಳಿಗಳು ಬೇರೆ ಬೇರೆ ಗ್ರಾಮಗಳಾಗಿದ್ದವು. ನಗರೀಕರಣದ ಪ್ರಭಾವದಿಂದಾಗಿ ಈ ಹಳ್ಳಿಗಳು ಪ್ರಸಕ್ತ ತುಮಕೂರು ಮಹಾನಗರದಲ್ಲಿ ಸೇರಿಕೊಂಡಿವೆ.

**ನೊಳಂಬರು** – ದಖಿನ್ ಪ್ರಾಂತ್ಯದಲ್ಲಿ ರಾಷ್ಟ್ರಕೂಟರು ಹಾಗೂ ಕಲ್ಯಾಣದ ಚಾಲುಕ್ಯರ ಆಳ್ವಿಕೆಯಿದ್ದ ಸನ್ನಿವೇಶದಲ್ಲಿ ತುಮಕೂರು ಪ್ರದೇಶದಲ್ಲಿ ನೊಳಂಬರು ಸ್ಥಳೀಯವಾಗಿ ಆಳುತ್ತಿದ್ದರು. ಆಂಧ್ರದ ಹೆಂಜೇರು ಅಥವಾ ಹೇಮಾವತಿ ಇವರ ರಾಜಧಾನಿಯಾಗಿತ್ತು. ನೊಳಂಬವಾಡಿ ೩೨೦೦೦ ಎಂಬುದಾಗಿ ಇವರ ಸಾಮ್ರಾಜ್ಯವನ್ನು ಗುರುತಿಸಲಾಗಿದೆ. ಇವರು ಪಲ್ಲವ ಮೂಲದವರಾಗಿದ್ದರಿಂದ ನೊಳಂಬಪಲ್ಲವರು ಎಂದೇ ಪ್ರಖ್ಯಾತಿ ಪಡೆದಿದ್ದಾರೆ. ತುಮಕೂರಿನ ಪಾವಗಡದ ನಿಡಗಲ್ಲು, ಮಧುಗಿರಿ, ಸಿರಾದ ಕೆಲವೆಡೆ ಇವರ ದಾಖಲೆಗಳು ಮತ್ತು ಅವಶೇಷಗಳು ಲಭಿಸಿವೆ. ಇವರ ಕ್ರಿ. ಶ. ೮೭೮ ರ ಶಾಸನವು ಬರಗೂರಿನಲ್ಲಿ ಲಭಿಸಿದೆ. ಇದು ಇವರ ಅತೀ ಪ್ರಾಚೀನ ಶಾಸನವಾಗಿದೆ. ಇದು ಹೇಮಾವತಿಯ ನೊಳಂಬರ ವಂಶಾವಳಿಯನ್ನು ಉಲ್ಲೇಖಿಸಿದೆ.

ರಾಷ್ಟ್ರಕೂಟರ ಸಾಮಂತರಾಗಿದ್ದ ನೊಳಂಬ ಪಲ್ಲವರು ಎರಡನೆಯ ಗೋವಿಂದನ ನಂತರ ರಾಷ್ಟ್ರಕೂಟರಲ್ಲಿ ಉಂಟಾದ ಬಿಕ್ಕಟ್ಟಿನ ಪರಿಣಾಮವಾಗಿ ಗಂಗರೊಂದಿಗೆ ಸಂಬಂಧವನ್ನು ಬೆಳೆಸಿದರು. ರಾಚಮಲ್ಲನ ಮಗಳಾದ ಜಾಯಬ್ಬೆಯನ್ನು ನೊಳಂಬಪಲ್ಲವ ಸಿಂಹಪೋತನ ಮಗ ಪೊಳಲ್ಚೋರನಿಗೆ ವಿವಾಹ ಮಾಡಿಕೊಂಡು ಪ್ರಾಬಲ್ಯವನ್ನು ಸಾಧಿಸಿದರು. ಸಿಂಹಪೋತ, ಪೊಳಲ್ಚೋರ, ಮಹೇಂದ್ರ, ಅಯ್ಯಪ್ಪದೇವ, ವೀರನೊಳಂಬ ಅಣ್ಣಿಗ, ಇರಿವನೊಳಂಬ ದಿಲೀಪ, ನನ್ನಿನೊಳಂಬ, ಎರಡನೇ ಮಹೇಂದ್ರ ಮುಂತಾದವರು ಈ ಸಂತತಿಯ ಅರಸರಾಗಿದ್ದಾರೆ. ಕ್ರಿ. ಶ. ೯೮೧–೯೯೦ ರ ಅವಧಿಯಲ್ಲಿ ದೀವಬ್ಬರಸಿಯು ತನ್ನ ಮಗನ ಹೆಸರಿನಲ್ಲಿ ಆಳುತ್ತಿದ್ದಳು ಎಂದು ಅವನಿಯ ಶಾಸನದಲ್ಲಿ ಉಲ್ಲೇಖಿಸಿದೆ. ಕ್ರಿ. ಶ. ೯೯೦ ರಲ್ಲಿ ಚೋಳರು ನೊಳಂಬವಾಡಿಯನ್ನು ಆಕ್ರಮಿಸಿಕೊಂಡರು. ನಂತರ ಅಧಿಕಾರಕ್ಕೆ ಬಂದ ಇರಿವನೊಳಂಬ ಘಟೆಯಂಕಕಾರನ ಆಳ್ವಿಕೆಯ ಅವಧಿಯಲ್ಲಿ ಮತ್ತೊಮ್ಮೆ ಚೋಳರು ಇವರ ಮೇಲೆ ಆಕ್ರಮಣ ಮಾಡಿದರು. ಮುಂದೆ ನೊಳಂಬಪಲ್ಲವರು ಕಲ್ಯಾಣಿ ಚಾಲುಕ್ಯರ ಸಾಮಂತರಾಗಿ ಕಂಪ್ಲಿಯನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡು ಕ್ರಿ. ಶ. ಸುಮಾರು ೧೧೫೪ ರ ವರೆಗೆ ಅಸ್ತಿತ್ವದಲ್ಲಿದ್ದು ನಂತರದಲ್ಲಿ ಪತನ ಹೊಂದಿದರು.

**ಚೋಳರು** – ಒಂದನೇ ರಾಜರಾಜನ ಕಾಲಕ್ಕೆ ಕುಣಿಗಲ್ ಮತ್ತು ಮಧುಗಿರಿ ತಾಲೂಕಿನ ಕೆಲವು ಭಾಗಗಳನ್ನು ಆಕ್ರಮಿಸಿಕೊಂಡು ಚೋಳರು ಆಳಿದರು. ಕುಣಿಗಲ್ ತಾಲೂಕಿನ ಕೊತ್ತಗೆರೆ ಮತ್ತು ಮಧುಗಿರಿ ತಾಲೂಕಿನ ತೆರೆಯೂರುಗಳಲ್ಲಿ ಇವರ ಕಾಲದ ಶಾಸನಗಳು ಲಭಿಸಿವೆ. ತುಮಕೂರಿನ ಕುಣಿಂಗಿಲ್‌ನಾಡು ಒಂದನೇ ರಾಜೇಂದ್ರ ಚೋಳನು ಸ್ಥಾಪಿಸಿದ್ದ 'ವಿಕ್ರಮ ಚೋಳ ಮಂಡಲಂ' ಎಂಬ ಆಡಳಿತ ವಿಭಾಗದ ಭಾಗವಾಗಿತ್ತು.[೧೦] ಕ್ರಿ.ಶ ೯೮೫

ರಿಂದ ೧೦೧೩ ರವರೆಗೆ ಆಳಿದ ಚೋಳರ ರಾಜೇಂದ್ರ ಚೋಳನು ಗಂಗರ ಮುಮ್ಮಡಿ ನೀತಿಮಾರ್ಗನನ್ನು ಸೋಲಿಸಿ ನೊಳಂಬವಾಡಿಯನ್ನು ಚೋಳಮಂಡಲಕ್ಕೆ ಸೇರಿಸಿಕೊಳ್ಳುವ ಮೂಲಕ ತುಮಕೂರಿನಲ್ಲಿ ಚೋಳರ ಆಳ್ವಿಕೆಯನ್ನು ಆರಂಭಿಸಿದನು. ರಾಜಾಧಿರಾಜದೇವನು ಕ್ರಿ.ಶ ೧೦೪೮ ರಲ್ಲಿ ಕುಣಿಗಲ್‌ಗೆ ರಾಜೇಂದ್ರಚೋಳಪುರ ಎಂದು ನಾಮಕರಣ ಮಾಡಿದ್ದನು. ಮುಂದೆ ಇದೇ ಹೆಸರಿನ ಸ್ಥಳೀಯರು ಪಾವಗಡದ ನಿಡಗಲ್‌ನಲ್ಲಿ ಏಳಿಗೆಗೆ ಬಂದು ನಿಡಗಲ್ ಚೋಳರು ಎಂದು ಹೆಸರಾದರು.

**ನಿಡಗಲ್ ಚೋಳರು** – ಕ್ರಿ. ಶ. ೧೧ ರಿಂದ ೧೩ ನೇ ಶತಮಾನದವರೆಗೆ ನಿಡಗಲ್‌ನಲ್ಲಿ ಆಳಿದ ಚೋಳರು ತಮ್ಮನ್ನು 'ಕಾಲಚೋಳರು' ಎಂದು ಕರೆದುಕೊಂಡಿದ್ದಾರೆ. ವೀರಪಾಂಡ್ಯ ಇರುಂಗೋಳನು ಕ್ರಿ. ಶ. ೧೧೨೮ ರಲ್ಲಿ ಚಾಲುಕ್ಯ ೩ನೇ ಸೋಮೇಶ್ವರನ ಕಾಲದಲ್ಲಿ ಕಣಿಯಕಲ್ ೩೦೦, ರೊದ್ದಂ ೩೦೦, ಸಿರಾ೩ ೦೦, ಹರವೆ ೩೦೦, ಸಿಂದವಾಡಿ ೧೦೦೦ ಪ್ರದೇಶಗಳ ಅಧಿಪತಿಯಾಗಿದ್ದನು ಎಂಬುದಾಗಿ ಸಿರಾದ ದೊಡ್ಡಬಾಣಗೆರೆಯ ಶಾಸನದಲ್ಲಿ ಉಲ್ಲೇಖಿಸಿದೆ.[೧೧] ಈ ಸಂತತಿಯ ಪ್ರಮುಖ ಅರಸರೆಂದರೆ ವೀರಪಾಂಡ್ಯ ಇರುಂಗೋಳ, ಬಂಮದೇವ ಚೋಳ, ಜಗದೇಕ ಮಲ್ಲಿದೇವ ಚೋಳ, ಭೋಗದೇವ ಚೋಳ, ಎರಡನೇ ಇರುಂಗೋಳ, ಇಮ್ಮಡಿ ಬಂಮದೇವ, ತ್ರಿಪುರಾಂತಕ ಚೋಳ, ಚಿಕ್ಕಬಮ್ಮನಾಯಕ ಮುಂತಾದವರು.

**ಕಾಕತೀಯರು** – ಚೋಳರ ಅಧೀನದಲ್ಲಿದ್ದ ಮಾಗಡಿ ಪ್ರದೇಶವನ್ನು ಹೊಯ್ಸಳರು ಆಕ್ರಮಿಸಿಕೊಂಡಿದ್ದರು. ಹೊಯ್ಸಳರಿಂದ ವಾರಂಗಲ್ಲಿನ ಕಾಕತೀಯ ಪ್ರತಾಪರುದ್ರದೇವನು ಮಾಗಡಿಯನ್ನು ವಶಪಡಿಸಿಕೊಂಡು ಆಳಿದನು. ಈ ಕುರಿತ ಬಗ್ಗೆ ತುಮಕೂರು ತಾಲೂಕಿನ ಮುಳುಕುಂಟೆ ಶಾಸನವು ಉಲ್ಲೇಖಿಸುತ್ತದೆ.[೧೨] ಮುಂದೆ ಹೊನ್ನುಡಿಕೆ ಮತ್ತು ಅದರ ಸುತ್ತ ಮುತ್ತಲಿನ ಗ್ರಾಮಗಳನ್ನು ಸೇರಿಸಿ ಅಗ್ರಹಾರವನ್ನು ನಿರ್ಮಿಸಿ ಅದನ್ನು ಬ್ರಾಹ್ಮಣರಿಗೆ ದಾನವಾಗಿ ನೀಡಿದ್ದನು.

**ಹೊಯ್ಸಳರು** – ಗಂಗವಾಡಿ ೯೬೦೦೦ ಮತ್ತು ನೊಳಂಬವಾಡಿ ೩೨೦೦೦ ಪ್ರದೇಶಗಳು ವಿಷ್ಣುವರ್ಧನನ ಆಧೀನದಲ್ಲಿದ್ದವು. ಕ್ರಿ. ಶ. ೧೧೧೦ ರಲ್ಲಿ ತುಮಕೂರು ಪ್ರದೇಶವು ಹೊಯ್ಸಳ ವಿಷ್ಣುವರ್ಧನನ ಅಧೀನದಲ್ಲಿತ್ತು. ಈ ಸಂದರ್ಭದಲ್ಲಿ ಇಲ್ಲಿ ಆಳುತ್ತಿದ್ದ ಗೂಳಿಬಾಚಿದೇವನು ಸರ್ವ ಧರ್ಮ ಸಹಿಷ್ಣುವಾಗಿದ್ದನು. ಈತನು ಶೈವಧರ್ಮದ ಅನುಯಾಯಿಯಾಗಿದ್ದು ಇಲ್ಲಿ ಭೀಮಸಮುದ್ರ ಮತ್ತು ಅದಲಸಮುದ್ರ ಎಂಬ ಕೆರೆಗಳನ್ನು ನಿರ್ಮಾಣ ಮಾಡಿಸಿದ್ದನು.

ಚೋಳರ ಕಿರುಕುಳವನ್ನು ಸಹಿಸದ ಹೊಯ್ಸಳ ಮುಮ್ಮಡಿ ನರಸಿಂಹನು ಕ್ರಿ. ಶ. ೧೨೮೫ ರಲ್ಲಿ ನಿಡಗಲ್ಲು ಹಾಗೂ ಹನಿಯದುರ್ಗಗಳನ್ನು ಜಯಿಸಿ ನಿಡಗಲ್‌ಗೆ

‘ವಿಜಯದುರ್ಗ’ ಎಂದು ಮರುನಾಮಕರಣ ಮಾಡಿದನು. ಇಲ್ಲಿನ ಆನೆಬಿದ್ದಸರಿಯಲ್ಲಿ ಹೊಯ್ಸಳರ ದಂಡನಾಯಕರು ಆಳ್ವಿಕೆಯನ್ನು ನಡೆಸುತ್ತಿದ್ದರು. ಎಂಬುದಾಗಿ ಶಾಸನಗಳಿಂದ ತಿಳಿದು ಬರುತ್ತದೆ.[೧೩] ಇಂದಿನ ದೇವರಾಯನದುರ್ಗವನ್ನು ‘ಆನೆಬಿದ್ದಸರಿ’ ಎಂದು ಕರೆಯಲಾಗುತ್ತಿತ್ತು. ಇದು ಪ್ರಮುಖವಾದ ಆಡಳಿತ ಕೇಂದ್ರವಾಗಿತ್ತು ಎಂಬುದಾಗಿ ಸಿ. ಹಯವದನರಾಯ್ ರವರು ಕೂಡ ಅಭಿಪ್ರಾಯಪಟ್ಟಿದ್ದಾರೆ. ಮೂರನೆ ನರಸಿಂಹನು ಅಸಂದಿನಾಡಿನ ಸೆಟ್ಟಿಕೆರೆಯನ್ನು ಅಗ್ರಹಾರವನ್ನಾಗಿ ಮಾಡಿ ಶ್ರೀಭರಿತ ಪ್ರಕಾಶಪುರ ಎಂದು ನಾಮಕರಣ ಮಾಡಿದನು. ಅಂದಿನ ರಕ್ಷಣಾ ಮಂತ್ರಿಯಾಗಿದ್ದ ರಾವಣ್ಣ ದಣಾಯಕನು ತುರುವೇಕೆರೆಯನ್ನು ೯೬ ವಿಭಾಗಗಳನ್ನು ಒಳಗೊಂಡ ‘ಸರ್ವಜ್ಞ ವಿಜಯ ನರಸಿಂಹಪುರ’ ಎಂಬುದಾಗಿ ಹೆಸರಿಸಿ ಅಗ್ರಹಾರವನ್ನಾಗಿ ಬೆಳೆಸಿದನು. ಮುಂದೆ ರಾಮನಾಥ ಹೊಯ್ಸಳ, ಮುಮ್ಮಡಿ ಬಲ್ಲಾಳನ ಕಾಲದಲ್ಲಿಯೂ ಈ ಪ್ರದೇಶದಲ್ಲಿ ಹೊಯ್ಸಳರ ಆಳ್ವಿಕೆಯು ಮುಂದುವರೆಯಿತು. ಇಲ್ಲಿನ ಅರಳಗುಪ್ಪೆಯು ಹೊಯ್ಸಳರ ಸಾಂಸ್ಕೃತಿಕ ಕೇಂದ್ರವಾಗಿದೆ.

**ವಿಜಯನಗರ ಸಾಮ್ರಾಜ್ಯ** – ವಿಜಯನಗರದ ಅರಸನಾದ ಹರಿಹರನು ಹೊಯ್ಸಳರನ್ನು ಸೋಲಿಸಿ ತುಮಕೂರಿನಲ್ಲಿ ತನ್ನ ಆಳ್ವಿಕೆಯನ್ನು ಆರಂಭಿಸಿದನು. ಅಂದು ತುಮಕೂರು ವಿಜಯನಗರದ ಜಮಾಬಂದಿ ತಾಣವಾಗಿತ್ತು. ಈಗಿನ ತುಮಕೂರಿನ ಆಚಾರ್ಯರ ಬೀದಿ, ಅಗ್ರಹಾರ, ಎಮ್ಮೆಕೇರಿ, ಗೌಡರಬೀದಿ ಮುಂತಾದವು ಈ ಕಾಲದಲ್ಲಿಯೇ ಆರಂಭವಾದವು. ಕಳಲೇ ಮನೆತನದ ಕಾಂತೇಅರಸು ಎಂಬ ವಿಜಯನಗರದ ಅಧಿಕಾರಿಯು ಇಲ್ಲಿ ಒಂದು ಮಣ್ಣಿನ ಕೋಟೆಯನ್ನು ನಿರ್ಮಾಣ ಮಾಡಿಸಿದ್ದರೆಂಬ ಐತಿಹ್ಯವಿದೆ. ಇಂದು ಕೋಟೆಯ ಅಸ್ತಿತ್ವವಾಗಲೀ ಅಥವಾ ಅವಶೇಷವಾಗಲೀ ಕಂಡು ಬರುವುದಿಲ್ಲ.

ಪಾವಗಡದ ಪೋತಗಾನಹಳ್ಳಿಯಲ್ಲಿ ಲಭಿಸಿರುವ ಕ್ರಿ. ಶ. ೧೩೫೪ ರ ಶಾಸನವು, ಈ ಪ್ರದೇಶದಲ್ಲಿ ವಿಜಯನಗರ ಕಾಲಕ್ಕೆ ಸಂಬಂಧಿಸಿದಂತೆ ದೊರೆತ ಶಾಸನಗಳಲ್ಲಿ ಮೊದಲನೆಯದಾಗಿದೆ.[೧೪] ಅಲ್ಲದೇ ತಿಪಟೂರು ತಾಲೂಕಿನ ಬೆಂಕಿಕೆರೆಯ ೧೩೬೩ ರ ಶಾಸನ, ಮಿಡಿಗೇಶಿಯ ೧೩೭೦ ರ ಶಾಸನ, ಸಿರಾ ತಾಲೂಕಿನ ಮಜರೆ ಕಲಿಸೆಟ್ಟಿಹಳ್ಳಿಯ ೧೩೭೬ ರ ಶಾಸನ ಮತ್ತು ಹಂಜಿನಾಳ ಶಾಸನಗಳು ಇಲ್ಲಿ ಲಭಿಸಿವೆ.

ಪಾವಗಡ ತಾಲೂಕಿನ ೬೭ ನೇ ಶಾಸನದ ಉಲ್ಲೇಖದಂತೆ ಗೊಪಣ್ಣ ಎಂಬುವನು ಪಾವಗಡ ಕೋಟೆಯನ್ನು ನಿರ್ಮಿಸಿದನು. ಈತನು ಹೋಳಕಲ್ಲು ವಂಶದ ೧೧ ನೆಯ ತಲೆಮಾರಿನವನಾಗಿದ್ದು ಗೋಮಚಮೂಪ ಎಂದು ಉಲ್ಲೇಖಿತನಾಗಿದ್ದಾನೆ. ಈ ಕೋಟೆಯು ವಿಜಯನಗರದ ಕಾಲದ ಸುಭದ್ರವಾದ ಕೋಟೆಯಾಗಿದ್ದು ಇಂದಿಗೂ ಇದರ ಅವಶೇಷಗಳು ಉಳಿದಿವೆ. ಎರಡನೇ ದೇವರಾಯನ ಕಾಲದಲ್ಲಿ ಗೂಳೂರು ಸೀಮೆಯ ಮರುಗಲ ನಾಡಿನ ಆನೆಬಿದ್ದಜರಿ ವೇಂಠೆಗೆ ಸೇರಿದ ಹುಲ್ಲೇನಹಳ್ಳಿಯು ಪ್ರಸಿದ್ಧ ವ್ಯಾಪಾರಿ ಕೇಂದ್ರವಾಗಿತ್ತು. ಇಲ್ಲಿ ವಿರೂಪಾಕ್ಷ ಮಹಾರಾಯನ ದಂಡನಾಯಕನಾದ ಸಿಂಗಪ್ಪನು ರಾಜ್ಯವಾಳುತ್ತಿರಲು ಆತನ

ಮಹಾಸಾಮಂತನಾಗಿದ್ದ ಕಳಸನಾಯಕನ ಪತ್ನಿಯಾದ ಕಲ್ಲರಸಿಯಮ್ಮ ಎಂಬುವರು ಸಿದ್ಧಮಲ್ಲಿಕಾರ್ಜುನ ಗುಡಿಯನ್ನು ಜೀರ್ಣೋದ್ಧಾರ ಮಾಡಿಸಿ ಭೋಗಮಂಟಪ, ಗೋಪುರ, ಶಿಖರ, ಸಭಾಂಗಣ ಪಾಠಶಾಲೆಗಳನ್ನು ಸೇರಿಸಿ ಅಮೃತಪಡಿಗಾಗಿ ಭೂದಾನವನ್ನು ಮಾಡಿದ್ದಳು. ಇಲ್ಲಿ ಗಾಯಕಿ ಮಹಾದೇವಿ, ತಾಳದ ಮೂಕಜ್ಜಿ ಎಂಬುವರು ಬಸವಿಯರಾಗಿದ್ದರು.[೧೫] ತುಳುವ ನರಸನಾಯಕನ ಕಾಲದಲ್ಲಿ ಮಧುಗಿರಿ ತಾಲೂಕಿನ ಹಂದ್ರಾಳು ಗ್ರಾಮದ ಶಾಸನ ಕ್ರಿ. ಶ. ೧೫೦೩ ರ ಶಾಸನದಂತೆ ಬೆಲೆಹದ ಅಂದರೆ ಇಂದಿನ ಬ್ಯಾಲ್ಯ ಗ್ರಾಮದ ತಿಮ್ಮನಾಯಕನ ಮಗ ತಮ್ಮನಾಯಕನು ಹಂದರಹಾಳು ಗ್ರಾಮವನ್ನು ದೇವಾಲಯದ ಪುರವನ್ನಾಗಿಸಿ ತಿರುಮಲ ದೇವರ ಸೇವೆಗೆ ಮಾನ್ಯವಾಗಿ ನೀಡಿದನು. ಅಚ್ಯುತರಾಯನ ಅರಮನೆಯ ಕೋಶಾಧಿಕಾರಿ ಬಯಕಾರ ರಾಮಪ್ಪನು ಕಂದಿಕೆರೆ ಸೀಮೆಯಲ್ಲಿ ಪಾಲಿಸಿದ ಮದುವೆಯ ಸುಂಕಮಾನ್ಯದ ಜೊತೆಗೆ ಗೌಡ, ತಳವಾರ, ಅಕ್ಕಸಾಲೆ, ಕೆರೆ, ಎತ್ತಿಬಂಡಿ ಸಂಬಂಧದ ಆದಾಯ ಸುಂಕವನ್ನು ಶಿವರಾತ್ರಿಯಂದು ೧೮ ಫಣಕಟ್ಟುಗಳ ಪರವಾಗಿ ತುಂಗಭದ್ರಾ ನದಿ ತೀರದ ವಿರೂಪಾಕ್ಷ ಸನ್ನಿಧಿಯಲ್ಲಿ ರಾಯನ ಯಶೋಭಿವೃದ್ಧಿಗಾಗಿ ದಾನವನ್ನು ನೀಡಿದನು.[೧೬]

ಸುಮಾರು ೧೫ ಮತ್ತು ೧೬ ನೇ ಶತಮಾನದಲ್ಲಿ ವಿಜಯನಗರದ ಅರಸರು ತಮ್ಮ ಆಶ್ರಯದಲ್ಲಿದ್ದ ಅಧಿಕಾರಿಗಳಿಗೆ ಮತ್ತು ಸಾಮಂತ ಪಾಳೆಯಗಾರರಿಗೆ ಗ್ರಾಮಗಳಿಗೆ ಉಂಬಳಿ ಹಾಕಿ ಬಿಟ್ಟಿದ್ದಲ್ಲದೇ ವಿವಿಧ ಬಿರುದು ಬಾವಲಿಗಳನ್ನು ನೀಡಿದರು. ಆಯಾ ಅಧಿಕಾರಿಗಳು, ಪಾಳೆಯಗಾರರು ಸಲ್ಲಿಸಿದ ಸೇವೆಯನ್ನು ಗುರುತಿಸಿ ಅವರಿಗೆ ಆಯಾ ಪ್ರದೇಶಗಳ ಆಳ್ವಿಕೆಯನ್ನು ನೀಡಿದರು. ವಿಜಯನಗರಕಾಲೀನ ಮತ್ತು ನಂತರದ ಕಾಲಾವಧಿಯಲ್ಲಿ ವಿಜಯನಗರ ಸಾಮ್ರಾಟರ ಸಾಮಂತರಾಗಿ ಮತ್ತು ನೇರವಾಗಿ ಆಳ್ವಿಕೆ ನಡೆಸಿದ ತುಂಡರಸರಾದ ಬಿಜ್ಜಾವರದ ಮಹಾನಾಡ ಪ್ರಭುಗಳು, ನಿಡಗಲ್ಲು ನಾಯಕರು, ಪಾವಗಡದ ಪಾಳೆಯಪಟ್ಟುಗಳು, ಗುಬ್ಬಿ–ಹೊಸಹಳ್ಳಿಯ ಪಾಳೆಯಗಾರರು, ಯಲ್ಲಪ್ಪನಾಯಕನ ಹೊಸಕೋಟೆ ನಾಯಕರು, ಹಾಗಲವಾಡಿ ನಾಯಕರು, ಮಿಡಿಗೇಶಿ ನಾಯಕರು, ಹೊಳವನಹಳ್ಳಿ ಪಾಳೆಯಗಾರರು, ನಿಡಗಲ್ಲು ಚೋಳರು, ಶಿರಾದ ಸಾಮಂತರು ಹಾಗೂ ನೆರೆಯ ಮಾಗಡಿ ಪಾಳೆಯಗಾರರು, ಹರತಿಯ ಪಾಳೆಯಗಾರರು, ಕುಂದಿರ್ಪಿಯ ಪಾಳೆಯಗಾರರು, ಅವತಿನಾಡಿನ ಪಾಳೆಯಗಾರರು ನಂತರದಲ್ಲಿ ಮೈಸೂರಿನ ಅರಸರು, ಹೈದರಾಲಿ, ಟಿಪ್ಪುಸುಲ್ತಾನ್, ಕಮೀಷನರ್‌ಗಳು, ದಿವಾನರು ತುಮಕೂರು ಪ್ರದೇಶದಲ್ಲಿ ಆಳ್ವಿಕೆಯನ್ನು ನಡೆಸಿದರು.

### ೩.೩ ಸ್ಥಳನಾಮಗಳು

ಬಹುತೇಕ ಸ್ಥಳನಾಮಗಳು ಚಾರಿತ್ರಿಕ ಮಹತ್ವದ ಹಿನ್ನೆಲೆಯನ್ನು ಹೊಂದಿರುತ್ತವೆ. ಇದಕ್ಕೆ ಪೂರಕವಾದ ಮಾಹಿತಿಯನ್ನು ಒದಗಿಸುವ ಲಿಖಿತ ಆಕರಗಳ ಕೊರತೆಯು

ಸ್ಥಳನಾಮಗಳನ್ನು ಕುರಿತು ಅಧ್ಯಯನ ಮಾಡಲು ತೊಡಕನ್ನು ಉಂಟು ಮಾಡಿದೆ. ಇಂತಹ ಸಂದರ್ಭದಲ್ಲಿ ಮೌಖಿಕ ಆಕರಗಳು ಅತೀ ಅಗತ್ಯವಾಗುತ್ತವೆ. ತುಮಕೂರು ಜಿಲ್ಲೆಯ ವ್ಯಾಪ್ತಿಯಲ್ಲಿರುವ ಸ್ಥಳನಾಮಗಳಿಗೆ ಸಂಬಂಧಿಸಿದಂತೆ ಬಹುತೇಕ ಲಭ್ಯ ಮೌಖಿಕ ಆಕರಗಳು ಲಿಖಿತ ಆಕರಗಳಿಗೆ ಪೂರಕವಾದ ಮಾಹಿತಿಯನ್ನು ಒದಗಿಸುತ್ತವೆ. ಕೆಲವೊಮ್ಮೆ ಲಿಖಿತ ಆಕರಗಳು ಒದಗಿಸುವ ಮಾಹಿತಿಗಿಂತ ಮೌಖಿಕ ಆಕರಗಳು ಒಳಗೊಂಡಿರುವ ಅಂಶಗಳು ಭಿನ್ನವಾಗಿ ಕಂಡುಬರುತ್ತವೆ.

ಇಲ್ಲಿನ ಸ್ಥಳನಾಮಗಳು ಚಾರಿತ್ರಿಕ, ಪ್ರಾಕೃತಿಕ, ಜನಾಂಗೀಯ, ಮತೀಯ, ಬುಡಕಟ್ಟು, ಘಟನೀಯ, ಹಿನ್ನೆಲೆಯಲ್ಲಿ ಕಂಡುಬರುತ್ತವೆ. ಇವುಗಳು ಹಾಸ್ಯನಾಮಗಳು, ಪುರಾತನ ನಾಮಗಳು, ಭಾವನಾಮಗಳ ಸ್ವರೂಪದಲ್ಲಿರುತ್ತವೆ. ಪ್ರಾಣಿವಾಚಕ, ವ್ಯಕ್ತಿವಾಚಕ, ಸಸ್ಯವಾಚಕ, ಲೋಹವಾಚಕಗಳಾಗಿ ಸ್ಥಳನಾಮಗಳು ರಚಿತವಾಗಿವೆ.

ತುಮಕೂರು ಜಿಲ್ಲೆಯಲ್ಲಿ ಹತ್ತು ಕಂದಾಯ ತಾಲೂಕುಗಳು, ಐವತ್ತು ಹೋಬಳಿ ಕೇಂದ್ರಗಳು, ಮುನ್ನೂರ ಇಪ್ಪತ್ತೊಂದು ಗ್ರಾಮ ಪಂಚಾಯಿತಿಗಳು, ೨೬೧೫ ಕಂದಾಯ ಗ್ರಾಮಗಳಿವೆ.[೧೬] ಈ ಅಧ್ಯಯನದಲ್ಲಿ ಚಾರಿತ್ರಿಕ ಮತ್ತು ಸಾಂಸ್ಕೃತಿಕವಾಗಿ ಮಹತ್ವವಾಗಿರುವ ಸ್ಥಳಗಳ ಹೆಸರನ್ನು ಮಾತ್ರ ಮೌಖಿಕ ಆಕರಗಳ ಮೂಲಕ ಅಧ್ಯಯನ ಮಾಡಲಾಗಿದೆ.

**ಅರಳುಗುಪ್ಪೆ** : ತಿಪಟೂರು ತಾಲೂಕಿನಲ್ಲಿರುವ 'ಅರಳುಗುಪ್ಪೆ' ಗ್ರಾಮಕ್ಕೆ 'ಅಲರಿಗುಪ್ಪೆ' ಎಂಬ ಶಾಸನಾತ್ಮಕ ಉಲ್ಲೇಖಗಳಿವೆ. ಅರಳುಗುಪ್ಪೆಯಲ್ಲಿ ಗಂಗರ ಕಾಲದ ಕಲ್ಲೇಶ್ವರ ದೇವಾಲಯ ಮತ್ತು ಹೊಯ್ಸಳರ ಚೆನ್ನಕೇಶವ ದೇವಾಲಯಗಳಿವೆ. ಕರಾವಳಿಯಲ್ಲಿ ಶಂಭುಕಲ್ಕುಡ ಮತ್ತು ಭೀರಕಲ್ಕುಡ ಪಾಡ್ದಾನಗಳ ಸ್ವರೂಪದಂತೆಯೇ ಇಲ್ಲಿಯೂ ಡಕಣಾಚಾರಿ ಮತ್ತು ಜಕಣಾಚಾರಿಯರಿಗೆ ಸಂಬಂಧಿಸಿದ ಐತಿಹ್ಯಗಳಿವೆ. ಇದರಂತೆ ಶಿಲ್ಪಕಲೆಯನ್ನು ಅರಳಿಸಿದ ಜಕಣಚಾರಿಯ ಕೈ ಊನವಾಗಿದ್ದು, ಕೈದಾಳದ ಚೆನ್ನಕೇಶವ ಶಿಲ್ಪವನ್ನು ಕೆತ್ತಿದ್ದರಿಂದ ಈತನ ಕೈ ಮತ್ತೆ ಮೊಳೆಯಿತು. 'ಶಿಲ್ಪಕಲೆಯು ಹೂವಿನಂತೆ ಅರಳಿದೆ' ಎಂಬುದಾಗಿ ಈ ಊರಿಗೆ ಅರಳುಗುಪ್ಪೆ ಎಂಬ ಹೆಸರು ಬಂದಿದೆ.

**ಅಳಿಲುಘಟ್ಟ** : ಗುಬ್ಬಿ ತಾಲೂಕಿನಲ್ಲಿರುವ ಈ ಗ್ರಾಮಕ್ಕೆ 'ಅಳಿಲುಘಟ್ಟ' ಎಂಬ ಹೆಸರು ಬಂದ ಬಗ್ಗೆ ಐತಿಹ್ಯವಿದೆ. ಇಲ್ಲಿನ ಅರಳೀಮರವೊಂದರ ಕೆಳಗೆ ರಾಮಾಯಣವನ್ನು ಪ್ರವಚನ ಮಾಡುತ್ತಿದ್ದರು. ಈ ಅರಳೀಮರದ ಮೇಲೆ ಇದ್ದ ಅಳಿಲು ದಿನಂಪ್ರತಿ ಪ್ರವಚನವನ್ನು ಕೇಳುತ್ತಿತ್ತು. ಒಂದು ದಿನ ಪ್ರವಚನದ ಮುಕ್ತಾಯದ ನಂತರ ತಾನು ಪಾವನವಾದೆ ಎಂಬ ಭಾವದಿಂದ ದೈವಸಾನಿಧ್ಯ ಪಡೆಯಿತಂತೆ. ಅದ್ದರಿಂದಲೇ ಈ ಊರಿಗೆ ಅಳಿಲುಘಟ್ಟ ಎಂಬ ಹೆಸರು ಪ್ರಾಪ್ತವಾಗಿದೆ ಎಂಬುದು ಸ್ಥಳೀಯರ ಅಭಿಪ್ರಾಯವಾಗಿದೆ. ಪೆನುಗೊಂಡೆ ರಾಜ್ಯದ ಆನೆಬಿದ್ದಸರಿಯ ಶಿವಗಂಗಾ ಸ್ಥಳದ ಬಿದರೆ ಸೀಮೆಯೊಳಗೆ ಅಳಿಲುಘಟ್ಟ ಎಂಬ ಗ್ರಾಮವಿದ್ದ

ಬಗ್ಗೆ ಕ್ರಿ.ಶ ೧೫೭೩ ರ ಶಾಸನವು[೧೮] ಉಲ್ಲೇಖಿಸಿದೆ. ಅಳಿಲುಘಟ್ಟ ಸ್ಥಳನಾಮದ ಕುರಿತ ಐತಿಹ್ಯದಲ್ಲಿ ಪುರಾಣೀಕೃತ ಹೇಳಿಕೆಗಳಿದ್ದರೂ ಸಹ ಅದೇ ಹೆಸರು ಇಂದಿಗೂ ರೂಢಿಯಲ್ಲಿದೆ.

**ಕಂದಿಕೆರೆ** : ಚಿಕ್ಕನಾಯಕನಹಳ್ಳಿ ತಾಲೂಕು ಕೇಂದ್ರದಿಂದ ಸುಮಾರು ೧೪ ಕಿ. ಮೀ. ದೂರದಲ್ಲಿರುವ ಕಂದಿಕೆರೆಯಲ್ಲಿ ಹಲವು ಐತಿಹಾಸಿಕ ಅವಶೇಷಗಳಿವೆ. ಇಲ್ಲಿ ಗೋಪಾಲಕೃಷ್ಣ ದೇವಾಲಯ, ಶಾಂತಿನಾಥ ಬಸದಿ, ಕೋಟೆಯ ಅವಶೇಷಗಳು, ಬುರುಜುಗಳು, ಕಂದಕಗಳ ಅವಶೇಷಗಳಿವೆ. ಕೋಟೆಯ ಪಕ್ಕದಲ್ಲಿ ಕಂದಕವೂ, ಅದಕ್ಕೆ ಹೊಂದಿಕೊಂಡಂತೆ ಕೆರೆಯು ಇದ್ದಿದ್ದರಿಂದ ಈ ಸ್ಥಳಕ್ಕೆ ಕಂದಕ+ಕೆರೆ= ಕಂದಕಕೆರೆ> ಕಂದಿಕೆರೆ ಎಂಬ ಹೆಸರು ಬಂದಿದೆ.

**ಕಡಬ** : ಶಿಂಷಾ ನದಿಯ ಬಲದಂಡೆಯ ಮೇಲೆ ಕದಂಬ ಋಷಿಯ ಆಶ್ರಮವಿದ್ದುದರಿಂದ ಈ ಸ್ಥಳಕ್ಕೆ ಕದಂಬ> ಕದಬ> ಕಡಬ ಎಂಬ ಹೆಸರು ಬಂದಿದೆ ಎಂಬ ಪ್ರತೀತಿಯಿದೆ. ಶ್ರೀರಾಮಚಂದ್ರನು ಲಂಕೆಯಿಂದ ಹಿಂತಿರುಗುವಾಗ ಆತನ ಪರಿವಾರವನ್ನು ಸತ್ಕರಿಸಿ ಅವರಿಗೆ ಸ್ನಾನಪಾನಾದಿಗಳಿಗೆ ಅನುಕೂಲವಾಗಲೆಂದು ನದಿಯನ್ನು ಕೆರೆಯನ್ನಾಗಿ ಮಾರ್ಪಡಿಸಲಾಯಿತು ಎಂದು ತಿಳಿದು ಬರುತ್ತದೆ.

**ಕ್ಯಾತಸಂದ್ರ** : ಸಿದ್ಧಗಂಗಾ ಮಠದ ಕೇಂದ್ರ ತಾಣ ಕ್ಯಾತಸಂದ್ರ. ಹೇರಂಬ ಕವಿಯ ಸಿದ್ಧಲಿಂಗೇಶ್ವರ ಸಾಂಗತ್ಯದಲ್ಲಿ ಉಲ್ಲೇಖಿಸಿರುವಂತೆ ಇಲ್ಲಿನ ಸಮುದ್ರದೋಪಾದಿಯಲ್ಲಿ ಇರುವ ಕೆರೆಯನ್ನು ಕೇತ ಎಂಬುವವನು ನಿರ್ಮಿಸಿದನು. ಇದರಿಂದ ಕೇತನಕೆರೆಯು ಕೇತಸಮುದ್ರ> ಕೇತಸಂದ್ರ> ಕ್ಯಾತಸಂದ್ರ ಆಗಿದೆ. ಈ ಸ್ಥಳವನ್ನು ಶಾಸನಗಳಲ್ಲಿ ಕೈತಶರಧಿ, ಕೇತಸಮುದ್ರ, ಖ್ಯಾತಿಸಂದರ, ಕೇತಸಂದ್ರ ಎಂದೂ ಉಲ್ಲೇಖಿಸಲಾಗಿದೆ.

**ಕುಣಿಗಲ್** : ಕುಣಿಗಲ್ ಪಟ್ಟಣವು ತಾಲೂಕು ಕೇಂದ್ರವಾಗಿದೆ. "ಕುಣಿ" ಎಂದರೆ ಬಾಗಿದ, ವಕ್ರವಾದ, ನೇರವಾಗಿಲ್ಲದ ಎಂಬ ಅರ್ಥಗಳಿವೆ. ಕಿಟಲ್ ನಿಘಂಟಿನಲ್ಲಿ ಅರ್ಥೈಸಿರುವಂತೆ having curved, Dancing, ಎಂಬ ಅರ್ಥವಿದೆ. ಈ ಪ್ರದೇಶದಲ್ಲಿ ವಕ್ರವಾದ ಕಲ್ಲುಗಳೂ ಹೇರಳವಾಗಿ ಲಭ್ಯವಿರುವುದರಿಂದ ಈ ಸ್ಥಳಕ್ಕೆ ಪ್ರಾಕೃತಿಕ ನೆಲೆಯಲ್ಲಿ ಕುಣಿಕಲ್ಲು ನಾಡು ಎಂಬ ಹೆಸರು ಬಂದಿದೆ ಎಂಬುದಾಗಿ ಹೇಳಲಾಗುತ್ತದೆ. ಕುಣಿಗಲ್ ಗ್ರಾಮ ಮತ್ತು ಕೆರೆಯ ಕುರಿತ ಜನಪದಗೀತೆಯೂ ಇದೆ.

ಮೂಡಲ್ ಕುಣಿಗಲ್ ಕೆರೆ ನೋಡೋರ್‌ಗೊಂದ್ ಐಭೋಗ
ಮೂಡಿ ಬರ್ತಾನೆ ಚಂದಿರಾಮ। ತಾನಂದಾನೊ
ಮೂಡಿ ಬರ್ತಾನೆ ಚಂದಿರಾಮ॥
ಅಂತಂತ್ ಪ್ರೀತೀಲ್ ನೋಡೋರ್ಗೆ ಕುಣಿಗಲ್ ಕೆರೆ
ಸಂತೆ ಹಾದೀಲಿ ಕಲ್ಲುಕಟ್ಟೆ। ತಾನಂದನೋ
ಸಂತೇ ಹಾದೀಲಿ ಕಲ್ಲುಕಟ್ಟೆ॥
ಬಾಳೆಯ ಹಣ್ಣಿನಂತೆ ಬಾಗಿ ಕುಣಿಗಲ್ ಕೆರೆ

ಬಾವ ತಂದಾನೆ ಬಣ್ಣದ ಸೀರೆ। ತಾನಂದನೋ
ಬಾವ ತಂದಾನೆ ಬಣ್ಣದ ಸೀರೆ॥
ನಿಂಬೆಯ ಹಣ್ಣಿನಂತೆ ತುಂಬಿದ ಕುಣಿಗಲ್ ಕೆರೆ
ಅಂದ ನೋಡಲು ಶಿವ ಬಂದ್ರು। ತಾನಂದನೋ
ಅಂದ ನೋಡಲು ಶಿವ ಬಂದ್ರು॥
ಹಾಕಾಕ್ಕಂದ್ ಹಾರುಗೋಲು ನೂಕಾಕ್ಕೊಂದ್ ಊರುಗೋಲು
ಬೊಬ್ಬೆ ಹೊಡೆದಾವೆ ಬಾಳೆಮೀನು। ತಾನಂದನೋ
ಬೊಬ್ಬೆ ಹೊಡೆದಾವೆ ಬಾಳೆಮೀನು॥

ಸದರಿ ಮೌಖಿಕ ಆಕರಕ್ಕೆ ಪೂರಕವಾಗಿ ಕುಣಿಗಲ್‌ನ ಸ್ಥಳನಾಮದ ಕುರಿತು ಐತಿಹ್ಯವೊಂದು ಇದೆ. ಅದರಂತೆ ಇಲ್ಲಿನ ಪ್ರಾಕೃತಿಕ ಸೌಂದರ್ಯಕ್ಕೆ ಬೆರಗಾದ ಶಿವಪಾರ್ವತಿಯರು ಇಲ್ಲಿ ನರ್ತನವನ್ನು ಮಾಡಿದ್ದರು. ಹಾಗಾಗಿ ಈ ಗ್ರಾಮಕ್ಕೆ "ನರ್ತನಪುರಿ" ಎಂಬ ಹೆಸರಿದೆ.

ಕುಣಿಗಲ್ ಸ್ಥಳವನ್ನು ಕುರಿತು ಎಫಿಗ್ರಾಫಿಯಾ ಕರ್ನಾಟಿಕ ಸಂಪುಟ ೧೨ ಕುಣಿಗಲ್ ಶಾಸನ ಸಂಖ್ಯೆ ೨, ೮, ೧೬. ಎಫಿಗ್ರಾಫಿಯಾ ಕರ್ನಾಟಿಕ ಸಂಪುಟ ೯ (ಹೊಸದು) ಪ್ರಸ್ತಾವನೆ ಪುಟ ೧೨. ಎಫಿಗ್ರಾಫಿಯಾ ಕರ್ನಾಟಿಕ ಸಂಪುಟ ೫ ಅರಕಲಗೂಡು ಶಾಸನ ಸಂಖ್ಯೆ ೪೧ ಗಳಲ್ಲಿ ಕುಣಿಗಲ್ ಸ್ಥಳವನ್ನು ಕುಣಿಕಲ್ಲುಹಳ್ಳಿ> ಕುಣಿಂಗಿಲು> ಕುಣಿಂಗಲು> ಕುಣಿಗಲ್ಲು ಎಂದು ಉಲ್ಲೇಖಿಸಲಾಗಿದೆ. ಇದು ಆರಂಭದಲ್ಲಿ ದಡಿಗವಾಡಿಯ ಆಡಳಿತ ವ್ಯಾಪ್ತಿಯಲ್ಲಿತ್ತು. ನಂತರದ ಕಾಲದಲ್ಲಿ ಕುಣಿಗಲ್ ೫೦೦ ಎಂಬ ಪ್ರತ್ಯೇಕ ಆಡಳಿತ ಕೇಂದ್ರವಾಗಿತ್ತು.

ಇತಿಹಾಸ ದರ್ಶನ ಸಂಪುಟ ೧೯ ರಲ್ಲಿ ಉಲ್ಲೇಖಿಸಿರುವ ಶಾಸನದ ಪ್ರಕಾರ ಕ್ರಿ.ಶ ೭೨೬ ರಲ್ಲಿ ಗಂಗವಾಡಿ ೯೬೦೦೦ ದ ಆಡಳಿತದ ವಿಭಾಗವನ್ನು ಗಂಗರ ಶ್ರೀಪುರುಷನು ಆಳುತ್ತಿದ್ದನು. ಈತನ ಕಾಲದಲ್ಲಿ ಇಲ್ಲಿನ ನಾಗಿನಿ ನದಿಯ ಪಾತ್ರದಲ್ಲಿ ಕೆರೆಯನ್ನು ಸ್ಥಾಪಿಸಲಾಯಿತು. ಇದರಿಂದಾಗಿ ಇಲ್ಲಿ ಜನವಸತಿಯು ನೆಲೆಗೊಂಡು ಈ ಗ್ರಾಮವು ಸ್ಥಾಪನೆಯಾಗಿದೆ ಎಂದು ಭಾವಿಸಬಹುದಾಗಿದೆ. ನಂತರದ ಕಾಲದಲ್ಲಿ ಕುಣಿಗಲ್ ಕೋಟೆಯನ್ನು ನಿರ್ಮಿಸಲಾಯಿತು. ಹೊಯ್ಸಳರ ಅರಸನಾದ ಮೂರನೇ ಬಲ್ಲಾಳನ ಕಾಲದಲ್ಲಿ ಇದು ನಾಶಗೊಂಡಿದ್ದು ದುರಸ್ತಿ ಮಾಡಲಾಗಿದೆ. ಮಣ್ಣೆಯ ಪಶ್ಚಿಮಕ್ಕಿದ್ದ ಭೂತಶಿಲಾ ಗ್ರಾಮದ ಬಸದಿಗೆ ಇಡಗೂರು ವಿಷಯದಲ್ಲಿನ ಜಾಲಮಂಗಲ ಗ್ರಾಮವನ್ನು ದಾನವಾಗಿ ನೀಡಲಾಗಿದೆ. ಈ ದಾನವನ್ನು ಚಾಲುಕ್ಯ ವಂಶದ ಬಾಲವರ್ಮನ ಮೊಮ್ಮಗ ವಿಮಲಾದಿತ್ಯನಿಗೆ ಹಿಡಿದಿದ್ದ ಶನಿಕಾಟದ ವಿಮುಕ್ತಿಗಾಗಿ ನೀಡಲಾಗಿತ್ತು. ಈ ವಿಮಲಾದಿತ್ಯನು ಕುಣಿಗಲ್‌ನ್ನು ಆಳುತ್ತಿದ್ದನು.[೧೯]

**ಕುರಂಕೋಟೆ** : ಸಿದ್ಧರಬೆಟ್ಟದ ದಕ್ಷಿಣಕ್ಕೆ ಕುರಂಕೋಟೆ ಎಂಬ ಊರು ಅಸ್ತಿತ್ವದಲ್ಲಿದೆ. ಇದು ಕುರಂಗರಾಯನ ಆಡಳಿತ ಕೇಂದ್ರವಾಗಿತ್ತು. ಇದು ಕುರಂಗರಾಯನ ಕಾರ್ಯ ಕ್ಷೇತ್ರವಾದ ಸಿದ್ಧರಗಿರಿಯ ದಕ್ಷಿಣದಲ್ಲಿದ್ದು ಕುರಂಗರಾಜನಿಂದಲೇ ಈ ಊರಿಗೆ ಕುರಂಕೋಟೆ ಎಂಬ

ಹೆಸರು ಬಂದಿದೆ ಎಂಬುದು ಜನರ ಅಭಿಪ್ರಾಯವಾಗಿದೆ. ಬಹುತೇಕವಾಗಿ ಗ್ರಾಮಗಳ ದಕ್ಷಿಣದ ದಿಕ್ಕಿನಲ್ಲಿಯೇ ತಲಸಮುದಾಯದ ಜನರು ವಾಸಿಸುತ್ತಿದ್ದರು. ಎಂಬುದಾಗಿ ಡಾ. ಚಿನ್ನಸ್ವಾಮಿ ಸೋಸಲೆರವರು ಅಭಿಪ್ರಾಯಪಟ್ಟಿದ್ದಾರೆ.[೨೦] ಇದಕ್ಕೆ ಪೂರಕವಾಗಿಯೇ ತಲಸಮುದಾಯದ ಕುರಂಗರಾಜನು ಆಳ್ವಿಕೆಯನ್ನು ನಡೆಸಿದ್ದ ಕುರಂಕೋಟೆಯು ಸಿದ್ಧರಬೆಟ್ಟದ ದಕ್ಷಿಣದಲ್ಲಿದೆ.

**ಕೈದಾಳ** : ಕೈದಾಳ ಗ್ರಾಮವು ತುಮಕೂರು ನಗರದ ದಕ್ಷಿಣಕ್ಕಿದೆ. ಕೈದಾಳವನ್ನು ಹಿಂದೆ 'ಕ್ರೀಡಾಪುರ' ಎಂದು ಕರೆಯಲಾಗುತ್ತಿತ್ತು. ಕ್ರಿ.ಶ ೭೨೫ ರಿಂದ ೭೮೮ ರವರೆಗೆ ಗಂಗರ ಶ್ರೀಪುರುಷನ ಆಳ್ವಿಕೆಯ ಕಾಲದಲ್ಲಿ ತುಮಕೂರು ಅಥವಾ ಟುಮಕಿಹಳ್ಳಿ ಗ್ರಾಮವು ಕ್ರೀಡಾಪುರದ ಭಾಗವಾಗಿತ್ತು. ಶ್ರೀಪುರುಷನ ಮಗ ಶಿವಮಾರನಿಗೂ ರಾಷ್ಟ್ರಕೂಟರ ಮುಮ್ಮಡಿ ಗೋವಿಂದನಿಗೂ ನಡೆದ ಹಿರೇಗುಂಡಗಲ್ ಬಳಿಯ ಕಾಳಗದಲ್ಲಿ ಶಿವಮಾರನು ಸೋತು ಹೋಗಿದ್ದರಿಂದ ಗಂಗವಾಡಿಯ ಕ್ರೀಡಾಪುರವು ರಾಷ್ಟ್ರಕೂಟರ ವಶವಾಯಿತು. ಗಂಗವಾಡಿಯಲ್ಲಿ ಚಾಕಿರಾಜ ಎಂಬುವವನು ರಾಜಪ್ರತಿನಿಧಿಯಾಗಿ ಆಳುತ್ತಿದ್ದನು.

ಇಲ್ಲಿರುವ ಚೆನ್ನಕೇಶವ ದೇವಾಲಯವನ್ನು ಶಿಲ್ಪಿಯಾದ ಜಕಣಾಚಾರಿಯು ಕ್ರಿ. ಶ. ೧೧೫೦ ರಲ್ಲಿ ನಿರ್ಮಿಸಿದನೆಂಬ ಐತಿಹ್ಯವಿದೆ. ಈ ಐತಿಹ್ಯದಂತೆ ಈತನ ಕೈ ಊನವಾಗಿತ್ತು. ಶ್ರೀಚೆನ್ನಕೇಶವ ವಿಗ್ರಹವನ್ನು ಕೆತ್ತಿದ್ದರಿಂದ ಈತನಿಗೆ ಕೈ ಮೂಡಿತು. ಅದಕ್ಕಾಗಿ ಈ ಊರಿಗೆ ಕೈದಾಳ ಎಂಬ ಹೆಸರು ಬಂದಿತೆಂದು ಹೇಳಲಾಗುತ್ತದೆ.[೨೧] ಊನಗೊಂಡಿದ್ದ ಕೈ ಮತ್ತೆ ಮೂಡಿತು ಎಂಬ ಹೇಳಿಕೆಯು ಐತಿಹ್ಯವಾಗಿದ್ದು ವಾಸ್ತವದಲ್ಲಿ ಮಾನವ ದೇಹದ ಅಂಗಾಂಗಗಳು ಮತ್ತೆ ಮೂಡುವುದು ಅಸಾಧ್ಯವಾದದ್ದು. ಈ ಹಿನ್ನೆಲೆಯಲ್ಲಿ ಕಲ್ಲನ್ನು ಕಡೆದು ವಿಗ್ರಹವನ್ನು ರೂಪಿಸುವಂತಹ ಶ್ರಮದಾಯಕ ಕೆಲಸವನ್ನು ಪವಿತ್ರವಾದುದು ಎಂಬುದಾಗಿ ಬಿಂಬಿಸಲಾಗಿದೆ. ಈ ಮೂಲಕ ಶ್ರಮದಾಯಕ ಕೆಲಸಗಳನ್ನು ಶ್ರದ್ಧೆಯಿಂದ ಹಾಗೂ ಉಚಿತವಾಗಿ ಮಾಡುವಂತೆ ಪ್ರೇರೇಪಿಸುವ ಯಜಮಾನಿಕೆಯ ಹುನ್ನಾರವನ್ನು ಈ ಐತಿಹ್ಯದಲ್ಲಿ ಗುರುತಿಸಬಹುದಾಗಿದೆ. ಊಳಿಗದ ಈ ಹಿನ್ನೆಲೆಯಲ್ಲಿ ಕೈದಾಳ ಗ್ರಾಮನಾಮವನ್ನು ವಿಶ್ಲೇಷಿಸಲಾಗಿದೆ.

**ಕೊರಟಗೆರೆ** : ಕೊರಟಗೆರೆ ಪಟ್ಟಣವು ಜಿಲ್ಲಾ ಕೇಂದ್ರವಾದ ತುಮಕೂರಿನಿಂದ ರಾಜ್ಯಹೆದ್ದಾರಿ ೩೩ ರಲ್ಲಿ ಸುಮಾರು ೨೫ ಕಿ. ಮೀ. ದೂರದಲ್ಲಿದೆ. ಪ್ರಸ್ತುತ ಇದು ತಾಲೂಕು ಕೇಂದ್ರವಾಗಿದೆ. ಹೊಳವನಹಳ್ಳಿಯ ಪಾಳೆಯಗಾರರ ಅಧೀನಕ್ಕೆ ಒಳಪಟ್ಟಿದ್ದ ಈ ಸ್ಥಳವು ಕ್ರಿ.ಶ. ೧೯೨೮ ರಲ್ಲಿ ತಾಲೂಕು ಕೇಂದ್ರವಾಗಿ ರೂಪುಗೊಂಡಿತು.[೨೨]

ಕೊರಟಗೆರೆ ಸ್ಥಳನಾಮದ ಬಗ್ಗೆ ಹಲವು ಅಭಿಪ್ರಾಯಗಳಿವೆ ಅವುಗಳೆಂದರೆ, ಇಲ್ಲಿನ ನಿಸರ್ಗದತ್ತವಾದ ಬೆಟ್ಟವು ತೆಂಗಿನ ಚಿಪ್ಪು ಬೋರಲಾಗಿ ಇಟ್ಟಂತೆ ಕಾಣುವುದರಿಂದ (ಕರಟ ಎಂದರೆ ತೆಂಗಿನಚಿಪ್ಪು + ಗಿರಿ ಎಂದರೆ ಬೆಟ್ಟ ಎಂದರ್ಥ) ಕರಟಗಿರಿ> ಕರಟಕೆರೆ>

ಕೊರಟಕೆರೆ> ಕೊರಟಗೆರೆ ಎಂದು ಹೆಸರಾಗಿದೆ ಎಂಬುದು ವಿದ್ವಾಂಸರ ಅಭಿಪ್ರಾಯವಾಗಿದೆ.[೨೩] ಕೊರಟಗೆರೆಯ ಅರಸನಾಗಿದ್ದ ರಣಬೈರೇಗೌಡನು ಮಾಗಡಿಯ ಕೆಂಪೇಗೌಡನ (೧೬೫೮-೧೬೭೮) ಸಮಕಾಲೀನನೂ, ಸಂಬಂಧಿಯೂ ಆಗಿದ್ದನು. ಈತನು ಕೊರಟಗೆರೆ ಗ್ರಾಮದ ಸ್ಥಾಪಕನಾಗಿದ್ದಾನೆ. ಹಾಗೂ ಬೆಟ್ಟದ ಮೇಲೆ ಕೋಟೆಯನ್ನು ಮತ್ತು ಬೆಟ್ಟದ ತಪ್ಪಲಿನಲ್ಲಿ ಕೆರೆಯನ್ನು ಕಟ್ಟಿಸಿದ್ದನು. ಇಂದಿಗೂ ಇಲ್ಲಿ ನಾಣ್ಯಗಳನ್ನು ಅಚ್ಚು ಹಾಕಿಸುತ್ತಿದ್ದರು ಎನ್ನಲಾದ ಸ್ಥಳವನ್ನು ಸ್ಥಳೀಯರು ತೋರಿಸುತ್ತಾರೆ. ಇಂದಿಗೂ ಕೊರಟಗೆರೆಯ ಪಟ್ಟಣದಲ್ಲಿ ಕೋಟೆ ಎಂಬ ಬಡಾವಣೆಯಿದೆ. ಹಾಗಾಗಿ ಕೋಟೆಕೆರೆ> ಕೊರಟಗೆರೆ ಆಗಿದೆ ಎಂಬುದು ಕೆಲವರ ಅಭಿಪ್ರಾಯವಾಗಿದೆ. ಇಂದು ಊರ ಹೊರಗೆ ಇರುವ ನ್ಯಾಯಾಲಯ ಸಂಕೀರ್ಣವು ಹಿಂದೆ ಪಟ್ಟಣದ ಮಧ್ಯಭಾಗದಲ್ಲಿ ಇದ್ದುದರಿಂದ ಕೋರ್ಟ್+ಕೇರಿ ಎಂದಾಗಿದೆ.[೨೪] ಎಂಬುದು ಕೆಲವರ ಅಭಿಪ್ರಾಯವಾಗಿದೆ. ಆದರೆ ಇಲ್ಲಿಯ ಕೋರ್ಟನ್ನು ಕೆಲವು ವರ್ಷಗಳ ಹಿಂದೆ ಸ್ಥಳಾಂತರಿಸಲಾಗಿದೆ. ಕೋರ್ಟ್ ಸ್ಥಾಪನೆಯಾಗುವುದಕ್ಕೆ ಮೊದಲೇ ಕೊರಟಗೆರೆ ಎಂದು ಕರೆಯಲಾಗುತ್ತಿದ್ದುದರ ಬಗ್ಗೆ ಶಾಸನೋಕ್ತ ದಾಖಲೆಗಳಿವೆ.[೨೫] ಆದುದರಿಂದ ಕೋರ್ಟ್+ಕೇರಿ= ಕೊರಟಗೆರೆ, ಎಂಬ ಹೆಸರು ಪ್ರಾಪ್ತವಾಗಿರುವ ವಾದವನ್ನು ಒಪ್ಪಲಾಗದು.

ಮೌಖಿಕ ಆಕರಗಳ ಹಿನ್ನೆಲೆಯಲ್ಲಿ ಇಲ್ಲಿನ ಸ್ಥಳನಾಮವನ್ನು ಹೀಗೆ ನಿರ್ವಚಿಸಬಹುದಾಗಿದೆ. ಹೊಳವನಹಳ್ಳಿ/ಕೊರಟಗೆರೆಯ ಸ್ಥಾನಿಕ ಪ್ರಭುಗಳು ನಿರ್ಮಿಸಿರುವ ಕೋಟೆಯಿರುವ ಇಲ್ಲಿನ ಬೆಟ್ಟದ ತಪ್ಪಲಿನಲ್ಲಿಯೇ ಕೆರೆಯಿದೆ. ಇದನ್ನು ಗೋಕುಲಕೆರೆ ಎಂದೂ, ಬೆಟ್ಟದ ಮೇಲೆ ನೆಲೆಗೊಳಿಸಿರುವ ಗಂಗಾಧರೇಶ್ವರ ದೇವಾಲಯದ ಕಾರಣ ಗಂಗಾಧರೇಶ್ವರ ಕೆರೆ ಎಂದೂ ಕರೆಯಲಾಗುತ್ತದೆ. ಇಲ್ಲಿನ ಕೆರೆಯ ಕೋಡಿಯಲ್ಲಿಯೇ ಗ್ರಾಮ ದೇವತೆಯಾದ ಮಾರಮ್ಮನ ಗದ್ದುಗೆ ಹಾಗೂ ಕಟ್ಟೆಗಣಪತಿ ದೇವಾಲಯಗಳಿವೆ. ಕೆರೆಯ ಏರಿಗೆ ಹೊಂದಿಕೊಂಡಂತೆ ಪೂರ್ವಕ್ಕೆ ಮೂಡ್ಲಪಣ್ಣೆ ಎಂಬ ಗ್ರಾಮವಿದೆ. ಈ ಪ್ರದೇಶದ ಆಸುಪಾಸಿನಲ್ಲಿ ಕೊರಚ ಜನಾಂಗವು ವಾಸಿಸುತ್ತಿದ್ದು ಇವರ ಪ್ರಮುಖ ವೃತ್ತಿಯು ಕತ್ತಾಳೆ ಮತ್ತು ತೆಂಗಿನ ನಾರಿನಿಂದ ಹಗ್ಗ, ಈಚಲು, ಬಿದಿರು ಮತ್ತು ಉಗಣೆ ಬಳ್ಳಿಯಿಂದ ಮಂಕರಿ, ಹಾಗೂ ಈಚಲು ಗರಿಯಿಂದ ಚಾಪೆ ಅಲ್ಲದೇ ಅಲಂಕಾರಿಕ ವಸ್ತುಗಳನ್ನು ಮಾಡಿ, ಅವುಗಳನ್ನು ಮಾರುವ ಮೂಲಕ ಜೀವನ ಸಾಗಿಸುವುದಾಗಿದೆ. ಇವರು ಕೆರೆಯ ಪಕ್ಕದಲ್ಲಿಯೇ ನೆಲೆಸಿದ್ದರಿಂದ ಈ ಸ್ಥಳಕ್ಕೆ ಜನಾಂಗೀಯ ವಾಚಕವಾದ ಕೊರಚಕೆರೆ> ಕೊರಟಕೆರೆ> ಕೊರಟಗೆರೆ ಎಂಬ ಹೆಸರು ಬಂದಿದೆ ಎಂದು ಊಹಿಸುವುದು ಹೆಚ್ಚು ಸೂಕ್ತ.

**ಗುಬ್ಬಿ :** ಪ್ರಸ್ತುತ ತಾಲೂಕು ಕೇಂದ್ರವಾಗಿರುವ ಗುಬ್ಬಿ ಪಟ್ಟಣವು ರಾಷ್ಟ್ರೀಯ ಹೆದ್ದಾರಿ ೨೦೬ ರಲ್ಲಿ ತುಮಕೂರು ಜಿಲ್ಲಾ ಕೇಂದ್ರದಿಂದ ಸುಮಾರು ೨೦ ಕಿ.ಮೀ ದೂರದಲ್ಲಿದೆ. 'ಅಮರಗೊಂಡ' ಎಂಬುದು ಇದರ ಮೊದಲ ಹೆಸರು. ಗುಬ್ಬಿಯು ಪ್ರಸ್ತುತ ವೀರಶೈವ

ಧರ್ಮದ ಕೇಂದ್ರವಾಗಿದೆ. ಈ ಪಟ್ಟಣಕ್ಕೆ 'ಗುಬ್ಬಿ' ಎಂಬ ಹೆಸರು ಬಂದ ಬಗ್ಗೆ ಐತಿಹ್ಯವಿದೆ. ಇದರಂತೆ, ಇಲ್ಲಿನ ಮಲ್ಲಿಕಾರ್ಜುನ ದೇವಸ್ಥಾನದಲ್ಲಿ ಧಾರ್ಮಿಕ ಪ್ರವಚನಗಳು ನಡೆಯುತ್ತಿದ್ದವು. ಪ್ರವಚನ ನಡೆಯುತ್ತಿದ್ದ ಸ್ಥಳದ ಎದುರಿನ ಕಂಬದ ಮೇಲೆ ಪಕ್ಷಿಗಳಾದ ಎರಡು ಗುಬ್ಬಚ್ಚಿಗಳು ದಿನಂಪ್ರತಿಯೂ ಪ್ರವಚನವನ್ನು ಆಲಿಸುತ್ತಿದ್ದವು. ಪ್ರವಚನದ ಕೊನೆಯದಿನ ಪ್ರವಚನ ನೀಡುತ್ತಿದ್ದವರ (ಗುಬ್ಬಿ ಮಲ್ಲಣಾರ್ಯ) ಮುಂದೆ ಬಂದು ಮಡಿದವು. ದೇವಾಲಯದ ಆವರಣದಲ್ಲಿಯೇ ಅವುಗಳನ್ನು ಸಮಾಧಿ ಮಾಡಲಾಗಿದೆ. ಸಮಾಧಿಯ ಮೇಲೆ ಬಸವಣ್ಣನನ್ನು ಪ್ರತಿಷ್ಠಾಪಿಸಲಾಗಿದೆ. ಅದನ್ನು 'ಗುಬ್ಬಿಹಕ್ಕಿ ಬಸವಣ್ಣ' ಎಂದೇ ಕರೆಯಲಾಗುತ್ತದೆ.[೨೬]

ಅಟವೀಶ ಚನ್ನಬಸವೇಶ್ವರ ಸ್ವಾಮಿಗಳು ಇಲ್ಲಿ ದೇವಸ್ಥಾನಕ್ಕೆ ಪಾಪನಾಶಿನಿ ಎಂಬ ಕಲ್ಯಾಣಿಯನ್ನು ಮತ್ತು ಚಂದ್ರಮೌಳೀಶ್ವರ ಎಂಬ ಲಿಂಗವನ್ನು ಪ್ರತಿಷ್ಠಾಪಿಸಿದ್ದಾರೆ. ಗುಬ್ಬಿ ಗ್ರಾಮವು ಕಪಿಲಸಿದ್ಧ ಮಲ್ಲಿಕಾರ್ಜುನರಿಂದ ಮತ್ತು ಶ್ರೀರಾಮಚಂದ್ರನಿಂದ ಪೂಜೆಗೊಂಡ, ಅಮರ ಗೊಂಡಾಧೀಶ್ವರನಿಂದ ಶೋಭಿಸುವ ಮತ್ತು ಮಹಾಕವಿ ಮಲ್ಲಣಾರ್ಯರನ್ನು ಪಡೆದ ಮಲ್ಲೇಶ್ವರನ ಪುಣ್ಯಕ್ಷೇತ್ರವಾಗಿದೆ. ಎಂಬುದಾಗಿ ಗುಬ್ಬಿಯ ಸ್ಥಳ ಮಹಿಮೆಯನ್ನು ಕ್ರಿ. ಶ. ೧೮೯೬ ರ ಶಾಸನ[೨೭] ದಲ್ಲಿ ಉಲ್ಲೇಖಿಸಿದೆ. ಪ್ರಸ್ತುತ 'ಗುಬ್ಬಿ' ಮತ್ತು ಅದರ ಹಿಂದಿನ ಹೆಸರಾದ 'ಅಮರಗೊಂಡ' ಎಂಬ ಎರಡೂ ಹೆಸರುಗಳು ಶಾಸನೋಕ್ತವಾಗಿವೆ.

ಪ್ರಭುಸ್ವಾಮಿಗಳು 'ಗಣಭಾಷ್ಯ ರತ್ನಮಾಲಿಕೆ'ಯನ್ನು ಸಂಪಾದಿಸಿದ್ದು, ಈ ಕೃತಿಯಲ್ಲಿ (೧೯೪೮) ಶಿಲಾಶಾಸನದ ಸಮೇತ ಗುಬ್ಬಚ್ಚಿ ಬಸವಣ್ಣನ ವಿಗ್ರಹದ ಚಿತ್ರವನ್ನು ಪ್ರಕಟಿಸಿದ್ದರು. ಆದರೆ ಶಿಲಾಶಾಸನದ ಪಾಠವನ್ನು ನೀಡಿಲ್ಲ.[೨೮] ಇಂದು ಈ ಪಟ್ಟಣದಲ್ಲಿನ ಶಿಲಾಶಾಸನವಿರುವ ಭಾಗವು ಮಣ್ಣು, ಗಾರೆಯಿಂದ ಹೂತು ಹೋಗಿದ್ದು ಶಾಸನವು ಓದುವ ಸ್ಥಿತಿಯಲ್ಲಿಲ್ಲ.

**ಗೂಳೂರು :** ಗೂಳೂರು ಗ್ರಾಮವು ತುಮಕೂರು ಪಟ್ಟಣದ ದಕ್ಷಿಣ ದಿಕ್ಕಿನಲ್ಲಿದೆ. ಇದರ ಮೊದಲ ಹೆಸರು ವೃಷಭಪುರಿ. ಐತಿಹ್ಯದಂತೆ ಇಲ್ಲಿ ಬೃಹತ್ತಾದ ಕೊಳವಿತ್ತು. ಇಂದು ಅದರ ಅವಶೇಷವೂ ಕಂಡುಬರುವುದಿಲ್ಲ. ಅದ್ದರಿಂದ ಕೊಳ> ಗೊಳ> ಗುಳ+ಊರು = ಗೂಳೂರು ಆಗಿದೆ ಎಂಬ ಅಭಿಪ್ರಾಯವಿದೆ. ಇದು ಭೃಗು ಮಹರ್ಷಿಯ ತಪೋಭೂಮಿಯಾಗಿತ್ತು ಎಂಬ ಪ್ರತೀತಿಯಿದೆ. ಇಲ್ಲಿನ ಶಕ್ತಿವಿಶಿಷ್ಟಾದ್ವೈತದ ಧರ್ಮಪೀಠವಿದೆ. ಉಮಾಮಹೇಶ್ವರಿ, ಗಣಪತಿ ದೇವಾಲಯಗಳು ಖ್ಯಾತಿ ಹೊಂದಿವೆ. ಶೂನ್ಯ ಸಂಪಾದನೆಯನ್ನು ರಚಿಸಿದ ಸಿದ್ಧವೀರಣ್ಣೊಡೆಯರ ಮೂಲ ನೆಲೆಯು ಇದೇ ಗೂಳೂರು ಆಗಿದೆ.

**ಚಿಕ್ಕನಾಯಕನಹಳ್ಳಿ :** ಆಂಧ್ರ ಪ್ರದೇಶದ ತುಂಮಳ ಸಂಸ್ಥಾನದಲ್ಲಿ ವಿಜಯನಗರದ ಪ್ರಾದೇಶಿಕ ಹಂತದ ಅಧಿಕಾರಿಯಾಗಿದ್ದ ಎರಿಮಾದನಾಯಕನು ಹಿರಿಯೂರು, ಹೊಸದುರ್ಗ, ಹುಳಿಯೂರು ಮಾರ್ಗವಾಗಿ ಇಲ್ಲಿಗೆ ಬರುವಾಗ ತೀರ್ಥರಾಮೇಶ್ವರ ದೇವರಗುಡಿಯ

ಸಮೀಪದ ವನವಾಸದುರ್ಗದ ಭೂಮಿಯಲ್ಲಿ ದ್ರವ್ಯವು ಸಿಕ್ಕಿತು. ದ್ರವ್ಯದ ನೆರವಿನಿಂದ ರಾಜ್ಯವನ್ನು ಕಟ್ಟಿದನೆಂಬ ಐತಿಹ್ಯವಿದೆ.[೨೯]

ಚಿಕ್ಕನಾಯಕನಹಳ್ಳಿಯ ಪ್ರದೇಶಕ್ಕೆ ವಲಸೆ ಬಂದ ಎರಿಮಾದಿನಾಯಕನ ಮಗನಾದ ಸಾಲಿನಾಯಕನು (ಕ್ರಿ.ಶ ೧೫೫೪-೧೫೮೦) ವಿಜಯನಗರದ ಊಳಿಗಮಾನ್ಯ ವ್ಯವಸ್ಥೆಯ ಗರ್ಭದಿಂದ ಸಂಸ್ಥಾನವೊಂದನ್ನು ಸ್ಥಾಪಿಸಿದನು. ಎಂದು ಡಿ. ಎನ್. ಯೋಗೀಶ್ವರಪ್ಪನವರು ಅಭಿಪ್ರಾಯ ಪಟ್ಟಿದ್ದಾರೆ.[೩೦] ಈತನು ಆತನ ಸಹೋದರನಾಗಿದ್ದ ಚಿಕ್ಕನಾಯಕ ಎಂಬುವವನ ಹೆಸರಿನಲ್ಲಿ ಊರೊಂದನ್ನು ಸ್ಥಾಪಿಸಿದನು.[೩೧] ಇದು ಇಂದು ಚಿಕ್ಕನಾಯಕನಹಳ್ಳಿ ಎಂದು ಖ್ಯಾತವಾಗಿದೆ. ಅಲ್ಲದೇ ತುಮಕೂರು ಜಿಲ್ಲೆಯ ತಾಲೂಕು ಕೇಂದ್ರವಾಗಿದೆ. ಸಾಲಿನಾಯಕನು ಶ್ರೀಕೃಷ್ಣದೇವರಾಯನ ಸಮಕಾಲೀನನಾಗಿದ್ದನು. ವನವಾಸದುರ್ಗದ ಬಳಿ ಎರೆಕಟ್ಟೆ ಎಂಬ ಗ್ರಾಮವನ್ನು ಸ್ಥಾಪಿಸಿದ್ದನು. ಹಾಗೂ ಎರೆಕಟ್ಟೆಯನ್ನು ತನ್ನ ಆಡಳಿತ ಕೇಂದ್ರವನ್ನಾಗಿ ಮಾಡಿಕೊಂಡಿದ್ದನು ಎಂದು ತಿಳಿದು ಬರುತ್ತದೆ.

**ಚೆನ್ನರಾಯನದುರ್ಗ** : ಚೆನ್ನರಾಯನದುರ್ಗವು ಇಂದು ಕೊರಟಗೆರೆ ತಾಲೂಕಿನ ಹೋಬಳಿ ಕೇಂದ್ರವಾಗಿದೆ. ಮಧುಗಿರಿಯು ಮಹಾನಾಡಪ್ರಭುಗಳ ಆಡಳಿತ ವಿಭಾಗವಾಗಿತ್ತು. ೧೬೧೩-೧೬೧೪ ರ ಸಂದರ್ಭದಲ್ಲಿ ಚೆನ್ನರಾಯನದುರ್ಗದ ಕೋಟೆಯ ಕಾಮಗಾರಿ ನಡೆದಿತ್ತು.[೩೨] ಇಮ್ಮಡಿ ಚಿಕ್ಕಪ್ಪಭೂಪಾಲರ (೧೫೮೫-೧೬೨೦) ಮಗನಾದ ಚನ್ನಪ್ಪಗೌಡನು ಚೆನ್ನರಾಯನದುರ್ಗವನ್ನು ಆಳುತ್ತಿದ್ದನು.[೩೩] ಈತನ ಹೆಸರಿನ ಸ್ಮರಣಾರ್ಥವಾಗಿ ಈ ದುರ್ಗಕ್ಕೆ 'ಚೆನ್ನರಾಯನದುರ್ಗ' ಎಂದು ಹೆಸರಿಸಲಾಗಿದೆ.

ಮಧುಗಿರಿಯಲ್ಲಿ ಆಳ್ವಿಕೆಯನ್ನು ಮಾಡುತ್ತಿದ್ದ ಇಮ್ಮಡಿ ಚಿಕ್ಕಪ್ಪಭೂಪಾಲರಿಗೆ ತೋಟೇಂದ್ರ, ಚನ್ನಪ್ಪಗೌಡ, ಸಪ್ಪೇಂದ್ರ, ಮೂವರು ಮಕ್ಕಳಿದ್ದರು. ಹರುವೇಕೋಟೆ ಕದನದಲ್ಲಿ ತೋಟೇಂದ್ರನು ಮರಣ ಹೊಂದಿದನು. ಚನ್ನಪ್ಪಗೌಡನು ಅಕಾಲ ಮರಣಕ್ಕೆ ತುತ್ತಾದನು. ನಂತರದ ಕಾಲದಲ್ಲಿ ಚಿಕ್ಕಭೂಪಾಲರ ಉತ್ತರಾಧಿಕಾರಿಯಾಗಿ ಸಪ್ಪೇಂದ್ರನು ಆಳಿದನು. ಈತನನ್ನು ಮುಮ್ಮಡಿ ಚಿಕ್ಕಪ್ಪಗೌಡ ಎಂದು ಸಹ ಕರೆಯಲಾಗುತ್ತದೆ.

**ಚೇಳೂರು** : ಚೋಳರ ಆಳ್ವಿಕೆಗೆ ಒಳಪಟ್ಟಿದ್ದ ಕಾರಣ ಈ ಸ್ಥಳಕ್ಕೆ ಚೋಳೂರು> ಚೋಳನೂರು> ಚೇಳೂರು ಎಂಬ ಹೆಸರು ಬಂದಿದೆ. ಇದು ಸಾಂಸ್ಕೃತಿಕ ವೀರನಾದ ಜುಂಜಪ್ಪನ ಕಾರ್ಯಕ್ಷೇತ್ರವಾಗಿದೆ. ಇಲ್ಲಿನ ಪಾಳೆಯಗಾರ ರಂಗಪ್ಪನಾಯಕ ಎಂಬುವನು ಜುಂಜಪ್ಪನ 'ಬಡಮ್ಯೆಲ' ಎಂಬ ಹೋರಿಯನ್ನು ಸೆರೆಹಿಡಿದಿದ್ದನು. ಆಗ ಜುಂಜಪ್ಪನು ತನ್ನ ಹೋರಿ ಬಡಮ್ಯೆಲನಿಗೆ ಈ ಕೆಳಕಂಡಂತೆ ಹೇಳುತ್ತಾನೆ.

ಕಲ್ಲು ಕಂಬ ಮುರಿದು ಕಬ್ಬಿಣದ ಸರಿವರಿದು
ಮುದ್ದು ಚೇಳೂರ ತೆನೆಮುರಿದು। ಬಡಮ್ಯೆಲ
ಗೆದ್ದು ಬಾರೋ ಕಾಲ ಗಳಿಗಿಗೋ॥

ಇಲ್ಲಿರುವ ಕಲ್ಲುಬಾವಿಯು ನೀರಿನಿಂದ ತುಂಬಿ, ಕಲ್ಲುಕೋಳಿ ಕೂಗಿ, ಮರಳು ಬಸವಣ್ಣ ಉಡ್ರಿಕೆ ಹಾಕಿದರೆ ಕಲಿಯುಗ ಅಂತ್ಯವಾಗುವುದೆಂಬ ನಂಬಿಕೆಯಿದೆ.

**ಜೆಟ್ಟಿ ಅಗ್ರಹಾರ** : ಅಗ್ರಹಾರ ಎಂದರೆ ಬ್ರಾಹ್ಮಣ ಗುರುಗಳಿಗೆ ದಾನವಾಗಿ ನೀಡಿದ ಊರು ಎಂಬ ಅರ್ಥವಿದೆ. ಕಾವಲ್ಲಮ್ಮರವರು ಬ್ರಾಹ್ಮಣಜಟ್ಟಿಯೋರ್ವನಿಗೆ ದಾನವಾಗಿ ನೀಡಿದ್ದ ಈ ಊರಿಗೆ 'ಜೆಟ್ಟಿ ಅಗ್ರಹಾರ' ಎಂಬ ಹೆಸರು ಬಂದಿದೆ ಎಂದು ತಿಳಿಸಿದ್ದಾರೆ.[೩೪] ಆದರೆ ಜೆಟ್ಟಿ ಅಗ್ರಹಾರ ಗ್ರಾಮದ ಸ್ಥಳೀಯ ಚರಿತ್ರೆಯು ಈ ಹೇಳಿಕೆಗೆ ಭಿನ್ನವಾಗಿರುವುದನ್ನು ಗುರುತಿಸಲಾಗಿದೆ.

ಜೆಟ್ಟಿಅಗ್ರಹಾರ ಗ್ರಾಮನಾಮವು ಎರಡು ಪದಗಳಿಂದ ಕೂಡಿದೆ. ಜೆಟ್ಟಿ+ಅಗ್ರಹಾರ ಇಲ್ಲಿ ಜೆಟ್ಟಿ[೩೫] ಎಂಬುದು ದೃಡಕಯಯವಾದ ಮೈಕಟ್ಟನ್ನು ಹೊಂದಿರುವ ವ್ಯಕ್ತಿ /ಕುಸ್ತಿಪಟುವನ್ನು ಸೂಚಿಸಿದೆ. ನವರಾತ್ರಿಯ ಉತ್ಸವದಲ್ಲಿ 'ಮಲ್ಲಯುದ್ಧ'ದ ಪ್ರದರ್ಶನವು ಮುಖ್ಯವಾದ ಆಚರಣೆಯಾಗಿತ್ತು. ಮದ್ದಗಿರಿ ಮಹಾನಾಡಿನ ರಾಜಧಾನಿಯಲ್ಲಿ ಅಂಗಸಾಧನೆಯಲ್ಲಿ ನಿರತರಾದ ಕಡುಗಲಿಗಳ ಗರಡಿಗಳಿದ್ದವು. ಜಟ್ಟಿಗಳಿಗೇ ಪ್ರತ್ಯೇಕವಾದ ಕೇರಿಗಳಿದ್ದವೆಂದು ಸಾಂಗತ್ಯ ಕೃತಿ ಇಮ್ಮಡಿ ಚಿಕ್ಕಭೂಪಾಲ ಸಾಂಗತ್ಯದಲ್ಲಿ ತಿಳಿಸಿದೆ. ಮಧುಗಿರಿ ಮಹಾನಾಡಪ್ರಭು ಜಟ್ಟಿಕಾಳಗದಲ್ಲಿ ಗೆದ್ದ ಮಲ್ಲರಿಗೆ ಹಾರ-ತುರಾಯಿಗಳನ್ನು ನೀಡಿ ಗೌರವಿಸುತ್ತಿದ್ದನು. ಕೆಲವೊಮ್ಮೆ ರಾಜರೂ ಸಹ ಸ್ವತಃ ಮಲ್ಲಯುದ್ಧ ಪ್ರವೀಣರಾಗಿರುತ್ತಿದ್ದರು. ಮದ್ದಗಿರಿ ಮಹಾನಾಡಿನ ರಾಜನಿಗೆ 'ಒಡ್ಡಗೆರೆಮಲ್ಲ' ಎಂಬ ಬಿರುದು ಇತ್ತು. ಮಲ್ಲಯುದ್ಧನಿರತ ವಿವಿಧ ಭಂಗಿಗಳ ಶಿಲ್ಪಗಳು ಮಧುಗಿರಿ ವೆಂಕಟರಮಣ ದೇವಾಲಯದ ಭಿತ್ತಿಯ ಮೇಲಿದೆ. ಹೀಗಾಗಿ ಈ ಪ್ರದೇಶದಲ್ಲಿ ಜಟ್ಟಿಗಳು ವಾಸಿಸುತ್ತಿದ್ದರೆಂದು ತಿಳಿಯಬಹುದಾಗಿದೆ.

ಜೆಟ್ಟಿಅಗ್ರಹಾರ ಗ್ರಾಮದಲ್ಲಿ ಜಟ್ಟಿಗಳು ಅಂಗಸಾಧನೆ ಮಾಡುತ್ತಿದ್ದ ಗರಡಿಮನೆಯ ಅವಶೇಷವಿದೆ. ಭೂಮಾಪನ ಇಲಾಖೆಯ ದಾಖಲೆಗಳಿಂದ ಸದರಿ ಗ್ರಾಮದ ಬಹುತೇಕ ಜಮೀನು ಜೆಟ್ಟಿಜನಾಂಗದವರಿಗೆ ಸೇರಿತ್ತೆಂಬುದನ್ನು ತಿಳಿಯಬಹುದಾಗಿದೆ. ಸದರಿ ಗ್ರಾಮದ ಧಾರ್ಮಿಕ ಆಚರಣೆಗಳ ಮುಖ್ಯಸ್ಥರನ್ನು ಗುರಿಕಾರ ಎಂದು ಕರೆಯಲಾಗುತ್ತದೆ. ಇಲ್ಲಿ ಜೆಟ್ಟಿ ಜನಾಂಗದವರೇ ಗುರಿಕಾರರಾಗಿದ್ದಾರೆ. ಪ್ರಸ್ತುತ ಇವರು ಬ್ರಾಹ್ಮಣೇತರರಾಗಿದ್ದಾರೆ.[೩೬] ಜೆಟ್ಟಿ ಎಂಬುದು ವೃತ್ತಿಯಾಧಾರಿತ ಜಾತಿಯಗಿದೆ. ಇಂದಿಗೂ ಸದರಿ ಜೆಟ್ಟಿಅಗ್ರಹಾರದ ವ್ಯಾಪ್ತಿಯಲ್ಲಿ ಬರುವ ಜೆಟ್ಟಿಅಗ್ರಹಾರ, ಥರಟಿ, ಕಲ್ಲುಗುಟ್ಟರಹಳ್ಳಿ, ದಮಗಲಯ್ಯನಪಾಳ್ಯ, ನವಿಲಕುರಿಕೆ ಗ್ರಾಮಗಳಲ್ಲಿ ಧಾರ್ಮಿಕ ಆಚರಣೆಗಳಿಗೆ ಸಂಬಂಧಿಸಿದಂತೆ ತೆರಿಗೆ ವಸೂಲಿ ಮಾಡುವವರು ಜೆಟ್ಟಿ ಕುಟುಂಬದವರೇ ಆಗಿದ್ದಾರೆ.

ದಸರಾ ಉತ್ಸವದಲ್ಲಿ ನಡೆಯುವ ಕುಸ್ತಿ ಕಾಳಗದಲ್ಲಿ ಹೋರಾಡಿದ್ದರ ಸ್ಮರಣಾರ್ಥವಾಗಿ ಮೈಸೂರು ಮಹಾರಾಜರಿಂದ ರಾಮಾಜೆಟ್ಟಿರವರು ಹಲವಾರು ಪುರಸ್ಕಾರಗಳನ್ನು ಪಡೆದಿದ್ದಾರೆ. ಈ ನೆಲೆಯಲ್ಲಿ ಇವರ ಹಿರಿಯರು ಮೈಸೂರಿನ ಒಡೆಯರು ಅಥವಾ

ಹೊಳವನಹಳ್ಳಿ-ಕೊರಟಗೆರೆಯ ಪಾಳೆಯಗಾರರಿಂದ ಈ ಗ್ರಾಮವನ್ನು ದಾನವಾಗಿ ಪಡೆದಿದ್ದರೆಂದು ತೀರ್ಮಾನಿಸಬಹದಾಗಿದೆ. ಕುಸ್ತಿಯಲ್ಲಿ ವಿಜೇತರಾಗುವ ಮೂಲಕ ನಾಡಿನ ಘನತೆಯನ್ನು ಹೆಚ್ಚಿಸಿದ್ದರಿಂದ ಜೆಟ್ಟಿಗಳಿಗೆ ಈ ಗ್ರಾಮವನ್ನು ತಮ್ಮ ಜೀವನೋಪಾಯಕ್ಕಾಗಿ ಸ್ಥಳೀಯ ಪಾಳೆಯಗಾರರಿಂದ ದಾನವಾಗಿ ಪಡೆದಿರುವ ಸಾಧ್ಯತೆಯಿದೆ. ಹೀಗಾಗಿ ಈ ಗ್ರಾಮವು "ಅಗ್ರಹಾರ"ವಾಗಿ ನಂತರ ಅದೇ ನಾಮಧೇಯವನ್ನು ಉಳಿಸಿಕೊಂಡಿರಬೇಕೆಂದು ತಿಳಿಯುವುದು ಸೂಕ್ತ.

ಮುಮ್ಮಡಿ ಚಿಕ್ಕಪ್ಪಗೌಡರ ಪತ್ನಿ ಅಜಂಮ[೩೭] (ಅಮ್ಮಾಜಮ್ಮ) ನವರು ಜೆಟ್ಟಿಅಗ್ರಹಾರ ಗ್ರಾಮವನ್ನು ನಿರ್ಮಿಸಿ ಊರಿನ ದಕ್ಷಿಣಕ್ಕೆ ಕೆರೆಯನ್ನು ನಿಮಿಸಿದ್ದರು ಎಂದು ತಿಳಿದು ಬರುತ್ತದೆ. ಆದ್ದರಿಂದಲೇ ಈ ಊರಿಗೆ ಅರಸೀಪುರ (ರಾಣಿ=ಅರಸಿ+ಪುರ=ಊರು, ಗ್ರಾಮ) ಎಂಬ ಹೆಸರು ಅಸ್ತಿತ್ವದಲ್ಲಿತ್ತು ಎಂಬುದಾಗಿ ಮೌಖಿಕ ಆಕರಗಳ ಹಿನ್ನೆಲೆಯಲ್ಲಿ ತಿಳಿಯಲಾಗಿದೆ. ಆದ್ದರಿಂದಲೇ ಮಧುಗಿರಿಯ ಶಾಸನ ಸಂಖ್ಯೆ ೩೧ ರಲ್ಲಿ ಜೆಟ್ಟಿಅಗ್ರಹಾರ ಗ್ರಾಮವನ್ನು ಅರಶೀಪುರದ ಉಪಗ್ರಾಮವೆಂದು ಕರೆಯಲಾಗಿದೆ. ಹಾಗೂ ಇಲ್ಲಿ ಉತ್ತಮ ಗುಣಮಟ್ಟದ ಅತೀ ಹೆಚ್ಚು ಪ್ರಮಾಣದ ಬಜೆಯನ್ನು ಬೆಳೆಯಲಾಗುತ್ತಿದ್ದ ಕಾರಣ ಈ ಊರನ್ನು 'ಬಜೆಅಗ್ರಹಾರ' ಎಂದೂ ಕರೆಯಲಾಗುತ್ತದೆ.

**ತಾಡಿ :** ತಾಡಿ ಎಂಬ ಗ್ರಾಮವು ಮಧುಗಿರಿ ತಾಲೂಕಿನ ಇಟಕದಿಬ್ಬನಹಳ್ಳಿಯ ಹತ್ತಿರವಿದೆ. ಇದು ಈ ಪ್ರದೇಶದ ಸಾಂಸ್ಕೃತಿಕ ವೀರನಾದ ಈರುಗ್ಯಾತರಾಯನ ಉಪ ರಾಜಧಾನಿಯಾಗಿತ್ತು. ಮಧುಗಿರಿ ತಾಲೂಕಿನ ತಾಡಿ ಗ್ರಾಮ ಮತ್ತು ಕೊರಟಗೆರೆ ತಾಲೂಕಿನ ವಡ್ಡಗೆರೆ ಗ್ರಾಮಗಳಲ್ಲಿ ಈರುನಾಗಮ್ಮನ ದೈವಸ್ಥಾನಗಳಿವೆ. ನಾಗಮ್ಮ ಈರುಗ್ಯಾತರಾಯನ ಸೊಸೆ ಅಂದರೆ ಆತನ ಮಗ ನಾಗಣ್ಣನ ಪತ್ನಿಯಾಗಿದ್ದಾಳೆ. ಜನಪದರು ಭಕ್ತಿ-ಭಾವಗಳಿಂದ ಈಕೆಯನ್ನು ಆರಾಧಿಸುತ್ತಾರೆ.

ತಾಡಿ ಅಂಬೋದು ಪಾಡಿಗೆ ಕಟ್ಟಿಸಿದ
ದೊಡ್ಡ ಮಾನ್ಯವರ ಮಗನೀರ। ಗ್ಯಾತಯ್ಯ
ದೊಡ್ಡ ಮಾನ್ಯೇವ ಪಡೆದಾನು॥
ತಾಡಿ ವೊಡ್ಡೀಗೆರೆ ಕೂಡಿದ ವಲೆ ಮೇರೆ
ವೂಡ್ಯಾನೆ ಈರಣ್ಣ। ರಥಗಾಳು
ತಾನೊಡ್ಡೀಗೆರೆಗೆ ನಡೆದಾನೆ॥[೩೮]

ತಾಡಿ ಎಂಬ ಗ್ರಾಮವು ಜನಪದ ಕಾವ್ಯವು ಸೃಷ್ಟಿಯಾದ ಕಾಲದಲ್ಲಿಯೇ ಅಸ್ಥಿತ್ವದಲ್ಲಿತ್ತು ಎಂಬುದಾಗಿ ತಿಳಿಯಬಹುದಾಗಿದೆ. ಇದರಂತೆ ತಾಡಮ್ಮ ಎಂದು ಸಹ ಕರೆಯಲಾಗುವ ಈರುನಾಗಮ್ಮಳ ಜನನಕ್ಕೂ ಮೊದಲೇ ತಾಡಿಗ್ರಾಮವು ಅಸ್ತಿತ್ವದಲ್ಲಿತ್ತೆಂದು ತಿಳಿದು ಬರುತ್ತದೆ.

**ತಿಪಟೂರು :** ತಿಪಟೂರು ಇಂದು ತಾಲೂಕು ಕೇಂದ್ರವಾಗಿದೆ. ಇಲ್ಲಿನ ಕಲ್ಲೇಶ್ವರ ದೇವಾಲಯದಲ್ಲಿ ನೊಳಂಬ ಅರಸನು ಮೂರು ಲಿಂಗವುಳ್ಳ ದೇವಾಲಯವನ್ನು

ನಿರ್ಮಿಸಿದನು.[೫೯] ಹಾಗಾಗಿ ತ್ರಿ(ಲಿಂಗ) ಕಟ್ಟಿದ(ನಿರ್ಮಿಸಿದ) ಊರು (ತ್ರಿ+ಪಟ್ಟದ+ಊರು) ತ್ರಿಪಟೂರು> ತಿಪ್ಪಟೂರು> ತಿಪಟೂರು ಎಂದಾಗಿದೆ ಎಂಬ ಅಭಿಪ್ರಾಯವಿದೆ.

**ತುಮಕೂರು** : ಕ್ರಿ.ಶ ೯೨೫ ರಿಂದ ೯೬೦ ರವರೆಗೆ ಈ ಪ್ರದೇಶವನ್ನು ಆಳಿದ ಗಂಗ ದೊರೆ ಇಮ್ಮಡಿ ಬೂತುಗನ ಕಾಲದ ಸೋಮೇಶ್ವರ ದೇವಾಲಯದ ದಾನಶಾಸನವು ಇದು (ತುಮ್ಮೆಗೂರು) ತುಮಕೂರನ್ನು ಉಲ್ಲೇಖಿಸಿರುವ ಮೊದಲ ಶಾಸನವಾಗಿದೆ.[೬೦] ಕೈದಾಳವು ಕ್ರಿ.ಶ ೮ನೇ ಶತಮಾನದಲ್ಲಿ ಜಲದುರ್ಗವಾಗಿದ್ದ ಕ್ರೀಡಾಪುರ ಮಹಾನಾಡಿನ ಕೇಂದ್ರಸ್ಥಾನವಾಗಿತ್ತು. ಉತ್ತರದ ಕಡೆಯಿಂದ ಶತೃಗಳು ಧಾಳಿ ಮಾಡಬಹುದಾದ ಕಾರಣದಿಂದ ದಂಡನ್ನು ಎಚ್ಚರಿಸಲು ಶತೃಗಳು ಆಗಮಿಸುವ ವೇಳೆಗೆ ಟುಮಕಿ/ತಮಟೆ ಎಂಬ ಹೆಸರಿನ ವಾದ್ಯದಿಂದ ಟಾಂ ಟಾಂ ಶಬ್ಧ ಮಾಡಲಾಗುತ್ತಿತ್ತು. ಟುಮಕಿಯನ್ನು ಬಾರಿಸುವ ಕಾವಲುಗಾರರು ಈ ದಿನ್ನೆಯ ಮೇಲೆಯೇ ಠಾಣ್ಯವನ್ನು ಮಾಡಿಕೊಂಡು ತನ್ನ ಪರಿವಾರ ಸಮೇತ ವಾಸವಾಗಿದ್ದರು. ಟುಮಕಿ ಬಡಿಯುತ್ತಿದ್ದ ಕಾಯಕದವನಿಗೆ ಈ ಊರನ್ನು ಬಹುಮಾನವಾಗಿ ನೀಡಲಾಗಿತ್ತು.[೬೧] ಈ ಕಾರಣದಿಂದಾಗಿಯೇ ಟುಮಕಿ+ಊರು, ಟುಂಕಿಯೂರು, ಟುಂಕೂರ್, ತುಮಕೂರು ಎಂಬುದಾಗಿ ಕರೆಯಲಾಗಿದೆ.

ತುಮಕೂರಿನ ಪ್ರದೇಶದಲ್ಲಿ ಪರಶಿವನ ಆರಾಧನೆಗೆ ಅತೀ ಶ್ರೇಷ್ಠವೆಂದು ಹೇಳಲಾಗುವ ಶಿವನ ಪಾದದಾಕಾರದಲ್ಲಿಯೇ ಇರುವ ಲ್ಯೂಕಾಸ್ ಆಸ್ಪೆರ (Leucas aspera) ಎಂದು ವೈಜ್ಞಾನಿಕ ಭಾಷೆಯಲ್ಲಿ ಕರೆಯಲಾಗುವ ತುಂಬೆ ಹೂವಿನ ಗಿಡಗಳು ಹೇರಳವಾಗಿ ಬೆಳೆಯುತ್ತಿದ್ದವು.[೬೨] ಈ ಕಾರಣದಿಂದಾಗಿ ಈ ಪ್ರದೇಶವನ್ನು ಶಾಸನಗಳಲ್ಲಿ ತುಮ್ಮೆಂಬೂರು> ತುಂಬೆಗೂರು> ತುಮ್ಮೆಗೂರು> ತುಮಕೂರು ಎಂದು ಉಲ್ಲೇಖಿಸಲಾಗಿದೆ.

ತುಮಕೂರು ಪ್ರದೇಶದಲ್ಲಿ ಹೇರಳವಾಗಿ ಬೆಳೆಯುತ್ತಿದ್ದ ತುಂಬೆಹೂ ಗಿಡಗಳ ಕಾರಣದಿಂದಾಗಿಯೇ ಈ ಸ್ಥಳಕ್ಕೆ 'ತುಮಕೂರು' ಎಂಬ ಸಸ್ಯವಾಚಕ ಸ್ಥಳನಾಮವು ಬಂದಿದೆ ಎಂಬುದಾಗಿ ತಿಳಿಯುವ ಪ್ರಯತ್ನವನ್ನು ಮಾಡಲಾಗಿದೆ. ಇದೇ ರೀತಿಯ ಸ್ಥಳನಾಮಗಳಾದ ತುರುವೇಕೆರೆಯ 'ತುಂಬೆಪುರ' ಕೊರಟಗೆರೆಯ 'ತುಂಬೆವಾಡಿ /ತುಂಬೋಡಿ /ತುಂಬಾಡಿ ಎಂಬ ಗ್ರಾಮಗಳಿವೆ. ಶ್ರೀಎಡೆಯೂರು ಸಿದ್ಧಲಿಂಗೇಶ್ವರರು ತುಮಕೂರು ಪಟ್ಟಣಕ್ಕೆ ಆಗಮಿಸಿದ್ದಾಗ 'ತುಂಬೆಹೂವಿನ ಪವಾಡ' ವನ್ನು ಮಾಡಿದ್ದರೆಂದು ಉಲ್ಲೇಖಿಸಲಾಗಿದೆ.[೬೩] ಇದಕ್ಕೆ ಪೂರಕವಾಗಿ ಸ್ಥಳೀಯ ಮೌಖಿಕ ಆಕರಗಳಲ್ಲಿಯೂ ತುಂಬೆಹೂವಿನ ಪ್ರಸ್ತಾಪವಿದೆ.[೬೪] ಈ ಹಿನ್ನೆಲೆಯಲ್ಲಿ ಈ ಸ್ಥಳನಾಮವು ಸಸ್ಯವಾಚಕ ಸ್ಥಳನಾಮ ವಾಗಿರಬೇಕೆಂದು ಭಾವಿಸಿದ್ದು ತುಂಬೆಊರು> ತುಮ್ಬೆಊರು> ತುಮ್ಮೆಂಬೂರು> ತುಂಬೆಗೂರು> ತುಮ್ಮೆಗೂರು> ತುಮಕೂರು ಆಗಿರಬಹುದೆಂದು ತಿಳಿಯಲಾಗಿದೆ.

**ತುರುವೇಕೆರೆ** : ತುರುವೇಕೆರೆ ಪಟ್ಟಣವು ಕ್ರಿ.ಶ ೧೯೩೮ ರಿಂದ ತಾಲೂಕು ಕೇಂದ್ರವಾಗಿದೆ. 'ನೃಸಿಂಹಪುರ' ಎಂಬುದು ಇದರ ಮೊದಲ ಹೆಸರಾಗಿದೆ. ಹೊಯ್ಸಳ ಮೂರನೇ ನರಸಿಂಹನ

ದಂಡನಾಯಕ ಸೋಮಣ್ಣನು ಇಲ್ಲಿ ೯೬ ವಿಭಾಗಗಳನ್ನು ಒಳಗೊಂಡ ಸರ್ವಜ್ಞ ಶ್ರೀವಿಜಯ ನರಸಿಂಹಪುರ ಎಂಬ ಅಗ್ರಹಾರವನ್ನು ನಿರ್ಮಿಸಿದ್ದನು. ಇದು ಅಸಂದಿ ನಾಡಿನಲ್ಲಿತ್ತು. ಇಲ್ಲಿನ ಕೆರೆಯಲ್ಲಿ ತುರುಗಳು ಮೇಯುತ್ತಿದ್ದ ಕಾರಣದಿಂದಾಗಿ ತುರುಗಳ+ಕೆರೆ >ತುರುವಕೆರೆ >ತುರುವೇಕೆರೆ ಎಂದಾಗಿದೆ[೪೫] ಎಂಬ ಅಭಿಪ್ರಾಯವಿದೆ.

**ದಾಳವಟ್ಟ** : ಮಧುಗಿರಿ ತಾಲೂಕಿನ ದಾಳವಟ್ಟದಲ್ಲಿ ಲಕ್ಷ್ಮಿ ನರಸಿಂಹಸ್ವಾಮಿ ದೇವಾಲಯವಿದೆ. ಈ ದೇವಾಲಯ ಹಾಗೂ ಈ ಗ್ರಾಮದ ಸ್ಥಳನಾಮವನ್ನು ಕುರಿತ ಐತಿಹ್ಯವಿದೆ. ಅದರಂತೆ ಇಲ್ಲಿದ್ದ ದಳಮಹರ್ಷಿ ಎಂಬ ಮುನಿಯೊಬ್ಬರ ಶ್ರದ್ಧಾ ಭಕ್ತಿಯಿಂದ ಸಂತೃಪ್ತನಾದ ನರಸಿಂಹಸ್ವಾಮಿಯ ಉದ್ಭವ ಶಿಲೆಯು ಇಲ್ಲಿತ್ತು. ಈ ಶಿಲೆಗೆ ಮುನಿಯು ಪೂಜೆ ಪುರಸ್ಕಾರಗಳನ್ನು ಮಾಡುತ್ತಿದ್ದರು. ಈ ಶಿಲೆಯ ಪಕ್ಕದಲ್ಲಿಯೇ ವಟವೃಕ್ಷ (ಆಲದಮರ) ವೊಂದು ಬೆಳೆದಿತ್ತು. ದಳಮಹರ್ಷಿ ಮತ್ತು ವಟವೃಕ್ಷದ ಕಾರಣ ಈ ನೆಲೆಗೆ ದಳವಟ> ದಳವಟ್ಟ> ದಾಳವಟ್ಟ ಎಂಬ ಹೆಸರು ಪ್ರಾಪ್ತವಾಗಿದೆ. ದಳಮಹರ್ಷಿಯ ಸಾವಿನ ನಂತರ ಪಾಳುಬಿದ್ದಿದ್ದ ಉದ್ಭವ ಶಿಲೆಗೆ ಈ ಮಾರ್ಗವಾಗಿ ಹಿಂದೂಪುರಕ್ಕೆ ಸಾಗುತ್ತಿದ್ದ ವ್ಯಾಪಾರಿಗಳು ದೇಗುಲವೊಂದನ್ನು ನಿರ್ಮಿಸಲಾಗಿದ್ದು, ಇಂದಿಗೂ ಈ ಪ್ರದೇಶದಲ್ಲಿ ಜನಪ್ರಿಯವಾಗಿದೆ.

**ದೇವರಾಯನದುರ್ಗ** : ದೇವರಾಯನದುರ್ಗವನ್ನು ಕರಿಗಿರಿದುರ್ಗ,[೪೬] ಜಟಕನದರ್ಗ,[೪೭] ಪ್ರೌಡದೇವರಾಯದುರ್ಗ, ಚಿಕ್ಕದೇವರಾಯದುರ್ಗ,[೪೮] ಆನೆಬಿಜ್ಜರಿದುರ್ಗ, ಆನೆಬಿದ್ದಜರಿ, ಆನಬಿದ್ದಸರಿ, ಆನೆಬಿದ್ದಸರಿನಾಡು, ಆನೆಯಸೇಸೆ, ಆನೆಬಿದ್ದಜರಿಸ್ಥಲ, ಆನೆಬಿದ್ದಜರಿಸ್ಥಾನ ಎಂದೆಲ್ಲಾ ಶಾಸನಗಳಲ್ಲಿ ಉಲ್ಲೇಖಿಸಲಾಗಿದೆ.

ಸ್ಥಳಪುರಾಣವು ಪ್ರಸ್ತಾಪಿಸಿರುವಂತೆ : ದೇವಲೋಕದಲ್ಲಿ ಒಮ್ಮೆ ದೇವದತ್ತ ಮತ್ತು ಧನಂಜಯ ಎಂಬ ಗಂಧರ್ವರು ಗಾಯನ ನಿರತರಾಗಿದ್ದರು. ಭೃಗುಮುನಿಗಳಿಗೆ ಇವರ ಗಾಯನವು ಹಿತವಾಗಿರಲಿಲ್ಲದ ಕಾರಣ ಸಂಗೀತದ ಜ್ಞಾನವನ್ನು ಅರಿಯುವಂತೆ ಗಂಧರ್ವರೀರ್ವರಿಗೆ ತಿಳಿಸಿದರು. ಇದರಿಂದ ಬೇಸತ್ತ ಗಂಧರ್ವರು ಭೃಗು ಮುನಿಗಳನ್ನು ಅಪಮಾನಗೊಳಿಸಿದರು. ಇದರಿಂದ ಭೃಗುಮುನಿಗಳು ಗಂಧರ್ವರಾದ ದೇವಧತ್ತನು ಆನೆಯಾಗಿಯೂ ಮತ್ತು ಧನಂಜಯನು ಬೆಟ್ಟವಾಗಿಯೂ ಭೂಲೋಕದಲ್ಲಿ ಜನಿಸುವಂತೆ ಶಾಪ ನೀಡಿದರೆಂದೂ, ಬಂಡೆಯನ್ನೇರುತ್ತಿದ್ದ ದೇವದತ್ತನೆಂಬ ಆನೆಯು ಜಾರಿಬಿದ್ದು ಸಾಯುವ ಮೂಲಕ ಶಾಪವಿಮುಕ್ತಿ ಪಡೆದನು ಎಂಬ ಪ್ರತೀತಿಯಿದೆ. ಆದ್ದರಿಂದ ಈ ಸ್ಥಳವನ್ನು '<u>ಕರಿಗಿರಿ</u>' ಎಂತಲು ಕರೆಯಲಾಗಿದೆ ಎಂದು ಪ್ರಸ್ತಾಪಿಸಿದೆ.[೪೯] ವೈಷ್ಣವ ಧಾರ್ಮಿಕ ಕ್ಷೇತ್ರವಾಗಿರುವ ಇದು ಗಿರಿದುರ್ಗವಾಗಿದೆ. ಪೂರ್ವದಿಂದ ನೋಡಿದರೆ ಕರಿ ಅಥವಾ ಗಜಾಕಾರವಾಗಿ, ಪಶ್ಚಿಮದಿಂದ ಸಿಂಹಾಕಾರವಾಗಿ, ಉತ್ತರ ದಿಕ್ಕಿನಿಂದ ಗರುಡಾಕಾರವಾಗಿ ಕಾಣುತ್ತದೆ ಎಂಬುದು ಜನರ ಭಾವನೆಯಾಗಿದೆ.

ಲಿಖಿತ ದಾಖಲೆಗಳಲ್ಲಿ ಉಲ್ಲೇಖಿಸಿರುವಂತೆ : ಎಫಿಗ್ರಾಫಿಯಾ ಕರ್ನಾಟಿಕ ಸಂಪುಟ ೨೪ ೨೦೦೯ ಪುಟ LX, ತುಮಕೂರು ಶಾಸನ ಸಂಖ್ಯೆ ೧೨ ಶಕ ೧೩೪೮, ತುಮಕೂರು ಶಾಸನ ಸಂಖ್ಯೆ ೩೪ ಕಾಲ ಶಕ ೧೪೯೩, ತುಮಕೂರು ಶಾಸನ ಸಂಖ್ಯೆ ೩೭ ಶಕ ೧೪೮೨, ತುಮಕೂರು ಶಾಸನ ಸಂಖ್ಯೆ ೪೧, ತುಮಕೂರು ಶಾಸನ ಸಂಖ್ಯೆ ೪೨ ಶಕ ೧೪೫೩, ತುಮಕೂರು ಶಾಸನ ಸಂಖ್ಯೆ ೪೩, ತುಮಕೂರು ಶಾಸನ ಸಂಖ್ಯೆ ೪೬ ಶಕ ೧೩೦೯ ಈ ಎಲ್ಲ ಶಾಸನಗಳಲ್ಲಿ ದೇವರಾಯನದುರ್ಗದ ಇತರ ಸ್ಥಳನಾಮಗಳನ್ನು ಉಲ್ಲೇಖಿಸಲಾಗಿದೆ. ಆನೆಬಿದ್ದಸರಿಯ ದುರ್ಗವನ್ನು ಆಳುತ್ತಿದ್ದ ತೆರೆಯೂರು ತಿಮ್ಮಣ್ಣನಾಯಕನ ಮಗ ನರಸಪ್ಪ ಒಡೆಯನ ಕಾಲದಲ್ಲಿ ಶ್ರೀರಂಗಪಟ್ಟಣದಲ್ಲಿ ಚಿಕ್ಕದೇವರಾಜ ಒಡೆಯರು ಆಳುತ್ತಿರಲು ಬಿಳುಗುಲಿಯ ತಿಮ್ಮರಾಜಯ್ಯನವರ ಮಗ ತಿಮ್ಮಪ್ಪರಾಜಯ್ಯನವರು ಕರಿಗಿರಿ ನರಸಿಂಹಸ್ವಾಮಿಯ ಸಾನಿಧ್ಯದಲ್ಲಿ ಕಲ್ಯಾಣಲಕ್ಷ್ಮೀದೇವಿ ಅಮ್ಮನವರ ಪ್ರತಿಷ್ಟೆ ಮಾಡಿ ಚಿಕ್ಕದೇವರಾಯದುರ್ಗ ಅನುಪಿನಹಳ್ಳಿಯ ಬೇಲದಹೊಲ, ಚಿನುವಾಡಹಳ್ಳಿ ಭೂಮಿಯನ್ನು ನಿತ್ಯೋತ್ಸವ, ಪಕ್ಷೋತ್ಸವ, ಮಾಸೋತ್ಸವ, ಸಂವತ್ಸರೋತ್ಸವಗಳ ಸೇವೆಗೆಂದು ಈ ಹೊಲವನ್ನು ಮೀಸಲಿರಿಸಲಾಗಿತ್ತು.[೫೦] ತುಮಕೂರು ಜಿಲ್ಲೆಯ ಕರಿವಿಡಿ ಅಂದರೆ ಕರಡಾಳು ಪ್ರದೇಶದಲ್ಲಿ ಆನೆಗಳು ಹೇರಳವಾಗಿದ್ದವು.[೫೧] ಈ ಪ್ರದೇಶವು ದಟ್ಟಾರಣ್ಯವನ್ನು ಹೊಂದಿದ್ದ ಭೂಭಾಗವಾಗಿತ್ತು ಎಂಬುದನ್ನು ಶಾಸನಗಳು ಪುಷ್ಟೀಕರಿಸುತ್ತವೆ. ಹೀಗಾಗಿ ಆನೆಗಳಿಂದ ಕೂಡಿದ್ದ ಅರಣ್ಯದಲ್ಲಿ ಆನೆಯೊಂದು ಜಾರಿಬಿದ್ದು ಸತ್ತಿದ್ದರಿಂದ ಇಂತಹ ಕಥೆಯನ್ನು ಸೃಷ್ಟಿಸಲಾಗಿದೆ. ಹಾಗೂ "ಆನೆಬಿದ್ದಸರಿ" ಎಂಬ ನಾಮವು ಅನ್ವರ್ಥವಾಗಿದೆ. ಎಫಿಗ್ರಾಫಿಯಾ ಕರ್ನಾಟಿಕ ಸಂಪುಟ ೨೪ ತುಮಕೂರು ೫೨ ರಲ್ಲಿ ಆನೆಬಿದ್ದಸರಿಯನ್ನು "ಕರಿಗಿರಿ" ಯೆಂದೂ, ತುಮಕೂರು ೫೧ ರಲ್ಲಿ "ಕರಿಗಿರಿದುರ್ಗ" ವೆಂದು ಉಲ್ಲೇಖಿಸಿರುವುದರಿಂದ ಲಿಖಿತ ಆಕರಗಳು ಮತ್ತು ಮೌಖಿಕ ಆಕರಗಳು ಒದಗಿಸಿರುವ ಮಾಹಿತಿಗಳು ಪರಸ್ಪರ ಪೂರಕವಾಗಿರುವುದನ್ನು ಗುರುತಿಸಲಾಗಿದೆ.

ತುಮಕೂರಿನ ಸತ್ಯಮಂಗಲದಲ್ಲಿ ದೊರೆತಿರುವ ತಾಮ್ರಪಟವು ಉಲ್ಲೇಖಿಸುವಂತೆ ವಿಜಯನಗರ ಸಾಮ್ರಾಜ್ಯದ ಪ್ರೌಢದೇವರಾಯನು ಆನೆಬಿದ್ದಸರಿಯಲ್ಲಿ ಕೋಟೆಯನ್ನು ನಿರ್ಮಿಸಿದ್ದನು. ಅದ್ದರಿಂದ ಈ ಸ್ಥಳವನ್ನು ದೇವರಾಯನದುರ್ಗ ಎಂದು ಕರೆಯಲಾಗಿದೆ. ದೇವರಾಯನದುರ್ಗವು (ಆಡಳಿತವಿಭಾಗ) ವೇಂಠೆಯಾಗಿತ್ತು. ಆಗ ದೇವರಾಯನ ದುರ್ಗವನ್ನು ಮಲ್ಲಾಭಟ್ಟ ಎಂಬುವವನಿಗೆ ನೀಡಲಾಗಿತ್ತು. ಈ ಮಾಹಿತಿಯನ್ನು ಕ್ರಿ.ಶ ೧೪೨೬ ರ ದೇವರಾಯನ ಶಾಸನವು ಉಲ್ಲೇಖಿಸಿದೆ.[೫೨]

ವಿಜಯನಗರ ಸಾಮ್ರಾಜ್ಯದ ಪತನಾನಂತರ ೧೬೮೮ ರಲ್ಲಿ ಮೈಸೂರಿನ ಚಿಕ್ಕದೇವರಾಜ ಒಡೆಯರು ಸಿರಾದ ಸುಬೇದಾರ ಖಾಸಿಂಖಾನ್‌ನಿಂದ ಈ ಸ್ಥಳವನ್ನು ವಶಪಡಿಸಿಕೊಂಡು ಸೈನಿಕನೆಲೆಯನ್ನು ಹಾಗೂ ಕೋಟೆಯನ್ನು ನಿರ್ಮಿಸಿದ್ದರಿಂದ ಚಿಕ್ಕದೇವರಾಯನದುರ್ಗ

ಎಂದು ಕರೆಯಲಾಗಿದೆ. ಇವರ ಕಾಲದಲ್ಲಿ ಈ ನೆಲೆಯು ಧಾರ್ಮಿಕವಾಗಿ ಪ್ರಸಿದ್ಧಿಗೆ ಬಂದಿತ್ತು.

**ನಾಗಲಮಡಿಕೆ** : ಉತ್ತರಪಿನಾಕಿನಿ ನದಿಯ ದಂಡೆಯ ಮೇಲೆ ನಾಗಲಮಡಿಕೆ ಎಂಬ ಗ್ರಾಮವಿದೆ. ಇದು ತುಮಕೂರು ಜಿಲ್ಲೆಯ ಪಾವಗಡ ತಾಲೂಕಿನ ಹೋಬಳಿ ಕೇಂದ್ರವಾಗಿದೆ. ಪಾವಗಡ ಪಟ್ಟಣದಿಂದ ಸುಮಾರು ೧೫ ಕಿ.ಮೀ ದೂರವಿರುವ ಈ ಕ್ಷೇತ್ರವು ಆಂದ್ರಪ್ರದೇಶದ ಗಡಿಭಾಗಕ್ಕೆ ಹೊಂದಿಕೊಂಡಿದೆ. ಕುಕ್ಕೆ ಸುಬ್ರಮಣ್ಯವನ್ನು ಆದಿ ಸುಬ್ರಮಣ್ಯವೆಂದೂ, ಘಾಟಿ ಸುಬ್ರಮಣ್ಯವನ್ನು ಮದ್ಯ ಸುಬ್ರಮಣ್ಯವೆಂದೂ, ನಾಗಲಮಡಿಕೆಯನ್ನು ಅಂತ್ಯ ಸುಬ್ರಮಣ್ಯವೆಂದು ಕರೆಯಲಾಗುತ್ತದೆ. ಸ್ಥಳ ಪುರಾಣದಂತೆ : ಒಮ್ಮೆ ಉತ್ತರ ಪಿನಾಕಿನಿ ನದಿಯ ದಂಡೆಯ ಹೊಲದಲ್ಲಿ ರೈತರೊಬ್ಬರು ಉಳುಮೆ ಮಾಡುತ್ತಿದ್ದ ಸಂದರ್ಭದಲ್ಲಿ ಮಣ್ಣಿನಲ್ಲಿ ಹುದುಗಿದ್ದ ನಾಗರ ಶಿಲಾ ವಿಗ್ರವು ಅಂದಿನಿಂದ ಸದರಿ ವಿಗ್ರಹಕ್ಕೆ ಪೂಜಾಕೈಂಕರ್ಯಗಳು ನಡೆಯುತ್ತಿವೆ. 'ನಾಗರ ಶಿಲಾ ವಿಗ್ರಹವು ಮಡಿಕೆಗೆ (ನೇಗಿಲು ಮತ್ತು ಎತ್ತುಗಳ ಮೂಲಕ ಹೊಲವನ್ನು ಉಳುಮೆ ಮಾಡುವ ಉಪಕರಣ) ತಾಗಿ ಸಿಕ್ಕಿದ್ದರಿಂದ' ಈ ನೆಲೆಗೆ 'ನಾಗಲಮಡಿಕೆ' ಎಂಬ ಸ್ಥಳನಾಮವು ಪ್ರಾಪ್ತವಾಗಿದೆ. ಈ ನಾಗರ ಶಿಲಾ ವಿಗ್ರಹವು ಕಪ್ಪು ಶಿಲೆಯಿಂದಾಗಿದ್ದು ಸುಮಾರು ೩ ಅಡಿ ಎತ್ತರವಿದೆ. ಇದು ೭ ಎಡೆಗಳ ಸರ್ಪಾಕಾರದಿಂದ ಕೂಡಿದ್ದು, ಶರೀರವು ಶಿಲಾ ಪೀಠದ ಮೇಲೆ ೩ ಸುತ್ತು ಸುತ್ತಿಕೊಂಡಿದೆ.

**ಪಾವಗಡ** : ಪಾವಗಡ ತುಮಕೂರು ಜಿಲ್ಲೆಯ ತಾಲೂಕು ಕೇಂದ್ರವಾಗಿದೆ. ಆಂಧ್ರದ ಗಡಿಗೆ ಹೊಂದಿಕೊಂಡಿರುವ ಇಲ್ಲಿ ತೆಲುಗು ಭಾಷೆಯ ಪ್ರಭಾವವಿದೆ. ಪಾವಗಡವನ್ನು ಪಾಗೊಂಡೆ, ಪಾವುಗೊಂಡೆ, ಪಾಮುಕೊಂಡ ಎಂದು ಹಲವು ಹೆಸರುಗಳಿಂದ ಕರೆಯಲಾಗಿದೆ. ಪಾವಗಡದ ಬೆಟ್ಟದ ಬುಡದಲ್ಲಿರುವ ಕಮ್ಮಾರಗುಂಡಿ ಶಾಸನದಲ್ಲಿ 'ಪಾಗೊಂಡೆ' ಎಂದು, ಹುಲಿಬೆಟ್ಟದ ಹತ್ತಿರವಿರುವ ಶಾಸನದಲ್ಲಿ 'ಪಾವುಗೊಂಡೆ' ಎಂದು ಉಲ್ಲೇಖಿಸಲಾಗಿದೆ. ಶಾಸನತಜ್ಞ ಲೂಯಿ ರೈಸ್‌ರವರು ಈ ಹೆಸರಿನ ನಿಷ್ಪತ್ತಿಯನ್ನು ಹೀಗೆ ಬಿಡಿಸಿದ್ದಾರೆ. ಪಾವು ಎಂದರೆ ಹಾವು, ಗೊಂಡೆ ಎಂದರೆ ಬೆಟ್ಟ ಎಂದಿರುವುದರಿಂದ 'ಹಾವಿನಬೆಟ್ಟ' ಎಂದು ಅರ್ಥೈಸಲಾಗಿದೆ. ಹಾವಿನ ಶಿಲ್ಪವಿರುವ, ಹಾವಿನ ಹೆಡೆಗಳಿರುವ ಹುಟ್ಟುಗುಂಡುಗಳು ಇಲ್ಲಿ ಹೇರಳವಾಗಿರುವುದರಿಂದ ಇದನ್ನು ಹಾವಿನಬೆಟ್ಟ ಎಂದು ಕರೆದಿರಬೇಕು. ಇದಕ್ಕೆ ಪೂರಕವಾಗಿ ಪೆನುಗೊಂಡೆಯ ವೆಂಕಟಪತಿ ಮಹಾರಾಜನ ಕಾಲದ ಕೈಫಿಯತ್ತು ಕಾಗದದಲ್ಲಿ ಈ ಬೆಟ್ಟವನ್ನು 'ಪಾಮುಕೊಂಡ' ಎಂದು ಹೆಸರಿಸಲಾಗಿದೆ.[೫೪]

ಪಾವಗಡ ತಾಲೂಕಿನ ೬೭ ನೇ ಶಾಸನದ ಉಲ್ಲೇಖದಂತೆ ಗೊಪಣ್ಣ ಎಂಬುವನು ಪಾವಗಡ ಕೋಟೆಯನ್ನು ನಿರ್ಮಿಸಿದನು. ಈತನು ಹೊಳಕಲ್ಲು ವಂಶದ ೧೧ ನೆಯ ಪಾಳೆಗಾರನವನಾಗಿದ್ದು ಗೋಮಚಮೂಪ ಎಂದು ಉಲ್ಲೇಖಿತನಾಗಿದ್ದಾನೆ.[೫೫] ಈ ಕೋಟೆಯು ವಿಜಯನಗರದ ಕಾಲದ ಸುಭದ್ರವಾದ ಕೋಟೆಯಾಗಿದ್ದು ಇಂದಿಗೂ ಇದರ

ಅವಶೇಷಗಳು ಕಂಡು ಬರುತ್ತವೆ. ಮೌಖಿಕ ಆಕರಗಳಲ್ಲಿ ಪಾವಗಡದ ಕೋಟೆಯನ್ನು ಕುರಿತ ಜಾನಪದ ಲಾವಣಿ ಈ ಮುಂದಿನಂತಿದೆ.

> ಪಾಗೊಂಡೆ ಅಂಬೋದು ಏಳುಸುತ್ತಿನ ಕೋಟೆ
> ಹೊರಕೋಟೆ ಬಳಸಿ ಬಯವಾದ ಕಂದಕದ ಸಾಲು
> ನೀರುಗಂಡಿಗಳು ವೀದಿಗಳು ವಿಪ್ನ ಮಾರ್ಗಗಳು
> ತಲೆಯೆತ್ತಿ ನಿಂತಿರುವ ಬತ್ತೇರಿ ಬುರುಜುಗಳ ಸಾಲು
> ಎದೆ ಬಿರಿವೆತ್ತರದ ಕೊತ್ತಲಗಳು ಹುಲಿಮುಖಗಳು
> ಪಾಗೊಂಡೆ ದೊರೆಗಳಿಗೊಂದರಮನೆ
> ಹೆಂಡರಿಗೊಂದರಮನೆ
> ನೂರು ಕಂಬಗಳ ಪಡಸಾಲೆ ಬಲು ಚಿತ್ರಗಳ
> ಬಿಡಿಸಿದ ಗೋಡೆಗಳು ಬಾರಿ ಕನ್ನಡಿಗಳ ಗೋಡೆ
> ಹಾಸುಗಲ್ಲುಗಳ ನೆಲ ರತ್ನ ಚಿತ್ರದ ನೆಲೆ
> ಹತ್ತುಗಂಬಗಳ ಪಡಸಾಲೆ[೫೬]

ಪಾವಗಡದ ಕೋಟೆಯು ಅಭೇದ್ಯವಾಗಿದ್ದು, ಅದರ ಭದ್ರತೆ ಹಾಗೂ ಉತ್ಕೃಷ್ಟತೆಯನ್ನು ಕುರಿತು ಈ ಲಾವಣಿಯಲ್ಲಿ ಹಾಡಲಾಗಿದೆ. ಇಲ್ಲಿನ ಪಾಳೆಯಗಾರರು ನಿರ್ಮಿಸಿದಂತಹ ವ್ಯವಸ್ಥಿತವಾದ ಸುತ್ತು ಕೋಟೆಗಳು, ಕಂದಕಗಳು, ಬುರುಜುಗಳು, ರಹಸ್ಯಮಾರ್ಗಗಳು, ಜಲಸಂಗ್ರಾಹಾರಗಳ ಅವಶೇಷಗಳಿವೆ. ಹಾಗೂ ಅರಮನೆಯ ಕಂಬಗಳು, ಪಡಸಾಲೆ, ಗೋಡೆಗಳಲ್ಲಿನ ಚಿತ್ತಾರವು ಅಂದಿನ ವಾಸ್ತುಶಿಲ್ಪ ಮತ್ತು ಚರಿತ್ರೆಯನ್ನು ತಿಳಿಯಲು ಸಹಾಯಕವಾಗಿವೆ.

**ಮರಡಿಗುಡ್ಡ** : ಸಿರಾ ತಾಲೂಕಿನ ರಂಗನಾಥಪುರದ ಬಳಿಯಲ್ಲಿ ಮರಡಿ ಗುಡ್ಡವಿದೆ. ಇದಕ್ಕೆ ಪಂಚಕಳಸ ಗುಡ್ಡ ಎಂದೂ ಕರೆಯಲಾಗುತ್ತದೆ. ಇಲ್ಲಿ ರಂಗನಾಥಸ್ವಾಮಿಯ ದೇವಾಲಯವಿದೆ. ಮರಡಿ, ಮರವಿ ಎಂದರೆ ಮರದ ತೊಗಟೆ, ಸಿಪ್ಪೆ ಎಂಬ ಅರ್ಥಗಳಿವೆ. ತೊಗಟೆಯನ್ನು ದಟ್ಟವಾಗಿ ಹೊಂದಿದ ಮರಗಳು ಇಲ್ಲಿ ಹೆಚ್ಚಾಗಿ ಬೆಳೆಯುತ್ತಿದ್ದವು. ಈ ಕಾರಣದಿಂದಾಗಿ ಈ ನೆಲೆಗೆ ಮರಡಿಗುಡ್ಡ ಎಂಬ ಹೆಸರು ಬಂದಿದೆ.[೫೭]

**ಯಡೆಯೂರು** : ನಾಗಿನಿ ನದಿ ತಟದಲ್ಲಿರುವ ಯಡೆಯೂರು ಕುಣಿಗಲ್ ತಾಲೂಕಿನ ಹೋಬಳಿ ಕೇಂದ್ರವಾಗಿದೆ. 'ಅಭಿನವ ಅಲ್ಲಮ' ಎಂದು ಖ್ಯಾತರಾಗಿದ್ದ ಸಿದ್ಧಲಿಂಗೇಶ್ವರರ ಗದ್ದುಗೆಯು ಇಲ್ಲಿದೆ. ಇಲ್ಲಿಗೆ ಹತ್ತಿರದ ಕಗ್ಗರೆಯು ಇವರ ತಪೋಕ್ಷೇತ್ರವಾಗಿತ್ತು. ಇವರು ವಚನಕಾರರೂ, ಶಿವಯೋಗಿಗಳೂ ಹಾಗೂ ಇಲ್ಲಿನ ಮಠಾಧ್ಯಕ್ಷರೂ ಆಗಿದ್ದರು. 'ಎಡೆ' ಎಂದರೆ ಮೀಸಲು, ನೈವೇದ್ಯ ಎಂಬರ್ಥವಿದೆ. ಇಲ್ಲಿ ಸಿದ್ಧಲಿಂಗೇಶ್ವರರು ಜೀವ ಸಮಾಧಿಯಾಗಿದ್ದು, ತನ್ನ ಇಷ್ಟ ದೇವರಿಗೆ ತಮ್ಮನ್ನೇ ನೈವೇದ್ಯವಾಗಿ ಅರ್ಪಿಸಿಕೊಂಡರೆಂಬ ಕಥನಗಳಿವೆ. ಹೀಗಾಗಿ ಈ ಊರಿನ ಹೆಸರು ಎಡೆ+ಊರು=ಎಡೆಊರು >ಎಡೆಯೂರು >ಯೆಡೆಯೂರು ಆಗಿದೆ.

**ಯಳನಡು** : ಚಿಕ್ಕನಾಯಕನಹಳ್ಳಿ ತಾಲೂಕಿನಲ್ಲಿ ಯಳನಡು ಎಂಬ ಗ್ರಾಮವಿದೆ. ಇದು ಶಿವಶರಣರಾದ ಸಿದ್ದರಾಮನು ತಪಸ್ಸು ಮಾಡಿದ ಪುಣ್ಯಕ್ಷೇತ್ರ. ಇಲ್ಲಿನ ಸಿದ್ಧರಾಮನ ಗದ್ದುಗೆಯ ಎದುರು ಇರುವ ಜಮೀನಿನಲ್ಲಿ ಎಳ್ಳನ್ನು ಬಿತ್ತಲಾಗುತ್ತಿತ್ತು. ಹುಲುಸಾಗಿ ಬೆಳೆದ ಎಳ್ಳಿನ ರಾಶಿಯು ಬೃಹದಾಕಾರವಾಗಿರುತ್ತಿತ್ತು. ಈ ಎಳ್ಳು ರಾಶಿಯನ್ನು ನೋಡಿದ ಜನಸಾಮಾನ್ಯರು 'ಎಳ್ಳು ನೋಡು', 'ಎಳ್ಳು ನೋಡು' ಎಂದು ಉದ್ಗರಿಸುತ್ತಿದ್ದರು. ಎಳ್ಳು ರಾಶಿಯಿದ್ದ ಈ ನೆಲೆಗೆ ಎಳ್ಳುನೋಡು> ಯಳ್ಳುನೋಡು> ಯಳ್ಳುನಡು> ಯಳನಡು ಎಂಬ ಸ್ಥಳನಾಮವು ಬಂದಿದೆ ಎಂಬುದು ಜನಮನದ ಅಭಿಪ್ರಾಯವಾಗಿದೆ. '*ಹರತಿಸಿರಿ*' ಕೃತಿಯಲ್ಲಿ ಲೇಖಕರಾದ ಸಂಧ್ಯಾರೆಡ್ಡಿರವರು 'ಎಳ್ಳು' ಈ ಪ್ರದೇಶದ ಪ್ರಮುಖ ಬೆಳೆಯಾಗಿರಲಿಲ್ಲ ಎಂಬ ವಾದದ ನೆಲೆಯಲ್ಲಿ ಈ ಅಭಿಪ್ರಾಯವನ್ನು ಅಲ್ಲಗಳೆದಿದ್ದಾರೆ.

'ನಡು' ಎಂದರೆ ಸೊಂಟ, ಕುವರಿಯರ ಎಳೆಯ / ಬಳುಕುವ ನಡುವಿನ ಕಾರಣ ಯಳನಡು ಎಂಬ ಸ್ಥಳನಾಮ ಬಂದಿದೆ ಎಂಬ ವಾದವಿದೆ. ಈ ವಾದವನ್ನು ಸಹ ನಿರಾಕರಿಸಲಾಗಿದೆ. ಇಲ್ಲಿನ ಮುಖ್ಯ ಬೆಳೆಯು ತೆಂಗು, ಹೀಗಾಗಿ ತೆಂಗಿನ ನೀರು / ಎಳ+ನೀರು ಪದವು ಕ್ರಮೇಣ ಎಳನೀರು> ಎಳನೀಡು> ಯಳನೀಡು> ಯಳನಡು ಎಂದಾಗಿದೆ. ಎಂಬ ಅಭಿಪ್ರಾಯವು ಸರ್ವ ಮಾನ್ಯವಾಗಿದೆ. ಸ್ಥಳ ಪುರಾಣದಂತೆ, ಹುತ್ತದ ಮೇಲೆ ಆದಿಲಿಂಗ, ಅನಾದಿಲಿಂಗ, ಸಿದ್ಧಲಿಂಗ, ಚರಲಿಂಗ, ಕಟ್ಟೆಲಿಂಗ ಎಂಬ ಐದು ಲಿಂಗಗಳನ್ನಿಟ್ಟು ಪೂಜಿಸಲಾಗುತ್ತದೆ.

**ವಡ್ಡಗೆರೆ** : ಇಲ್ಲಿನ ಸಾಂಸ್ಕೃತಿಕ ನಾಯಕರಾದ ಈರುಗ್ಯಾತರಾಯ ಹಾಗೂ ಈರುನಾಗಮ್ಮರ ಆರಾಧನಾ ಕೇಂದ್ರವಾಗಿರುವ ವಡ್ಡಗೆರೆಯು ಕೊರಟಗೆರೆ ತಾಲೂಕಿನಲ್ಲಿದೆ. ವಡ್ಡರ ಜನಾಂಗದ ಹೆಣ್ಣುಮಗಳೊಬ್ಬಳಿಂದ ಈ ಸ್ಥಳವನ್ನು ಈರುಗ್ಯಾತರಾಯನು ಬಳುವಳಿಯಾಗಿ ಪಡೆದನೆಂದು ಮೌಖಿಕ ಕಾವ್ಯದಲ್ಲಿ ಪ್ರಸ್ತಾಪಿಸಲಾಗಿದೆ. ಜನಪದ ಕಾವ್ಯದಲ್ಲಿ ಪ್ರಸ್ತಾಪಿಸಲಾಗಿರುವ "ವಡ್ಡಗೆರೆ ಅಂಬೋದು ಒಡ್ಡೀಗೆ ಕಟ್ಟಿಸಿದ" ಎಂದು ಹಾಡಿರುವಂತೆ[೨೮] ಕೆರೆಗೆ ಒಡ್ಡನ್ನು ನಿರ್ಮಿಸಿದ್ದರಿಂದ ಈ ಗ್ರಾಮಕ್ಕೆ ಜಲವಾಚಕ ಸ್ಥಳನಾಮ ಒಡ್ಡುಕೆರೆ> ಒಡ್ಡುಗೆರೆ> ವಡ್ಡುಗೆರೆ> ವಡ್ಡಗೆರೆ ಎಂಬ ಹೆಸರು ಬಂದಿದೆ.

ವಡ್ಡಗೆರೆಯ ಸ್ಥಳನಾಮದ ಬಗ್ಗೆ ಇನ್ನೊಂದು ಅಭಿಪ್ರಾಯವಿದೆ. ಜೈನರಲ್ಲಿ ಹಿರಿಯರನ್ನು 'ವಡ್ಡರು' ಎಂದು ಕರೆಯುತ್ತಿದ್ದರು. ವಡ್ಡಾರಾಧನೆ ಎಂದರೆ ಹಿರಿಯರ ಆರಾಧನೆ ಎಂದರ್ಥ. ಅಂದರೆ ಜೈನಧರ್ಮೀಯ ಹಿರಿಯರು ಇಲ್ಲಿ ನೆಲೆಸಿದ್ದರಿಂದ ಈ ಊರಿಗೆ ವಡ್ಡಗೆರೆ ಎಂಬ ಹೆಸರು ಬಂದಿರಬೇಕು. ವಡ್ಡಗೆರೆಯು ದಿಗಂಬರ ಪಂಥದ ಜೈನರ ಕೇಂದ್ರವಾಗಿತ್ತೆಂದೂ ಗುರುತಿಸಲಾಗಿದೆ.

**ವಿಘ್ನಸಂತೆ** : ತಿಪಟೂರು ತಾಲೂಕು ಕೇಂದ್ರದ ಆಗ್ನೇಯಕ್ಕೆ ಸುಮಾರು ೧೬ ಕಿ. ಮೀ. ದೂರದಲ್ಲಿ 'ವಿಘ್ನಸಂತೆ' ಎಂಬ ಗ್ರಾಮವಿದೆ. ಈ ಗ್ರಾಮದ ಸ್ಥಳನಾಮವು ಯಜ್ಞಸಂಸ್ಥೆ>

ಇಗುನಸಂತೆ> ಇಗ್ನಸಂತೆ> ವಿಘ್ನಸಂತೆ ಎಂಬುದಾಗಿ ಗುರುತಿಸಲಾಗಿದೆ. ಇಲ್ಲಿ ಹೊಯ್ಸಳರ ಕಾಲದ ನರಸಿಂಹಸ್ವಾಮಿ ದೇವಾಲಯವಿದೆ. ಇದು ತ್ರಿಕೂಟಾಚಲವಾಗಿದೆ. ಇಲ್ಲಿನ ಭೈರವ ಮತ್ತು ಉಮಾಮಹೇಶ್ವರ ದೇವಾಲಯಗಳ ಮುಂದೆ ತಮ್ಮ ತಲೆಗಳನ್ನು ಬಲಿ ನೀಡುತ್ತಿರುವ ದೃಶ್ಯವುಳ್ಳ ಆತ್ಮಾಹುತಿ ಕಲ್ಲಿನ ಅವಶೇಷವಿದೆ. ಶಕ್ತಿ ದೇವತೆಯು ಶವದ ಮೇಲೆ ಸುಖಾಸೀನಳಾಗಿ ಕುಳಿತಿರುವ ವಿಗ್ರಹವು ಹೊಯ್ಸಳ ಶೈಲಿಯದ್ದಾಗಿದೆ. ಹಿಂದೆ ಈ ಸ್ಥಳದಲ್ಲಿ ಇಷ್ಟ ದೇವರನ್ನು ಒಲಿಸಿಕೊಳ್ಳುವ ಸಲುವಾಗಿ ಯಾಗ ಯಜ್ಞಗಳು ನಡೆಯುತ್ತಿದ್ದುವು. ಆ ಕಾರಣದಿಂದಲೇ ಈ ಸ್ಥಳಕ್ಕೆ ಯಘ್ನಸಂತೆ ಎಂಬ ಹೆಸರು ಬಂದಿದ್ದು, ಮುಂದೆ 'ವಿಘ್ನಸಂತೆ' ಎಂದು ಕಾಲಾನಂತರದಲ್ಲಿ ಮಾರ್ಪಾಡಾಗಿದೆ ಎಂಬುದಾಗಿ ವಿವೇಚಿಸಲಾಗಿದೆ.

**ಶೆಟ್ಟಿಕೆರೆ** : ಶೆಟ್ಟಿಕೆರೆ ಗ್ರಾಮವು ಚಿಕ್ಕನಾಯಕನಹಳ್ಳಿ ತಾಲೂಕಿನಲ್ಲಿದೆ. ಸ್ಥಳಪುರಾಣದಂತೆ, ವ್ಯಾಪಾರಕ್ಕೆಂದು ಶೆಟ್ಟಿಯು ಸರಕುಗಳೊಂದಿಗೆ ಹಾದು ಹೋಗುತ್ತಿದ್ದನು. ಮಾರ್ಗಮಧ್ಯದ ಇಂದಿನ ಶೆಟ್ಟಿಕೆರೆಯಿರುವ ಪ್ರದೇಶದಲ್ಲಿ ತಂಗಿದನು. ಹಸಿವಾಗಿದ್ದರಿಂದ ಅಡಿಗೆ ಮಾಡುವ ಸಲುವಾಗಿ ಮೂರು ಗುಂಡುಗಳಿಂದ ಒಲೆಯನ್ನು ನಿರ್ಮಿಸಿ ಸದರಿ ಒಲೆಯ ಮೇಲೆ ಅನ್ನದ ಪಾತ್ರೆಯನ್ನಿಟ್ಟನು. ಆದರೆ ಒಲೆಯ ಗುಂಡುಗಳು ನಿಲ್ಲಲಿಲ್ಲವಂತೆ. ಕಾರಣ ಈ ಕಲ್ಲು ಗುಂಡುಗಳು ಶಿವಲಿಂಗ ಸ್ವರೂಪಿಯೆಂದು ಭಾವಿಸಿದ ಶೆಟ್ಟಿಯು ಅಲ್ಲಿಯೇ ಶಿವದೇವಾಲಯವನ್ನೂ ಮತ್ತು ಕೆರೆಯನ್ನೂ ನಿರ್ಮಿಸಿದನು. ಶೆಟ್ಟಿಯು ಕೆರೆಯನ್ನು ನಿರ್ಮಾಣ ಮಾಡಿಸಿದ್ದರಿಂದ ಈ ಗ್ರಾಮಕ್ಕೆ 'ಶೆಟ್ಟಿಕೆರೆ' ಎಂಬ ಜಲವಾಚಕ ಸ್ಥಳನಾಮವು ಪ್ರಾಪ್ತವಾಗಿದೆ.

**ಸಿದ್ಧರಬೆಟ್ಟ** : ಕೊರಟಗೆರೆ ತಾಲೂಕಿನಲ್ಲಿರುವ ಸಿದ್ಧರಬೆಟ್ಟ / ಸಿದ್ಧರಗಿರಿಯಲ್ಲಿ ಸಿದ್ಧಪುರುಷರ ಪರ್ಣಶಾಲೆಗಳಿವೆ. ಹಾಗೂ ಇಲ್ಲಿ ಯೋಗಶಕ್ತಿಯ ತೇಜಸ್ಸಿನ ಸೂಚಕವಾದ ಗದ್ದುಗೆಗಳಿವೆ. ಸಿದ್ಧರ, ಯತಿಗಳ ನೆಲೆಬೀಡು ಇದಾಗಿರುವುದರಿಂದ ಈ ಗಿರಿಯನ್ನು ಸಿದ್ಧರಗಿರಿ, ಸಿದ್ಧರಬೆಟ್ಟ ಎಂದು ಕರೆಯಲಾಗುತ್ತದೆ[೫೯]. ಈ ಸ್ಥಳವನ್ನು ಸುವರ್ಣಗಿರಿ, ಕಾಕನಗಟ್ಟಲು, ಬೂದಗವಿ ಎಂಬ ಹೆಸರುಗಳಿಂದಲೂ ಕರೆಯಲಾಗುತ್ತದೆ. **ಸುವರ್ಣಗಿರಿ:** ಸಿದ್ಧೌಷಧಿಗಳ ಗುಣವನ್ನು ಹೊಂದಿರುವ ಗಿಡಮೂಲಿಕೆಗಳು ಇಲ್ಲಿ ಯಥೇಚ್ಛವಾಗಿವೆ. ಸರ್ವರೋಗ ರುಜಿನಗಳನ್ನು ಪರಿಹರಿಸಬಲ್ಲ ಔಷಧಿ ಗುಣವಿರುವ ಸಸ್ಯಕ್ಷೇತ್ರ ಇದಾಗಿದೆ. ಇಂದಿಗೂ ಬೆಟ್ಟದ ಮೇಲಿನ ಜಲಗುಂಡಿಯ ನೀರನ್ನು ದೇಹದ ಮೇಲೆ ಹಾಕಿಕೊಳ್ಳುವ ಮೂಲಕ ಪಾವನರಾಗುತ್ತೇವೆ ಎಂಬ ಭಾವನೆಯಿದೆ. **ಕಾಕನಗಟ್ಟಲು:** ಶ್ರೀರಾಮಚಂದ್ರನು ಸೀತೆಯೊಂದಿಗೆ ಇಲ್ಲಿಗೆ ಆಗಮಿಸಿದ್ದನು. ಇಲ್ಲಿ ವಾಸಿಸುತ್ತಿದ್ದ ಕಾಕಾಸುರನು ಇವರಿಗೆ ತೊಂದರೆ ನೀಡಿದನೆಂದೂ ಆಗ ಶ್ರೀರಾಮಚಂದ್ರನು ಕಾಕಾಸುರನ ಗರ್ವಭಂಗ ಮಾಡಿ ಇಲ್ಲಿ ಸುಳಿಯದಂತೆ ಆಜ್ಞೆ ಮಾಡಿದನೆಂದು ಐತಿಹ್ಯವಿದೆ. ಇದರಂತೆ ಇಲ್ಲಿ ಕಾಗೆಗಳ ಸಂಚಾರವೇ ಇಲ್ಲದಿರುವುದರ ಹಿನ್ನೆಲೆಯಲ್ಲಿ ಈ ನೆಲೆಯನ್ನು ಕಾಕನಗಟ್ಟಲು ಎಂದು ಕರೆಯಲಾಗುತ್ತದೆ. **ಬೂದಗವಿ:**

ಬೂದಿಸಿದ್ಧರು ಸಿದ್ದರಬೆಟ್ಟದಲ್ಲಿ ತಂಗಿದ್ದು ಇವರು ಸಾಧನೆ ಮಾಡಿದ್ದರ ಕಾರಣವಾಗಿ ಇಲ್ಲಿನ ಬೇಚರಾಕ್ ಗ್ರಾಮಕ್ಕೆ 'ಬೂದಗವಿ' ಎಂದು ಕರೆಯಲಾಗುತ್ತದೆ. ಪ್ರಸ್ತುತ ಧಾರ್ಮಿಕ ಕ್ಷೇತ್ರವಾಗಿರುವ ಕೊರಟಗೆರೆ ತಾಲೂಕಿನ ಸಿದ್ಧರಬೆಟ್ಟಕ್ಕೆ ಭಕ್ತರು ಉತ್ತರದ ದಿಕ್ಕಿನ ಬೂದಗವಿ ಎಂಬ ಸ್ಥಳದ ಕಡೆಯಿಂದ ಈ ಬೆಟ್ಟದ ಮೇಲಿನ ಸಿದ್ದೇಶ್ವರ ದೇವರ ದರ್ಶನಕ್ಕೆ ಆಗಮಿಸುತ್ತಾರೆ.

**ಸಿರಾ :** ಸಿರಾ ಪಟ್ಟಣವು ತಾಲೂಕು ಕೇಂದ್ರವಾಗಿದೆ. ಇದು ಬೆಂಗಳೂರು ಪುಣೆ ರಾಷ್ಟ್ರೀಯ ಹೆದ್ದಾರಿ ೪ ರ ಬದಿಯಲ್ಲಿದೆ. "ಸಿರಾ" ಹೆಸರನ್ನು ಕುರಿತು ಐತಿಹ್ಯವೊಂದಿದೆ. ಅದರಂತೆ ಸಿರಿಯಣ್ಣ ಮತ್ತು ದೇವಣ್ಣರೆಂಬ ಗೊಲ್ಲ ಜನಾಂಗಕ್ಕೆ ಸೇರಿದ ಸಹೋದರರಿಬ್ಬರ ನೆರವಿನಿಂದ ರತ್ನಗಿರಿಯ ಪಾಳೇಗಾರ ಇರಸಪ್ಪರಾಜನ ವಂಶದ ರಂಗಪ್ಪರಾಜ ಕ್ರಿ.ಶ ೧೫೨೦-೧೫೪೨ ನು ದೇವಣಸಿರಿಯ ಎಂಬ ಗ್ರಾಮವನ್ನು ಸ್ಥಾಪಿಸಿದನು.[೬೦] ಇದರಿಂದಾಗಿ ಸಿರಾ ಪಟ್ಟಣದಲ್ಲಿ ಕೋಟೆಯನ್ನು ಸ್ಥಾಪಿಸಿದ ಸಿರಿಯಣ್ಣನ ಹೆಸರಿನಿಂದ 'ಸಿರಾ' ಎಂಬ ಸ್ಥಳನಾಮವು ಬಂದಿದೆ. ಕೋಟೆಯ ನಿರ್ಮಾಣ ಕಾಲದಿಂದಲೇ ಗ್ರಾಮವು ರೂಪುಗೊಂಡಿರುವುದನ್ನು ಗುರುತಿಸಲಾಗಿದೆ. ಸಿರಾ ಗ್ರಾಮದ ಹುಟ್ಟು ಮತ್ತು ನೆಲಕೋಟೆಯ ನಿರ್ಮಾಣದ ಬಗ್ಗೆ ಇರುವ ಲಾವಣಿಗಳು ಕೆಳಕಂಡಂತಿವೆ.

ಆಯಿತವಾರದ ದಿನ ಆಳುಂಬೊ ವೊತ್ತೀಗೆ
ವುಟ್ಟೀತು ಶೀರೇದ ಗನಕೋಟೆ ರನ್ನದ॥
ವುಟ್ಟೀತು ಶೀರೇದ ಕೋಟೇಯು ವುಟ್ಟೀದೇಳು
ದಿನಕೆ ಶಿವಲಗ್ಗೆಯಾಯಿತೊ ರನ್ನದ॥ [೬೧]

ಸಿರಾ ಗ್ರಾಮವು ಹಿಂದೆ ಹೆಂಜೇರು ನೊಳಂಬವಾಡಿಯ ಪ್ರದೇಶದಲ್ಲಿ ಸೇರಿತ್ತು. ಇಲ್ಲಿನ ಆಡಳಿತಗಾರನಾಗಿದ್ದ ರಂಗಪ್ಪನಾಯಕನು ಇಲ್ಲಿ ನಿರ್ಮಿಸಿದ ಕೋಟೆಯ ಪ್ರಾಕೃತಿಕ ವಿವರಗಳನ್ನು ಈ ಲಾವಣಿಗಳಲ್ಲಿ ವ್ಯಕ್ತಪಡಿಸಲಾಗಿದೆ. ಸಿರಾ ಗ್ರಾಮದ ಸ್ಥಾಪನೆಗೆ ಸಂಬಂಧಿಸಿದಂತೆ ರಚಿತವಾಗಿರುವ ಇನ್ನಿತರ ಲಾವಣಿಗಳೆಂದರೆ,

ಮೂಡಿತು ಮೂಡಿತು ಕೋಟೆ
ಮೂಡಿತು ಸೀರ್ಯಾದ ಪೇಟೆ
ಗೋಧಿ ಹಿಟ್ಟೀಲಿ ನೆಲಗಾರೆ ಕೊಟ್ಟಯಿತೆ
ರಾಯ ಸೀರ್ಯಾದ ಕೊನೆ ಪೇಟ್ಗೆ॥[೬೨]
ಆನೆ ಬಿತ್ತು ಅಂಕ್ಕುಸ್ತಾಕೆ ಕುದ್ರೆ ಬಿತ್ತು ಲಾಯಾಕೆ
ಸಿಂತೆ ಬಿತ್ತು ಕಂಚಿ ಹೊಳೆಯಾಕೆ! ರಂಗಣ್ಣನ
ಶಿರಬಿತ್ತು ಸೀರ್ಯಾದ ನಡುಪೇಟ್ಗೆ॥[೬೩]

ಅರಸನ ಸಂಬಂಧಿಯಾದ ಮೂವಲಕೆಂಗಯ್ಯನು ಸಿರಾದ ಕೋಟೆಯ ನಾಶಮಾಡುವ ಶಪಥವನ್ನು ಮಾಡಿದ್ದ ಬಗ್ಗೆ ಮೌಖಿಕ ಆಕರಗಳಲ್ಲಿ ಪ್ರಸ್ತಾಪವಿದೆ.[೬೪]

ಕೂಡುಗಲ್ಲಿನ ಮೇಲೆ ಮೂಡ್ಯಾತು ಸೀರ್ಯೇವು
ಸುತ್ತ ಕಾಡೆಲ್ಲ ಕಡಿಸ್ಯಾನೆ
ಸುತ್ತ ಕಾಡೆಲ್ಲ ಕಡಿಸ್ಯಾನೆ ರಂಗಣ್ಣ ಕಟ್ಟೀದ ಕೋಟೆಯು ಮುಗಿಲುದ್ದ

ಆದರೆ ಸಿರಾ ಗ್ರಾಮದ ಸ್ಥಾಪನೆಯ ಬಗೆಗೆ ಇರುವ ಲಾವಣಿಗಳಲ್ಲಿ ಸಿರಾ ಗ್ರಾಮದ ನೆಲೆಯ ಭೌಗೋಳಿಕ ಸ್ವರೂಪ, ಕೋಟೆಯ ಸ್ವರೂಪ, ಸಿರಾದ ಮೇಲೆ ತುರುಕರ ಧಾಳಿ ಕುರಿತಂತೆ ವಿವರಗಳನ್ನು ಪಡೆಯಬಹುದಾಗಿದೆ. ತರೀಕೆರೆಯ ಕೆಂಗಣ್ಣನಾಯಕ, ಬಿಜಾಪುರದೊಂದಿಗಿನ ಸಂಬಂಧಗಳ ಕುರಿತು ಅಧ್ಯಯನ ಮಾಡಲು ಈ ಲಾವಣಿಗಳು ಸಹಾಯಕವಾಗಿವೆ.

ರಂಗಪ್ಪರಾಜುವಿನ ಮೊಮ್ಮಗ ಅಂದರೆ ಕಸ್ತೂರಿ ರಂಗಪ್ಪನಾಯಕನ ಮಗ ರಂಗಪ್ಪನಾಯಕನು ೧೫೨೦-೧೫೪೨ ಸಿರಾದ ಕೋಟೆಯನ್ನು ನಿರ್ಮಿಸಿದನು.[೬೫] ಆದರೆ ಎಫಿಗ್ರಾಫಿಯಾ ಕರ್ನಾಟಿಕ ಸಂಪುಟ ೧೨ ಸಿರಾ ೬೪ ರ ಶಾಸನ ಕಾಲ ಕ್ರಿ. ಶ ೧೬೨೧ ರಲ್ಲಿ ಕಸ್ತೂರಿ ರಂಗಪ್ಪನಾಯಕನ ಮಗ ರಂಗಪ್ಪನಾಯಕನು ಜೀವಿಸಿದ್ದ ಬಗ್ಗೆ ಉಲ್ಲೇಖಿಸಿದೆ. ಆದರೇ ರಂಗಪ್ಪನಾಯಕನ ಜೀವಿತದ ಸುಮಾರು ೪೦೦ ವರ್ಷಗಳ ಹಿಂದೆಯೇ ಅಂದರೆ ಕ್ರಿ.ಶ ೧೨ ನೇ ಶತಮಾನದಲ್ಲಿ ಸಿರಾ ಗ್ರಾಮಕ್ಕೆ ಆ ಹೆಸರಿತ್ತು. ಎಂದು ಎ.ಕ ಸಂ ೧೨ ಸಿರಾ ೭ ಕ್ರಿ.ಶ ೧೧೨೬ ರಲ್ಲಿನ ಶಾಸನದಲ್ಲಿ ಉಲ್ಲೇಖಿಸಿದೆ. ರಂಗಪ್ಪನಾಯಕನ ಕಾಲಾವಧಿಯಲ್ಲಿ ತರೀಕೆರೆಯ ಪಾಳೆಯಗಾರರು ಬಿಜಾಪುರದ ಸುಲ್ತಾನರೊಂದಿಗೆ ಸೇರಿ ಸಿರಾದ ಮೇಲೆ ಆಕ್ರಮಣ ಮಾಡಿದ್ದರು. ಇದನ್ನು ಗುಮ್ಮಳ್ಳಿ ಕದನವೆಂದು ಕರೆಯಲಾಗಿದೆ. ಹೀಗಾಗಿ ಮೌಖಿಕ ಆಕರಗಳಲ್ಲಿನ ಮಾಹಿತಿಗೆ ಭಿನ್ನವಾಗಿ ಲಿಖಿತ ಆಕರಗಳು ಕಂಡುಬರುತ್ತವೆ.

ಅಂದರೆ ಮೌಖಿಕ ಆಕರಗಳಾದ ಜನಪದ ಕಾವ್ಯ, ಲಾವಣಿಗಳ ಮೂಲ ಕಥೆಯು ಪ್ರಸ್ತುತ ಸ್ವರೂಪದಲ್ಲಿರುವಂತೆ ನಡೆದಿರುವುದಿಲ್ಲ. ಕಾವ್ಯದಲ್ಲಿನ ವಿವಿಧ ಪ್ರಸಂಗಗಳು ಕಾಲದಿಂದ ಕಾಲಕ್ಕೆ ಕಾವ್ಯದ ಮುಖ್ಯ ವಾಹಿನಿಯಲ್ಲಿ ಸೇರಿಕೊಂಡಿವೆ. ಇಲ್ಲಿ ಕಥೆಯು ಚರಿತ್ರೆಯಾಗಿರುತ್ತದೆ. ಆದರೆ ನಂತರದ ಕಾಲದಲ್ಲಿ ಕೆಲವು ವರ್ಣನಾತ್ಮಕ ಅಂಶಗಳು ಸೇರಿಕೊಂಡಿರುವುದನ್ನು ಅಲ್ಲಗಳೆಯಲಾಗುವುದಿಲ್ಲ. ಮೌಖಿಕ ಆಕರಗಳು ಕಾಲಾತೀತವಾಗಿರುತ್ತವೆ. ಈ ಹಿನ್ನೆಲೆಯಲ್ಲಿ ಲಾವಣಿಯ ನಾಯಕನು ಗುಮ್ಮಳ್ಳಿ ಕದನದಲ್ಲಿ ತೋರಿದ ಸಾಹಸ, ಸಾಧನೆಗಳನ್ನು ವರ್ಣಿಸಲಾಗಿದೆ. ಅಲ್ಲದೇ ಆತನೇ ರಾಜಧಾನಿಯ ಸ್ಥಾಪಕನೆಂದು ಹಾಡಲಾಗಿದೆ. ಇಲ್ಲಿ ರಂಗಪ್ಪನಾಯಕನ ಹೋರಾಟದ, ಕೋಟೆಯ ನಿರ್ಮಾಣದ ಮಾಹಿತಿಯನ್ನು ಚಾರಿತ್ರಿಕವಾಗಿ ತಿಳಿಯಬಹುದಾಗಿದೆ. ಆದರೆ ಆತನ ರಾಜಧಾನಿ ಸ್ಥಾಪನೆ ಕುರಿತಂತೆ ಆತನ ಬಗೆಗೆ ಇರುವ ಲಾವಣಿಯು, ಲಿಖಿತ ಆಕರಗಳು ಹೊಂದಿರುವ ಮಾಹಿತಿಗಿಂತ ಭಿನ್ನವಾದ ಅಂಶಗಳನ್ನು ಹೊಂದಿದೆ.

ಸೀಬಿ : ತುಮಕೂರು ಕೇಂದ್ರದಿಂದ ಸುಮಾರು ೨೦ ಕಿ. ಮೀ. ದೂರದಲ್ಲಿ ರಾಷ್ಟ್ರೀಯ ಹೆದ್ದಾರಿಯ ಪಕ್ಕದಲ್ಲಿ 'ಸೀಬಿ' ಎಂಬ ಗ್ರಾಮವಿದೆ. ಇದಕ್ಕೆ ಶೀಬಿಯೂರು, ಹರಿಹರಪುರ ಎಂಬ ಅನ್ಯನಾಮಗಳೂ ಇವೆ. ಇಲ್ಲಿನ ನರಸಿಂಹಸ್ವಾಮಿ ದೇವಾಲಯದ ಸಂಕೀರ್ಣದಲ್ಲಿ ವೈವಿಧ್ಯಮಯವಾದ ಚಿತ್ರಗಳನ್ನು ಚಿತ್ರಿಸಲಾಗಿದೆ. ಸಿಂಹ> ಸಿಂಗ> ಪದದಿಂದ ಶೀಬಿ ಎಂಬ ಹೆಸರು ಬಂದಿತೆಂಬ ಅಭಿಪ್ರಾಯಗಳಿವೆ.

**ಹಂದನಕೆರೆ** : ಇದೊಂದು ಹೋಬಳಿ ಕೇಂದ್ರವಾಗಿದೆ. ಹಂದಲನಾಯಕ ಎಂಬ ಪಾಳೆಯಗಾರನು ಇಲ್ಲಿ ಕೋಟೆ ಕೊತ್ತಲನ್ನು ನಿರ್ಮಿಸಿಕೊಂಡು ಆಳುತ್ತಿದ್ದನು. ಕ್ರಿ. ಶ. ೨೦೦೫ ರಲ್ಲಿ ಬೆಂಗಳೂರಿನ ಹೊನ್ನಾರು ಪ್ರಕಾಶನದವರು ಪ್ರಕಟಿಸಿರುವ '*ಹಂದನಕೆರೆ ಹನ್ನೆರಡು ಸೋಪಾನದ ಬಾವಿ*' ಕೃತಿಯಲ್ಲಿ ಅಬ್ದುಲ್ ಹಮೀದ್‌ರವರು ದಾಖಲಿಸಿರುವಂತೆ : ಈ ಸ್ಥಳದಲ್ಲಿ ಗಣಿಕಾ ಸ್ತ್ರೀ ನಾಗತಿ ಚೆನ್ನಮ್ಮ ಎಂಬುವಳು ಹನ್ನೆರಡು ಸೋಪಾನದ ಬಾವಿಯನ್ನು ನಿರ್ಮಿಸಿದ್ದಳು. ಹಿಂದೆ ಕೆರೆ, ಬಾವಿ, ಕೋಟೆ, ಬತ್ತೇರಿಗಳನ್ನು ನಿರ್ಮಿಸುತ್ತಿದ್ದಾಗ ಪೆರ್ಬಲಿಯನ್ನು ನೀಡುತ್ತಿದ್ದ ಸಂಪ್ರದಾಯದಂತೆ ನಾಗತಿ ಚೆನ್ನಮ್ಮಳನ್ನು ಈ ಬಾವಿಗೆ ಹಾರವಾಗಿ ನೀಡಲಾಯಿತೆಂದೂ, ಆಕೆಯನ್ನು ಬಾವಿಯ ಆವರಣದ ದಕ್ಷಿಣ ದಿಕ್ಕಿನ ಗೋಡೆಯಲ್ಲಿ ಸಮಾಧಿ ಮಾಡಲಾಗಿದೆ ಎಂಬುದಾಗಿ ಸ್ಥಳೀಯರು ಅಭಿಪ್ರಾಯ ಪಡುತ್ತಾರೆ. ಇದಕ್ಕೆ ಪೂರಕವಾಗಿಯೇ ಮುಂದಿನ ಕಾವ್ಯವು ಇದೆ.

ನಾಗತಿ ಚೆನ್ನವ್ವ ಮಕ್ಕಳ ಫಲಬೇಡಿ
ಕವ್ಯಾಳೆ ಕೆರೆ ಬಾವಿ ಜನಪದಕ್ಕೆ । ನಾಯಕನ
ನೆಚ್ಚಿನ ನೆಂಟರು ಬದುಕೋಕೆ॥ [೬೬]

**ಹಾಗಲವಾಡಿ** : ಚಿಕ್ಕನಾಯಕನಹಳ್ಳಿಯ ಪಾಳೆಯಗಾರ ಭೈರಪ್ಪನಾಯಕನ ಮಗ ಒಂದನೇ ಮುದಿಯಪ್ಪನಾಯಕನು ಭಾರೀ ದಂಡನ್ನು ತೆಗೆದುಕೊಂಡು ಹೋಗಿ ಹಾಗಲದಹಳ್ಳಿ, ಹೊಸಕೆರೆ, ಅಳಿಲುಘಟ್ಟ ಮುಂತಾದ ಪ್ರದೇಶಗಳನ್ನು ಗೆದ್ದುಕೊಂಡನು. ಹಾಗಲದಹಳ್ಳಿಯಲ್ಲಿ ೧೬೧೮ರಲ್ಲಿ ಕೋಟೆ-ಕೊತ್ತಲಗಳನ್ನು ಕಟ್ಟಿಸಿದನು. ಅಂದಿನಿಂದ ಆ ಊರಿಗೆ ಹೊಸ ವೈಭವ ಬಂದು ಹಾಗಲದಹಳ್ಳಿ ಹಾಗಲವಾಡಿಯಾಯಿತು.[೬೭] ಆದಾಗ್ಯೂ ಚಿಕ್ಕನಾಯಕನಹಳ್ಳಿಯೇ ಆತನ ಆಡಳಿತ ಕೇಂದ್ರವಾಗಿತ್ತು.

ಮುದಿಯಪ್ಪನಾಯಕನ ನಂತರ ಅವನ ಮಗ ಇಮ್ಮಡಿ ಬೈರಪ್ಪನಾಯಕನು (೧೬೫೦-೧೬೭೮) ಅಧಿಕಾರಕ್ಕೆ ಬರಲಾಗಿ, ಆತನ ಕಾಲದಲ್ಲಿ ಬಿಜಾಪುರದ ಮಹಮದ್ ಆದಿಲ್‌ಷಾನ ಸೇನಾಧಿಪತಿ ರಣದುಲ್ಲಾಖಾನ್‌ನು ಮೈಸೂರಿನ ಅರಸರಿಂದ ಸೋತು ಹಿಂತಿರುಗಿದ ಮಾರ್ಗಮಧ್ಯದಲ್ಲಿ ಚಿಕ್ಕನಾಯಕನಹಳ್ಳಿಯನ್ನು ಆಕ್ರಮಿಸಿಕೊಂಡನು. ಸೋತ ಇಮ್ಮಡಿ ಬೈರಪ್ಪನಾಯಕನು ತನ್ನ ರಾಜ್ಯದ ಅರ್ಧಭಾಗವನ್ನು ಮತ್ತು ಚಿಕ್ಕನಾಯಕನಹಳ್ಳಿಯನ್ನು ರಣದುಲ್ಲಾಖಾನ್‌ನಿಗೆ ಬಿಟ್ಟು ಕೊಟ್ಟು ಹಾಗಲವಾಡಿಗೆ ಬಂದು ಇದನ್ನೇ ರಾಜಧಾನಿಯನ್ನಾಗಿ ಮಾಡಿಕೊಂಡನು.[೬೮] ಪ್ರಾರಂಭದಲ್ಲಿ ಸುಮಾರು ನೂರೈವತ್ತು ವರ್ಷಗಳ ಕಾಲ ಇಲ್ಲಿಂದಲೇ ಆಳ್ವಿಕೆ ನಡೆಸಿದರು. ಒಂಭತ್ತನೆಯ ದೊರೆ ಮುದಿಯಪ್ಪನಾಯಕ ಹಾಗೂ ಇತರ ದೊರೆಗಳು ತೋರಿಸಿದ ಪರಾಕ್ರಮದಿಂದ ಮುಂದಿನ ದೊರೆಗಳು 'ಹಾಗಲವಾಡಿ ಪಾಳೆಯಗಾರ' ರೆಂದು ಖ್ಯಾತರಾದರು. ಚಿಕ್ಕನಾಯಕನ ಹಳ್ಳಿಯಿಂದ ಹಾಗಲವಾಡಿಗೆ ರಾಜಧಾನಿಯನ್ನು ವರ್ಗಾಯಿಸಿದರೂ, ಚಿಕ್ಕನಾಯಕನಹಳ್ಳಿ ಮತ್ತು ಎರೆಕಟ್ಟೆ / ಯರಘಟ್ಟಗಳು ಹಾಗಲವಾಡಿ ಸಂಸ್ಥಾನದ ಉಪ ರಾಜಧಾನಿಗಳಾಗಿದ್ದವು. ಹಾಗಲವಾಡಿ ನಾಯಕ ಮನೆತನದವರು

ಚಿಕ್ಕನಾಯಕನಹಳ್ಳಿಯನ್ನು ಕ್ರಿ. ಶ. ೧೪೭೮ ರಿಂದ ೧೭೭೪ರ ವರೆಗೆ ಅಂದರೆ ಮುನ್ನೂರು ವರ್ಷಗಳ ಕಾಲ ಆಳ್ವಿಕೆ ಮಾಡಿದರು.

**ಹುಳಿಯಾರು** : ಹುಳಿಯಾರು ಗ್ರಾಮವು ಚಿಕ್ಕನಾಯಕನಹಳ್ಳಿ ತಾಲೂಕಿನ ಹೋಬಳಿ ಕೇಂದ್ರವಾಗಿದೆ. ಎಫಿಗ್ರಾಫಿಯ ಕರ್ನಾಟಿಕ ಸಂಪುಟ ೧೨, ಚಿಕ್ಕನಾಯಕನಹಳ್ಳಿ ೧೧ (ಕ್ರಿ. ಶ. ೧೧೭೨) ರಲ್ಲಿ ಹುಳಿಯರ ಎಂದು, ಕರ್ನಾಟಿಕ ಸಂಪುಟ ೧೨, ಚಿಕ್ಕನಾಯಕನಹಳ್ಳಿ ೩೬ (ಕ್ರಿ. ಶ. ೧೧೭೭) ರಲ್ಲಿ ಹುಳಿಎರ ಎಂದು ಉಲ್ಲೇಖಿಸಲಾಗಿದೆ. ಇದೊಂದು ಪ್ರಾಚೀನ ಆಡಳಿತ ಕೇಂದ್ರವಾಗಿದೆ. ಹುಳಿಯಾರು ನಾಡಿನಲ್ಲಿದ್ದ ಸೀಮೆಗಳೆಂದರೆ – ಮಗರೆ ೩೦೦, ಹಿರಿಯೂರು, ಸವಣುಗೆರೆ, ಬೂದಿಹಾಳು, ಮನ್ನೆಯ(ಮಣ್ಣೆ), ಬದಿರೆ, ತಂಡಗ, ಡಿಂಕನಹಾಳು, ಭೀಮಸಂದ್ರ, ಪುಟ್ಟದಗೋ೯ಡು, ಕಾಡನೂರು ೭೦, ದುರುಹಸೆ ೭೦, ಹೆಜ್ಜಾಜಿ ೧೨. ಇವುಗಳಲ್ಲಿ ಕಾಡನೂರು ೭೦, ದುರುಹಸೆ ೭೦, ಹೆಜ್ಜಾಜಿ ೧೨ ಸೈನಿಕ ಆಡಳಿತ ಕೇಂದ್ರಗಳಾಗಿದ್ದವು.[೬೯]

ಸ್ಥಳಪುರಾಣದಂತೆ : ಬೇಟೆಗೆಂದು ತನ್ನ ನಾಯಿಯ ಸಂಗಡ ಬಂದ ರಾಜನೊಬ್ಬನು ಆಯಾಸಗೊಂಡು ಈ ಪ್ರದೇಶದಲ್ಲಿ ಮಲಗಿದ್ದನು. ಈ ಸಂದರ್ಭದಲ್ಲಿ ಇಲ್ಲಿಗೆ ಬಂದ ಹುಲಿಯೊಂದಿಗೆ ಸೆಣೆಸಿತು ಹುಲಿಯನ್ನು ಬೇಟೆ ನಾಯಿಯು ಕೊಂದು ಹಾಕಿತು. ನಿದ್ದೆಯಿಂದ ಎದ್ದ ರಾಜನು ಸತ್ತಿರುವ ಹುಲಿಯನ್ನು ಕಂಡು ನಾಯಿಯೇ ಹುಲಿಯಾಯಿತೇ? ಎಂಬ ಗೊಂದಲದಲ್ಲಿ ನಾಯಿಯರು? ಹುಲಿಯಾರು? ಎಂದು ನಾಯಿಗಾಗಿ ಹುಡುಕಿದನು. ಈ ಕಾರಣದಿಂದಲೇ ಈ ನೆಲೆಗೆ ಹುಲಿಯಾರು> ಹುಳಿಯಾರು ಎಂಬ ಸ್ಥಳನಾಮವು ರೂಢಿಗೆ ಬಂದಿದೆ. ಇದಕ್ಕೆ ಪೂರಕವೆಂಬಂತೆ ಹುಳಿಯಾರಿನಲ್ಲಿ ಹುಲಿಯನ್ನು ಕೊಲ್ಲುತ್ತಿರುವ ನಾಯಿಯ ಚಿತ್ರವಿರುವ ಶಿಲಾ ಸ್ಮಾರಕವಿದೆ.

**ಹೆಬ್ಬೂರು** : ಘನಪುರಿ ಎಂಬುದು ಹೆಬ್ಬೂರು ಗ್ರಾಮದ ಮೊದಲ ಹೆಸರು. ಹಿರಿದಾದ ಊರು ಹೆಬ್ಬೂರು ಎಂಬ ಅರ್ಥವಿದೆ. ಶಾಸನಗಳಲ್ಲಿ ಪೆಬ್ಬೂರು ಎಂದು ಉಲ್ಲೇಖಿಸಲಾಗಿದೆ. ಪೆಬ್ಬೂರು ಕ್ರಮೇಣ ಹೆಬ್ಬೂರು ಆಗಿರುವ ಸಾಧ್ಯತೆಯಿದೆ.

**ಹೊಳವನಹಳ್ಳಿ** : ಹಿಂದೆ ಕೊರಮಪುರ ಎಂದು ಕರೆಯಲಾಗುತ್ತಿದ್ದ ಹೊಳವನಹಳ್ಳಿಯನ್ನು ಹೊಳವೇಗೌಡ ಎಂಬುವನು ಆಳುತ್ತಿದ್ದನು. ಅವತಿನಾಡಿ ರಣಬೈರೇಗೌಡನ ಸಂಬಂಧಿಯಾದ ಭೈರೇಗೌಡನು ಇಲ್ಲಿನ ಪ್ರಕೃತಿ ಸೌಂದರ್ಯಕ್ಕೆ ಹಾಗೂ ಪ್ರಜೆಗಳು ಮತ್ತು ಅರಸನ ಸಂಬಂಧಿಕರ ಆತಿಥ್ಯಕ್ಕೆ ಮಾರುಹೋಗಿ ಇಲ್ಲಿ ತಂಗಿದ್ದನು. ರಣಬೈರೇಗೌಡನು ಚಾರಿತ್ರಿಕ ವ್ಯಕ್ತಿಯಾಗಿದ್ದು, ಪಾಳೆಯಗಾರನಾಗಿದ್ದಾನೆ. ಮಾಗಡಿಯ ಕೆಂಪೇಗೌಡನ ೧೬೫೮–೧೬೭೮ ಸಮಕಾಲೀನನಾಗಿದ್ದ ಈತನು ಕೊರಟಗೆರೆ ಗ್ರಾಮದ ಸ್ಥಾಪಕನಾಗಿದ್ದಾನೆ. ಹೊಳವೇಗೌಡನ ಮರಣದ ತರುವಾಯ ರಣಬೈರೇಗೌಡನು ಕೊರಮಪುರದ ಸುತ್ತಲೂ ಕೋಟೆಯನ್ನು ಕಟ್ಟಿಸಿ

ಹೊಳವೇಗೌಡನೊಂದಿಗೆ ಸ್ನೇಹದಿಂದ ಇದ್ದನು. ಈ ಸ್ನೇಹದ ಕುರುಹಾಗಿ ಈ ಗ್ರಾಮಕ್ಕೆ ಹೊಳವನಹಳ್ಳಿ ಎಂದು ಹೆಸರಿಟ್ಟನು.[೭೦]

**ಹೊಲತಾಳು** : ಹೊಲತಾಳು ಸ್ಥಳನಾಮದ ಬಗ್ಗೆ ಇರುವ ಜನಪದ ಕಥೆಯಂತೆ : ಸೂಳೆಕಲ್ಲುಬೆಟ್ಟ ಎಂಬುದಾಗಿ ಕರೆಯಲಾಗುವ ಬೆಟ್ಟದಿಂದ ಬಂಡಿಹೊಳೆಯ ಮೂಲಕ ಕುರಂಗರಾಜನು ತನ್ನ ಸೂಳೆಯನ್ನು ಕರೆತರುವಾಗ ಆಕೆಯು ಮಾರ್ಗ ಮಧ್ಯದಲ್ಲಿ ಮಾಸಿಕ ಭಹಿಷ್ಠೆಯಾದಳು. ಸಿದ್ಧರಗಿರಿಯು ಮಡಿವಂತಿಕೆಯ ನೆಲೆಯಾಗಿದೆ ಎಂದು ಭಾವಿಸಲಾಗಿದ್ದುದರಿಂದ ಆಕೆಯನ್ನು ಅಲ್ಲಿಯೇ ನೆಲೆಗೊಳಿಸಿದನು. ಕುರಂಗರಾಯನ ಹೆಂಡತಿಯು ಹೊಲತಿಯಾದಳು ಎಂದು ಹೇಳಲಾಗುವ ಸ್ಥಳವನ್ನು ಇಂದು 'ಹೊಲತಾಳು' (ಹಾಳು ಎಂದರೆ ನೆಲ, ಸ್ಥಳ ಎಂದರ್ಥ) ಎಂದು ಕರೆಯಲಾಗುತ್ತಿದೆ.[೭೧] ಇಲ್ಲಿ ಅಂದಿನ ಅರಮನೆಯ ಅವಶೇಷದಂತೆ ಕಾಣುವ ಸ್ಮಾರಕವಿದೆ.

## ೩.೪ ಮೌಖಿಕ ಆಕರಗಳು

ಶಿಷ್ಟ ಪರಂಪರೆಯ ಚರಿತ್ರೆಯು ಏಕಮುಖವಾದ ಇತಿಹಾಸವಾಗಿದೆ. ಸಾಮಾನ್ಯವಾಗಿ ಇದು ದಿಗ್ವಿಜಯದ ಚರಿತ್ರೆಯಾಗಿದ್ದು ಜನಸಾಮಾನ್ಯರ ಸಾವು, ನೋವು, ತಲ್ಲಣಗಳನ್ನು ಮರೆಮಾಚಿರುತ್ತದೆ. ಆದರೆ ಮೌಖಿಕ ಆಕರಗಳು ಬಹುರೂಪಿಯಾಗಿದ್ದು, ಸಂವೇದನಾಶೀಲತೆಯನ್ನು ಹೊಂದಿರುತ್ತವೆ. ಮೌಖಿಕ ಆಕರಗಳು ಲಿಖಿತ ಪರಂಪರೆಯ ಅಂಶಗಳಿಗಿಂತ ಭಿನ್ನವಾಗಿರುತ್ತವೆ. ಅಕ್ಷರಸ್ಥರಿಂದ ರಚಿತವಾದ ಲಿಖಿತ ಶಾಸನ, ಸಾಹಿತ್ಯ ಕೃತಿಗಳು, ಪ್ರವಾಸಿ ಬರಹಗಳು ಕೆಲವೊಮ್ಮೆ ಪೂರ್ವಗ್ರಹಗಳಿಂದ ಸೃಷ್ಟಿಸಿದವುಗಳಾಗಿರುತ್ತವೆ ಎಂಬ ಅಭಿಪ್ರಾಯವಿದೆ. ಬಹುತೇಕ ಇವುಗಳು ಇತಿಹಾಸಕ್ಕೆ ಪೂರಕವಾಗಿವೆ. ಆದರೂ ತಲವರ್ಗದ ಬದುಕಿನ ಬಗ್ಗೆ ಸಂಪೂರ್ಣವಾದ ಮಾಹಿತಿಯು ಇವುಗಳಿಂದ ಲಭಿಸುವುದಿಲ್ಲ. ಆದರೆ ಮೌಖಿಕ ಆಕರಗಳು ನೈಜವಾದ ಮಾಹಿತಿಯನ್ನು ಮುಖ್ಯವಾಗಿ ಆಳುವ ವರ್ಗದ ದುಷ್ಟತೆ, ಸ್ವಾರ್ಥ, ಹಿಂಸಾತ್ಮಕ ಕೃತ್ಯಗಳನ್ನೂ ವಿವರಿಸುವ ಮೂಲಕ ಆ ವರ್ಗದ ಮುಲಾಜಿನ ಎಲ್ಲೆಯನ್ನು ಮೀರಿರುತ್ತವೆ. ಪ್ರಭುತ್ವವನ್ನು ಫ್ಯಾಂಟಸಿಯ ಮೂಲಕ ವಿಮರ್ಶಿಸುವ, ಆಳುವ ವರ್ಗದ ದೌರ್ಬಲ್ಯಗಳನ್ನು ಗುರ್ತಿಸುವ, ಲೋಲುಪತೆಯನ್ನು ವಿಡಂಭಿಸುವ ಗುಣಗಳನ್ನು ಮೌಖಿಕ ಆಕರಗಳು ಹೊಂದಿರುತ್ತವೆ.[೭೨]

ತುಮಕೂರು ಜಿಲ್ಲೆಯಲ್ಲಿ ಲಭ್ಯವಿರುವ ಮೌಖಿಕ ಆಕರಗಳು ಇಲ್ಲಿ ಆಚರಣೆಯಲ್ಲಿರುವ ಮೌಖಿಕ ಸಂಪ್ರದಾಯಗಳನ್ನು ವಿಶ್ಲೇಷಿಸುವಲ್ಲಿ ಸಹಾಯಕವಾಗಿವೆ. ಲಿಖಿತ ಆಕರಗಳು ಮೌಖಿಕ ಸಂಪ್ರದಾಯಗಳನ್ನು ಅಧ್ಯಯನ ಮಾಡಲು ಲಭ್ಯವಾಗದೇ ಇದ್ದಾಗ ಮೌಖಿಕ ಆಕರಗಳು ಇದಕ್ಕೆ ಪೂರಕವಾಗಿ ಸ್ಪಂದಿಸುತ್ತವೆ. ಒಂದೊಂದು ಜೀವನವೂ ಒಂದೊಂದು ಸಂಸ್ಕೃತಿ ಎಂದು ಭಾವಿಸುವುದಾದರೆ ಜನಪದಕಾವ್ಯಗಳು ಹಲವು ಸಂಸ್ಕೃತಿಗಳ ನಡುವಣ

ಸಂಘರ್ಷಗಳನ್ನು ಅಭಿವ್ಯಕ್ತಿಸುತ್ತವೆ. ಎಲ್ಲರಂತೆ ಸಹಜವಾಗಿ ಬಾಳಿ ಬದುಕಿದ ನಂತರದಲ್ಲಿ ಮಹಾತ್ಮರಾದ ವ್ಯಕ್ತಿಗಳ ಜೀವನವನ್ನು ಸಾಮಾನ್ಯರಾದ ಜನರ ಜೀವನದಂತೆ ಪರಿಗಣಿಸದೇ ಉಳಿದವರಿಗಿಂತ ವಿಶೇಷನಾದವನು ಎಂದು ಭಾವಿಸಲಾಗುತ್ತದೆ. ಘಟನೆ ಅಥವಾ ವ್ಯಕ್ತಿಯನ್ನು ಆವಾಹಿಸಿ ಆತನ ಮೌಲ್ಯಗಳನ್ನು ರೂಢಿಸಿಕೊಳ್ಳುವ ಪ್ರಯತ್ನವನ್ನು ಮಾಡಲಾಗುತ್ತದೆ. ಶ್ರೇಷ್ಠ ವ್ಯಕ್ತಿಯೊಬ್ಬನನ್ನು ಒಂದೇ ಸ್ಥಳ, ಕುಲ, ವರ್ಗಕ್ಕೆ ಸೀಮಿತಗೊಳಿಸದೇ ಸಾರ್ವತ್ರಿಕಗೊಳಿಸುವ ಜನಪದರ ಪ್ರಯತ್ನಗಳ ಫಲವಾಗಿ ಪುರಾಣ, ಪ್ರತೀತಿ, ಸಾಮಾನ್ಯ ನಂಬಿಕೆಗಳು ಹುಟ್ಟಿಕೊಳ್ಳುತ್ತವೆ. ಈ ಹಿನ್ನೆಲೆಯಲ್ಲಿ ತುಮಕೂರು ಪ್ರದೇಶದಲ್ಲಿ ಮೌಖಿಕ ಆಕರಗಳು ಲಭಿಸುತ್ತವೆ. ಅವುಗಳೆಂದರೆ ಜನಪದ ಕಾವ್ಯಗಳು, ಲಾವಣಿಗಳು, ಐತಿಹ್ಯಗಳು, ನಂಬಿಕೆಗಳು, ಕಾದಂಬರಿ, ಪ್ರತೀತಿ ಮುಂತಾದುವು.

**ಜನಪದ ಕಾವ್ಯಗಳು** : ಕೆಳಕಂಡ ಸಾಂಸ್ಕೃತಿಕ ವೀರರಿಗೆ ಸಂಬಂಧಿಸಿದ ಹಲವು ಜನಪದ ಕಾವ್ಯಗಳನ್ನು ತುಮಕೂರು ಪರಿಸರದಲ್ಲಿ ಕಾಣಬಹುದಾಗಿದೆ. ವಡ್ಡಗೆರೆ ಈರುನಾಗಮ್ಮ, ಈರುಗ್ಯಾತರಾಯ, ಬಂದಕುಂಟೆ ಈರುಚಿಕ್ಕಣ್ಣ, ಮಾಗೋಡು ರಂಗನಾಥ, ಹಾಗಲವಾಡಿಯ ಜುಂಜಪ್ಪ, ಚಿತ್ರದೇವರು, ದಿಬ್ಬದವೀರಬೊಮ್ಮಣ್ಣ, ಬಳ್ಳೆಕಟ್ಟೆ ಈರಣ್ಣ, ಹೊನ್ನೇಮರದ ಈರಣ್ಣ, ಶೂಲದ ಈರಣ್ಣ, ವೀರಬಂಡಣ್ಣ, ಜಲಧಿ ಬಪ್ಪಣ್ಣ, ಮರೂರು ವೀರನಾಗಪ್ಪ, ಬರಗೂರು ಈರಮ್ಮ, ಹುಳಿಯಾರು ಕೆಂಚಮ್ಮ, ಮದ್ದೇ ಮತ್ತು ಕರೇಕ್ಯಾತನಹಳ್ಳಿಯ ಸ್ವಾರಮ್ಮ, ಪಚ್ಚೆಹೊನ್ನಪ್ಪ, ಅಪ್ಪಣ್ಣಗೌಡ, ಬೆಳವಾಡಿ ಅಜ್ಜಪ್ಪ, ಕುಂಬಾರಳ್ಳಿ ಅಜ್ಜಪ್ಪ, ಮೈಗದೀರಣ್ಣ, ತಿರುಮಲ ದೇವರ ಪೂಜಾರಿ ಮರಿಯಣ್ಣ, ವೀರ ಮುದ್ದಣ್ಣ, ಇಟಕ ದಿಬ್ಬನಹಳ್ಳಿ ವೀರತಿಮ್ಮಯ್ಯ, ವೀರ ಸೀಗಣ್ಣರ ಅಸಾಧಾರಣ ವ್ಯಕ್ತಿತ್ವಗಳನ್ನು ಈ ಕಾವ್ಯಗಳಲ್ಲಿ ಗುರುತಿಸಲಾಗಿದೆ.

**ಲಾವಣಿಗಳು** : ಸಿರಾ ರಂಗಪ್ಪನಾಯಕನ ಲಾವಣಿ, ನಿಡಗಲ್ಲು ವಂಶದ ಹೊಟ್ಟೆಣ್ಣ ನಾಯಕನ ಲಾವಣಿ, ಕೆರೆಹೊನ್ನಮ್ಮನ ಲಾವಣಿಗಳು ಮುಂತಾದುವು.

**ಐತಿಹ್ಯಗಳು** : ಮಿಡಿಗೇಶಿ, ಸಿದ್ಧರಬೆಟ್ಟದ ಬೂದಗವಿ, ದೇವರಾಯನದುರ್ಗದ ನಾಮದ ಚಿಲುಮೆ, ಸಿದ್ಧಗಂಗಾಮಠ, ಚೆನ್ನರಾಯನದುರ್ಗ, ಸಿದ್ಧಗಂಗಾಮಠ, ಯಡಿಯೂರು, ಕೈದಾಳ, ಅರಳಗುಪ್ಪೆ, ಕುಣಿಗಲ್‌ಕೆರೆ, ಸೀಬಿ ದೇವಾಲಯದ ಚಿತ್ರಗಳು, ದೇವಾರಾಧನೆ ಸಂಧರ್ಭದಲ್ಲಿ ನಡೆಯುವ ಸೋಮನ ಕುಣಿತ, ಕೋಟೆ ಕೊತ್ತಲುಗಳಿಗೆ ಸಂಬಂಧಿಸಿದ ಐತಿಹ್ಯಗಳು ಮುಂತಾದುವು.

**ನಂಬಿಕೆಗಳು** : ಶಿಂಷಾ ನದಿಯ ಬಲದಂಡೆಯಲ್ಲಿ ಗುಬ್ಬಿ ತಾಲೂಕಿನಲ್ಲಿರುವ ಊರು ಕಡಬ, ಇಲ್ಲಿನ ನದಿ ದಂಡೆಯಲ್ಲಿ ಕದಂಬ ಎಂಬ ಋಷಿಯು ತಪಸ್ಸು ಮಾಡುತ್ತಿದ್ದನು ಎಂಬುದು ನಂಬಿಕೆ. ಲಂಕೆಯಿಂದ ಹಿಂದಿರುಗುತ್ತಿದ್ದ ಶ್ರೀರಾಮನು ಇಲ್ಲಿಗೆ ಬಂದಿದ್ದನೆಂದು ಆತನನ್ನು

ಸತ್ಕರಿಸಿದ ಋಷಿಯು ಶ್ರೀರಾಮನ ಪ್ರತಿಮೆಯನ್ನು ಸ್ಥಾಪಿಸಿದನೆಂಬ ನಂಬಿಕೆಯಿದೆ. ಸೀತೆಯ ಪರಿವಾರದವರಿಗೆ ಸ್ನಾನ-ಪಾನಾದಿಗಳಿಗೆ ಅನುಕೂಲವಾಗುವಂತೆ ಕಿರಿದಾದ ನದಿ ಪಾತ್ರವನ್ನು ಅಗಲಗೊಳಿಸುವಂತೆ ಮಾಡಿದ ಪ್ರಾರ್ಥನೆಗೆ ಸ್ಪಂಧಿಸಿ ಕೆರೆಯೊಂದನ್ನು ನಿರ್ಮಿಸಿದನಂತೆ. ತುರುವೇಕೆರೆ ಬಳಿ ಇರುವ ಸಂಪಿಗೆಯು ಮಹಾಭಾರತ ಕಾಲದ ಚಂಪಕನಗರವೆಂದು ನಂಬಲಾಗಿದೆ. ಇದು ಮಹಾರಾಜ ಹಂಸಧ್ವಜನ ಮಗ ಸುಧನ್ವನ ರಾಜಧಾನಿಯಾಗಿತ್ತು. ತುರುವೇಕೆರೆಯ ಹಳೇತಂಡಗದಲ್ಲಿ ಶಾಲೀವಾಹನ ಶಕಪುರುಷನು ಹುಟ್ಟಿದ್ದನೆಂಬ ನಂಬಿಕೆಯಿದೆ.[೭೩] ಇಂತಹ ಹಲವು ನಂಬಿಕೆಗಳು ಜಿಲ್ಲೆಯಾದ್ಯಂತ ಕಂಡು ಬರುತ್ತವೆ.

**ಕಾದಂಬರಿ** : ಡಾ. ನಾಗರಾಜು ಓ. ರವರು 'ಕುರಂಗರಾಜ ವೈಭವ' ಎಂಬ ಐತಿಹಾಸಿಕ ಕಾದಂಬರಿಯನ್ನು ರಚಿಸಿದ್ದಾರೆ. ಕುರಂಗರಾಜ ಎಂಬುವವನು ತಲವರ್ಗದ ಅರಸನೆಂದು ಗುರುತಿಸಲಾಗಿದೆ. ಈತನು ಇಂದಿನ ಕೊರಟಗೆರೆ ತಾಲೂಕಿನ ಸಿದ್ಧರಬೆಟ್ಟದಲ್ಲಿ ಆಳುತ್ತಿದ್ದನು. ಮದ್ದಗಿರಿ ಮಹಾನಾಡ ಪ್ರಭುಗಳ ಮಾಂಡಲೀಕನಾಗಿ ಇಲ್ಲಿ ಆಳಿದ್ದನೆಂದು ಹೇಳಲು ಆಕರಗಳಾಗಿ ಹಲವು ಪ್ರಾಕ್ತನ ಕುರುಹುಗಳು ಹಾಗೂ ಮೌಖಿಕ ಸಂಪ್ರದಾಯಗಳು ಆಚರಣೆಯಲ್ಲಿವೆ.

**ಪ್ರತೀತಿ** : ಪಾಂಡವರಾದ ಧರ್ಮರಾಯ, ಭೀಮ, ಅರ್ಜುನ, ನಕುಲ, ಸಹದೇವರಿಂದ ಏಳುಸುತ್ತಿನ ಕೋಟೆ ನಿರ್ಮಿಸಿದ್ದರೆಂಬುದು, ಇಟಕದಿಬ್ಬನಹಳ್ಳಿ ಸಮೀಪದ ಬೇಚರಾಕ್ ಗ್ರಾಮದಲ್ಲಿರುವ ಕೋಟೆಗಳ ಅವಶೇಷಗಳೇ ಆ ಏಳುಸುತ್ತಿನ ಕೋಟೆ ಎಂಬ ಪ್ರತೀತಿಯಿದೆ. ಮಿಡಿಗೇಶಿ ಸಮೀಪದ ಕತ್ತಿರಾಜನಹಳ್ಳಿಯ ಬೆಟ್ಟದಲ್ಲಿ ಕುಂತಿಬಂಡೆ, ಭೀಮನ ಬಂಡೆಗಳೆಂದು ಹೆಸರಿಸಲಾಗಿರುವ ಬಂಡೆಗಳಿವೆ.

**ಗಾದೆಗಳು** : ವೇದ ಸುಳ್ಳಾದರೂ ಗಾದೆ ಸುಳ್ಳಾಗದು ಎಂಬ ನಾಣ್ಣುಡಿಯಿದೆ. ಗಾದೆಗಳು ಜನಮನದ ಮೂಲ ತಿರುಳನ್ನು ಹೊಂದಿವೆ. ಇವು ಸಮುದಾಯದ ಬದುಕಿನ ಕನ್ನಡಿಯಂತೆ ಇರುವುದರಿಂದ, ಚರಿತ್ರಕಾರನಿಗೆ ಆಕರಗಳಾಗಿವೆ. ಹೀಗಾಗಿ ತುಮಕೂರು ಪರಿಸರದಲ್ಲಿ ಪ್ರಚಲಿತವಿರುವ ಹಲವು ಗಾದೆಗಳನ್ನು ಸಂಗ್ರಹಿಸಲಾಗಿದೆ.

## ಟಿಪ್ಪಣಿಗಳು

೧. ***"ತುಮಕೂರು ಜಿಲ್ಲಾ ಗೆಜೆಟಿಯರ್"*** ೨೦೧೭. ಕರ್ನಾಟಕ ಸರ್ಕಾರ. ಪುಟ-೩

೨. ***ಅದೇ,*** ಪುಟ ೭-೮

೩. ***ಅದೇ,*** ಪುಟ ೧೨-೧೪

೪. ***ಅದೇ,*** ಪುಟ-೪೦

೫. ........... ಶಕವರ್ಷ ೮೭೭ .... ಕ್ಷಸನೆಂಬ
ದೊಳ್ತುಮ್ಮೆಗೂರು ಕೆಲುಲೆಯವೊಳೆದೊ

ಉಲೆಣ್ಬರ ಬೆಸೆದೊಳೆ ಕನ್ದಮ .ಮಕ್ಕಳ ಅಜ್ಜವಯ್ಯ ತ್ತಿಯಣ್ಣ ಸಮ
ಉಲೆಯಯೊಡೆಂಯಂ ಕಟ್ಟಿ......
ಕಟ್ಟಿದ ಯೊಟ್ಟಜ್ಞೆ ಪರ್ನಿಖಂ
ಣ್ಣುಗ ಮಣ್ಣು ಬಿತ್ತು ವಟ್ಟಮುಮಂ ಬ್ರಹ್ಮವುತ್ತ
ರಮನೆಯ್ದು ಪೆಸರಮಂ ಕೊಟ್ಟು ಪಟ್ಟಂಗಟ್ಟಿಮ
....ವಾರುಂ ಮೂಲು ದೊರೆಯಂಯೆನ್ದ ಈತ್ತ
ರು ಕಾತಿಂಗೆಯು ಬೆಸೆಗೆಯುಯೆನ್ದಡೆ ನಡೆಸುಗಂ
ಬಹುಭೀರ್ವ್ಯ ಸುಧಾ ಭುಕ್ತಾರಾಜ ಭಿಯಸ್ಸಯ ಸ್ಕದಾ ಭೂಮಿ.....

–ಶ್ರೀಪಾದಭಟ್, ಎಲ್.ಪುಟ್ಟರಾಜು ೨೦೧೧ ***"ತುಮಕೂರು ಜಿಲ್ಲೆಯ ಸ್ಥಳನಾಮಗಳು"*** ತುಮಕೂರು ವಿಶ್ವವಿದ್ಯಾಲಯ ಪುಟ–೨೬
–ಯೋಗೀಶ್ವರಪ್ಪ ಡಿ. ಎನ್. ರವರು ಈ ಶಾಸನವನ್ನು ಪುನರ್ ಪರಿಶೀಲನೆ ಮಾಡಿದ್ದಾರೆ. ಅದರ ಪಾಠವನ್ನು ಈ ಕೆಳಕಂಡಂತೆ ಓದಲಾಗಿದೆ –ಯೋಗೀಶ್ವರಪ್ಪ. ಡಿ. ಎನ್. ೨೦೧೨ ***"ಕಲ್ಪಶೋಧ"*** ಬೆಂಗಳೂರು, ಪ್ರಗತಿ ಗ್ರಾಫಿಕ್ಸ್ ಪುಟ–೩೬೯

..........ಶಕವರ್ಷ ೯೨೨ ..........ಕ್ರಶನೆಂಬ
ದೊ(ದೇ)ಳ್ತುಮ್ಮೆ (ಮ್ಮ)ಗೂರ ಕೆರೆ ವೊ (ಚೋ)ಳೆದೇ .........
ರೆಣ್ಬರ ಬೆಸದೇಳೆ (ಳಾ) ಕನ್ಧಮ........
ಮಕ್ಕಳ್ ಅಜ್ಜಮಯ್ಯ ........
...........ತ್ತಿಯಣ್ಣ ಸ(ನು)ಮ .......
ರಿಯ ಯೊಡೆಯಂ ಕಟ್ಟಿ ........
ಕಟ್ಟಿದ ಲೊಟ್ಟಣ್ಡೆ ........ ತನ್ನಿರ್ಖಂ
ಣ್ಣುಗ(ಂ)ಮಣ್ಣು (ಣ್ಣ) ಬಿತ್ತುವಟ್ಟ ಮು ಮಂ ಬ್ರಹ್ಮವುತ್ತ
ಎ ಮೆ(ನೆ)ನ್ದು ಪೆಸರುಮಂ ಕೊಟ್ಟು ಪಟ್ಟಂ ಗಟ್ಟಿ ಮ
............ವಾ(ವ)ರುಂ ಮೂ(ವೂ)ರು ದೊ(ಕೆ)ರೆಯುಂ ಯೊನ್ದು ಈ (ಕ)ತ್ತ........
ರು ಕಾ(ರಾ)ತ್ರಿಂಗೆಯು ಬೆಸಗ(ಂಗೆ)ಯು ಯೆನ್ದ(ನ್ನ)ಡೆ(ದೆ) ನಡೆ
ಯಿಸುಗುಂ ಬಹುಭಿರ್ವ ಸಯಧಾ ಭುಕ್ತಾರಾಜ
................ಭಿಯಸ್ಯೈಯಸ್ಯ ಯದಾಭೂಮಿ
..............................

೬. ಚಾಲುಕ್ಯ ಸಾಮಂತ ವಿಮಲಾದಿತ್ಯನು ಚಾಕೀರಾಜನ ಸಹೋದರಿಯ ಮಗ (ಭಾಗಿನೇಯ) ಎಂದು ಗುರುತಿಸಲಾಗಿದೆ. *–ಎ.ಕ ೨೪* ಪುಟ xxxv. ಮಣ್ಣೆಯ ಪಶ್ಚಿಮಕ್ಕಿದ್ದ ಭೂತಶಿಲಾ ಗ್ರಾಮದ ಬಸದಿಗೆ ಇಡಗೂರು ವಿಷಯದಲ್ಲಿನ ಜಾಲಮಂಗಲ ಗ್ರಾಮವನ್ನು ದಾನವಾಗಿ ನೀಡಲಾಗಿದೆ. ಈ ದಾನವನ್ನು ಚಾಲುಕ್ಯ ವಂಶದ ಬಾಲವರ್ಮನ ಮೊಮ್ಮಗ ವಿಮಲಾದಿತ್ಯನಿಗೆ ಹಿಡಿದಿದ್ದ ಶನಿಕಾಟದ ವಿಮುಕ್ತಿಗಾಗಿ ನೀಡಲಾಗಿತ್ತು. ಈ ವಿಮಲಾದಿತ್ಯನು ಕುಣಿಗಲ್‌ನ್ನು ಆಳುತ್ತಿದ್ದನು. ಇವನ ಅಧಿಕಾರಿಯೇ ಚಾಕಿರಾಜ. *–ತುಮಕೂರು ಗೆಜೆಟಿಯರ್. ಪುಟ ೪೩–೪೪*

೭. ***"ತುಮಕೂರು ಜಿಲ್ಲಾ ಗೆಜೆಟಿಯರ್"*** ೨೦೧೭. ಪುಟ–೪೩

೮. ಶ್ರೀಪಾದಭಟ್, ಎಲ್. ಪುಟ್ಟರಾಜು ೨೦೧೧ ***"ಪೂರ್ವೋಕ್ತ"*** ಪುಟ–೨೮

೯. ***"ತುಮಕೂರು ಜಿಲ್ಲಾ ಗೆಜೆಟಿಯರ್"*** ೨೦೧೭ ಪುಟ–೪೫

೧೦. ***ಅದೇ*** ಪುಟ–೪೮

೧೧. *ಅದೇ* ಪುಟ-೪೯

೧೨. *ಅದೇ* ಪುಟ-೫೧

೧೩. *ಎ. ಕ. ಸಂ ೨೪. ೨೦೦೯* ತುಮಕೂರು ೪೧ ರಲ್ಲಿ ಉಲ್ಲೇಖಿಸಿರುವಂತೆ : ಶಾಲೀವಾಹನ ಶಕ ೧೧೯೨ (ಕ್ರಿ. ಶ. ೧೨೭೦) ರಲ್ಲಿ ಹೊಯ್ಸಳ ಮೂರನೇ ನರಸಿಂಹನ ದಂಣಾಯಕ ಚಿಕ್ಕವೀರಕೇತಯ್ಯನು ಆನೆಬಿದ್ದಸರಿವನ್ನು ಆಳುತ್ತಿದ್ದನು. ಈತನ ಸಾಮಂತನಾದ ಗೂಳೆನಾಯಕನು ನಿಡಗಲ್ಲು ಚೋಳ ಅರಸು ಯಿರುಂಗೋಳನ ಸಂವರಣೆಯಲ್ಲಿ ಭಾಗವಹಿಸಿ ಚಿಕ್ಕಕೇತಯದಂಣಾಯಕನ ಸಾಮಂತ ಅಪ್ಪೆಯನಾಯಕನ ಮೇಲೆ ಆಕ್ರಮಣ ಮಾಡಿ ತುರುಗಳನ್ನು ವಶಪಡಿಸಿಕೊಂಡಿದ್ದನು ಈ ಯುದ್ಧದಲ್ಲಿ ಅಪ್ಪೆಯನಾಯಕನು ವೀರಮರಣವನ್ನಪ್ಪಿದನು.

೧೪. ***"ತುಮಕೂರು ಜಿಲ್ಲಾ ಗೆಜೆಟಿಯರ್"*** ೨೦೧೭ ಪುಟ-೫೩

೧೫. *ಅದೇ* ಪುಟ ೫೪-೫೫

೧೬. *ಅದೇ* ಪುಟ-೫೫

೧೭. *ಅದೇ* ಪುಟ ೮-೯

೧೮. *ಎ. ಕ. ೨೪ ೨೦೦೯* ಗುಬ್ಬಿ ೪.

೧೯. ***"ತುಮಕೂರು ಜಿಲ್ಲಾ ಗೆಜೆಟಿಯರ್"*** ೨೦೧೭ ಪುಟ ೪೩-೪೪

೨೦. ದಿನಾಂಕ: ೦೬/೧೦/೨೦೧೭ ರಂದು ತುಮಕೂರಿನಲ್ಲಿ ನಡೆದ ರಾಷ್ಟ್ರೀಯ ಮಟ್ಟದ ವಿಚಾರ ಸಂಕಿರಣದಲ್ಲಿ ಚಿನ್ನಸ್ವಾಮಿ ಸೋಸಲೆ ರವರು ಈ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

೨೧. ಕರಾವಳಿಯ ದಕ್ಷಿಣ ಭಾಗದಲ್ಲಿರುವ ಕಲ್ಕುಡ ಕಲ್ಲುರ್ಟಿ ಪಾಡ್ದಾನಗಳಲ್ಲಿ ಅಭಿವ್ಯಕ್ತಿಸುವಂತೆ ಕಾರ್ಕಳದ ಬೈರರಸರು ಗೊಮ್ಮಟ ವಿಗ್ರಹದ ಶಿಲ್ಪಿಯ ಕೈಗಳನ್ನು ಕತ್ತರಿಸಿದ್ದನು. ಕಾರಣ ಕಾರ್ಕಳದ ಗೊಮ್ಮಟ ವಿಗ್ರಹವೇ ನಾಡಿನ ಅದ್ವಿತೀಯ ವಾದುದಾಗಿರಬೇಕು ಎಂದು ಭಾವಿಸಿದ್ದಿರಬೇಕು.

೨೨. ***"ತುಮಕೂರು ಜಿಲ್ಲಾ ಗ್ಯಾಸೆಟಿಯರ್"*** ೨೦೧೭ ಪುಟ-೮

೨೩. ಮುದ್ದುವೀರಪ್ಪ ಲೇ. ***"ಸುರ್ಣಮುಖಿ"*** ಪುಟ-೧೨.

೨೪. ಜಗದೀಶ್ ೨೦೧೨ ***"ಸಿದ್ಧರಬೆಟ್ಟ ದರ್ಶನ"*** ಕುರಿತು ಬೆಂಗಳೂರು ವಿಶ್ವವಿದ್ಯಾನಿಲಯಕ್ಕೆ (ಕನ್ನಡ ವಿಭಾಗ) ಸಲ್ಲಿಸಿರುವ ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ.

*೨೫. ಎ. ಕ. ೧೨ ಮಧುಗಿರಿ ೩೧*

೨೬. ನಂಜುಂಡಸ್ವಾಮಿ ಬಿ. ರವರ ಬಳಿಯಲ್ಲಿ ಗಣಭಾಷ್ಯರತ್ನಮಾಲಿಕೆ ಕೃತಿಯಿದೆ. ಇದು ೧೯೪೮ ರಲ್ಲಿ ಪ್ರಕಟವಾಗಿದೆ. ಗುಬ್ಬಚ್ಚಿ ಬಸವಣ್ಣನ ವಿಗ್ರಹದ ಚಿತ್ರವು ಅಸ್ಪಷ್ಟವಾಗಿದೆ. ಗುಬ್ಬಿ ಸ್ಥಳನಾಮದ ಬಗ್ಗೆ ಶ್ರೀಯುತರು ವಿಶೇಷವಾಗಿ ಅಧ್ಯಯನವನ್ನು ಮಾಡಿದ್ದಾರೆ. -ಡಾ. ಬಿ. ನಂಜುಂಡಸ್ವಾಮಿ ರವರೊಂದಿಗೆ ಸಂವಾದ.

*೨೭. ಎ. ಕ. ೨೪ (೨೦೦೯) ಗುಬ್ಬಿ ೨೬*

೨೮. ವಕ್ತೃ ಬಿ. ನಂಜುಂಡಸ್ವಾಮಿ

೨೯. ***"ತುಮಕೂರು ಜಿಲ್ಲಾ ಗ್ಯಾಸೆಟಿಯರ್"*** ೨೦೧೭ ಪುಟ-೫೬

೩೦. ಯೋಗೀಶ್ವರಪ್ಪ ಡಿ. ಎನ್. ೧೯೯೯ ***"ಹಾಗಲವಾಡಿ ನಾಯಕರು"*** ಹಂಪಿ ಕವಿವಿ ಪುಟ-೩೪

೩೧. ಕಮಲೇಶ್ ಕೆ. ಆರ್. ೨೦೦೯ ***"ಚಿಕ್ಕನಾಯಕನಹಳ್ಳಿ ತಾಲೂಕು ಐತಿಹಾಸಿಕ ಮತ್ತು ಸಾಂಸ್ಕೃತಿಕ ಅಧ್ಯಯನ ೧೭೨೦-೧೯೦೦"*** ಪುಟ-೬೦

೩೨. ಕಾವಲ್ಲಮ್ಮ ಆರ್ ೨೦೦೫ ***"ಮಧುಗಿರಿ ಮಹಾನಾಡ ಪ್ರಭುಗಳು"*** ಪುಟ-೬೮.

೩೩. ನಾರಾಯಣಾಚಾರ್ ಕೆ ೧೯೪೫ ***"ಮಧುಗಿರಿ ಚರಿತ್ರೆ"*** ಪುಟ-೩೪

೩೪. ಕಾವಲ್ಲಮ್ಮ ಆರ್. ೨೦೦೫ ***"ಪೂರ್ವೋಕ್ತ"*** ಪುಟ-೧೮೧

೩೫. ಕರಾವಳಿಯ ಭಾಗದಲ್ಲಿ ಕಂಡು ಬರುವ ದೈವಾರಾಧನೆಯಂತೆ ಬಯಲು ಸೀಮೆಯ ಬಹುತೇಕ ಭಾಗಗಳಲ್ಲಿ ಜಟಗ, ಜಟ್ಟಗ, ಜೆಟಿಗ, ಜೆಟ್ಟಿಂಗ, ಎಂಬ ಹೆಸರಿನ ದೈವವನ್ನು

ಆರಾಧಿಸಲಾಗುತ್ತದೆ. ಪುರುಷ ದೈವನಾಗಿರುವ ಜಟ್ಟಿಗನನ್ನು ಮೂರ್ತಿಯಾಕಾರದಲ್ಲಿ ಪೂಜಿಸಲಾಗುತ್ತದೆ. ವೀರಗಲ್ಲುಗಳಂತೆ ಆರಾಧಿಸಲ್ಪಡುವ ಜಟ್ಟಿಗರು ದುಷ್ಟರನ್ನು ಶಿಕ್ಷಿಸಿ ಶಿಷ್ಟರನ್ನು, ಪಶು ಸಂಪತ್ತನ್ನು, ರಕ್ಷಿಸಿದ ಕಾರಣಕ್ಕಾಗಿ ಅಥವಾ ಅವರ ತ್ಯಾಗಮಯ ಬದುಕಿನಿಂದಾಗಿ ಪೂಜೆಗೆ ಅರ್ಹರಾಗಿದ್ದಾರೆ. ಜಟ್ಟಿಗರ ಸಾಂಕೇತಿಕವಾಗಿ ಕಲ್ಲಿನ ಮೂರ್ತಿಯನ್ನು ಆರಾಧಿಸಲಾಗುತ್ತದೆ. ಜಟ್ಟಿಗನಿಗೆ ಕೆಲವೊಮ್ಮೆ ಗುಡಿಯನ್ನು ನಿರ್ಮಿಸಲಾಗಿರುತ್ತದೆ. ಬಹುತೇಕ ಬ್ರಾಹ್ಮಣೇತರರೇ ಈ ದೈವವನ್ನು ಆರಾಧಿಸುತ್ತಾರೆ. ವರ್ಷದ ನಿಗದಿತ ದಿನಗಳಂದು ಪೂಜಿಸಲ್ಪಡುವ ಈ ದೈವನಿಗೆ ಬಲಿಯನ್ನು ನೀಡಲಾಗುತ್ತದೆ. ಕುಮಟ ತಾಲೂಕಿನ ಕಡಪೋಕ್ ಎಂಬಲ್ಲಿ ನಾಗಾರಾಧನೆಯ ಜೊತೆಯಲ್ಲಿ ಬ್ರಾಹ್ಮಣರೂ ಜಟ್ಟಿಗನ್ನು ಆರಾಧಿಸುವುದು ಸಂಪ್ರದಾಯವಾಗಿದೆ.-ವಕ್ತೃ:ವಿನಾಯಕ ಮಂಜುನಾಥ ನಾಯ್ಕ ವಯಸ್ಸು ೪೦ ವರ್ಷ, ಉಪನ್ಯಾಸಕರು, ಕುಜಹಳ್ಳಿ ಕುಮಟಾ ತಾಲೂಕ್. ಆ ಮೂಲಕ ಜೆಟ್ಟಪ್ಪನು ಜನಪದರ ಬದುಕಿನೊಂದಿಗೆ ಅವಿನಾಭಾವ ಸಂಬಂಧವನ್ನು ಏರ್ಪಡಿಸಿಕೊಂಡಿದ್ದಾನೆ. ಶಿಷ್ಟಜನರನ್ನು, ಸಾಕು ಪ್ರಾಣಿಗಳನ್ನು, ಪಶುಸಂಪತ್ತನ್ನು ಕ್ರೂರಪ್ರಾಣಿಗಳು, ದುಷ್ಟಜನರ ಆಕ್ರಮಣ ಅಥವಾ ಪ್ರಾಕೃತಿಕ ವಿಕೋಪಗಳಿಂದ ರಕ್ಷಿಸಲು ಹೋರಾಡಿ, ಮಾಡಿದ ತ್ಯಾಗಗುಣ, ಬಲಿದಾನಗಳ ಸ್ಮರಣೆಗಾಗಿ ಅಥವಾ ಆತನಿಗೆ ಕೃತಜ್ಞತಾಪೂರ್ವಕವಾಗಿಯೇ ಶ್ರಮ ಸಂಸ್ಕೃತಿಯ ಪ್ರತೀಕವಾದ ಈತನು ಪೂಜೆಗೆ ಅರ್ಹನಾಗಿದ್ದಾನೆ. ತುಮಕೂರಿನ ಚಿಕ್ಕನಾಯಕನಹಳ್ಳಿ ತಾಲೂಕಿನ ಕೆಂಕೆರೆ ಗವಿಗುಡ್ಡದ ಗವಿಯಲ್ಲಿ ತಪಸ್ಸು ಮಾಡುತ್ತಿದ್ದ ಶರಣರ ಕಾವಲಿಗಾಗಿ ಇದ್ದಂತಹ, ಹಾಗೂ ತಿಪಟೂರು ತಾಲೂಕಿನ ಹಾಲ್ಕುರಿಕೆ ಮುದ್ದೇನಹಳ್ಳಿಯ ರೇವಣ್ಣಸಿದ್ದೇಶ್ವರರ ಬಂಟನಾಗಿ ಇದ್ದಂತಹ ಜಟ್ಟಿಗನು ಇಂದಿಗೂ ಪೂಜೆಗೊಳ್ಳುತ್ತಿದ್ದಾನೆ.

೩೬. ಸರ್ಕಾರದ ಆದೇಶ ಸಂಖ್ಯೆ:ಸಕಇ ೨೨೫ ಬಿಸಿಎ ೨೦೦೦ ದಿನಾಂಕ:೩೦/೦೩/೨೦೦೨

೩೭. ಜೆಟ್ಟಿ ಅಗ್ರಹಾರವು ಮಧುಗಿರಿ ಮಹಾನಾಡ ಪ್ರಭುಗಳ ಗಡಿಭಾಗವಾಗಿತ್ತು. -ಕಾವಲ್ಲಮ್ಮ.ಆರ್ ೨೦೦೫ ***"ಪೂರ್ವೋಕ್ತ"*** ಪುಟ ೭೧. ಹಾಗಾಗಿ ಇಲ್ಲಿ ಕೆರೆಯನ್ನು ನಿರ್ಮಿಸುವ ಆಸಕ್ತಿಯನ್ನು ತೋರಿರಬೇಕು. ಅಮ್ಮಾಜಮ್ಮ (ಅಜಂಮ) ನವರು ಮಧುಗಿರಿಯ ಮಲ್ಲೇಶ್ವರ ಗರ್ಭಗುಡಿಯ ಪಕ್ಕದಲ್ಲಿ ಪಾರ್ವತಿಯ ವಿಗ್ರಹವನ್ನು ಪ್ರತಿಷ್ಠಾಪಿಸಿದ್ದಾಳೆಂದು -ಕೆ.ನಾರಾಯಣಚಾರ್‌ರವರು "ಮಧುಗಿರಿ ಚರಿತ್ರೆ" ಕೃತಿಯ ಪುಟ ಸಂಖ್ಯೆ-೩೫ ರಲ್ಲಿ ಅಭಿಪ್ರಾಯ ಪಟ್ಟಿದ್ದಾರೆ.

೩೮. ವಕ್ತೃ ನಾಗರಾಜಯ್ಯ ಬಿ. ವಿ. ಬಂದ್ರೆಹಳ್ಳಿ

೩೯. ಶ್ರೀಪಾದಭಟ್, ಎಲ್.ಪುಟ್ಟರಾಜು ೨೦೧೧ ***"ಪೂರ್ವೋಕ್ತ"*** ಪುಟ-೧೬೧

೪೦. ***ಅದೇ*** ಪುಟ-೨೬

೪೧. ***"ತುಮಕೂರು ಜಿಲ್ಲಾ ಗ್ಯಾಸೆಟಿಯರ್"*** ೨೦೧೭ ಪುಟ-೨

೪೨. ***ಅದೇ*** ಪುಟ-೨

೪೩. ಯೋಗೀಶ್ವರಪ್ಪ ಡಿ. ಎನ್. ***"ಕಲ್ಪಶೋಧ"*** ಪ್ರಗತಿಗ್ರಾಫಿಕ್ಸ್ ಬೆಂಗಳೂರು ೨೦೧೨ ಪುಟ-೩೬೮

೪೪. ಹೊನ್ನಗಾನಹಳ್ಳಿ ಕರಿಯಣ್ಣ (ಸಂ) ೨೦೦೬ ***"ಬಂದ್ಕುಂಟೆ ಈರುಚಿಕ್ಕಣ್ಣನ ಕಾವ್ಯ"*** ಪುಟ-೩೩

ತಂಗಿ ಹೇಳಿದು ಮಾತ ಕೇಳ್ದೋದ ಈರಣ್ಣ
ತುಂಬೇಯ ಹೂವ ಮುಡಿಲೋದ । ಬಂದ್ಕುಂಟೆ
ಜಗುಲೀಗೆ ತಲೆಯ ಕೊಡುಲೋದ॥

೪೫. ಶ್ರೀಪಾದಭಟ್, ಎಲ್. ಪುಟ್ಟರಾಜು ೨೦೧೧ ***"ಪೂರ್ವೋಕ್ತ"*** ಪುಟ ೧೪೮-೧೪೯

೪೬. *ಎ. ಕ. ೨೪ ತುಮಕೂರು ೫೨* ಶಕ ೧೬೨೦

೪೭. *ಎ. ಕ. ೨೪ ತುಮಕೂರು ಅದೇ.* ಹಾಗೂ ಬಿ.ಎಲ್.ರೈಸ್ ೧೮೯೭ *"ಮೈಸೂರು ಗೆಜೆಟಿಯರ್ ಸಂಪುಟ ೨"* ಪುಟ-೧೭೮ ರಲ್ಲಿ ವಿವರಿಸಿರುವಂತೆ ಈ ನೆಲೆಯಲ್ಲಿ ಜಟಕ ಎಂಬ ಪಾಳೆಯಗಾರನು ಆಳ್ವಿಕೆ ಮಾಡಿದ್ದನೆಂದೂ ಈ ನೆಲೆಗೆ ಜಟಕಸದುರ್ಗವೆಂದೂ ಕರೆಯಲಾಗಿದೆ. ಶಕ ವರ್ಷ ೧೬೨೦ ರಲ್ಲಿ ಆನೆಬಿದ್ದಸರಿಗೆ ಸಲುವ ಜಟಕಸದುರ್ಗದಲ್ಲಿ ಅರಸುತನವ ಮಾಡುತ್ತಾ ಇದ್ದ ಕೆರೆಯೂರ

ತಿಂಮನಾಯಕವೊಡೆಯರ ಮಗ ನರಸಪ್ಪವೊಡೆಯರಿಂದ ಪ್ರತಿಗ್ರಹ ಲಭ್ಯವಾದ ಸರ್ವಮಾನ್ಯವಾಗಿ ಶಿಲಾಪ್ರತಿಷ್ಠೆ ಪೂರ್ವಕವಾಗಿ ಬಂದ ಚಿಕ್ಕದೇವರಾಯದುರ್ಗಕ್ಕೆ ಸಲುವ ಅನುಪಿನಹಳ್ಳಿಯ ಪೂರ್ವದಿಕ್ಕಿನ ಊರ ಮುಂದಣ ಬೇಲದ ಮರದ ಹೊಲವನ್ನು ಕಲ್ಯಾಣದೇವಿ ಅಂಮನವರ ಸಕಲವೊಧ ಸೇವೆಗೆ ದಾನ ನೀಡಿದ ಉಲ್ಲೇಖವಿದೆ.

೪೮. *ಎ. ಕ. ೨೪ ತುಮಕೂರು ೫೨* ಶಕ ೧೬೨೦

೪೯. ಆದ್ಯರಾಮಾಚಾರ್ಯ ೨೦೦೩. ***"ಕರಿಗಿರೀಶ ದೇವರಾಯನದುರ್ಗ"*** ಬೆಂಗಳೂರು

೫೦. *ಎ. ಕ. ೨೪ ತುಮಕೂರು ೫೨* ಶಕ ೧೬೨೦

೫೧. ಯೋಗೀಶ್ವರಪ್ಪ ಡಿ. ಎನ್. ೨೦೧೨ ***"ಪೂರ್ವೋಕ್ತ"*** ಪುಟ–೩೯೦

೫೨. ಗೋಪಾಲ್ ಆರ್. ೨೦೦೯ ***"ತುಮಕೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ"*** ಪುಟ–೯೦

೫೩. ಗೋಪಾಲ್ ಆರ್. *೨೦೦೯* ***"ಪೂರ್ವೋಕ್ತ"*** ಪುಟ–೯೧

೫೪. ವಿ. ಆರ್. ಚೆಲುವರಾಜನ್ ೨೦೧೭ ***"ಪಾವಗಡ ಕ್ಷೇತ್ರ ದರ್ಶನ"*** ಪುಟ–೪

೫೫. ***"ತುಮಕೂರು ಜಿಲ್ಲಾ ಗೆಜೆಟಿಯರ್"*** ಪುಟ–೫೪

೫೬. ಮುದ್ದುವೀರಪ್ಪ ಕೆ. ವಿ. ೨೦೧೨ ***"ತುಮಕೂರು ಜಿಲ್ಲೆಯ ಕೋಟೆಗಳ ಸಾಂಸ್ಕೃತಿಕ ಒಳನೋಟಗಳು"*** ಪುಟ–೨೦೧

೫೭. ಗೋಪಾಲ್ ಆರ್. ೨೦೦೯ ***"ಪೂರ್ವೋಕ್ತ"*** ಪುಟ–೯೬.

೫೮. ಲಕ್ಕಮ್ಮ ಕೋಂ ಪಳ್ಳರಂಗಯ್ಯ ಜೆಟ್ಟಿಅಗ್ರಹಾರ

ವಡ್ಡಗೆರೆ ಅಂಬೋದು ಒಡ್ಡೀಗೆ ಕಟ್ಟಿಸಿದ
ದೊಡ್ಡ ಮಾನ್ಯವರ ಮಗನೀರ। ಗ್ಯಾತಯ್ಯ
ದೊಡ್ಡ ಮಾನ್ಯೇವ ಪಡೆದಾನು ॥

೫೯. ರಂಗಧಾಮಯ್ಯ ಅವಧೂತರು ಜೆಟ್ಟಿ ಅಗ್ರಹಾರ

೬೦. ವಸು ಎಂ. ವಿ. (ಸಂ) ೨೦೦೧ ***"ದಕ್ಷಿಣ ಕರ್ನಾಟಕದ ಅರಸುಮನೆತನಗಳು"***

೬೧. ನಂಜುಂಡಸ್ವಾಮಿ ಬಿ. (ಸಂ) ೨೦೦೨ ***"ಕಲ್ಪಸಿರಿ"*** ಪುಟ–೪೩೨ (ಸಂಗ್ರಹ ಉಮಾಪತಿ)

೬೨. ಕೆ. ವಿ. ಮುದ್ದುವೀರಪ್ಪ ೨೦೧೧ ***"ಪೂರ್ವೋಕ್ತ"*** ಪುಟ ೧೨೨–೧೨೩

೬೩. ***ಅದೇ*** ಪುಟ–೧೩೦

೬೪. ಬಿ. ನಂಜುಂಡಸ್ವಾಮಿ (ಸಂ) ೨೦೦೨ ***"ಪೂರ್ವೋಕ್ತ"*** ಪುಟ–೪೨೭

೬೫. ವಸು ಎಂ. ವಿ. (ಸಂ) ೨೦೦೧ ***"ಪೂರ್ವೋಕ್ತ"*** ಪುಟ–೧೮೮.

೬೬. ಕಮಲೇಶ್ ಕೆ. ಆರ್. ೨೦೦೯ ***"ಪೂರ್ವೋಕ್ತ"*** ಪುಟ–೨೯೦.

೬೭. ***"ತುಮಕೂರು ಜಿಲ್ಲಾ ಗೆಜೆಟಿಯರ್"*** ಪುಟ–೫೬

೬೮. ***ಅದೇ*** ಪುಟ ೫೬–೫೭

೬೯. ಕೆಂಕೆರೆ ಹನುಮಂತೇಗೌಡ ೨೦೧೨ ***"ಸ್ಥಳೀಯ ಇತಿಹಾಸ ಹೊಸ ಶೋಧಗಳು"*** ಬೆಂಗಳೂರು, ಕೆಂಕೆರೆ ಪ್ರಕಾಶನ, ಪುಟ ೪೩–೪೪.

೭೦. ಓ. ಅನಂತರಾಮಯ್ಯ ೨೦೦೮ ***"ಜ್ಞಾನಾದ್ರಿ"*** ಪುಟ–೨೨

೭೧. ವಕ್ತೃ ದೊಡ್ಡನರಸಯ್ಯ, ಕುರಂಕೋಟೆ

೭೨. ಇಸ್ಮಾಯಿಲ್ ಜಬೀರ್ ಬಾವಾಜಿ ೨೦೧೦ ***"ಮೌಖಿಕ ಪರಂಪರೆ ಮತ್ತು ಚರಿತ್ರೆ"*** ಮೈಸೂರು. ಮಾತಾ ಪ್ರಿಂಟರ್ಸ್, ಪುಟ–೩೪.

೭೩. ಯೋಗೀಶ್ವರಪ್ಪ ಡಿ. ಎನ್. ೧೯೯೯ ***"ಪೂರ್ವೋಕ್ತ"*** ಪುಟ–೨೦

–೦೦೦–

## ಅಧ್ಯಾಯ : ೪

## ಸಾಂಸ್ಕೃತಿಕ ವೀರರ ಚಾರಿತ್ರಿಕ ವಿಶ್ಲೇಷಣೆ

## ಅಧ್ಯಾಯ : ೪

# ಸಾಂಸ್ಕೃತಿಕ ವೀರರ ಚಾರಿತ್ರಿಕ ವಿಶ್ಲೇಷಣೆ

### ಸಾಂಸ್ಕೃತಿಕ ವೀರರ ಪರಿಕಲ್ಪನೆ

ಮೌಖಿಕ ಆಕರಗಳಲ್ಲಿ ಬಿಂಬಿಸಲಾಗಿರುವ ತುಮಕೂರು ಜಿಲ್ಲೆಯಲ್ಲಿನ ಜನಸಾಮಾನ್ಯರ ಸಾಂಸ್ಕೃತಿಕ ವೀರರನ್ನು ಚಾರಿತ್ರಿಕ ನೆಲೆಯಲ್ಲಿ ಅಧ್ಯಯನ ಮಾಡುವ ಪ್ರಯತ್ನವನ್ನು ಮಾಡಲಾಗಿದೆ. ಈ ಹಿನ್ನೆಲೆಯಲ್ಲಿ "ಸಾಂಸ್ಕೃತಿಕ ವೀರ" ಎಂಬ ಪದದಲ್ಲಿರುವ ಸಂಸ್ಕೃತಿ ಮತ್ತು ವೀರ ಎಂಬ ಪರಿಕಲ್ಪನೆಗಳು ಪರಸ್ಪರ ಪೂರಕವಾದ ಅರ್ಥವನ್ನು ಕಲ್ಪಿಸಿವೆ.

ಸಂಸ್ಕೃತಿ ಎಂಬುದಕ್ಕೆ ಆಂಗ್ಲ ಭಾಷೆಯಲ್ಲಿ "ಕಲ್ಚರ್" ಎಂದು ಕರೆಯಲಾಗುತ್ತದೆ. ಅಂದರೆ ಇದು ಜನತೆಯ ಜೀವನ ಶೈಲಿಯನ್ನು ಕುರಿತದ್ದಾಗಿದೆ. ಹಾಗೂ ಕಲೆ, ಸಾಹಿತ್ಯ, ಧರ್ಮ, ಆಹಾರ, ಉಡುಗೆ-ತೊಡುಗೆ, ನಡೆ-ನುಡಿ, ಆಚಾರ-ವಿಚಾರ, ನಡೆ-ನುಡಿ, ಸಂಪ್ರದಾಯ, ನಂಬಿಕೆ, ಪದ್ದತಿಗಳನ್ನು ಒಳಗೊಂಡಿದೆ. ಸಮಾಜಶಾಸ್ತ್ರಜ್ಞರಾದ ಇ. ಬಿ. ಟೇಲರ್ ರವರು ಅಭಿಪ್ರಾಯಪಡುವಂತೆ ಸಂಸ್ಕೃತಿಯು ಜ್ಞಾನ, ಕಲೆ, ನಂಬಿಕೆ, ನೈತಿಕ ನಿಯಮ, ಕಾನೂನು, ರೂಢಿ ಮತ್ತು ಮಾನವನ ಸಾಮರ್ಥ್ಯಗಳನ್ನು ಒಳಗೊಂಡಿರುವ ಅಖಂಡವಾದ ಮತ್ತು ಸಂಕೀರ್ಣವಾದ ವ್ಯವಸ್ಥೆಯಾಗಿದೆ. ಸಂಸ್ಕೃತಿಯು ಜೀವನದ ಮೌಲ್ಯಗಳ ಹಾಗೂ ಆದರ್ಶಗಳ ಸಮಷ್ಟಿಯಾಗಿದೆ. ಈ ಪರಂಪರೆಯು ತಲೆಮಾರುಗಳಿಂದ ವರ್ಗಾವಣೆಗೊಂಡಿದೆ. ಜನರು ಆಡುವ ಮಾತು, ಮಾಡುವ ಕಾರ್ಯ, ಉಡುವ ಬಟ್ಟೆ, ತಿನ್ನುವ ಆಹಾರ, ಆಚರಿಸುವ ಸಂಪ್ರದಾಯ, ಬೆಸೆಯುವ ಬಾಂಧವ್ಯ, ಹೊಂದಿರುವ ನಂಬಿಕೆ, ಹೀಗೆ ಬದುಕುವ ಜೀವನಶೈಲಿಗಳೆಲ್ಲದರ ಮೊತ್ತವು ಸಂಸ್ಕೃತಿಯಾಗಿದೆ. ಸಮುದಾಯವನ್ನು ಇಂತಹ ಆಳುವ ಪ್ರಭುತ್ವ ಕೇಂದ್ರಿತವಾದ ಎಲೈಟ್ ಚರಿತ್ರೆಗೆ ಪರ್ಯಾಯವಾಗಿ ಅಧ್ಯಯನವನ್ನು ತಲವರ್ಗಗಳಿಗೆ ವಿಸ್ತರಿಸಿಕೊಳ್ಳಬೇಕಿದೆ.

ವೀರ ಎಂದರೆ ಶೂರ, ಪರಾಕ್ರಮಿ, ಬಲಿಷ್ಠ, ಬಲಶಾಲಿ, ಶಕ್ತಿವಂತ, ಎಂಬುದಾಗಿ ಅರ್ಥೈಸಲಾಗಿದೆ. ವೀರ ಎಂಬುದು ಒಂದು ಸಮುದಾಯದ ವ್ಯಕ್ತಿಯಲ್ಲಿನ ವಿಶೇಷ

ಗುಣಗಳಾದ ಶೌರ್ಯ, ಸಾಹಸ, ತ್ಯಾಗ, ಭಕ್ತಿ-ಭಾವ, ಕರುಣೆ, ದಾನ ಇತ್ಯಾದಿ ಹಲವು ಗುಣಗಳನ್ನು ಅವಲಂಭಿಸಿರುತ್ತದೆ. ಪರಾಕ್ರಮಿಗಳ, ಸಾಹಸಿಗಳ ಸಂತತಿಯನ್ನು 'ವೀರಕುಲ' ಎಂದೂ, ವೀರರು ಹೋರಾಡುವ ಸ್ಥಳಕ್ಕೆ 'ವೀರಕ್ಷೇತ್ರ' ಎಂದೂ, ಯುದ್ಧ ಭೂಮಿಯಲ್ಲಿ ಕಾದಾಡಿ ಮಡಿದ ಸಾವನ್ನು 'ವೀರಮರಣ' ಎಂದೂ, ಇಂತಹ ಮರಣದ ಮೂಲಕ ಸಿಗುವ ಸದ್ಗತಿಯನ್ನು 'ವೀರಸ್ವರ್ಗ' ಎಂದು ಕರೆಯಲಾಗಿದೆ.[೧]

ಅಲೆಗ್ಸಾಂಡರ್, ಸೀಸರ್, ನೆಪೋಲಿಯನ್, ಹಿಟ್ಲರ್, ಮುಸಲೋನಿಯರಂತಹ ಚಕ್ರವರ್ತಿಗಳು ಜಗತ್ತನ್ನು ಗೆಲ್ಲುವ ಉದ್ದೇಶವನ್ನು ಹೊಂದಿದ್ದರು. ಆದರೆ ಸ್ಥಳೀಯ ಸಮುದಾಯದ ಪ್ರತಿನಿಧಿಯಾದ ನಾಯಕನು ತನ್ನದೇ ಮಟ್ಟದ ಆಸೆ-ಆಕಾಂಕ್ಷೆಗಳನ್ನು ಹೊಂದಿರುತ್ತಾನೆ. ಸ್ಥಳೀಯವಾಗಿ ಪಶುಪಾಲನೆ, ಬೇಟೆ, ಕೃಷಿ, ಕ್ರೀಡೆ, ಇತ್ಯಾದಿ ಕ್ಷೇತ್ರಗಳಲ್ಲಿ ವಿಶಿಷ್ಟವಾದ ಸಾಧನೆಗಳನ್ನು ಮಾಡಿದವರನ್ನು ವೀರರು ಎಂದು ಗುರುತಿಸಲಾಗುತ್ತದೆ.

ಸಾಂಸ್ಕೃತಿಕ ವೀರನು ತಾನು ಪ್ರತಿನಿಧಿಸುವ ಸಮುದಾಯದ, ಸಂಸ್ಕೃತಿಯ ಪ್ರತೀಕವಾಗಿರುತ್ತಾನೆ. ವಿಶಿಷ್ಟವಾದ ಸಾಧನೆಯನ್ನು ಮಾಡಿದ ವ್ಯಕ್ತಿಯನ್ನು ಆ ಸಮುದಾಯದ ಜನತೆಯು ತಮ್ಮ ಸಾಂಸ್ಕೃತಿಕ ವೀರನೆಂದು ಪರಿಗಣಿಸಿದ್ದಾರೆ. ಇಂತಹ ಸಾಂಸ್ಕೃತಿಕ ವೀರನ ಬದುಕು ನಂತರದ ಪೀಳಿಗೆಗೆ ಅನುಕರಣೀಯವಾಗಿದ್ದು, ಆತನ ಬದುಕು ಇತರರಿಗೆ ಮಾರ್ಗದರ್ಶನದಂತೆ ಕಂಡು ಬರುತ್ತದೆ. ಹೇಲ್‌ರವರು ಅಭಿಪ್ರಾಯ ಪಡುವಂತೆ ದೇವರೂ ಸಹ ಶಕ್ತಿಶಾಲಿಯಾದ ಬುಡಕಟ್ಟಿನ ಪ್ರತಿನಿಧಿಯಾಗಿದ್ದಾನೆ ಎಂಬ ಹೇಳಿಕೆಗೆ ಪೂರಕವಾಗಿ, ನಾಯಕನು ಹೊಂದಿದ್ದ ವಿಶಿಷ್ಟವಾದ ಗುಣದಿಂದಾಗಿ ಆತನನ್ನು ದೈವತ್ವದ ನೆಲೆಯಲ್ಲಿ ಪೂಜಿಸಲು ಆರಂಭಿಸಿದರು. ವೀರನ ಬಗ್ಗೆ ಆ ಸಮುದಾಯದಲ್ಲಿ ಇದ್ದ ಭಕ್ತಿ-ಭಾವಗಳು ಆತನನ್ನು ಸಮುದಾಯದ ಆರಾಧ್ಯದೈವನನ್ನಾಗಿ ಮಾಡಿದವು.

**ಸಾಂಸ್ಕೃತಿಕ ವೀರರ ವರ್ಗೀಕರಣ :** ಒಂದು ಸಮುದಾಯವನ್ನು ಪ್ರತಿನಿಧಿಸುವ ವೀರನ ಅಥವಾ ನಾಯಕನ ಜನಪ್ರಿಯತೆಯನ್ನು ಆಧರಿಸಿ ಅಂತೆಯೇ ಒಂದು ನಿರ್ದಿಷ್ಟ ಸಂಸ್ಕೃತಿಯ ಪ್ರತೀಕವಾದ ವೀರನನ್ನು ಆರಾಧಿಸುವ ಪ್ರಾದೇಶಿಕ ವ್ಯಾಪ್ತಿಗೆ ಅನುಗುಣವಾಗಿ ಸಾಂಸ್ಕೃತಿಕ ವೀರರನ್ನು ವರ್ಗೀಕರಿಸಿಕೊಳ್ಳಲಾಗಿದೆ.

೧) ಸ್ಥಳೀಯ ಸಾಂಸ್ಕೃತಿಕ ವೀರರು,
೨) ಪ್ರಾಂತೀಯ ಸಾಂಸ್ಕೃತಿಕ ವೀರರು,
೩) ರಾಷ್ಟ್ರೀಯ ಸಾಂಸ್ಕೃತಿಕ ವೀರರು,

**೧) ಸ್ಥಳೀಯ ಸಾಂಸ್ಕೃತಿಕ ವೀರರು :** ತುಮಕೂರು ಜಿಲ್ಲೆಯ ಪರಿಸರದಲ್ಲಿ ಅಸ್ತಿತ್ವದಲ್ಲಿರುವ ಪ್ರಮುಖ ಸ್ಥಳೀಯ ಸಾಂಸ್ಕೃತಿಕ ನಾಯಕರೆಂದರೆ, ಬಂದಕುಂಟೆ ಈರುಚಿಕ್ಕಣ್ಣ, ಮಾಗೋಡು ರಂಗನಾಥ, ದಿಬ್ಬದ ವೀರಬಮ್ಮಣ್ಣ, ಶೂಲದ ಈರಣ್ಣ, ಬಳ್ಳೆಕಟ್ಟೆ ಈರಣ್ಣ, ಹೊನ್ನೇಮರದ ಈರಣ್ಣ, ವೀರಬಡಣ್ಣ, ಬರಗೂರು ಈರಮ್ಮ, ಹುಳಿಯಾರು ಕೆಂಚಮ್ಮ, ಮದ್ದೇದ ಸ್ವಾರಮ್ಮ, ಕುರಂಗರಾಜ, ವೀರಸೀಗಣ್ಣ, ಪಚ್ಚೆಹೊನ್ನಪ್ಪ, ಅಪ್ಪಣ್ಣಗೌಡ, ಬೆಳವಾಡಿಯ ಅಜ್ಜಪ್ಪ,

ಕುಂಬಾರಳ್ಳಿಯ ಅಜ್ಜಪ್ಪ, ಮೈಗದೀರಣ್ಣ, ತಿರುಮಲ ದೇವರ ಪೂಜಾರಿ ಮರಿಯಣ್ಣ, ವೀರಮುದ್ದಣ್ಣ, ಇಟಕದಿಬ್ಬನಹಳ್ಳಿ ವೀರತಿಮ್ಮಯ್ಯ, ಪಾವಗಡದ ಸಾಸುವುಲ ಚಿನ್ನಮ್ಮ, ಗುಂಡ್ಲಹಳ್ಳಿ ಈರಣ್ಣ, ಹಾರ್ಲಹಳ್ಳಿ ಯಲ್ಲಮ್ಮ, ಪಾವಗಡದ ತಿಮ್ಮೇನಾಯಕನ ಪೇಟೆಯ ವೀರದೊಡ್ಡಣ್ಣ, ಪಾವಗಡದ ವೀರಬೋರಣ್ಣ, ಗುಂಡ್ಲಹಳ್ಳಿ ವೀರಕೆಂಪಣ್ಣ, ಗುಬ್ಬಿ ಹೊಸಹಳ್ಳಿಯ ಆಲದಕೊಂಬೆ ಅಮ್ಮ, ಕಾಳಘಟ್ಟಮ್ಮ, ಹಳೇವೂರಮ್ಮ ಮುಂತಾದವರು.

**೨) ಪ್ರಾಂತೀಯ ಸಾಂಸ್ಕೃತಿಕ ವೀರರು–** ಈರುನಾಗಮ್ಮ, ಈರುಗ್ಯಾತರಾಯ, ಎತ್ತಪ್ಪ, ಜುಂಜಪ್ಪ, ಚಿತ್ರದೇವರು, ಪೂಜಾರಿ ಚಿತ್ತಯ್ಯ, ಮರೂರು ವೀರನಾಗಪ್ಪ, ಜಲಧಿಬೊಪ್ಪರಾಯ, ಕೇತೇಲಿಂಗ, ಪಾತೇಲಿಂಗ, ಕೆರೆಹೊನ್ನಮ್ಮ, ಉತ್ತರದೇವಿ ಮುಂತಾದವರು. ಇವರಿಗೆ ಸಂಬಂಧಿಸಿದ ಮೌಖಿಕ ಆಕರಗಳು ಹಾಗೂ ಇವರ ಆರಾಧನಾ ಸಂಪ್ರದಾಯಗಳು ಸ್ಥಳೀಯತೆಯನ್ನು ಮೀರಿ ಪ್ರಾದೇಶಿಕವಾಗಿ ವಿಸ್ತರಿಸಿರುತ್ತವೆ.

**೩) ರಾಷ್ಟ್ರೀಯ ಸಾಂಸ್ಕೃತಿಕ ವೀರರು–** ಕುಮಾರರಾಮ, ಮಹಾಭಾರತ ಮತ್ತು ರಾಮಾಯಣ ಮಹಾಕಾವ್ಯಗಳಲ್ಲಿನ ವೀರರು, ಇತ್ಯಾದಿ. ಇವರ ಕಥನ, ಕಾವ್ಯಗಳು ರಾಷ್ಟ್ರೀಯ ವ್ಯಾಪ್ತಿಯಲ್ಲಿ ಪ್ರಚಲಿತದಲ್ಲಿರುತ್ತವೆ.

ಚರಿತ್ರೆಯಲ್ಲಿ ಕಡೆಗಣಿಸಲ್ಪಟ್ಟಿದ್ದ ತಲವರ್ಗದ ಸಮುದಾಯವು ತಮ್ಮ ಸಾಂಸ್ಕೃತಿಕ, ಮಹತ್ವವನ್ನು ತಿಳಿಯುವ ಅಥವಾ ಸಮಾಜದಲ್ಲಿ ತಮ್ಮ ಐಡೆಂಟಿಟಿಯನ್ನು ಕಂಡುಕೊಳ್ಳುವ ಸಲುವಾಗಿ ವಿಶೇಷವಾದ ಸಾಧನೆಯನ್ನು ಮಾಡಿದವರನ್ನು ತಮ್ಮ ಸಮುದಾಯದ ಪ್ರತಿನಿಧಿಯಂತೆ ಇರಿಸಿಕೊಂಡವು. ಹೀಗೆ ಒಂದೊಂದು ಸಮುದಾಯಗಳು ತಮ್ಮದೇ ನಾಯಕನನ್ನು ತಮ್ಮ ಬದುಕಿನ ಪ್ರತೀಕವಾಗಿ ಆಯ್ಕೆ ಮಾಡಿಕೊಂಡಿವೆ. ಈ ಸನ್ನಿವೇಶದಲ್ಲಿ ಲಿಖಿತ ಚರಿತ್ರೆಗೂ ಮುನ್ನವೇ ಜನಪದ ಚರಿತ್ರೆಯು ರೂಪುಗೊಂಡಿದೆ. ಇದು ಜನಸಮುದಾಯದ ಹಲವಾರು ತಲೆಮಾರುಗಳ ಅನುಭವದ ಕಥನವಾಗಿದೆ. ತಮ್ಮ ಸಮುದಾಯದ ರಕ್ಷಣೆಗೆಂದು ಹೋರಾಡಿದ ತಮ್ಮ ನಾಯಕನನ್ನು ಅಸಾಮಾನ್ಯನಂತೆ ಬಿಂಬಿಸುವ ಪರಂಪರೆ ಮತ್ತು ಆತನಲ್ಲಿನ ಭಕ್ತಿಪೂರ್ವಕ ಭಾವನೆಗಳು ಆ ನಾಯಕನನ್ನು ದೈವತ್ವಕ್ಕೇರಿಸಿದುವು. ಈ ಸನ್ನಿವೇಶದಲ್ಲಿ ಸಮುದಾಯದ ನಾಯಕನ ಸುತ್ತ ಹೆಣೆಯಲಾದ ಕಥನವು ಒಂದು ಕಾಲದ ಐತಿಹಾಸಿಕ ವ್ಯಕ್ತಿಯನ್ನು ಪೌರಾಣಿಕ ವ್ಯಕ್ತಿಯನ್ನಾಗಿ ಬದಲಾಯಿಸುತ್ತದೆ. ಇಂತಹ ಸನ್ನಿವೇಶದಲ್ಲಿ ಕಾವ್ಯ ಮತ್ತು ಕಥನದಲ್ಲಿನ ಚಾರಿತ್ರಿಕ ಸುಳಿವುಗಳನ್ನು ಗುರುತಿಸುವುದು ಬಹಳ ಕ್ಲಿಷ್ಟಕರವಾಗಿರುತ್ತದೆ. ಮೌಖಿಕಕಾವ್ಯ ಮತ್ತು ಕಥನದಲ್ಲಿ ತುಂಬಿಹೋಗಿರುವ ಸಮುದಾಯದ ನೋವು, ನಲಿವು, ಭಾವನೆಗಳಿಗೆ ನಿರ್ದಿಷ್ಟವಾದ ಭೌತಿಕ ಆಕರಗಳು ಲಭ್ಯವಾಗುವುದಿಲ್ಲ. ಈ ಹಿನ್ನೆಲೆಯಲ್ಲಿ ಚರಿತ್ರೆಯ ರಚನೆಗೆ ಹೊರಟ ಚರಿತ್ರಕಾರರು ಪ್ರಾಮಾಣಿಕವಾಗಿ ಕಾರ್ಯ ನಿರ್ವಹಿಸಬೇಕಾಗುತ್ತದೆ.

ತುಮಕೂರು ಜಿಲ್ಲೆಯ ಪರಿಸರದಲ್ಲಿ ಕಂಡುಬರುವ ಸಮುದಾಯಗಳ ನಾಯಕರಾದ ಈರುಗ್ಯಾತರಾಯ, ಈರುನಾಗಮ್ಮ, ಹುಳಿಯಾರು ಕೆಂಚಮ್ಮ, ಬುಂಜಪ್ಪ, ಮದ್ದೇ ಮತ್ತು ಕರೇಕ್ಯಾತನಹಳ್ಳಿಯ ಸ್ವಾರಮ್ಮ, ಕುರಂಗರಾಜ, ದಿಬ್ಬದವೀರಬೊಮ್ಮಣ್ಣ, ಮುಂತಾದವರನ್ನು ಚಾರಿತ್ರಿಕ ನೆಲೆಯಲ್ಲಿ ಅಧ್ಯಯನ ಮಾಡಲಾಗಿದೆ. ಹಾಗೂ ಉಂಡೇಕ್ರಾಯ, ಜಲಧಿ ಬೊಪ್ಪರಾಯ, ಶೂಲದ ಈರಣ್ಣ, ಬಂದಕುಂಟೆ ಈರುಚಿಕ್ಕಣ್ಣ, ಬರಗೂರು ಈರಮ್ಮ, ಬಳ್ಳಕಟ್ಟೆ ಈರಣ್ಣ, ಹೊನ್ನೆಮರದ ಈರಣ್ಣ, ಮದಲಿಂಗ, ಭೀಮಾಸತಿ ಇತ್ಯಾದಿ ಸಾಂಸ್ಕೃತಿಕ ವೀರರ ಪರಿಚಯವನ್ನು ದಾಖಲಿಸಲಾಗಿದೆ.

### ೪.೧ ಈರುಗ್ಯಾತರಾಯ

ವಡ್ಡಗೆರೆ ಈರುನಾಗಮ್ಮನಕಾವ್ಯ ಅಥವಾ ಈರುಗ್ಯಾತರಾಯನ ದಿಗ್ವಿಜಯ ಎಂಬ ಜನಪದ ಕಾವ್ಯದಲ್ಲಿ ಈರುಗ್ಯಾತರಾಯನ ಜೀವನ ಮತ್ತು ಸಾಧನೆಗಳನ್ನು ಪ್ರಸ್ತಾಪಿಸಿ ಹಾಡಲಾಗಿದೆ. ಜನಸಾಮಾನ್ಯರು ವೀರಕ್ಯಾತರಾಯನನ್ನು 'ಈರುಗ್ಯಾತರಾಯ' ಎಂದು, ವೀರನಾಗಮ್ಮಳನ್ನು 'ಈರುನಾಗಮ್ಮ' ಎಂದೂ ಕರೆಯುತ್ತಾರೆ. ಕುಂಚಿಟಿಗರ ಸಮುದಾಯದ ಸಾಂಸ್ಕೃತಿಕ ಪ್ರತಿನಿಧಿಗಳಾಗಿರುವ ಈರುಗ್ಯಾತರಾಯ ಮತ್ತು ಈರುನಾಗಮ್ಮಳ ಬಗ್ಗೆ ವಡ್ಡಗೆರೆ ಗ್ರಾಮದ ಪರಿಸರದಲ್ಲಿ ಇಂದಿಗೂ ಮೌಖಿಕ ಕಾವ್ಯಗಳನ್ನು ಹಾಡಲಾಗುತ್ತದೆ. ಅಲ್ಲದೇ ಹಲವು ವಿದ್ವಾಂಸರು ಈ ಕಾವ್ಯಗಳನ್ನು ಸಂಗ್ರಹ ಮಾಡಿದ್ದಾರೆ.[೨]

**ಕಥನ** : ಓರಂಗಲ್ ಪಟ್ಟಣದಲ್ಲಿ ಶಿವಭಕ್ತರಾಗಿದ್ದ ಬೈಚಪ್ಪ ಮತ್ತು ಪದುಮವ್ವ ಎಂಬ ದಂಪತಿಗಳಿದ್ದರು. ಪದುಮವ್ವ ಬಿತ್ತಿದ ಕುಂಬಳ ಗಿಡದಲ್ಲಿ ಬೆಳೆದ ಪರ್ವತಾಕಾರದ ಕುಂಬಳಕಾಯಿಯ ತೊಟ್ಟನ್ನು ಯಾರೂ ಮುರಿಯಲಾಗಲಿಲ್ಲ. ಪದುಮವ್ವಳೇ ಅದನ್ನು ಮುರಿದು ಗರ್ಭನಿಲ್ಲದ ಊರಿನ ಹೆಂಗಸರಿಗೆಲ್ಲಾ ಒಂದೊಂದು ಹೋಳನ್ನು ನೀಡಲಾಗಿತ್ತು. ಆಗ ಊರಿನ ಹೆಂಗಸರೆಲ್ಲಾ ಗರ್ಭಿಣಿಯರಾಗಿ ತಾವು ಹೆತ್ತ ಮಕ್ಕಳೊಂದಿಗೆ ಆಟವಾಡುತ್ತಿದ್ದರು. ಆದರೆ ಪದುಮವ್ವಳಿಗೆ ೧೨ ವರ್ಷ ವಯಸ್ಸಾಗಿರುವಾಗಲೇ ಗರ್ಭ ನಿಂತು ಈರುಗ್ಯಾತರಾಯನು ಆಕೆಯ ಬೆನ್ನಿನ ಮೂಲಕ ಜನಿಸಿದನು. ನಂತರದಲ್ಲಿ ಹುಲಿಪೆಮ್ಮಿಗಳರಾಯ ಮತ್ತು ಉದ್ದಿಗರಾಯ ಎಂಬ ಇನ್ನೂ ಇಬ್ಬರು ಮಕ್ಕಳು ಜನಿಸಿದರು. ವೀರಕ್ಯಾತರಾಯನು ಸಕಲ ವಿದ್ಯೆಗಳಲ್ಲಿ ಪಾರಂಗತನಾಗಿ ಶಿವಭಕ್ತನಾಗಿ, ಜನಪದರ ಮೆಚ್ಚುಗೆಗೆ ಪಾತ್ರನಾಗಿ ಬೆಳೆದನು. ಕುಸುಮಾವತಿಯ ನಾಗಣ್ಣನೆಂಬುವನ ಪುತ್ರಿ ಮಲ್ಲದೇವಿಯನ್ನು ವಿವಾಹವಾದನು. ಪ್ರತಾಪರಾಯನು ಅಕಾಲ ಮರಣಕ್ಕೆ ತುತ್ತಾಗಿದ್ದರಿಂದ ಪ್ರಜೆಗಳು ವೀರಕ್ಯಾತರಾಯನನ್ನೇ ತಮ್ಮ ಅರಸನೆಂದು ಘೋಷಿಸಿದರು. ರಾಜ್ಯದ ಮೇಲೆ ದಂಡೆತ್ತಿ ಬಂದ ಮುಸಲ್ಮಾನರೊಂದಿಗೆ ಹೋರಾಡಿ ವಿಜಯಿಯಾದರೂ ಸಹ ರಕ್ತಪಾತಕ್ಕೆ ಹೇಸಿ ವೈರಾಗ್ಯ ತಾಳಿದ ಈರುಗ್ಯಾತರಾಯನು ದಕ್ಷಿಣದೆಡೆಗೆ ಹೊರಟನು. ದ್ವಾರಕಾ ನಗರದಿಂದ

ಹೊರಟು ೪೮ ಕುಂಚಿಟಿಗ ಕುಲದವರನ್ನು ಕೂಡಿಕೊಂಡು ಅವರೆಲ್ಲರ ಮೂಲ ಪುರುಷನಾದನು.

ಪೆನುಗೊಂಡೆಯ ರಾಜನ ಸಾಮಂತನಾದ ಮಲ್ಲನಾಯ್ಕ ಎಂಬುವವನು ತುಂಬೋಡಿಯನ್ನು ಆಳುತ್ತಿದ್ದನು. ತನ್ನ ಮಗಳನ್ನು ನಂದೀಶ್ವರನ ಅವತಾರಿಯಾದ ವೀರಕ್ಯಾತರಾಯನಿಗೆ ಕೊಟ್ಟು ಮದುವೆ ಮಾಡಲು ನಿಶ್ಚಯಿಸಿದ್ದನು. ಆದರೆ ವೀರಕ್ಯಾತರಾಯನು ತುಂಬೋಡಿ ಮಲ್ಲನಾಯಕನ ಅಭಿಲಾಷೆಯನ್ನು ತಿರಸ್ಕರಿಸಿದನು. ಇದರಿಂದಾಗಿ ಈರುಗ್ಯಾತರಾಯನ ಮೇಲೆ ಸೇಡನ್ನು ತೀರಿಸಿಕೊಳ್ಳುವ ಸಲುವಾಗಿ ಮಲ್ಲನಾಯಕನು ಪೆನುಗೊಂಡೆಯ ಅರಸನಿಗೆ ಇಲ್ಲ ಸಲ್ಲದ ಚಾಡಿ ಮಾತುಗಳನ್ನು ಹೇಳುತ್ತಿದ್ದನು. ವೀರಕ್ಯಾತರಾಯನು ನಿತ್ಯವೂ ಪೆನುಕೊಂಡೆಯ ಅರಸರಿಗೆ ಕಳುಹಿಸುತ್ತಿದ್ದ ಹುಲಿಯ ಹಾಲನ್ನು ಹುಲಿಯ ಹಾಲಲ್ಲವೆಂದು ಜರೆದಾಗ ವೀರಕ್ಯಾತರಾಯನು ಹುಲಿಯ ದಂಡನ್ನೇ ತಂದನು. ಕೇವಲ ೭ ದಿನಗಳಲ್ಲಿ ಜೋಳವನ್ನು ಭಿತ್ತಿ ಬೆಳೆದನು. ತುಂಬೋಡಿಯವರು ಜೋಳವನ್ನು ಕದ್ದು ಕುಯ್ಯಲು ಬಂದಾಗ ಅವರ ಕಣ್ಣುಗಳು ಕಾಣದಂತೆ ಪವಾಡವನ್ನು ಮಾಡಿದನು. ಈ ಮೂಲಕ ವೀರಕ್ಯಾತರಾಯನು ಪವಾಡ ಪುರುಷನಾದನು. ಇದರಿಂದಲೂ ಅಪಮಾನಿತನಾದ ಮಲ್ಲನಾಯಕನು ವೀರಕ್ಯಾತರಾಯನನ್ನು ದ್ವಂದ್ವ ಯುದ್ಧಕ್ಕೆ ಆಹ್ವಾನಿಸುವ ಮೂಲಕ ಸಂಹರಿಸುವ ವಿಫಲ ಪ್ರಯತ್ನ ಮಾಡಿದನು. ಪೆನುಗೊಂಡೆಯ ರಾಜನ ಅಪ್ಪಣೆಯಂತೆ ನೆಲಮಂಗಲದ ಕಂಚುಗಾರ ಬೈಚರಸನ ಹಾವಳಿಯನ್ನು ನಿಯಂತ್ರಿಸಲು ತೆರಳಿದ ವೀರಕ್ಯಾತರಾಯನು ಬೈಚರಸನನ್ನು ತಂತ್ರಗಾರಿಕೆಯಿಂದ ಸಂಹರಿಸಿದನು. ವಡ್ಡಗೆರೆಯ ವಡ್ಡರ ಜಾತಿಯ ಹೆಣ್ಣುಮಗಳ ಮೂಗುತಿಯು ಬಾವಿಯಲ್ಲಿ ಬಿದ್ದಿತ್ತು. ಆಕೆಯ ಏಳು ಮಂದಿ ಸಹೋದರರು ತೆಗೆದು ಕೊಡಲು ವಿಫಲರಾದಾಗ ವೀರಕ್ಯಾತರಾಯನು ಅದನ್ನು ತೆಗೆದು ಕೊಟ್ಟನು. ಇದರಿಂದಾಗಿ ಮೊದಲೇ ನೀಡಿದ್ದ ಪ್ರಮಾಣದಂತೆ ವಡ್ಡರ ಹೆಣ್ಣುಮಗಳಿಂದ ವಡ್ಡಗೆರೆಯನ್ನು ಕೊಡುಗೆಯಾಗಿ ಪಡೆದನು ಹಾಗೂ ಅಲ್ಲಿಯೇ ನೆಲೆಸಿದನು.

ವಿಶಿಷ್ಟವೆಂದರೆ ತಲಸಮುದಾಯವು ಸೇರಿದಂತೆ ಜನಪದರು ವಡ್ಡಗೆರೆ ಈರುನಾಗಮ್ಮನಕಾವ್ಯ ಅಥವಾ ಈರುಗ್ಯಾತರಾಯನ ದಿಗ್ವಿಜಯ ಕಥನ ಕಾವ್ಯವನ್ನು ಮುಂದಿನ ಪೀಳಿಗೆಗೂ ಮೌಖಿಕವಾಗಿ ವರ್ಗಾಯಿಸುತ್ತಾ ಬರುತ್ತಿದ್ದಾರೆ. ಪ್ರತಿ ವರ್ಷ ಯುಗಾದಿ ಹಬ್ಬದ ಮಾರನೇ ದಿನ ಇಲ್ಲಿ ಜಾತ್ರೆಯನ್ನು ನಡೆಸಲಾಗುತ್ತದೆ.

**ಚಾರಿತ್ರಿಕ ವಿಶ್ಲೇಷಣೆ** : ಸಾಂಸ್ಕೃತಿಕ ವೀರನೂ, ಕಾವ್ಯದ ನಾಯಕನೂ ಆದಂತಹ ಈರುಗ್ಯಾತರಾಯನನ್ನು ಚಾರಿತ್ರಿಕ ನೆಲೆಯಲ್ಲಿ ಅಧ್ಯಯನಕ್ಕೆ ಒಳಪಡಿಸಿದಾಗ ತಿಳಿಯುವುದೇನೆಂದರೆ, ಉಲ್ಲೇಖಿತ ಈರುಗ್ಯಾತರಾಯನು ಹೊಯ್ಸಳರ ಅರಸ ೩ನೇ ವೀರನರಸಿಂಹನ ಸಾಮಂತನಾಗಿದ್ದ ಈತನು ತುಮಕೂರು ಜಿಲ್ಲೆಯ

ದೇವರಾಯನದುರ್ಗವನ್ನು ಆಡಳಿತ ಕೇಂದ್ರವನ್ನಾಗಿ ಮಾಡಿಕೊಂಡು ಆಳಿದ ಚಿಕ್ಕವೀರಕೇತರಾಯ ದಂಡನಾಯಕನೆಂದು ಗುರುತಿಸಲಾಗಿದೆ.[೨]

ಎಫಿಗ್ರಾಫಿಯಾ ಸಂಪುಟ ೨೪ (೨೦೦೯) ತುಮಕೂರು ಶಾಸನ ಸಂಖ್ಯೆ ೪೧.[೩] ಎಫಿಗ್ರಾಫಿಯಾ ಸಂಪುಟ (ಸಂ) ೯ ಬೇಲೂರು ಶಾಸನ ಸಂಖ್ಯೆ ೪೩೦.[೪] ಬೇಲೂರು ಶಾಸನ ಸಂಖ್ಯೆ ೫೫೨.[೫] ಬೇಲೂರು ಶಾಸನ ಸಂಖ್ಯೆ ೪೩೧.[೬] ಬೇಲೂರು ಶಾಸನ ಸಂಖ್ಯೆ ೪೩೩.[೭] ತುಮಕೂರು ಶಾಸನ ಸಂಖ್ಯೆ ೮೮.[೮] ಬೇಲೂರು ಶಾಸನ ಸಂಖ್ಯೆ ೪೩೨.[೯] ಈ ಎಲ್ಲ ಶಾಸನಗಳಲ್ಲಿ ಉಲ್ಲೇಖಿಸಿರುವಂತೆ ಹೊಯ್ಸಳರ ಅರಸ ಮೂರನೇ ನರಸಿಂಹನ ದಂಡನಾಯಕನಾಗಿದ್ದ ಚಿಕ್ಕವೀರಕೇತಯ ದಂಣಾಯಕನು ೧೩ ನೇ ಶತಮಾನದ ಉತ್ತರಾರ್ಧದಲ್ಲಿ ತುಮಕೂರು ಜಿಲ್ಲೆಯ ಕೆಲವು ಪ್ರದೇಶಗಳಲ್ಲಿ ಆಳ್ವಿಕೆ ನಡೆಸುತ್ತಿದ್ದನು. ತುಂಬಾಡಿ, ನೆಲಮಂಗಲಗಳು ಈತನ ಅಧೀನಕ್ಕೆ ಒಳಪಟ್ಟಿದ್ದುವು. ಈರುಗ್ಯಾತರಾಯನೆಂದೇ ಗುರುತಿಸಲಾಗಿರುವ ಚಿಕ್ಕವೀರಕೇತಯ್ಯನು ಕ್ರಿ.ಶ ೧೨೭೬ರ ಅವಧಿಯಲ್ಲಿ ಆನೆಬಿದ್ದಸರಿ[೧೦] ಯನ್ನು ಆಳುತ್ತಿದ್ದನು.[೧೧]

ಈರುಗ್ಯಾತರಾಯನ ಕಾವ್ಯದಲ್ಲಿ ಹಾಡಲಾಗಿರುವ ಸ್ಥಳನಾಮಗಳಾದ ಆಂಧ್ರಪ್ರದೇಶದ ಓರಂಗಲ್ಲು, ಪೆನುಗೊಂಡೆ (ಘನಗಿರಿರಾಜ್ಯ), ಅಮರಾಪುರದ ತಮ್ಮಡಿಹಳ್ಳಿ, ಗೌಡನಕುಂಟೆ, ಹಾಸನದ ಆಲೂರು, ಬೇಲೂರು, ತುಮಕೂರಿನ ತುಂಬೋಡಿ, ನೆಲಮಂಗಲ, ವಡ್ಡಗೆರೆ, ತಾಡಿ, ಜೋನಿಗರಹಳ್ಳಿ, ಹನುಮೇನಹಳ್ಳಿ, ಸಿರಿವಾಳ, ಆನೆಗೊಂದಿ, ಚಿಕ್ಕದೇರಹಳ್ಳಿ, ನೇಗಲಾಲ, ಹೊಸಕೆರೆ, ಎತ್ತಗಾನಹಳ್ಳಿ, ದಾಸರಹಳ್ಳಿ ಮುಂತಾದ ಸ್ಥಳಗಳು ಇಂದಿಗೂ ಅಸ್ತಿತ್ವದಲ್ಲಿವೆ. ಹಾಗೂ ಈ ಪ್ರದೇಶಗಳಲ್ಲಿ ಈರುಗ್ಯಾತರಾಯನಿಗೆ ಸಂಬಂಧಿಸಿದ ಕಾವ್ಯಗಳನ್ನು ಹಾಡಲಾಗುತ್ತದೆ. ಹಾಗೂ ಕಥನಗಳನ್ನು ಕೂಡ ಹೇಳಲಾಗುತ್ತದೆ. ಮುಂದಿನ ಕಾವ್ಯದಲ್ಲಿ ಈರುಗ್ಯಾತರಾಯನ ಆಳ್ವಿಕೆಯಲ್ಲಿದ್ದ ಎತ್ತಗಾನಹಳ್ಳಿ, ದಾಸರಹಳ್ಳಿ ಪ್ರದೇಶಗಳನ್ನು ಪ್ರಸ್ತಾಪಿಸಿರುವುದನ್ನು ಗುರುತಿಸಬಹುದಾಗಿದೆ.

ಹಿಂದಕು ಎತಗಾನಹಳ್ಳಿ ಮುಂದಕು ದಾಸರಹಳ್ಳಿ
ಕ್ವಾಣೇಯ ಕಲ್ಲು ಬಯಲಾಗೆ। ಈರುಗ್ಯಾತರಾಯ
ಅವ್ರ ದೇವರು ಕೇಳ್ಯಾರು ಸಕುಣಾವ॥[೧೨]

ಸ್ಥಳೀಯ ಆಡಳಿತಗಾರನಾಗಿದ್ದ ಈರುಗ್ಯಾತರಾಯನು ಆಳ್ವಿಕೆ ಮಾಡಿದ್ದರ ಪ್ರಭಾವದಿಂದಾಗಿ ಈತನ ಹೆಸರಿನ ಕಾರಣ ಇಲ್ಲಿನ ಸ್ಥಳೀಯ ಗ್ರಾಮಗಳಾದ ಪಾವಗಡದ ಕರೇಕ್ಯಾತನಹಳ್ಳಿ, ಶಿರಾದ ಕ್ಯಾತನಹಳ್ಳಿಯಂತಹ ಸ್ಥಳನಾಮಗಳನ್ನು ಹೊಂದಿರುವ ಗ್ರಾಮಗಳು ಅಸ್ತಿತ್ವದಲ್ಲಿವೆ.

ಉದ್ದಗಂಬಳಿ ಮೇಲೆ ಜದ್ದಡುಕೆ ಸಾವೂರ
ಉದ್ದ ಕೇಳಿರವರ ಕುಲಗಾಳ। ಬಸಿಲೆನಾರು
ಉದ್ದಿಗರಾಯ ಯೇಳವನೆ ಕುಲಗಾಳು॥[೧೩]

ಈರುಗ್ಯಾತರಾಯನ ಸಹೋದರ ಉದ್ದಿಗರಾಯನ ಪ್ರಭಾವದಿಂದ ಈ ಕಾವ್ಯದಲ್ಲಿ ಪ್ರಸ್ತಾಪಿಸಿರುವ ಪಾವಗಡದ ಉದ್ದಯ್ಯನಪಾಳ್ಯ, ಸಿರಾದ ಉದ್ದರಾಮನಹಳ್ಳಿ, ಉದ್ದನಚಿಕ್ಕನಹಟ್ಟಿ, ಅಲ್ಲದೇ ನೆಲಮಂಗಲದ ಬ್ಯೆಚರಸನ ಹೆಸರಿಸಿಂದ ಕೊರಟಗೆರೆಯ

ಬೈಚೇನಹಳ್ಳಿ, ಬೈಚಾಪುರಗಳು. ಹಾಗೂ ತುಂಬಾಡಿಯ ಮಲ್ಲನಾಯಕನ ಹೆಸರಿನ ಸ್ಮರಣೆಯಿಂದ ಪಾವಗಡದ ಮಲ್ಲನಾಯಕನಹಳ್ಳಿ, ಮಧುಗಿರಿಯ ಮಲ್ಲನಾಯಕನಹಳ್ಳಿ, ಮಲ್ಲೇನಹಳ್ಳಿ. ತುರುವೇಕೆರೆಯ ಮಲ್ಲದೇವನಹಟ್ಟಿ, ಗುಬ್ಬಿಯ ಕಸಬಾದ ಮಲ್ಲೇನಹಳ್ಳಿ, ಮಲ್ಲೇದೇವನಹಳ್ಳಿ, ನಿಟ್ಟೂರಿನ ಮಲ್ಲೇದೇವರಹಟ್ಟಿ, ಕೊರಟಗೆರೆಯ ಮಲ್ಲೇಶಪುರ ಗ್ರಾಮಗಳ ಬಹುತೇಕ ಸ್ಥಳನಾಮಗಳು ಮೂಡಿಬಂದಿವೆ.

ಈರುಗ್ಯಾತರಾಯನು ವೀರನೂ, ಶೂರನೂ, ಸಾಹಸಿಯೂ ಆಗಿದ್ದು ಹಲವು ಬಿರುದುಗಳನ್ನು ಹೊಂದಿದ್ದನೆಂದು ಜನಪದ ಕಾವ್ಯದಿಂದ ತಿಳಿಯಬಹುದಾಗಿದೆ.

ಕಾಸಿಯಾಕರ ಗಂಡ ಮೀಸೆತಿರುವರ ಮಿಂಡ
ದೇಸೇದೊರು ಪಿಂಡ ಪ್ರಚಂಡ। ಈರುಗ್ಯಾತಯ್ಯಗೆ
ಏಸೊಂದು ಬಿರುದು ಸಲುವಾದೆ॥[೧೪]

ಶಾಸನಗಳಲ್ಲಿ ಉಲ್ಲೇಖಿಸಲಾಗಿರುವ ಬಿರುದುಗಳಾದ "ಪ್ರಜೆಮೆಚ್ಚಗಂಡ, ಗಂಡಪೆಂಡಾರ ಮಾಂಡಳಿಕ" ಎಂಬ ಬಿರುದುಗಳಿಗೂ ಮತ್ತು ಜನಪದ ಕಾವ್ಯದಲ್ಲಿನ "ಕಾಸಿಯಾಕರಗಂಡ, ಪಿಂಡಪ್ರಚಂಡ" ಎಂಬ ಬಿರುದುಗಳಿಗೂ ಅವುಗಳಲ್ಲಿನ ಸ್ವರೂಪ ಮತ್ತು ಅರ್ಥದಲ್ಲಿ ಸಾಮ್ಯತೆಯನ್ನು ಗುರುತಿಸಬಹುದಾಗಿದೆ.

ಪೆನುಗೊಂಡೆಯ ದೊರೆಗಳು ಈರುಗ್ಯಾತರಾಯನಿಗೆ ಹುಲಿಗಿಣ್ಣು, ತುಂಬೋಡಿಯ ಮಲ್ಲನಾಯಕನಿಗೆ ಮೊಲದ ಗಿಣ್ಣು ತರುವಂತೆ ಸೂಚಿಸಿ ಸ್ಪರ್ಧೆಯನ್ನು ಏರ್ಪಡಿಸಿದ್ದರು. ಆಗ ತುಂಬೋಡಿಯ ಮಲ್ಲನಾಯಕನು ಕುತಂತ್ರವನ್ನು ನಡೆಸಿದ್ದರೂ ಸಹ ಹುಲಿಗಿಣ್ಣು ತರುವ ಮೂಲಕ ಈರುಗ್ಯಾತರಾಯನು ಸಾಹಸವನ್ನು ಮೆರೆದನು. ಹಾಗೂ ಪೆನುಗೊಂಡೆಯ ಅರಸರ ಪ್ರಶಂಸೆಗೆ ಪಾತ್ರವಾದನೆಂಬ ವಿವರಗಳನ್ನು ಕಾವ್ಯದಲ್ಲಿ ಹಾಡಲಾಗಿದೆ.

ತಾಡಿ ಈರನೆ ನಾಡಿಗೆ ದೊಡ್ಡೋನು
ನೋಡೆ ಪದುಮವ್ವ ನಿನ ಮಗ । ಈರಣ್ಣ
ಆಡ ನಾಲಿಗೆ ತೆಗೆಸಾನೆ॥[೧೫]

ಪೆನುಗೊಂಡೆಯ ಅರಸರು ಮತ್ತು ತುಂಬೋಡಿಯ ನಾಯಕನು ಈರುಗ್ಯಾತರಾಯನ ವಿಜಯವನ್ನು ಮರುಮಾತಿಲ್ಲದೇ ಮನ್ನಿಸಬೇಕಾಯಿತು. ಇದಕ್ಕೆ ಪೂರಕವಾಗಿಯೇ ಚಿಕ್ಕವೀರಕೇತಯ್ಯ ದಂಣಾಯಕನು ಎ.ಕ (ಸಂ) ೨೪ (೨೦೦೯) ತುಮಕೂರು ೪೧ ರಲ್ಲಿ ಉಲ್ಲೇಖಿಸಿರುವಂತೆ ನಿಡಗಲ್ಲು ಚೋಳರ ಅರಸ ಯಿರಂಗೋಳನ ಸಾಮಂತನಾಗಿದ್ದ ಗೂಳೆನಾಯಕನನ್ನು, ಸೇವುಣರ ಸಾಳುವ ತಿಕ್ಕಮನನ್ನು, ಜಯಿದೇವನ್ನು, ಹರಿಪಾಳಯ್ಯರನ್ನು ವೀರಾವೇಶದಿಂದ ಎದುರಿಸಿದ್ದನು. ಈ ದಿಗ್ವಿಜಯಗಳಿಂದಲೇ ಈ ಪದ್ಯದ ಸಾಲುಗಳು ಮೂಡಿಬಂದಿವೆ.

ಊರುಗಳನೆ ಗೆದ್ದ ಗ್ರಾಮಗಳನೆ ಗೆದ್ದ
ಮಾತೀಲಿ ಗೆದ್ದ ಪನುಗೊಂಡೆ। ಊರ ಮುಂದ
ಈರುಗ್ಯಾತಯ್ಯನ ಗೌಡೀಕೆ॥[೧೬]

ಮೇಲಿನ ಮೌಖಿಕ ಕಾವ್ಯದಿಂದ ಈರುಗ್ಯಾತರಾಯನು ಸ್ಥಳೀಯ ಆಡಳಿತಗಾರನಾಗಿದ್ದನೆಂದು ತಿಳಿಯಬಹುದಾಗಿದೆ. ಈರುಗ್ಯಾತರಾಯನು ಪೆನುಗೊಂಡೆಯ ಅರಸರು ತುಂಬಾಡಿಯ

ಮಲ್ಲನಾಯಕ ಮತ್ತು ನೆಲಮಂಗಲದ ಬೈಚರಸ ಈ ಮೂವರನ್ನು ಸೋಲಿಸಿದ್ದನು. ಈ ಸಲುವಾಗಿಯೇ ಶಾಸನದಲ್ಲಿ ಮೂವರಗಂಡ[೧೭] ಎಂಬ ಬಿರುದನ್ನು ಉಲ್ಲೇಖಿಸಲಾಗಿದೆ.

ಚಿಕ್ಕವೀರಕೇತರಾಯನು ಬೇಲೂರಿನ ಹೊಯ್ಸಳರ ೩ನೇ ನರಸಿಂಹನ ದಂಡನಾಯಕನಾಗಿದ್ದನು. ಈತನು ತುಮಕೂರು ಜಿಲ್ಲೆಯಲ್ಲಿ ಆಳ್ವಿಕೆಯನ್ನು ನಡೆಸುತ್ತಿದ್ದನು. ತುಮಕೂರು ತಾಲೂಕಿನ ಆನೆಬಿದ್ದಸರಿಯು (ದೇವರಾಯನದುರ್ಗ) ಈತನ ಆಡಳಿತ ಕೇಂದ್ರವಾಗಿತ್ತು.

> ಆಲೂರು ಬೇಲೂರು ಮೇಲೆ ಬಾದೇಹಳ್ಳಿ
> ಊರಲೊಂದ್ಯೆತೆ ಕನಕೂರು/ ತಿಪ್ಪಗಾನಹಳ್ಳಿ
> ಈರುಗ್ಯಾತಯ್ಯನ ಗೌಡೀಕೆ [೧೮]

ನೆರೆಯ ಹಾಸನ ಜಿಲ್ಲೆಯ ಆಲೂರು, ಬೇಲೂರುಗಳು ಜನರ ಸ್ಮರಣೆಯಲ್ಲಿ ಉಳಿದಿವೆ. ಹಾಗೂ ಈ ಸ್ಥಳಗಳು ಕಾವ್ಯವನ್ನು ಕಟ್ಟುವಷ್ಟರ ಮಟ್ಟಿಗೆ ಜನಪದರನ್ನು ಪ್ರಭಾವಿಸಿವೆ ಎಂಬುದನ್ನು ಈ ಮೇಲಿನ ಮೌಖಿಕ ಕಾವ್ಯದಿಂದ ತಿಳಿಯಬಹುದಾಗಿದೆ. ಈರುಗ್ಯಾತರಾಯನು ಚಿಕ್ಕವೀರಕೇತಯ್ಯ ದಂಣಾಯಕನೇ ಆಗಿರುವುದರಿಂದ ಬೇಲೂರಿನ ಹೊಯ್ಸಳರೊಂದಿಗೆ ಸಂಬಂಧವನ್ನು ಕಲ್ಪಿಸಿ ಈ ಮೇಲಿನ ಸಾಲುಗಳು ಮೂಡಿಬಂದಿವೆ.

ಕುಂಚಿಟಿಗರ ಮಹಾಪುರಾಣದಲ್ಲಿ ಈರುಗ್ಯಾತರಾಯನು ಓರಂಗಲ್‌ನಿಂದ ಬಂದವನೆಂಬ ಐತಿಹ್ಯವಿದೆ. ಈತನ ಪೂರ್ವಿಕರು ಮುಸ್ಲಿಮರ ಧಾಳಿಯಿಂದಾಗಿ ಛತ್ತೀಸ್‌ಘಡದ ಬಸ್ಲಾ ಎಂಬ ಪಟ್ಟಣದಿಂದ ಮಹಾನದಿ ಮತ್ತು ನರ್ಮದಾ ನದಿಗಳನ್ನು ದಾಟಿ ಓರಂಗಲ್ ಪಟ್ಟಣಕ್ಕೆ ಬಂದು ಅಲ್ಲಿ ಕೆಲವು ಕಾಲ ನೆಲೆಸಿದ್ದರು. ನಂತರ ತುಮಕೂರಿನ ಪರಿಸರಕ್ಕೆ ಬಂದು ನೆಲೆಸಿದರು.[೧೯] ಆದರೆ ಈರುಗ್ಯಾತರಾಯನು ಓರಂಗಲ್ಲನ್ನು ಆಳಿದನೆಂದು ಸ್ಪಷ್ಟಪಡಿಸುವ ಆಕರಗಳು ಸಮರ್ಪಕವಾಗಿ ಕಂಡುಬರುವುದಿಲ್ಲ. ಆದರೆ ಚಾರಿತ್ರಿಕ ದೃಷ್ಟಿಕೋನದಿಂದ ವಿಶ್ಲೇಷಿಸಿದಾಗ ಕಾಕತೀಯ ಪ್ರತಾಪರುದ್ರನು ಆಡಳಿತವನ್ನು ನಡೆಸುತ್ತಿದ್ದಾಗ ಅಲ್ಲಾವುದ್ಧೀನ್ ಖಿಲ್ಜಿ ಮತ್ತು ಮಹ್ಮದ್ ಬಿನ್ ತೊಗಲಕ್‌ರ ಧಾಳಿಯು ನಡೆಯಿತು. ಈ ಘಟನೆಗಳು ಜನರ ಸ್ಮರಣೆಯಲ್ಲಿ ಉಳಿದಕೊಂಡಿದ್ದು ನಂತರದ ಕಾಲಘಟ್ಟದಲ್ಲಿ ಓರಂಗಲ್‌ನ ಪ್ರತಾಪರುದ್ರನೊಂದಿಗಿನ ಈರುಗ್ಯಾತರಾಯನು ದ್ವೇಷವನ್ನು ಹೊಂದಿದ್ದನೆಂಬ ಐತಿಹ್ಯವು ಇದೆ.

ದೊರೆಯಾದ ಕಾಕತೀಯ ಪ್ರತಾಪರುದ್ರನೊಂದಿಗೆ ಈರುಗ್ಯಾತರಾಯನು ಸಂಘರ್ಷಕ್ಕಿಳಿದ ಸನ್ನಿವೇಶವನ್ನು ದೃಢೀಕರಿಸಲು ಸಾಧ್ಯವಾಗುವುದಿಲ್ಲ. ಆದರೆ ಮೂರನೇ ನರಸಿಂಹನ ಸಹೋದರ ರಾಮನಾಥನಿಗೆ ವೀರಪ್ರತಾಪ ಚಕ್ರವರ್ತಿ[೨೦] ಎಂಬ ಬಿರುದಿತ್ತು. ಹೊಯ್ಸಳ ಸಹೋದರರಾದ ರಾಮನಾಥ ವೀರಪ್ರತಾಪಚಕ್ರವರ್ತಿ ಮತ್ತು ಮೂರನೇ ನರಸಿಂಹನ ನಡುವಿನ ಹಗೆತನವು ಈರುಗ್ಯಾತರಾಯನು ರಾಮನಾಥ ವೀರಪ್ರತಾಪ ಚಕ್ರವರ್ತಿಯನ್ನು ದ್ವೇಷಿಸಲು ಕಾರಣವಾಗಿರಬೇಕು. ವೀರಕೇತಯ್ಯ ದಂಣಾಯಕನು ತನ್ನನ್ನು ನರಸಿಂಹನ ಪಾದ ಪದ್ಮೋಜೀವಿ[೨೧] ಎಂದು ಕರೆದುಕೊಂಡಿದ್ದಾನೆ. ಇದರಿಂದ ವೀರಕೇತಯ್ಯನ ಸ್ವಾಮಿನಿಷ್ಠೆಯನ್ನು ತಿಳಿಯಬಹುದಾಗಿದೆ. ಈ ಚಾರಿತ್ರಿಕ ಅಂಶವನ್ನೇ

ಈರುಗ್ಯಾತರಾಯ ಮತ್ತು ಪ್ರತಾಪರುದ್ರದೇವನೊಂದಿಗೆ ಸಮೀಕರಿಸಿ ಐತಿಹ್ಯವನ್ನು ಹುಟ್ಟು ಹಾಕಿರುವ ಸಾಧ್ಯತೆಯಿದೆ.

ಈ ಹಿನ್ನೆಲೆಯಲ್ಲಿ ಸದರಿ ಐತಿಹ್ಯದಲ್ಲಿ ಚಾರಿತ್ರಿಕ ಅಂಶಗಳಿರುವುದನ್ನು ಗುರುತಿಸಬಹುದಾಗಿದೆ. ಶಕವರ್ಷ ೧೧೪೯ ನೆಯ ಧಾತು ಸಂವತ್ಸರದ ವೈಶಾಖ ಸು. ೧೧ (ಕ್ರಿ.ಶ.೧೨೭೬) ರಂದು ಪ್ರತಾಪಚಕ್ರವರ್ತಿ ವೀರನರಸಿಂಹನ ರಾಜಧಾನಿ ದ್ವಾರಸಮುದ್ರಕ್ಕೆ ಸೇವುಣರ ಸಾಳುವತಿಕ್ಕಮ, ಜಯಿದೇವ, ಹರಿಪಾಳಯ್ಯರು ಆಕ್ರಮಣ ಮಾಡಿದಾಗ ಹೊಯ್ಸಳ ೩ನೇ ವೀರನರಸಿಂಹನ ಪ್ರಧಾನಗಾಯಿಗೋವಳ, ಗಂಡಪೆಂಡಾರ, ಪಡೆಮೆಚ್ಚೆಗಂಡ ಚಿಕ್ಕಕೇತಯ ದಂಣಾಯಕ, ಮತ್ತು ಇತರರು ವೀರಮರಣ ಹೊಂದಿದರು.

ಹಾಗಾಗಿ ಜನಪದರ ಸ್ಮರಣೆಯಲ್ಲಿನ ಈರುಗ್ಯಾತರಾಯನೇ ಹೊಯ್ಸಳರ ಅರಸ ೩ನೇ ವೀರನರಸಿಂಹನ ಸಾಮಂತನಾಗಿದ್ದನು. ಈರುಗ್ಯಾತರಾಯನನ್ನು ತುಮಕೂರು ಜಿಲ್ಲೆಯ ದೇವರಾಯನದುರ್ಗವನ್ನು ಆಡಳಿತ ಕೇಂದ್ರವನ್ನಾಗಿ ಮಾಡಿಕೊಂಡು ಆಳಿದ ಚಿಕ್ಕವೀರಕೇತರಾಯ ದಂಣಾಯಕನೆಂದು ಗುರುತಿಸಲಾಗಿದೆ.

### ೪.೨ ಈರುನಾಗಮ್ಮ

ವೀರನಾಗಮ್ಮಳನ್ನು ಗ್ರಾಮ್ಯ ಭಾಷೆಯಲ್ಲಿ ಈರುನಾಗಮ್ಮ ಎಂಬುದಾಗಿ ಕರೆಯಲಾಗಿದೆ. ತುಮಕೂರು ಜಿಲ್ಲೆಯ ಕೊರಟಗೆರೆ ತಾಲೂಕು ವಡ್ಡಗೆರೆ ಮತ್ತು ಮಧುಗಿರಿ ತಾಲೂಕು ತಾಡಿ ಗ್ರಾಮದಲ್ಲಿ ಈರುನಾಗಮ್ಮಳಿಗೆ ಗುಡಿ ಗೋಪುರಗಳನ್ನು ನಿರ್ಮಿಸಿ ಆರಾಧಿಸಲಾಗುತ್ತಿದೆ. ನಾಗಮ್ಮಳನ್ನು ಮಹಾಸತಿ, ಅಮ್ಮಾಜಿ, ವೀರನಾಗಮ್ಮ[೨] ಎಂದು ಕರೆಯಲಾಗುತ್ತದೆ. ಈರುನಾಗಮ್ಮಳು ಈರುಗ್ಯಾತರಾಯನ ಸೊಸೆ. ಅಂದರೆ ಈಕೆಯು ಈರುಗ್ಯಾತರಾಯ ಮತ್ತು ಮಲ್ಲದೇವಿಯರ ಮಗನಾದ ನಾಗಣ್ಣನ ಪತ್ನಿ. ಈರುನಾಗಮ್ಮ ತನ್ನ ಪತಿ ನಾಗಣ್ಣನ ಹತ್ಯೆಯಾದ ನಂತರ ಸತಿಸಹಗಮನ ಮಾಡುವ ಮೂಲಕ ಜನರ ಸ್ಮರಣೆಯಲ್ಲಿ ಮಹಾಸತಿಯಾಗಿ ನೆಲೆಸಿದ್ದಾಳೆ. ಇಂದಿಗೂ ಕೊರಟಗೆರೆ ಮತ್ತು ಮಧುಗಿರಿಯ ಪರಿಸರದ ಜನರು ಈಕೆಯನ್ನು ಆರಾಧಿಸುತ್ತಾರೆ.

**ಕಥನ** : ಮಧುಗಿರಿ ತಾಲೂಕು ಹೊಸಕೆರೆಯ ಬೊಮ್ಮಲಿಂಗಪ್ಪ ದಂಪತಿಗಳಲ್ಲಿ ಶಿವ ಪಾರ್ವತಿಯರ ವರದಿಂದ ಈರುನಾಗಮ್ಮಳು ಜನಿಸಿದ್ದಳು. ಈಕೆಯು ಕುಂಚಿಟಿಗರ ಎಲೆಯೋರು ಕುಲದ ಮಗಳಾಗಿದ್ದಳು. ಈಕೆಯು ಋತುಮತಿಯಾಗುವ ಮೊದಲೇ ವೀರನಾಗಪ್ಪನೊಂದಿಗೆ ವಿವಾಹವನ್ನು ನೆರವೇರಿಸಲಾಗಿತ್ತು. ಕುಂಚಿಟಿಗರ ಬಸಲೇನೋರು ಕುಲದ ಈರುಗ್ಯಾತರಾಯನ ಮಗನಾದ ವೀರನಾಗಪ್ಪನು ತಂದೆಯಂತೆಯೇ ಶೂರನಾಗಿದ್ದನು. ತುಂಬಾಡಿಯ ಮಲ್ಲನಾಯಕನ ಆಜ್ಞೆಯಂತೆ ಆಳುಗಳಿಬ್ಬರು ವೀರನಾಗಪ್ಪನನ್ನು ಸಂಹರಿಸಿ, ತಾವೂ ಹತರಾದರು. ಹೊಲದಲ್ಲಿ ಹತ್ತಿ ಬಿಡಿಸುವ ಕಾಯಕದಲ್ಲಿ ನಿರತರಾಗಿದ್ದ ಪದುಮವ್ವ

ಮತ್ತು ನಾಗಮ್ಮರಿಗೆ ಬಾಯಾರಿಕೆಯಾಗಲು ನೀರಿಗಾಗಿ ಸುವರ್ಣಮುಖಿ ನದಿಯಲ್ಲಿ ಚಿಲುಮೆಯನ್ನು ತೋಡಿದರು. ಆಗ ನೀರು ರಕ್ತ ವರ್ಣದಲ್ಲಿ ಕಂಡು ಬಂದಿದ್ದು, ಇದನ್ನು ಅಪಶಕುನವೆಂದು ಭಾವಿಸಿದರು. ಊರಿಗೆ ಬಂದಾಗ ತನ್ನ ಗಂಡ ವೀರನಾಗಣ್ಣನ ಹತ್ಯೆಯ/ಸಾವಿನ ಸುದ್ಧಿಯನ್ನು ತಿಳಿದರು.

ನಾಗಮ್ಮ ತನ್ನ ಹತ್ತು ವರ್ಷದ ಬಾಲ್ಯದಲ್ಲಿಯೇ ಗಂಡನ ತಲೆಯನ್ನು ಮಡಿಲಲ್ಲಿ ಕಟ್ಟಿಕೊಂಡು ಸಂಪ್ರದಾಯದಂತೆ ಸತಿಸಹಗಮನ ಮಾಡಿದಳು. ಸಮಾಜದ ಸಂಪ್ರದಾಯಕ್ಕೆ ಬಲಿಯಾಗಿ ಸತಿಯಾಗಿ ಹೋದ ನಾಗಮ್ಮಳು ಸಮುದಾಯದ ಆರಾಧ್ಯದೈವವಾಗಿದ್ದಾಳೆ. ಅಂತೆಯೇ ಸಂಪ್ರದಾಯದ ಕಪಿಮುಷ್ಠಿಗೆ ತನ್ನ ಜೀವನವನ್ನೇ ಬಲಿಕೊಟ್ಟ ನಾಗಮ್ಮನಂತಹ ಅಮಾಯಕ ಹೆಣ್ಣು ಮಕ್ಕಳ ಪ್ರತಿನಿಧಿಯಾಗಿದ್ದಾಳೆ. ಜನ ಸಮುದಾಯವು ಮಹಾಸತಿಯಾದ ಈಕೆಗೆ ಗುಡಿ, ಗೋಪುರಗಳನ್ನು ನಿರ್ಮಿಸಿ ಪೂಜಿಸುತ್ತಿದ್ದಾರೆ. ಕುಂಚಿಟಿಗ ಜನಾಂಗದವರಲ್ಲದೇ ಇತರೆ ಸಮುದಾಯಗಳು ಸಹ ಪಾರಂಪರಿಕವಾಗಿ ಈಕೆಯನ್ನು ಆರಾಧಿಸುತ್ತಾರೆ. ವೀರನಾಗಮ್ಮಳ ಕುಲಸ್ಥರು ಮಾಂಸಾಹಾರ, ಮಧ್ಯಪಾನಗಳನ್ನು ವರ್ಜಿಸಿ ನೇಮದ ಶ್ರೇಷ್ಠ ಜೀವನವನ್ನು ನಡೆಸುತ್ತಾರೆ.

**ಚಾರಿತ್ರಿಕ ವಿಶ್ಲೇಷಣೆ :** ವಡ್ಡಗೆರೆ ಈರುನಾಗಮ್ಮನ ಕಾವ್ಯ ಅಥವಾ ಈರುಗ್ಯಾತರಾಯನ ದಿಗ್ವಿಜಯ ಕಥನಕಾವ್ಯವು ಪ್ರಧಾನವಾಗಿ ಮೂರು ಭಾವಗಳ ಸಂಗಮವಾಗಿದೆ.[೨೩]

೧) ವೀರನಾಗಮ್ಮ ಸತಿ ಸಹಗಮನ ಮಾಡಿ ಮಹಾಸತಿಯಾದ – ಮಹಾಸತಿ ಕಾವ್ಯ.

೨) ವೀರಕಾತರಾನ ದಿಗ್ವಿಜಯ – ವೀರ ಕಾವ್ಯ.

೩) ಕುಂಚಿಟಿಗರ ವೀರಕ್ಯಾತರಾಯನನ್ನು ಗೊಲ್ಲರ ಮದ್ದೆಮ್ಮಳು ಮೋಹಿಸಿ ವಡ್ಡಗೆರೆಗೆ ಬಂದು ಎತ್ತಗಾನಹಳ್ಳಿಯ ಬೆಟ್ಟದಲ್ಲಿ ನೆಲೆಸಿದ – ಪ್ರೇಮ ಕಾವ್ಯ.

ಈರುಗ್ಯಾತರಾಯನ ಮಗನಾದ ನಾಗಣ್ಣನಿಗೆ ಮಧುಗಿರಿ ತಾಲೂಕಿನ ಹೊಸಕೆರೆಯ ನಾಗಮ್ಮಳನ್ನು ವಿವಾಹ ಮಾಡಿಕೊಳ್ಳಲಾಗುತ್ತದೆ. ನಾಗಮ್ಮ ಮತ್ತು ನಾಗಣ್ಣರ ವಿವಾಹದ ಆಚರಣೆಗಳನ್ನು ಕುರಿತು ಕೆಳಗಿನ ಮೌಖಿಕ ಕಾವ್ಯದಲ್ಲಿ ವ್ಯಕ್ತಪಡಿಸಲಾಗಿದೆ.

ಎಲ್ಲೇ ಮದಿವಮ್ಮ ದಿಳ್ಳಿಗೆ ದಿಗಿಲಂದಾವೆ
ಅಳ್ಳಾಕೆ ಡೇರ್ಯೇವು ಹೊಡಿಸ್ಯಾರು। ಬಸಿಲೇನೋರು
ದಿಳ್ಳಿಗೆ ಸಂಪನ್ನಾರು ಮಗನ ಮದುವೆ॥[೨೪]
ಹೆಣ್ಣು ಮಕ್ಕಾಳೇಳಿ ಬಣ್ಣ ಉಟ್ಟುಕೊಳ್ಳಿ
ಸಣ್ಣ ಮಲ್ಲೀಗೆಯಾ ಮುಡಕೊಳ್ಳಿ। ಹೊಸಕೆರೆಯ
ಕನ್ನೆ ಎಲೆಯೋರ ಮನೆ ನೋಡ ಹೆಣ್ಣೀಗ್ಹೋಗನಿ ಬನ್ನಿ॥ [೨೫]
ಎಂತಮ್ಮ ಒಡ್ಡೀಗೆರೆ ಎಂತಮ್ಮ ಹೊಸಕೆರೆ
ಅಲ್ಲೀ ಗಿಲ್ಲೀಗು ಹರಿಚಪ್ಪರ। ಎಲಿಯೋರು
ನಲ್ಲೀಯ ಧಾರೆ ಎರೆವಾಕೆ। ।[೨೬]

ವಿವಾಹದ ಸಡಗರ ಸಂಭ್ರಮವು ದೆಹಲಿಯವರೆಗೂ ಹಬ್ಬುತ್ತದೆ. ಕುಂಚಿಟಿಗರ ಬಸಲೇನೋರು ಮತ್ತು ಎಲಿಯೋರು ಕುಲದ ಮದುವೆಗೆ ಹೆಣ್ಣುಮಕ್ಕಳು ಸೀರೆಯನ್ನು

ಉಟ್ಟು, ಮಲ್ಲಿಗೆ ಹೂವನ್ನು ಮುಡಿದು ಹೆಣ್ಣಿನ ಮನೆಗೆ ಹೋಗುವಂತಹ ಆಚರಣೆಗಳು ಕಂಡುಬರುತ್ತವೆ. ಹೊಸಕೆರೆಯಿಂದ ತಾಡಿಯ ಮೂಲಕ ವಡ್ಡಗೆರೆಯವರೆಗೂ ಹಸಿರು ಚಪ್ಪರವನ್ನು ಹಾಕಲಾಗಿತ್ತು ಎಂಬುದು ಉತ್ಪ್ರೇಕ್ಷೆಯ ಮಾತಾಗಿದ್ದರೂ ಸಹ ಇಂದಿಗೂ ಶುಭ ಸಮಾರಂಭಗಳಲ್ಲಿ ಹಸಿರು ಚಪ್ಪರವನ್ನು ಹಾಕುವ ಸಂಪ್ರದಾಯವಿದ್ದ ಬಗ್ಗೆ ತಿಳಿಯಲಾಗಿದೆ.

ಈರುಗ್ಯಾತರಾಯನೊಂದಿಗಿನ ತುಂಬೋಡಿಯ ಮಲ್ಲನಾಯಕನ ದ್ವೇಷಕ್ಕೆ ನಾಗಣ್ಣನು ಬಲಿಯಾಗುತ್ತಾನೆ. ಅತ್ತೆ ಸೊಸೆ ಬಾಯಾರಿಕೆಯಾಗಲು ನೀರಿಗಾಗಿ ಹಳ್ಳದಲ್ಲಿ ತೋಡಿದ ಚಿಲುಮೆಯಲ್ಲಿ ನೆತ್ತರು ಹರಿದು ಬರುವುದನ್ನು ಕಂಡು ನಾಗಮ್ಮ ಕಂಗಾಲಾಗುತ್ತಾಳೆ. ಚಿಲುಮೆಯಲ್ಲಿ ಕಂಡಂತಹ ರಕ್ತವು ನಾಗಣ್ಣನದೆಂದು ಕುದುರೆ ಕಚ್ಚಿ ತಂದ ಆತನ ತಲೆಯಿಂದ ಖಚಿತವಾಗುತ್ತದೆ. ನಂತರ ದು:ಖಿತಳಾದ ನಾಗಮ್ಮ ಸೌದೆ ಕಡಿಸಿ ನಾಗಣ್ಣನ ತಲೆಯೊಂದಿಗೆ ಕೊಂಡ ಹಾಯುತ್ತಾಳೆ.

ಗಂಡಾನ ತಲೆಯ ಕೆಂಡಾಕೆ ಎಸುದಾಳೆ
ಕೆಂಡ ಕೊಂಡಾಕೆ ನಡುದಾಳೆ॥[೨೭]

ತನ್ನ ಅವಸ್ಥೆಗೆ ಕಾರಣವೆಂಬಂತೆ ನಾಗಮ್ಮ ತನ್ನ ತವರನ್ನು ನಿಂದಿಸುತ್ತಾಳೆ. ಈ ಕೆಳಗಿನ ಕಾವ್ಯದ ನುಡಿಗಳಿಂದ ವಡ್ಡಗೆರೆ ಎಂಬ ಊರು ಪಟ್ಟಣವಾಗಿದ್ದು, ಆಗಿಂದಾಗ್ಗೆ ಯುದ್ಧಗಳು ನಡೆದಿರುವ ಬಗ್ಗೆ ತಿಳಿಯಲು ಸಹಾಯಕವಾಗಿದೆ. ಇದಕ್ಕೆ ಪೂರಕವಾಗಿ ಈರುಗ್ಯಾತರಾಯನು ತುಂಬೋಡಿ, ನೆಲಮಂಗಲದ ಅರಸರೊಂದಿಗೆ ಹಲವು ಯುದ್ಧಗಳನ್ನು ಮಾಡಿರುವ ಉಲ್ಲೇಖಗಳು ಕುಂಚಿಟಿಗರ ಮಹಾಪುರಾಣದಲ್ಲಿ ಕಂಡು ಬಂದಿವೆ.

ಒಡ್ಡಗೆರೆಂಬೂದು ದೊಡ್ಡ ಪಟ್ಟಣವಂದು
ಕತ್ತೀಗೆ ಧಾರೆಯೆರೆದಾರೆ
ಬಡುವೋರ ಮನೆಗೆ ನನ್ನ ಕೊಟ್ಟಿದ್ದರೆ
ಕೂಲಿ ಮಾಡನ್ನ ಉಣ್ಣುವೆನು ನನ್ನ ತವರೋರು
ಕೊಂಡಾಕ್ಕೆ ನನ್ನ ಧಾರೆ ಎರೆದಾರು॥
ತಿರಿದುಂಬ ಜೋಗಿಗೆ ಕೊಟ್ಟಿದ್ದರೆ
ತಿರಿದುಂಡು ನಾನು ಇರುತ್ತಿದ್ದೆ
ಒಡ್ಡಗೆರೆಂಬೋದು ದೊಡ್ಡ ಪಟ್ಟಣವೆಂದು
ಕತ್ತೀಗೆ ಧಾರೆ ಎರೆಧಾರು ಕೊಂಡಾಕೆ
ಧಾರೆ ಎರೆದವರೆ ನನ್ನ ತವರೋರು
ನನ್ನ ಕೊಟ್ಟೋರ ಮನೆ ಉರಿಯಾಲಿ ಬೇಯಾಲಿ॥[೨೮]

ಸಾಮಾನ್ಯವಾಗಿ ಗರತಿಯರು ತನ್ನ ತವರಿನ ಬಗ್ಗೆ ಯಾವಾಗಲೂ ಒಳ್ಳೆಯದನ್ನೇ ಬಯಸತ್ತಾರೆ. ಆದರೆ ಮಹಿಳೆಯ ವ್ಯಕ್ತಿತ್ವದ ವಿಭಿನ್ನ ನೆಲೆಯನ್ನು ಈ ಕಾವ್ಯದಲ್ಲಿ ಗುರುತಿಸಬಹುದಾಗಿದೆ. ಇದು ಸ್ತ್ರೀ ಸಂವೇದಿ ಬದುಕಿನ ಭಾಗವಾಗಿ ಕಂಡು ಬರುತ್ತದೆ.

'ಬಡುವೋರ ಮನೆಗೆ ನನ್ನ ಕೊಟ್ಟಿದ್ದರೆ ಕೂಲಿ ಮಾಡನ್ನ ಉಣ್ಣುವೆನು, ತಿರಿದುಂಬ ಜೋಗಿಗೆ ಕೊಟ್ಟಿದ್ದರೆ ತಿರಿದುಂಡು ನಾನು ಇರುತ್ತಿದ್ದೆ' ಎಂಬ ನಾಗಮ್ಮಳ ನುಡಿಗಳಿಂದ ನಾಗಮ್ಮನ ಗಂಡನ ಮನೆಯವರು ಸಮಾಜದಲ್ಲಿ ಉನ್ನತ ಸ್ಥಾನಮಾನಗಳನ್ನು ಹೊಂದಿದ್ದು, ಇವರ ಆರ್ಥಿಕ ಸ್ಥಿತಿಗತಿಗಳನ್ನು ತಿಳಿಯಬಹುದಾಗಿದೆ. ಈರುಗ್ಯಾತರಾಯನ ಮಗ ನಾಗಣ್ಣನು

ವಡ್ಡಗೆರೆಯಂತಹ ದೊಡ್ಡ ಪಟ್ಟಣದ ಪಾಳೆಯಗಾರನಾಗಿದ್ದರಿಂದಲೇ ಈ ಕಾವ್ಯದಲ್ಲಿ 'ಕತ್ತಿಗೆ ಧಾರೆ ಎರೆಧಾರೆ' ಎಂಬ ನುಡಿಗಳು ಕಂಡು ಬರುತ್ತವೆ. ಈ ಹಿನ್ನಲೆಯಲ್ಲಿ ಈರುನಾಗಮ್ಮ ಆಳುವ ವರ್ಗದ ಮಹಿಳೆಯಾಗಿದ್ದರೂ ಸಹ ಸತಿಸಹಗಮನದಂತಹ ಸಂಪ್ರದಾಯಕ್ಕೆ ಬಲಿಯಾದಳು. ಇದು ತಲಸಮುದಾಯಗಳಿಗೆ ಅನಿವಾರ್ಯವಾದ ಸ್ಥಿತಿಯಾಗಿತ್ತು. ಎಂಬುದನ್ನು ತೋರಿಸುವ ಆಕರವಾಗಿ ಈ ಕಾವ್ಯವನ್ನು ಗ್ರಹಿಸಬಹುದಾಗಿದೆ.

### ೪.೩ ಸ್ವಾರಮ್ಮ

ತುಮಕೂರು ಜಿಲ್ಲೆಯ ಪಾವಗಡದಿಂದ ಸಿರಾಗೆ ಹೋಗುವ ಹೆದ್ದಾರಿಯಲ್ಲಿ ಮದ್ದೆ ಮತ್ತು ಕರೇಕ್ಯಾತನಹಳ್ಳಿ ಎಂಬ ಗ್ರಾಮಗಳಿವೆ. ಈ ಗ್ರಾಮಗಳ ವ್ಯಾಪ್ತಿಯಲ್ಲಿ ಇರುವ ಗಾರೆ ಬೆಟ್ಟದ ತಪ್ಪಲಿನಲ್ಲಿ ಸ್ವಾರಮ್ಮ ದೇವರ ಗುಡಿಯಿದೆ. ಹಾಗೂ ಗುಡ್ಡದ ಮೇಲೆ ಶಂಕರಲಿಂಗ ದೇವರ ಗುಡಿಯಿದೆ. ಇದಕ್ಕೆ ಹತ್ತಿರದಲ್ಲಿಯೇ ಕೆರೆಯಿದೆ.

**ಕಥನ** : ಮಡಕಸಿರಾ ತಾಲೂಕಿನ ಸ್ವಾರಗಿರಿ ಎಂಬ ಗ್ರಾಮವು ಸ್ವಾರಮ್ಮಳ ಸ್ವಂತ ನೆಲೆಯಾಗಿತ್ತು. ಐತಿಹ್ಯದಂತೆ, ಸಿರಾ ಫೌಜುದಾರಿ ವಿಭಾಗಕ್ಕೆ ಸೇರಿದ್ದ ಮಡಕಸಿರಾ ಪ್ರಾಂತ್ಯದ ಸ್ವಾರಗಿರಿ ಗ್ರಾಮದ ಸ್ವಾರಮ್ಮ ಸುಮಾರು ಕ್ರಿ.ಶ ೧೮ನೇ ಶತಮಾನದಲ್ಲಿ ಜೀವಿಸಿದ್ದ ಶಿವಶರಣೆಯಾಗಿದ್ದಳು.[೨೯] ಈಕೆ ತನ್ನ ಶಿವಾಚರಣೆ, ಶಿವಭಕ್ತಿಗೆ ಅಡ್ಡಿಯಾದಾಗ[೩೦] ತನ್ನ ನೆಲೆಸುವಿಕೆಗೆ ಸೂಕ್ತವಾದ ಸ್ಥಳವನ್ನು ಹುಡುಕಿಕೊಂಡು ಬರುವಂತೆ ತನ್ನ ಪತಿ ಶಂಕರಲಿಂಗನಲ್ಲಿ ಮನವಿಯನ್ನು ಮಾಡಿದಳು. ಸ್ವಾರಮ್ಮಳ ಮನವಿಯಂತೆ ಹೋದ ಶಂಕರಲಿಂಗನು ಬಹುಕಾಲವಾದರೂ ಸ್ವಾರಗಿರಿಗೆ ಹಿಂತಿರುಗಲಿಲ್ಲ. ಪರಿಣಾಮವಾಗಿ ತನ್ನ ಪತಿಯನ್ನು ಹುಡುಕಿಕೊಂಡು ಸ್ವಾರಮ್ಮ ಗಾರೆಬೆಟ್ಟಕ್ಕೆ ಬರುತ್ತಾಳೆ. ಆದರೆ ಅಲ್ಲಿ ಸ್ವಾರಮ್ಮ ತನ್ನ ಪತಿಯು ಗೊಲ್ಲರ ಮದ್ದೆಮ್ಮಳೊಂದಿಗೆ ಸಂಸಾರ ನಿರತನಾಗಿರುವುದನ್ನು ಕಂಡಳು. ಕೋಪೋದ್ರಿಕ್ತಳಾದ ಸ್ವಾರಮ್ಮ ತನ್ನ ಪತಿಯನ್ನೂ, ಗರ್ಭಿಣಿಯಾಗಿದ್ದ ಗೊಲ್ಲರ ಮದ್ದೆಮ್ಮಳನ್ನೂ, ಹಾಗೂ ಆಕೆಯ ಗರ್ಭದಲ್ಲಿದ್ದ ಪಿಂಡವನ್ನೂ ಹತ್ಯೆ ಮಾಡಿದಳು. ಹೀಗೆ ಮೂರು ಹತ್ಯೆಯ ಪಾಪಕೃತ್ಯಗಳನ್ನು ಮಾಡಿದಳು.[೩೧] ನಂತರ ತಾನೂ ಗಂಡನೊಂದಿಗೆ ಸತಿಯಾಗಿ ಹೋಗಿ ಮಹಾಸತಿಯಾದಳು.

**ಚಾರಿತ್ರಿಕ ವಿಶ್ಲೇಷಣೆ** : ಸ್ವಾರಮ್ಮಳನ್ನು ಕುರಿತು ಹಾಡಲಾಗುವ ಮೌಖಿಕ ಕಾವ್ಯಗಳ ಸಂಗ್ರಹ ಮತ್ತು ಲೇಖನಗಳನ್ನು ಅವಲೋಕಿಸಲಾಗಿದೆ.[೩೨] ಆ ಮೂಲಕ ಸ್ವಾರಮ್ಮಳ ನೆಲೆ, ಕಾಲ ಮತ್ತು ಬದುಕನ್ನು ಚಾರಿತ್ರಿಕ ನೆಲೆಯಲ್ಲಿ ಅಧ್ಯಯನ ಮಾಡಲಾಗಿದೆ.

ಸ್ವಾರಮ್ಮ ದೇವತೆಯ ಗುಡಿಯಿರುವ ಪ್ರದೇಶವು ಗಂಗರು, ನೊಳಂಬರು, ನಿಡಗಲ್ಲು ಚೋಳರು, ನಿಡಗಲ್ಲು ನಾಯಕರ ಆಳ್ವಿಕೆಗೆ ಒಳಗಾಗಿತ್ತು. ಈ ಪ್ರದೇಶವನ್ನು ಗಂಗರ ನಂತರದಲ್ಲಿ ಅವರ ಸಾಮಂತರಾದ ಹೆಂಜೇರಿನ ನೊಳಂಬರು ನೊಳಂಬವಾಡಿ ೩೨೦೦೦

ದಿಂದ ಸುಮಾರು ಕ್ರಿ.ಶ ೭೪೦ ರಿಂದ ೧೦೫೪ ರವರೆಗೆ ಆಳ್ವಿಕೆ ನೆಡೆಸಿದ್ದರು.[೩೩] ಈ ಪ್ರದೇಶದಲ್ಲಿ ನಿಡಗಲ್ಲು ಚೋಳರು ಸುಮಾರು ಕ್ರಿ.ಶ ೧೦೨೯ ರಿಂದ ೧೧೬೯ ರವರೆಗೆ, ನಿಡಗಲ್ಲು ನಾಯಕರು ಸುಮಾರು ಕ್ರಿ.ಶ ೧೪೮೭ ರಿಂದ ಕ್ರಿ.ಶ ೧೭೬೮ ರವರೆಗೆ ಆಳ್ವಿಕೆಯನ್ನು ಮಾಡಿದ್ದಾರೆ. ಸ್ವಾರಮ್ಮಳ ಸಾಂಸ್ಕೃತಿಕ ಕ್ಷೇತ್ರವಾದ ಮದ್ದೇ ಮತ್ತು ಕರೇಕ್ಯಾತನಹಳ್ಳಿಗಳ ಪ್ರದೇಶಗಳು ಅವರ ಆಳ್ವಿಕೆಯ ವ್ಯಾಪ್ತಿಯಲ್ಲಿ ಸೇರಿದ್ದವು.

ಕ್ರಿ. ಶ. ೧೭೫೭–೧೭೬೧ ರವರೆಗೆ ಶಿರಾದಲ್ಲಿ ಮರಾಠರು ಆಳ್ವಿಕೆ ನಡೆಸಿದರು. ಅದೇ ವರ್ಷ ಹೈದರಾಲಿಯು ಹೊಸಕೋಟೆಯಲ್ಲಿ ಬಸಾಲತ್ಜಂಗ್‌ನೊಡನೆ ಒಪ್ಪಂದ ಮಾಡಿಕೊಂಡು ಸಿರಾದ ಮೇಲೆ ಧಾಳಿ ಮಾಡಿ, ಅಲ್ಲಿಂದ ಮರಾಠರನ್ನು ಓಡಿಸಿದನು. ನಂತರದಲ್ಲಿ ಮೈಸೂರಿನ ಹೈದರ್, ಟಿಪ್ಪು, ಮರಾಠರು ಮಾಡಿದ ಧಾಳಿಗಳಿಂದಾಗಿ ಸಿರಾದಲ್ಲಿದ್ದ ಐವತ್ತು ಸಾವಿರ ಕುಟುಂಬಗಳ ಸಂಖ್ಯೆಯು ಮೂರು ಸಾವಿರಕ್ಕೆ ಕುಸಿಯಿತು.[೩೪]

ಮಡಕಸಿರಾ ಪ್ರಾಂತ್ಯದ ಸ್ವಾರಗಿರಿ ಗ್ರಾಮದ ಸ್ವಾರಮ್ಮ ಈ ಅವಧಿಯಲ್ಲಿ ಜೀವಿಸಿದ್ದ ಶಿವಶರಣೆಯಾಗಿದ್ದಳು. ಯುದ್ಧ ಸನ್ನಿವೇಶದಲ್ಲಿ ಉಂಟಾದ ಗೊಂದಲದಿಂದಾಗಿ, ಈಕೆಯ ಶಿವಭಕ್ತಿ, ಶಿವಪೂಜೆಗೆ ಅಡ್ಡಿಯನ್ನು ಉಂಟು ಮಾಡುವಂತಹ ಸನ್ನಿವೇಶಗಳು, ಘಟನೆಗಳು ನಡೆದಿರಬೇಕು. ಇದರಿಂದ ಬೇಸರಗೊಂಡ ಸ್ವಾರಮ್ಮ ವಲಸೆ ಹೋಗಲು ನಿರ್ಧರಿಸಿ[೩೫] ತನ್ನ ನೆಲೆಸುವಿಕೆಗೆ ಸೂಕ್ತವಾದ ಸ್ಥಳವನ್ನು ಹುಡುಕಿಕೊಂಡು ಬರುವಂತೆ ತನ್ನ ಪತಿ ಶಂಕರಲಿಂಗನಲ್ಲಿ ಮನವಿ ಮಾಡಿದಳು. ಈ ಸನ್ನಿವೇಶದಲ್ಲಿಯೇ ಸ್ವಾರಮ್ಮ ಸ್ವಾರಗಿರಿಯಿಂದ ಈಗ ನೆಲೆಗೊಂಡಿರುವ ಮದ್ದೇ ಮತ್ತು ಕರೇಕ್ಯಾತನಹಳ್ಳಿಯ ಪ್ರದೇಶದ ಗಾರೆಬೆಟ್ಟಕ್ಕೆ ಆಗಮಿಸಿದಳೆಂದು ಭಾವಿಸಲಾಗಿದೆ.

ಸ್ವಾರಮ್ಮನ ಗುಡಿಯ ಬಾಗಿಲ ತೊಲೆಯಲ್ಲಿ ಕನ್ನಡ ಭಾಷೆಯ ಶಾಸನವನ್ನು ಕೆತ್ತಲಾಗಿದೆ. ಈ ಶಾಸನದಲ್ಲಿ “ಸಿದ್ದಂ ಸ್ವಸ್ತಿಶ್ರೀ ನೀಲಕಣ್ಠೋಜರಾಮಗ ಬುರ್‍ಯ್ವೋಜಪ್ರಸಾದವ ಬೆಸುಗೆಯ್ದ” ಎಂಬುದಾಗಿ ಬರೆಯಲಾಗಿದೆ. ಇದರ ಅಕ್ಷರಲಿಪಿ ಶೈಲಿಯನ್ನು ಆಧರಿಸಿ ಡಾ. ದೇವರಕೊಂಡಾರೆಡ್ಡಿ ಯವರು ಈ ಶಾಸನದ ಕಾಲಮಾನವನ್ನು ಕ್ರಿ.ಶ ೭೫೦–೮೦೦ ಎಂದು ನಿರ್ಧರಿಸಿದ್ದಾರೆ. ಸ್ಥಳೀಯ ವಿದ್ವಾಂಸರಾದ ವಿ. ಆರ್. ಚೆಲುವರಾಜನ್‌ರವರು ಈ ಶಾಸನದ ಪಾಠವನ್ನು ವಿವರಿಸಿ ನೀಲಕಂಠೋಜರಮಗ ಭುವಿರ್‍ಯ್ವೋಜ ಎಂಬ ಶಿಲ್ಪಿಯು ಈ ಸ್ವಾರಮ್ಮನ ದೇವಾಲಯವನ್ನು ನಿರ್ಮಿಸಿದನೆಂದು ಅಭಿಪ್ರಾಯ ಪಡುತ್ತಾರೆ.[೩೬]

ಸ್ವಾರಮ್ಮನ ಗುಡಿಯು ಗೋಪುರ ರಹಿತವಾಗಿದ್ದು, ಕಲ್ಲು ಬಂಡೆಗಳಿಂದಲೇ ಗುಡಿ ಮತ್ತು ಗುಡಿಯ ಸುತ್ತಲೂ ಆವರಣವನ್ನು ನಿರ್ಮಿಸಲಾಗಿತ್ತು. ಎಂಬ ಮಾಹಿತಿಯನ್ನು ಕೆಳಕಂಡಂತೆ ಸ್ವಾರಮ್ಮನ ಕಾವ್ಯದಿಂದ ತಿಳಿಯಬಹುದಾಗಿದೆ.

ಇಲ್ಲಿಂದ ನೆನೆದಾರೆ ಅಲ್ಲಿಂದ ದೈವಾದೆ
ಕಲ್ಲಮಾಳೀಗೆ ಗುಡಿಯೋಳು। ಸ್ವಾರಮ್ಮ
ಎಲ್ಲೋದರು ನಿನ್ನ ದಯವಿರಲಿ॥[೩೭]

ಗರ್ಭಗುಡಿಯಲ್ಲಿರುವ ವಿಗ್ರಹವನ್ನು ಕಪ್ಪುಕಲ್ಲಿನಿಂದ ರಚಿಸಲಾಗಿದೆ. ಇದು ಕ್ರಿ. ಶ. ೮ ನೆಯ ಶತಮಾನದ್ದಾಗಿದೆ ಎಂದು ಚೆಲುವರಾಜನ್ ಮತ್ತು ಸಣ್ಣನಾಗಪ್ಪರವರು ಅಭಿಪ್ರಾಯ ಪಡುತ್ತಾರೆ. ಇದು ಮಹಿಷಾಸುರನನ್ನು ಕಾಲಿನಿಂದ ತುಳಿದು ಖಡ್ಗದಿಂದ ಸಂಹಾರ ಮಾಡುತ್ತಿರುವ ಮಹಿಷಮರ್ಧಿನಿಯ ವಿಗ್ರಹವಾಗಿದೆ. ಅದ್ದರಿಂದ ಈ ವಿಗ್ರಹವು ಜನಪದರ ದೈವರಾದ ಸ್ವಾರಮ್ಮನದ್ದಲ್ಲ ಎಂಬುದು ಮೇಲ್ನೋಟಕ್ಕೆ ತಿಳಿದುಬರುತ್ತದೆ.[೩೮] ಶಿಷ್ಟ ಪರಂಪರೆಗೆ ಸೇರುವ ಮಹಿಷಾಸುರಮರ್ಧಿನಿಯ ಶಿಲ್ಪವು ಸ್ವಾರಮ್ಮನ ಶಿಲ್ಪವಾಗಿರಲು ಸಾಧ್ಯವಿಲ್ಲ. ಆದರೆ ಕಾಲಾನಂತರದಲ್ಲಿ ಜನಪದೀಯರು ಆರಾಧಿಸಿಕೊಂಡು ಬರುತ್ತಿದ್ದ ಸ್ವಾರಮ್ಮನನ್ನು ಮಹಿಷಮರ್ಧಿನಿಯ ರೂಪದಲ್ಲಿ ಆರಾಧಿಸಲು ಪ್ರಾರಂಭಿಸಿರುವುದು ವಿಶೇಷ ಎನಿಸುತ್ತದೆ.

ಕಲ್ಲಾಕುಟಗಾರು ಕುಲದಲ್ಲಿ ಪಾಂಚಾಳಾರು
ಅಲ್ಲೀನೆ ಸ್ವಾರವ್ವಾಗೆ ಶಿಖರಾವ ಕಡಿದಾರು
ಚಿಕ್ಕಮದ್ದೇದ ನೆಲದಲ್ಲಿ॥
ಕರಿಯಾ ಕಲ್ಲೊಂದು ತಿರುಗಿ ಕಡಿದನು ಬಡಗಿ
ತಲೆಗೊಬ್ಬಾನೆ ಬಡಗಿ ಕಡಿದಾರು ಸ್ವಾರಮ್ಮನ
ನಾರೀನೆ ಮುಖದ ಶಿಲೆಯನ್ನ॥[೩೯]

ಮೇಲಿನ ಸ್ವಾರಮ್ಮನ ಪದಗಳಲ್ಲಿ ಕಲ್ಲು ಕೆಲಸ ಮಾಡುವ ವೃತ್ತಿಯವರು ಮದ್ದೇದ ನೆಲೆಯಲ್ಲಿ ಸ್ವಾರಮ್ಮನ ಗುಡಿಯನ್ನು ನಿರ್ಮಿಸಿದರೆಂದು, ಹಾಗೂ ಕಪ್ಪುಕಲ್ಲನ್ನು ಕಡೆದು ಸ್ವಾರಮ್ಮನ ವಿಗ್ರಹವನ್ನು ರಚಿಸಿದ್ದಾರೆ ಎಂದು ತಿಳಿದು ಬರುತ್ತದೆ. ಆದರೆ ಮುಂದಿನ ಕಾವ್ಯದಲ್ಲಿ 'ಬಡಗಿ' ಎಂದು ಸಂಬೋಧಿಸಲಾಗಿದೆ. ಹೀಗಾಗಿ ಮರದ ಇನ್ನೊಂದು ವಿಗ್ರಹವನ್ನು ರಚಿಸಿದ್ದಿರಬೇಕು ಎಂಬ ಸಂಶಯಕ್ಕೆ ಎಡೆಮಾಡಿಕೊಟ್ಟಿದೆ. ಆದರೆ ಸ್ವಾರಮ್ಮಳ ವಿಗ್ರಹವು ಶಿಲೆಯದ್ದಾಗಿದೆ.

ಅಲ್ವಾದ ಗುಡಿಯಾಗೆ ಬಿಲ್ವಾದ ಸೀರ್ಯಾದಾಗೆ
ಮಲ್ಲೀಗೈದಾವೆ ಮನದಾಗೆ। ಸ್ವಾರಮ್ಮಾನ
ಸೊಲ್ಲುಂಬೇನಮ್ಮಾ ಮನದಾಗೆ॥
ಬೇಲೂರ ಬಡಗಿ ಬೇಗಾನೆ ಬರಹೇಳು
ಹೂವೀನ ಉಳಿ ಬಳಸಿ ಸಾಯವಾಗಿ। ತಕ್ಕೊಂಡು
ಬೇಲೂರನ್ನಾ ಬಡಗಿ ಬರಹೇಳು॥[೪೦]

ಮೇಲಿನ ಸ್ವಾರಮ್ಮನ ಪದಗಳಲ್ಲಿ ಸ್ವಾರಮ್ಮ ಸಿರಾ ಸೀಮೆಗೆ ಸಂಬಂಧಿಸಿದವಳೆಂದು, ಸ್ವಾರಮ್ಮನ ವಿಗ್ರಹವನ್ನು ಕೆತ್ತಿರುವ ಕಲ್ಲುಕುಟಿಕರು ಅಥವಾ ಮರದ ಇನ್ನೊಂದು ವಿಗ್ರಹವನ್ನು ರಚಿಸಿದ ಬಡಗಿಗಳು ಬೇಲೂರಿನಿಂದ ಆಗಮಿಸಿದ್ದರು ಎಂಬ ಮಾಹಿತಿಯನ್ನು ವ್ಯಕ್ತಪಡಿಸಲಾಗಿದೆ. ವಿಗ್ರಹ ನಿರ್ಮಾಣಕ್ಕೆ ಪ್ರತಿಯಾಗಿ ಬಳುವಳಿಯನ್ನು ಪಡೆದರೆಂಬ ಮೌಖಿಕ ಮಾಹಿತಿಯಿದೆ. ಬೇಲೂರು, ಹಳೇಬೀಡಿನಂತಹ ಹೊಯ್ಸಳರ ಕಲಾಕೇಂದ್ರಗಳಲ್ಲಿ ಈಗಾಗಲೇ ರಚಿತವಾಗಿದ್ದ ಕಲಾ ವಾಸ್ತುಶಿಲ್ಪದ ವೈಭವತೆಯು ಕಲಾರಸಿಕರರ ಮನಸೂರೆಗೊಂಡಿತ್ತು. ತುಮಕೂರಿನ ಕೈದಾಳ, ಅರಳಗುಪ್ಪೆಯಂತಹ ಸ್ಥಳಗಳಲ್ಲಿ ನಿರ್ಮಾಣವಾಗಿದ್ದ ಹೊಯ್ಸಳರ ಸ್ಮಾರಕಗಳು ಜನಜನಿತವಾಗಿದ್ದವು. ಹಾಗಾಗಿಯೇ ಸ್ವಾರಮ್ಮನ ಪದಗಳಲ್ಲಿ ಬೇಲೂರ ಶಿಲ್ಪಿಯ ಕೈಚಳಕವನ್ನು ಪ್ರಶಂಸಿಸುವ ಸಲುವಾಗಿಯೇ ಈ ಸಾಲುಗಳು ಜನಪದ ಕಾವ್ಯದಲ್ಲಿ ಮೂಡಿಬಂದಿವೆ.

೧೧ ರಿಂದ ೧೩ ನೇ ಶತಮಾನದ ಅಂತ್ಯದವರೆಗೆ ಸುಮಾರು ೩ ಶತಮಾನಗಳ ಕಾಲ ತುಮಕೂರು ಜಿಲ್ಲೆಯ ಉತ್ತರ ಭಾಗ ಮತ್ತು ಆಂಧ್ರಪ್ರದೇಶದ ಅನಂತಪುರ ಜಿಲ್ಲೆಯ ಪಶ್ಚಿಮ ಭಾಗದಲ್ಲಿ ನಿಡಗಲ್ಲು ಚೋಳರ ಆಳ್ವಿಕೆಯು ಪ್ರಭಾವಯುತವಾಗಿತ್ತು. ಕ್ರಿ. ಶ. ೧೧೫೦ರ ನಿಡಗಲ್ಲಿನ ಶಾಸನ ಹಾಗೂ ೧೧೬೭ ರ ಪಾವಗಡ ತಾಲೂಕಿನ ಅರಸೀಕೆರೆಯ ಶಾಸಗಳಲ್ಲಿ ಉಲ್ಲೇಖಿಸಿರುವಂತೆ, ಹೊಯ್ಸಳ ವಿಷ್ಣುವರ್ಧನನಿಂದ ಗೋವಿಂದವಾಡಿಯು ಆಕ್ರಮಣಕ್ಕೆ ತುತ್ತಾದ ಮೇಲೆ ಚೋಳರು ಹೆಂಜೇರಿಗೆ ರಾಜಧಾನಿಯನ್ನು ಬದಲಾಯಿಸಿಕೊಂಡರು. ಚೋಳರ ಕಿರುಕುಳಕ್ಕೆ ಸಹಿಸದ ಹೊಯ್ಸಳ ಇಮ್ಮಡಿ ನರಸಿಂಹನು ಕ್ರಿ. ಶ. ೧೨೮೫ ರಲ್ಲಿ ನಿಡಗಲ್ ಹಾಗೂ ಹನಿಯದುರ್ಗಗಳನ್ನು ಜಯಿಸಿ ನಿಡಗಲ್ಲಿಗೆ "ವಿಜಯದುರ್ಗ" ಎಂದು ಮರುನಾಮಕರಣ ಮಾಡಿದನು.[೪೧]

ನಿಡಗಲ್ಲು ಚೋಳರ ರಾಜಧಾನಿಯಾದ ನಿಡಗಲ್ಲುದುರ್ಗವು ಇಲ್ಲಿಂದ ಉತ್ತರಕ್ಕಿದ್ದು ಇದು ಅಬೇಧ್ಯವಾಗಿದ್ದು ದುರ್ಗದ ಎಂಟು ದಿಕ್ಕುಗಳಲ್ಲಿಯೂ ಭೈರವ, ಗಣಪತಿ, ದುರ್ಗಿಯರಿಂದ ರಕ್ಷಿತವಾಗಿರುವುದರಿಂದ ನಿಡಗಲ್ಲುದುರ್ಗವನ್ನು ಯಾರೂ ಗೆಲ್ಲಲಾರರು ಎಂಬುದಾಗಿ ಕೆಳಗಿನ ಶಾಸನದ ಪಾಠದಿಂದ ತಿಳಿಯಬಹುದು.[೪೨]

ದುರ್ಘಟವೀ ಕರ್ನಾಟಕ
ದುರ್ಗಂಗಳಿಗದಿಕವೆನಿಪ ನಿಡುಗಲ್ಲೆಂಬೀ
ದರ್ಗವನೊಲಿದಾಳುತ ಬಹು
ದುರ್ಗಕಥಪನೆಂಬಾಬಾಳ ಚಿಕ್ಕ ತಿಪ್ಪನೃಪಂ
ಕಾದಿಪ್ಪರಷ್ಟದುರ್ಗಿಯ
ರಾದೆಸೆಗಳೊಳಷ್ಟ ಭೈರವರ್ಗಣಪತಿಗಳು
ಮಾದೇವರೆನಲು ನಿಡುಗಲ್
ಸಾದಿಸಲಳವಲ್ಲವಶ್ವಪತಿಗಜಪತಿಗಂ

ಈ ಪ್ರದೇಶದಲ್ಲಿ ಕ್ರಿ. ಶ. ೭೪೦ ರಿಂದ ೭೪೫ ರ ಅವಧಿಯಲ್ಲಿ ಗಂಗರು ಮತ್ತು ರಾಷ್ಟ್ರಕೂಟರ ನಡುವೆ ಯುದ್ಧಗಳು ನಡೆದಿದ್ದವು. ಇವುಗಳಲ್ಲಿ ಎರಿಕಲ್ಲು (ನಿಡಗಲ್ಲು) ಅರಸ ಧನಂಜಯವರ್ಮನು ಭಾಗವಹಿಸಿದ್ದನು. ಬರಗೂರು ಶಾಸನದಂತೆ ತನ್ನ ಅರಮನೆಯನ್ನೇ ಶಿವನಿಗೆ ನಿವೇದಿಸಿ ಮಹೇಂದ್ರೇಶ್ವರನನ್ನು ಪ್ರತಿಷ್ಠಾಪಿಸಿದನು.[೪೩] ಚೋಳ ರಾಜರು ಆರಂಭದಿಂದಲೂ ಶೈವ ಸಂಪ್ರದಾಯದ ಆರಾಧಕರಾಗಿದ್ದರು. ಬ್ರಹ್ಮದೇವ ಚೋಳ ಮಹಾದೇವನು ಹರನ ಪಾದದಾರಕನಾಗಿದ್ದನು.[೪೪] ಅಂತೆಯೇ ಮಂಗರಸನು ಚೋಳೇಶ್ವರ ದೇವಲಬ್ದವರಪ್ರಸಾದನೆಂದು ಹೇಳಿಕೊಂಡಿದ್ದಾನೆ.[೪೫] ಮಹಾಪ್ರಧಾನ ಮತ್ತು ಸೇನಾಧಿಕಾರಿಯಾದ ಕೇತನವರ್ಗಯ್ಯನು ಶಂಕರದೇವನಿಗೆ ಎರಡು ಕೆರೆಯ ಭೂದಾನ ಮತ್ತು ಸುಂಕದ ಹಣವನ್ನು ನೀಡಿದ್ದನೆಂದು ತಿಳಿಯಬಹುದಾಗಿದೆ.[೪೬] ಅಲ್ಲದೇ ಇಲ್ಲಿ ಶೈವಾಚರಣೆಗೆ ಸೂಕ್ತವಾದ ಸನ್ನಿವೇಶವು ಇತ್ತೆಂಬುದನ್ನು ಈ ಮೇಲಿನ ಚಾರಿತ್ರಿಕ ಘಟನೆಗಳಿಂದ ತಿಳಿಯಬಹುದಾಗಿದೆ. ಹಾಗಾಗಿಯೇ ಶಿವ ಶರಣೆಯಾಗಿದ್ದ ಸ್ವಾರಮ್ಮ ಮದ್ದೇ. ಕರೇಕ್ಯಾತನಹಳ್ಳಿಯ ಪ್ರದೇಶದ ಗಾರೆಬೆಟ್ಟದಲ್ಲಿ ನೆಲೆ ನಿಂತಳು.

ನಿಡಗಲ್ಲನ್ನಾಳೋ ದೊರೆಗಳು ಬರವೂತಂಕ
ಸಿಡಿಯತ್ತ ಸ್ವಾರವ್ವ ಇಳಿಯಾಳು। ಸೀರ್‍ಯಾದ
ದೊರೆಗಾಳೂ ಬರುವರಿಗೆ॥[೪೭]

ಈ ಪದ್ಯದಲ್ಲಿ ಉಲ್ಲೇಖಿಸಿರುವಂತೆ ಸ್ವಾರಮ್ಮನ ಜಾತ್ರೆ, ಉತ್ಸವಗಳಂತಹ ಮೌಖಿಕ ಸಂಪ್ರದಾಯ, ಆಚರಣೆಗಳಲ್ಲಿ ನಿಡಗಲ್ಲು ಮತ್ತು ಸಿರಾದ ಜನ ಪ್ರತಿನಿಧಿಗಳು ಸಕ್ರಿಯವಾಗಿ ಪಾಲ್ಗೊಳ್ಳುತ್ತಿದ್ದರು.

**ಐತಿಹ್ಯದಂತೆ** : ಸ್ವಾರಮ್ಮಳು ತನ್ನ ಪತಿಯು ಅನ್ಯ ಸ್ತ್ರೀಯೊಂದಿಗೆ ಸಂಸಾರ ನಿರತನಾಗಿದ್ದುದನ್ನು ಕಂಡು ಆತನ ಜುಟ್ಟನ್ನು ಹಿಡಿದು ಬೆಟ್ಟದಿಂದ ಕೆಳಗೆ ತಳ್ಳಿದಾಗ ಆತನ ತಲೆಯ ಕೂದಲು ಕಿತ್ತು ಸ್ವಾರಮ್ಮಳ ಕೈಗೆ ಬಂದಿತ್ತು. ಇದಕ್ಕೆ ಪೂರಕವೆಂಬಂತೆ, ಇಂದಿಗೂ ಜುಟ್ಟು ಇಲ್ಲದ ತೆಂಗಿನಕಾಯಿಯನ್ನು ಒಡೆಯಲಾಗುತ್ತದೆ.[೪೮]

ಐತಿಹ್ಯ, ನಂಬಿಕೆ, ಮೌಖಿಕ ಸಂಪ್ರದಾಯಗಳು ಮತ್ತು ಲಿಖಿತ ಆಕರಗಳನ್ನು ಪರಸ್ಪರ ಪೂರಕವಾದ ನೆಲೆಯಲ್ಲಿ ಸೂಕ್ಷ್ಮವಾಗಿ ಅಧ್ಯಯನಕ್ಕೆ ಒಳಪಡಿಸಿದಾಗ ಈ ಕೆಳಗಿನ **ಐತಿಹಾಸಿಕ ಅಂಶಗಳನ್ನು** ಗುರುತಿಸಬಹುದು :

- ಅಕ್ಕಮಹಾದೇವಿ, ಮೀರಾಬಾಯಿಯರಂತೆ ಶರಣಸತಿ–ಲಿಂಗಪತಿ ಎಂಬ ತತ್ವದ ನೆಲೆಯಲ್ಲಿ ಶಂಕರಲಿಂಗನನ್ನು ಆರಾಧಿಸುತ್ತಿದ್ದ ಸ್ವಾರಮ್ಮ ಶಂಕರಲಿಂಗನ ಸತಿ ಎಂದಿರುವುದು ಜನಸಾಮಾನ್ಯರು ಕಟ್ಟಿ ಹಾಡಿರುವ ಹಾಗೂ ಪ್ರಸ್ತುತ ಅಸ್ತಿತ್ವದಲ್ಲಿರುವ ಮೌಖಿಕ ಸಂಪ್ರದಾಯಗಳ ತಿರುಳಾಗಿದೆ. ಹೇಲ್ ಎಂಬ ವಿದ್ವಾಂಸನ ಸಂಶೋಧನೆಯಿಂದ ತಿಳಿಯುವುದೇನೆಂದರೆ ದೇವರೂ ಸಹ ಶಕ್ತಿಶಾಲಿಗಳಾದ ಒಂದು ಬುಡಕಟ್ಟಾಗಿದೆ.[೪೯] ನಮ್ಮ ನಾಡಿನ ಚರಿತ್ರೆಯು ಪುರಾಣಗಳಲ್ಲಿ ಹುದುಗಿದೆ. ಕಾಳಿ, ದುರ್ಗಿ, ಚಾಮುಂಡಿ, ಮಹಿಷಾಸುರಮರ್ಧಿನಿ ಇವರನ್ನೆಲ್ಲ ಶೈವಪಂಥದ ಹಿನ್ನೆಲೆಯ ಶಕ್ತಿದೇವತೆಗಳಾಗಿ ನೋಡಲಾಗುತ್ತದೆ.[೫೦]
- ಸುಮಾರು ಕ್ರಿ. ಶ. ೮ ನೆಯ ಶತಮಾನದಲ್ಲಿ ಸಕಲ ಚರಾಚರ ವಸ್ತುಗಳಲ್ಲಿಯೂ ದೇವರ ಅಸ್ತಿತ್ವವನ್ನು ಕಾಣುವ ಸಮುದಾಯಗಳು ಆರಂಭದಲ್ಲಿ ಶಿಲಾವಿಗ್ರಹವನ್ನು ಪೂಜಿಸಿ, ಗುಡಿಯೊಂದನ್ನು ನಿರ್ಮಿಸಿದ್ದಾರೆ. ಇದು ಅದಿಮ ದೇವತೆಯಾಗಿದೆ. ನಂತರದಲ್ಲಿ ಚೋಳರು ನಿಡಗಲ್ಲುದುರ್ಗದ ರಕ್ಷಣಾ ಜವಾಬ್ದಾರಿಯನ್ನು ನಿರ್ವಹಿಸುತ್ತಿದ್ದ ಸನ್ನಿವೇಶದಲ್ಲಿ ಮಹಿಷಾಸುರ ಮರ್ಧಿನಿಯ ವಿಗ್ರಹವನ್ನು ಪ್ರತಿಷ್ಠಾಪಿಸಿರುವ ಸಾಧ್ಯತೆಯನ್ನು ಅಲ್ಲಗಳೆಯುವಂತಿಲ್ಲ. ಈ ಸನ್ನಿವೇಶದಲ್ಲಿಯೇ ಈ ಅದಿಮ ದೇವತೆಯನ್ನು ಶಕ್ತಿ ದೇವತೆಯಾಗಿ (ಚೋಳಮ್ಮ) ಪ್ರತಿಷ್ಠಾಪಿಸಲಾಗಿದೆ.
- ನಿಡಗಲ್ಲು ಚೋಳರ ಆಳ್ವಿಕೆಗೆ ಒಳಪಟ್ಟಿದ್ದ ಮದ್ದೆ ಗ್ರಾಮದ ಸ್ವಾರಮ್ಮನ ದೇಗುಲದ ಅದಿಮ ದೇವತೆಯನ್ನು "ಚೋಳಮ್ಮ" ಎಂದೂ ಕರೆಯಲಾಗಿದೆ.

- ಕ್ರಿ. ಶ. ೧೨ ನೇ ಶತಮಾನದಲ್ಲಿ ಬಸವಣ್ಣನವರ ಶಕ್ತಿ ವಿಶಿಷ್ಠಾದ್ವೈತ ಮತ್ತು ಶಿವಶರಣ ತತ್ವಗಳ ಪ್ರಭಾವವು ಸ್ವಾರಮ್ಮಳನ್ನು ಶಿವಶರಣೆಯಂತೆ ಕಾಣಲು ಕಾರಣವಾದವು. ಸ್ವಾರಗಿರಯ ಸ್ವಾರಮ್ಮ ಶರಣಸತಿ ಲಿಂಗಪತಿ ಎಂಬ ತತ್ವದ ನೆಲೆಯಲ್ಲಿ ಶಂಕರಲಿಂಗನನ್ನು ಆರಾಧಿಸುತ್ತಿದ್ದು, ಇದೇ ದೇವಾಲಯದಲ್ಲಿ ನೆಲೆ ನಿಂತಿದ್ದಾಳೆ. ಹಾಗಾಗಿ ಚೋಳಮ್ಮಳನ್ನೇ, ಸ್ವಾರಮ್ಮ ಎಂದು ಕರೆಯಲಾಗಿದೆ. ಇದಕ್ಕೆ ಪೂರಕವಾಗಿ ಬಾದಾಮಿ ಚಾಲುಕ್ಯರ ಕಾಲದ ಐಹೊಳೆಯ ಶಿವನ ದೇವಾಲಯವೊಂದರಲ್ಲಿ ಲಡಖಾನ್ ಎಂಬ ಮುಸ್ಲಿಂ ಸಾಧು ವಾಸವಾಗಿದ್ದುದರಿಂದ ಆ ದೇವಾಲಯವನ್ನು ಲಡಖಾನ ದೇವಾಲಯ ಎಂದು ಕರೆಯಲಾಗುತ್ತದೆ.
- ತನ್ನ ಗಂಡನನ್ನು ಹುಡುಕಿಕೊಂಡು ಈ ಪ್ರದೇಶಕ್ಕೆ ಬಂದಂತಹ ಸ್ವಾರಮ್ಮ ಶಿವಭಕ್ತೆಯೂ ಆಗಿದ್ದಳು. ತನ್ನ ಗಂಡನು ಪರನಾರಿ ಜೊತೆ ಸಂಗದಲ್ಲಿರುವುದನ್ನು ಕಂಡು ಸಂಸಾರದಲ್ಲಿ ವಿರಕ್ತಿ ಹೊಂದಿದ್ದಳು. ಹಾಗೂ ಚೋಳಮ್ಮನ ದೇವಾಲಯದಲ್ಲಿಯೇ ಕೆಲವು ಕಾಲ ತಂಗಿದ್ದಳು. ಸ್ವಾರಮ್ಮ ಶಿವಶರಣೆಯಾಗಿದ್ದರಿಂದ, ಶಕ್ತಿದೇವತೆಯಾದ ಚೋಳಮ್ಮನಿಗೆ ಬಲಿ ನೀಡುವುದನ್ನು ಮುಂದುವರೆಸದೇ, ನಿಷೇಧಿಸಲಾಗಿದೆ.
- ಈಕೆಯನ್ನೇ ಜನಸಾಮಾನ್ಯರು ಚೋಳಮ್ಮ >ಸೋಳಮ್ಮ >ಸೋರಮ್ಮ >ಸ್ವಾರಮ್ಮ ಎಂಬುದಾಗಿ ಕರೆದಿದ್ದಾರೆ.[೫೧] ಜನಮನದಲ್ಲಿ ಚೋಳಮ್ಮನ ಸ್ಥಾನವನ್ನು ಸ್ವಾರಮ್ಮ ತುಂಬಿದ್ದಾಳೆ. ಸುಮಾರು ಕ್ರಿ. ಶ. ೧೮ ನೇ ಶತಮಾನದ ನಂತರದಲ್ಲಿ ಸಮುದಾಯದ ಪ್ರತಿನಿಧಿಯಾಗಿ ದೈವೀಸ್ವರೂಪವನ್ನು ಪಡೆದು ಪೂಜಿತಳಾಗಿದ್ದಾಳೆ. ಹಾಗೂ ಚೋಳಮ್ಮನ ದೇವಾಲಯವನ್ನು ಸ್ವಾರಮ್ಮನ ದೇವಾಲಯವೆಂದೇ ಕರೆಯಲಾಗಿದೆ.
- ಇಂದಿಗೂ ಅಸ್ತಿತ್ವದಲ್ಲಿರುವ ಕೊರಟಗೆರೆ ತಾಲೂಕಿನ ಜಂಪೇನಹಳ್ಳಿ ಕ್ರಾಸ್‌ನ್ನು ಇಂದು ಇಲ್ಲಿ ಅಸ್ತಿತ್ವದಲ್ಲಿರುವ ರಂಗಾವಧೂತರ ಮಠದ ಕಾರಣ ಶಿವಪುರ ಎಂದು ಕರೆಯಲಾಗುತ್ತಿದೆ. ಮಠದಲ್ಲಿ ಕೆಲವೇ ವರ್ಷಗಳ ಹಿಂದೆ ಜೀವಂತವಾಗಿದ್ದ ಮುತ್ತಮ್ಮಜ್ಜಿಯನ್ನು ಇಂದಿಗೂ ದೈವೀಸ್ವರೂಪದಲ್ಲಿ ಪೂಜಿಸಲಾಗುತ್ತಿದೆ. ಅಂತೆಯೇ ಶಿವ ಶರಣೆಯಾಗಿದ್ದ ಸ್ವಾರಮ್ಮ ಕೂಡ ದೈವೀಸ್ವರೂಪವನ್ನು ಪಡೆದು ಜನರ ಸಂಕಷ್ಟಗಳನ್ನು ಪರಿಹರಿಸುವ ದೇವತೆಯಾಗಿ ನೆಲೆಗೊಂಡಿದ್ದಾಳೆ.

### ೪.೪ ಕುರಂಗರಾಯ

ಕೊರಟಗೆರೆ ಪಟ್ಟಣದ ಪಶ್ಚಿಮ ದಿಕ್ಕಿನಲ್ಲಿ ಸಿದ್ಧರಬೆಟ್ಟವಿದೆ. ಸಮುದ್ರ ಮಟ್ಟದಿಂದ ಸುಮಾರು ೨೬೫೯ ಅಡಿ ಎತ್ತರವಿರುವ[೫೨] ಈ ನೆಲೆಯನ್ನು ಸಿದ್ಧರಬೆಟ್ಟ,[೫೩] ಸಿದ್ಧರಗಿರಿ, ಸುವರ್ಣಗಿರಿ, ಕಾಕನಗಟ್ಟಲು, ಬೂದುಗವಿ, ಎಂಬ ನಾನಾ ಹೆಸರುಗಳಿಂದ ಕರೆಯಲಾಗುತ್ತದೆ. ಪ್ರಸ್ತುತ ಧಾರ್ಮಿಕ ಕ್ಷೇತ್ರವಾಗಿರುವ ಕೊರಟಗೆರೆ ತಾಲೂಕಿನ ಸಿದ್ಧರಬೆಟ್ಟಕ್ಕೆ ಭಕ್ತರು ಉತ್ತರದ ದಿಕ್ಕಿನ ಬೂದಗವಿ ಎಂಬ ಸ್ಥಳದ ಕಡೆಯಿಂದ ಈ ಬೆಟ್ಟದ ಮೇಲಿನ ಸಿದ್ದೇಶ್ವರ ದೇವರ

ದರ್ಶನಕ್ಕೆ ಆಗಮಿಸುತ್ತಾರೆ. ವಾರದ ಪ್ರತೀ ಸೋಮವಾರ ಇಲ್ಲಿ ವಿಶೇಷ ಪೂಜಾ ಕಾರ್ಯಕ್ರಮಗಳು ನಡೆಯುವ ಕಾರಣ ಆ ದಿನದಂದು ಹೆಚ್ಚಿನ ಸಂಖ್ಯೆಯ ಭಕ್ತರು ಇಲ್ಲಿಗೆ ಆಗಮಿಸುತ್ತಾರೆ.

**ಕುರಂಗರಾಜ ಕಥನ, ಚಾರಿತ್ರಿಕ ವಿಶ್ಲೇಷಣೆ** : ಲಿಖಿತ ಚರಿತ್ರೆಯಲ್ಲಿ ದಾಖಲಾಗದ ಕುರಂಗರಾಜನನ್ನು ಚಾರಿತ್ರಿಕ ನೆಲೆಯಲ್ಲಿ ಅಧ್ಯಯನ ಮಾಡುವ ಪ್ರಯತ್ನವನ್ನು ಮಾಡಲಾಗಿದೆ. ಕುರಂಗರಾಜನನ್ನು ಅಕ್ಷರಿಕ ಸಂಸ್ಕೃತಿಯ ಪ್ರಧಾನಧಾರೆಗೆ ತರುವ ಪ್ರಯತ್ನವಾಗಿ ಕ್ಷೇತ್ರ ಅಧ್ಯಯನವನ್ನು ಮಾಡಲಾಗಿದೆ. ಹಾಗೂ ಕುರಂಗರಾಜನ ಬಗ್ಗೆ ಸಾಂದರ್ಭಿಕವಾಗಿ ಪ್ರಸ್ತಾಪಿಸಿರುವ ಕೃತಿಗಳನ್ನು ಅಧ್ಯಯನ ಮಾಡಲಾಗಿದೆ.[೫೪]

ಕೊರಟಗೆರೆ ತಾಲೂಕಿನ ಕುರಂಕೋಟೆ ಗ್ರಾಮವನ್ನು ತನ್ನ ಆಡಳಿತ ಕೇಂದ್ರವನ್ನಾಗಿ ಮಾಡಿಕೊಂಡು ಕುರಂಗರಾಜನು ಆಳಿದನೆಂದು ತಿಳಿದುಬರುತ್ತದೆ. ಇದಕ್ಕೆ ಪೂರಕವಾಗಿ ಈ ಪ್ರದೇಶದಲ್ಲಿ ಪ್ರಾಚೀನ ಅವಶೇಷಗಳು, ಸ್ಮಾರಕಗಳು, ಹಾಗೂ ಮೌಖಿಕ ಆಕರಗಳು ಕಂಡುಬರುತ್ತವೆ. ಮೌಖಿಕ ಹಾಗೂ ಪ್ರಾಕ್ತನ ಆಕರಗಳಿರುವುದರಿಂದ ಜನಪದರ ಅಭಿಪ್ರಾಯಗಳಿಗೆ ಅನುಗುಣವಾಗಿ ಕುರಂಗರಾಜನನ್ನು ಚಾರಿತ್ರಿಕ ನೆಲೆಯಲ್ಲಿ ಅಧ್ಯಯನ ಮಾಡಲಾಗಿದೆ.

ಕುರಂಗ ಎಂದರೆ ಸಾರಂಗ, ಜಿಂಕೆ[೫೫] ಎಂದರ್ಥ. ರಾಯ ಎಂದರೆ ಒಡೆಯ ಎಂದರ್ಥ. ತುಮಕೂರು ಜಿಲ್ಲೆಯ ದೇವರಾಯನದುರ್ಗ, ಮಧುಗಿರಿಯ ಮೈದುನಳ್ಳಿ, ಚೆನ್ನರಾಯನದುರ್ಗ, ಸಿದ್ಧರಗಿರಿಯಲ್ಲಿ ಜಿಂಕೆಗಳನ್ನು ಒಳಗೊಂಡಂತೆ ಅಪಾರ ಪ್ರಮಾಣದ ಅರಣ್ಯ ಮತ್ತು ವನ್ಯ ಪ್ರಾಣಿಸಂಪತ್ತು ಅಸ್ತಿತ್ವದಲ್ಲಿತ್ತು. ಸಿದ್ದರಬೆಟ್ಟದ ದಕ್ಷಿಣದ ತಪ್ಪಲಿನಲ್ಲಿ ವಾಸವಾಗಿದ್ದ ಕುರಂಗರಾಯನು ವನ್ಯಜೀವಿಗಳಿಗೆ ತೋರಿದ ದಯೆಯ ಕಾರಣ ಆತನಿಗೆ ಕುರಂಗರಾಯನೆಂಬ ಹೆಸರು ಪರ್ಯಾಯ ನಾಮವಾಗಿದೆ.[೫೬]

ವಿಜಯನಗರ ಸಾಮ್ರಾಟರು ತುಮಕೂರು ಜಿಲ್ಲೆಯ ಬಹುತೇಕ ಪ್ರದೇಶಗಳನ್ನು ಆಕ್ರಮಿಸಿಕೊಂಡು ತನ್ನ ಸಾಮಂತರ ಮೂಲಕ ಇಲ್ಲಿನ ಆಡಳಿತವನ್ನು ನಿರ್ವಹಿಸುತ್ತಿದ್ದರು. ಆದರೇ ವಿಜಯನಗರದ ಅರಸರು ತಾಳಿಕೋಟೆಯ ಕದನದ ನಂತರ ದುರ್ಬಲರಾದರು. ಇಂತಹ ಸಂಧಿಗ್ದ ಸನ್ನಿವೇಶವು ಸಾಮಂತರು ಸ್ವತಂತ್ರವಾಗಿ ಆಡಳಿತವನ್ನು ನಡೆಸಲು, ಹಾಗೂ ರಾಜಕೀಯವಾಗಿ ಪ್ರಬಲರಾಗಲು ಕಾರಣವಾಯಿತು. ಈ ಸನ್ನಿವೇಶದಲ್ಲಿಯೇ ತುಮಕೂರು ಪರಿಸರದಲ್ಲಿ ತುಂಡರಸರಾದ ಬಿಜ್ಜಾವರದ ಮಹಾನಾಡ ಪ್ರಭುಗಳು, ನಿಡಗಲ್ಲು ನಾಯಕರು, ಪಾವಗಡದ ಪಾಳೆಯಪಟ್ಟುಗಳು, ಗುಬ್ಬಿ-ಹೊಸಹಳ್ಳಿಯ ಪಾಳೆಯಗಾರರು, ಯಲ್ಲಪ್ಪನಾಯಕನ ಹೊಸಕೋಟೆ ನಾಯಕರು, ಹಾಗಲವಾಡಿ ನಾಯಕರು, ಮಿಡಿಗೇಶಿನಾಯಕರು, ಹೊಳವನಹಳ್ಳಿಯ ಪಾಳೆಯಗಾರರು, ನಿಡಗಲ್ಲು ಚೋಳರು, ಶಿರಾದ ಸಾಮಂತರು ಏಳಿಗೆಗೆ ಬಂದರು. ಅಲ್ಲದೇ ಆಡಳಿತದ ವಿಭಾಗಗಳನ್ನು ನಿರ್ಮಿಸಿಕೊಂಡರು.

ಈ ಹಿನ್ನಲೆಯಲ್ಲಿ ಚೆನ್ನರಾಯನದುರ್ಗದ ಆಡಳಿತ ಕೇಂದ್ರವನ್ನು ಮಧುಗಿರಿಯ ಅರಸರ ಕಾಲದಲ್ಲಿ ಗುರುತಿಸಲಾಗಿದೆ.[೫೭] ಈ ಚೆನ್ನರಾಯನದುರ್ಗವು ಸಿದ್ಧರಬೆಟ್ಟದ ತಪ್ಪಲಿನಲ್ಲಿದೆ.

ಕೊರಮಪುರದಲ್ಲಿ ಹೊಳವೇಗೌಡನೆಂಬ ತಳವರ್ಗದ ಆಡಳಿತಗಾರನಿದ್ದನು.[೫೮] ಈತನ ನಂತರ ಅಧಿಕಾರಕ್ಕೆ ಬಂದ ಬೈಚೇಗೌಡನು ಹೊಳವೇಗೌಡನ ಸ್ಮರಣಾರ್ಥವಾಗಿ ಕೊರಮಪುರಕ್ಕೆ ಹೊಳವನಹಳ್ಳಿ ಎಂದು ಹೆಸರಿಸಿದನು. ಅಂತೆಯೇ ಚೆನ್ನರಾಯನದುರ್ಗದ ಸಮೀಪದಲ್ಲಿರುವ ಸಿದ್ಧರಬೆಟ್ಟದಲ್ಲಿಯೂ ಕೂಡ ಕುರಂಗರಾಜನು ಮಧುಗಿರಿಯ ಮುಮ್ಮಡಿ ಚಿಕ್ಕಪ್ಪಗೌಡರ ಸಾಮಂತನಾಗಿ ಸಿದ್ಧರಬೆಟ್ಟದ ತಪ್ಪಲು ಪ್ರದೇಶದಲ್ಲಿ ಆಳ್ವಿಕೆ ಮಾಡುತ್ತಿದ್ದನು. ತುಮಕೂರು ಪ್ರದೇಶದಲ್ಲಿ ವಿಜಯನಗರೋತ್ತರ ಕಾಲದಲ್ಲಿ ಏಳಿಗೆಗೆ ಬಂದಂತಹ ಸ್ಥಳೀಯ ಪಾಳೆಯಗಾರರು ತಮ್ಮ ಆಳ್ವಿಕೆಗೆ ಒಳಪಟ್ಟಿದ್ದಂತಹ ಪ್ರದೇಶಗಳ ಆಡಳಿತವನ್ನು ನಿರ್ವಹಿಸಲು ಸಹಾಯಕರನ್ನು ನೇಮಿಸಿಕೊಂಡಿದ್ದರು. ಇದರಿಂದಾಗಿಯೇ ಕುರಂಗರಾಜನಂತಹ ಅರಸನನ್ನು ಸಿದ್ಧರಬೆಟ್ಟದ ದಕ್ಷಿಣದ ತಪ್ಪಲಿನಲ್ಲಿ ಆಡಳಿತಗಾರನನ್ನಾಗಿ ನೇಮಿಸಿರುವುದು ದೃಢಪಡುತ್ತದೆ.

ಕ್ರಿ. ಶ. ೧೬೩೩ ರಲ್ಲಿ ಮಸುವಿನಕಲ್ಲು ಯುದ್ಧದಲ್ಲಿ ಮಧುಗಿರಿಯ ಅರಸರು ಮತ್ತು ಕೊರಟಗೆರೆಯ ರಣಬೈರೇಗೌಡನು ಸೆಣಸಿದರು. ಈ ಯುದ್ಧವು ನಡೆದ ಸ್ಥಳವು ಇಂದಿನ ಕೊರಟಗರೆಯ ಪಕ್ಕದ ಕಂಬದಹಳ್ಳಿಯ ಪ್ರದೇಶವಾಗಿದೆ. ಇಲ್ಲಿಗೆ ಹತ್ತಿರದಲ್ಲಿಯೇ ಇರುವ ಜೆಟ್ಟಿಅಗ್ರಹಾರ, ಥರಟಿಬೆಟ್ಟ, ಬೆಳಧರ, ಅಜ್ಜಿಗುಟ್ಟೆ, ಬೊಮ್ಮನಹಳ್ಳಿ, ನರಸೀಪುರ, ಚಿಕ್ಕತೊಟ್ಲುಕೆರೆ, ಹಿರೇತೊಟ್ಲುಕೆರೆ, ಮೇದನಕಲ್ಲು, ಹಾಗೂ ಮಸುವಿನಕಲ್ಲುಗಳು ಮಧುಗಿರಿ ಮಹಾನಾಡಿನ ದಕ್ಷಿಣ ಮತ್ತು ನೈರುತ್ಯದ ಗಡಿಗಳಾಗಿದ್ದವು.[೫೯] ಗಡಿಭಾಗದ ಈ ಕೆಲವು ಪ್ರದೇಶಗಳು ಚನ್ನರಾಯನದುರ್ಗ ದಿಂದಲೂ ದೂರವಿರುವುದರಿಂದ ಅಲ್ಲಿಂದ ಆಡಳಿತವನ್ನು ನಿರ್ವಹಿಸುವುದು ಕಷ್ಟಸಾಧ್ಯವೆಂದು ಅರಿತಂತಹ ಮಹಾನಾಡು ಪ್ರಭುಗಳು ಕುರಂಗರಾಜನಿಗೆ ಈ ಪ್ರದೇಶದಲ್ಲಿನ ಆಡಳಿತದ ಜವಾಬ್ದಾರಿಯನ್ನು ವಹಿಸಿದ್ದರೆಂದು ತಿಳಿದು ಬರುತ್ತದೆ.

ಕ್ರಿ. ಶ. ೧೬೨೦ ರ ನಂತರದಲ್ಲಿ ಮಧುಗಿರಿಯಲ್ಲಿ ಅಧಿಕಾರಕ್ಕೆ ಬಂದ ಮುಮ್ಮಡಿ ಚಿಕ್ಕಪ್ಪಗೌಡರು ಸಿದ್ಧರಗಿರಿಗೆ ಕೋಟೆಯನ್ನು ಕಟ್ಟಿಸಿ ಅದನ್ನು ನೋಡಿಕೊಳ್ಳಲು ಕುರಂಕೋಟೆಯ ಬಳಿಯ ಪಾಳೆಯಗಾರನಾಗಿದ್ದ ಕುರಂಗರಾಯನನ್ನು ನೇಮಿಸಿದ್ದನು. ಮುಮ್ಮಡಿ ಚಿಕ್ಕಪ್ಪಗೌಡರು ವಿಜಯನಗರದ ಅರಸರ ಸಾಮಂತರಾಗಿದ್ದರು. ವಿಜಯನಗರದ ಪ್ರೌಢದೇವರಾಯನಿಗೆ ಅನುಗ್ರಹ ನೀಡಿದ ಹಾಗೂ ನೂರೊಂದು ವಿರಕ್ತರಿಗೆ ತತ್ತ್ವೋಪದೇಶ ಮಾಡಿದ ಗುರುಗಳಾದ ಶಂಕರ ಸಿದ್ಧೇಶ್ವರರ ಗದ್ದುಗೆ[೬೦] ಇಲ್ಲಿರುವುದರಿಂದ ಮೊದಲಿನಿಂದಲೂ ಆಧ್ಯಾತ್ಮಿಕವಾಗಿ, ರಾಜಕೀಯವಾಗಿ ಈ ನೆಲೆಯು ಮಹತ್ವವನ್ನು ಪಡೆದಿತ್ತು, ಎಂಬುದಾಗಿ ತಿಳಿದು ಬರುತ್ತದೆ.

ಬೋಳಬಸವೇಶ್ವರರು ಮಹಾನಾಡಪ್ರಭು ಇಮ್ಮಡಿ ಚಿಕ್ಕಪ್ಪಭೂಪಾಲ (೧೫೮೫–೧೬೨೦) ಮತ್ತು ಅವರ ಮಗ ಸಪ್ಪೇಂದ್ರ (ಮುಮ್ಮಡಿ ಚಿಕ್ಕಪ್ಪಗೌಡ) ರ ರಾಜಗುರುಗಳಾಗಿದ್ದರು. ಸಿದ್ದಾಪುರದಲ್ಲಿ ರಾಜ ಬೋಳಬಸವೇಶ್ವರರ ಮಠವಿದೆ. ಇಲ್ಲಿಯೇ

ಚಂದ್ರಮೌಳೇಶ್ವರ ಶಿವಾಲಯವೂ ಇದೆ. ಸರ್ವ ಧರ್ಮಗಳ ಸ್ಮಾರಕಗಳು ಇಲ್ಲಿವೆ. ಆದರೂ ಮಹಾನಾಡ ಪ್ರಭುಗಳು ಪ್ರಧಾನವಾಗಿ ಶಿವನ ಆರಾಧಕರಾಗಿದ್ದರು. ಕುರಂಗರಾಜನು ಇಲ್ಲಿ ತಪೋನಿರತರಾಗಿದ್ದ ಶ್ರೀಸಿದ್ಧಲಿಂಗೇಶ್ವರರನ್ನು ತನ್ನ ರಾಜಗುರುಗಳನ್ನಾಗಿ ಮಾಡಿಕೊಂಡಿದ್ದನು. ಈ ಕುರಿತಂತೆ ಐತಿಹ್ಯವೂ ಇದೆ.[೬೧]

ಸಿದ್ಧರಬೆಟ್ಟವು ಇಂದಿಗೂ ಸರ್ವ ಜಾತಿಗಳ ಸಾಮರಸ್ಯದ ಆಧ್ಯಾತ್ಮಿಕ ತಾಣವಾಗಿದೆ. ಸರ್ವಜಾತಿಗಳವರು ನಿಷ್ಠೆಯಿಂದ ಇಲ್ಲಿನ ದೇವರನ್ನು ವಿಶೇಷವಾಗಿ ಆರಾಧಿಸುವುದನ್ನು ಇಂದಿಗೂ ಕಾಣಬಹುದಾಗಿದೆ. ಸಿದ್ಧರಬೆಟ್ಟದ ಮೇಲಿನ ಸಿದ್ದೇಶ್ವರ ದೇವರಿಗೆ ವಾರದ ಪ್ರತೀ ಸೋಮವಾರ ವಿಶೇಷ ಪೂಜಾ ಕಾರ್ಯಗಳು ನಡೆಯುವ ಕಾರಣ ಹೆಚ್ಚಿನ ಸಂಖ್ಯೆಯಲ್ಲಿ ಭಕ್ತರು ಆಗಮಿಸುತ್ತಾರೆ. ಬೂದಗವಿಯಲ್ಲಿ ಅನ್ನದಾಸೋಹದ ವ್ಯವಸ್ಥೆಯಿದೆ. ಆದರೇ ಬಹುತೇಕ ಕಡೆಗಳಲ್ಲಿ ಸೋಮವಾರ ದಂದು ಮಾಂಸಾಹಾರವನ್ನು ಸೇವಿಸುವುದು ನಿಷೇಧಿತ ವಾಡಿಕೆಯಾಗಿದ್ದರೂ, ಕೂಡ ಕುರಂಗರಾಯನ ನೆಲೆಯಾದ ಸಿದ್ಧರಬೆಟ್ಟದ ದಕ್ಷಿಣದ ತಪ್ಪಲಿನಲ್ಲಿ ಇಂದಿಗೂ ಸೋಮವಾರದ ದಿನದಂದು ಮಾಂಸಾಹಾರವನ್ನು ಸಾಮೂಹಿಕವಾಗಿ ಪಂಕ್ತಿಯಲ್ಲಿ ಸೇವಿಸುವುದು ರೂಢಿಯಲ್ಲಿದೆ.[೬೨]

ಹಲವಾರು ಪ್ರಾಚ್ಯ ಅವಶೇಷಗಳು ಮತ್ತು ಕೆಲವು ತಾಣಗಳು ಇಲ್ಲಿವೆ. ಉದಾಹರಣೆಗೆ : ಶ್ರೀ ಸಿದ್ದೇಶ್ವರಸ್ವಾಮಿಗಳ ಪೀಠ, ದೊಡ್ಡಕಾಯಪ್ಪನ ದೇವಾಲಯ, ಮಲ್ಲಪ್ಪನ ಗುಡಿ, ವೀರಗಾರರ ಗುಡಿ, ಈಶ್ವರ ದೇವಾಲಯ ಜಲತಾಣಗಳಾದ ಸುವರ್ಣಗಿಂಡಿ, ಶಿವ ಪುಷ್ಕರಣೆ, ಬಜೆಹಳ್ಳ, ಸುವರ್ಣಮುಖಿ ನದಿಯ ಮೂಲ, ಮಾದಗಿತ್ತಿಮಡು, ಅಲಸಂದೆಕೆರೆ, ಗಲ್ಲೇಬಾನಿ, ಕೋಳಿಮೊಟ್ಟೆ ಆಕಾರದ ಬಾವಿ ಸ್ಮಾರಕಗಳಾದ ವಾಲಗದಬಂಡೆ, ಕುಲುಮೆಗುಂಡು, ಕುಲುಮೆ ಬಾರೆ, ಲದ್ದೀಕಟ್ಟೆ, ಪಾತಪ್ಪನ ಗುಂಡು, ಕಂಚುಗಾರರ ಬೀದಿ, ಹದ್ದಿನೆಡೆ ಬೆಟ್ಟ, ಸೂಳೆಬಂಡೆ, ಗ್ರಾಮಗಳಾದ ಕುರಂಕೋಟೆ, ಹೊಲತಾಳು, ಒಳಪಾಳ್ಯ, ಗುಂಡಗಲ್ಲು ಮುಂತಾದುವು. ಇಲ್ಲಿನ ಪ್ರತಿಯೊಂದು ಅವಶೇಷಗಳೂ ಕುರಂಗರಾಜನನ್ನು ಕೇಂದ್ರವಾಗಿ ಇರಿಸಿಕೊಂಡು ಹಲವು ಐತಿಹ್ಯಗಳನ್ನು ಹೊಂದಿವೆ.

ಸಿದ್ಧರಬೆಟ್ಟದ ಮೇಲಣ ಸಿದ್ಧೇಶ್ವರ ಗವಿಯಿಂದ ಪಶ್ಚಿಮದ ಬೆಟ್ಟದ ಅಂಚಿನಲ್ಲಿ ಸಾಗಿದರೆ ಅಲ್ಲಿ ಈಶ್ವರ ದೇವಾಲಯವಿದೆ. ತನ್ನ ಅನಾರೋಗ್ಯವನ್ನು ರಾಜಗುರುಗಳಾದ ಸಿದ್ಧಲಿಂಗ ಯತಿಗಳು ಪರಿಹರಿಸಿದ್ದರ ಕಾರಣವಾಗಿ ಈ ದೇವಾಲಯವನ್ನು ಕುರಂಗರಾಜನು ನಿರ್ಮಿಸಿದನೆಂದು ಹೇಳಲಾಗುತ್ತದೆ. ಅದರ ಸುತ್ತಮುತ್ತ ವಿಶಾಲವಾದ ಬಂಡೆಯಿದೆ. ಬಂಡೆಯ ಮೇಲೆ ಎರಡು ದೋಣೆಗಳಿವೆ. ಒಂದು ಕೋಳಿಮೊಟ್ಟೆಯ ಆಕಾರದ ಬಾವಿ. ಮತ್ತೊಂದು ಗಲ್ಲೇಬಾನಿಯಾಗಿತ್ತು ಎಂಬುದಾಗಿ ಹೇಳಲಾಗುತ್ತದೆ. ಗಲ್ಲೇಬಾನಿಯೆಂದರೆ ಚಪ್ಪಲಿಯನ್ನು ಮಾಡಲು ಚರ್ಮವನ್ನು ನೆನೆಸಿ ಹಾಕಲಾಗುತ್ತಿದ್ದ ದೋಣೆಯಾಕಾರದ ಸ್ಮಾರಕ. ಇದು ಚಮ್ಮಾರಿಕೆಯ ವೃತ್ತಿಗೆ ಪ್ರಾಮುಖ್ಯತೆಯನ್ನು ನೀಡುವ ಸಲುವಾಗಿ ಅಥವಾ ಚರ್ಮದ ನಾಣ್ಯಗಳನ್ನು ಚಲಾವಣೆಗೆ ತರುವ ಉದ್ದೇಶದಿಂದ ಚರ್ಮವನ್ನು ಹದಗೊಳಿಸಲು

ನೆನೆಹಾಕಲಾಗುತ್ತಿದ್ದ ನೀರಿನ ನೆಲೆ ಎಂದು ಭಾವಿಸಲಾಗಿದೆ. ಇಂದಿಗೂ ಇದನ್ನು ಗಲ್ಲೇಬಾನಿಯೆಂದೇ ಕರೆಯಲಾಗುತ್ತದೆ. ಕುರಂಗರಾಯನು ಬೆಟ್ಟದ ಮೇಲ್ಭಾಗದಲ್ಲಿ ನಿರ್ಮಿಸಿದ್ದನು ಎನ್ನಲಾದ ಕೋಟೆಯ ಅವಶೇಷವಿದೆ. ಇದರ ಪೂರ್ವಕ್ಕೆ ವಿಶಾಲವಾಗಿರುವ ಬಂಡೆಯ ಮದ್ಯದಲ್ಲಿ ಕಣಿವೆಯಾಕಾರದ ಭೂಸ್ವರೂಪವಿದೆ. ಅಲ್ಲಿ ಕೆರೆಯನ್ನು ನಿರ್ಮಿಸಲಾಗಿದೆ. ಇಲ್ಲಿನ ಮಣ್ಣು ಆನೆಯಲದ್ದಿಯ ಸ್ವರೂಪದಲ್ಲಿ ಇತ್ತು ಎಂಬ ನಂಬಿಕೆಯಿದೆ. ಇನ್ನೊಂದು ಮೂಲದಂತೆ ಆನೆಗಳಿಗೆ ನೀರು ಕುಡಿಸಲು ನಿರ್ಮಿಸಿದ ನೀರಿನ ಕಟ್ಟೆಗೆ ಲದ್ದೀಕಟ್ಟೆ ಎಂದು ಕರೆಯಲಾಗುತ್ತದೆ. ಜನಾನುರಾಗಿಯಾಗಿದ್ದ ಈತನು ಸಕಲ ಜೀವರಾಶಿಯ ಅನುಕೂಲಕ್ಕಾಗಿ ಬೆಟ್ಟದ ಮೇಲೆ ಅರ್ಧಚಂದ್ರಾಕಾರದ ತೂಬಿಲ್ಲದ ಕೆರೆಯನ್ನು ಕಟ್ಟಿಸಿದ್ದನು. ಈ ಕೆರೆಯನ್ನು ಅಚ್ಚಂಡೆಕೆರೆ> ಅಲಸಂದೆಕೆರೆ[೬೩] ಎಂದು ಕರೆಯಲಾಗುತ್ತದೆ. ಇದಕ್ಕೆ ಪೂರಕವಾಗಿಯೇ ಈತನಿಗೆ (ಕುರಂಗ=ಸಾರಂಗ, ರಾಯ=ಒಡೆಯ) ಕುರಂಗರಾಯ ಎಂಬ ಹೆಸರು ಪರ್ಯಾಯವಾಗಿ ಬಂದಿದೆ.

ಸಿದ್ಧರಬೆಟ್ಟದ ಮೇಲ್ಭಾಗದ ದಕ್ಷಿಣದ ಕಡೆಗೆ ಪಾಳೆಯಗಾರನ ಪರಿವಾರ, ಸಂಬಂಧಿಕರು ಮತ್ತು ಸೈನಿಕರು ವಾಸಿಸುತ್ತಿದ್ದರು. ಇಂದು ಅಳಿದು, ಉಳಿದಿರುವ ಮಂಟಪಗಳು ಆಗಿನ ವಾಸಸ್ಥಾನಗಳಾಗಿದ್ದುವು. ಬೆಟ್ಟದ ದಕ್ಷಿಣದ ತಳಭಾಗವನ್ನು ಸಿಪಾಯಿಪಾಳ್ಯ ಎಂದು ಕರೆಯಲಾಗುತ್ತದೆ. ಇಂದು ಇಲ್ಲಿ ಹೊಲಗಳಿದ್ದು ಈ ಕಡೆ ಹೋಗುವ ಜನರು 'ಪಾಳ್ಯಕ್ಕೆ ಹೋಗುತ್ತೇವೆ' ಎಂದೇ ಮಾತನಾಡುತ್ತಾರೆ. ಇಲ್ಲಿರುವ 'ಪಾತಪ್ಪನ ಗುಂಡು' ಎಂದು ಕರೆಯುವ ಕಲ್ಲು ಬಂಡೆಯ ಮೇಲೆ ವೀರನೊಬ್ಬನ ಅಸ್ಪಷ್ಟ ಕೆತ್ತನೆಯಿದೆ. ಈ ಚಿತ್ರವು ಕುರಂಗರಾಜನ ನಿಷ್ಠಾವಂತ ಸೈನಿಕನೆಂದು ಹೇಳಲಾಗುತ್ತದೆ. ಸಿಪಾಯಿಪಾಳ್ಯದ ಮಧ್ಯದಲ್ಲಿರುವ ಮಲ್ಲಪ್ಪನಗುಡಿಯ ಮುಂದೆ ಹೋರಾಡುತ್ತಿರುವ ಭಂಗಿಯಲ್ಲಿರುವ ಶಿಲ್ಪವನ್ನು ಸ್ಥಳೀಯರು ಕುರಂಗರಾಯನ ಬಿಂಬವೆಂದೇ ಗುರುತಿಸುತ್ತಾರೆ.[೬೪] ಸಿಪಾಯಿಪಾಳ್ಯದ ಪಶ್ಚಿಮಕ್ಕೆ ಇಂದು ದೊಡ್ಡಕಾಯಪ್ಪ ಎಂದು ಕರೆಯಲಾಗುವ ಆಂಜನೇಯಸ್ವಾಮಿಯ ದೇವಾಲಯವಿದೆ. ಈ ನೆಲೆಯನ್ನು ಕುರಂಗರಾಜನ ಕಾಲದಲ್ಲಿ ಕಂಚುಗಾರರ ಬೀದಿ ಎಂದು ಕರೆಯಲಾಗುತ್ತಿದ್ದು ಇಂದಿಗೂ ಲೋಹದ ಅವಶೇಷಗಳು ಇಲ್ಲಿ ಸಿಕ್ಕುತ್ತವೆ. ಸಿಪಾಯಿಪಾಳ್ಯದ ಸುತ್ತಲೂ ಮಣ್ಣಿನ ಕೋಟೆಯಿದ್ದು ಕೋಟೆಯ ಸುತ್ತಲೂ ಕಂದಕವಿದ್ದು, ಅದರ ಅಳಿದುಳಿದ ಅವಶೇಷಗಳನ್ನು ಇಂದು ಕಾಣಲು ಸಾಧ್ಯ.

ಸಿಪಾಯಿಪಾಳ್ಯದ ದಕ್ಷಿಣಕ್ಕೆ ಕುರಂಕೋಟೆ ಎಂಬ ಊರು ಇಂದಿಗೂ ಅಸ್ತಿತ್ವದಲ್ಲಿದೆ. ಇದು ಇಲ್ಲಿ ಆಳಿದ ಕುರಂಗರಾಯನ ಕೋಟೆಯ ತಾಣವಾಗಿತ್ತೆಂದು ಹೇಳಲಾಗುತ್ತದೆ. ಆದರೆ ಇಲ್ಲಿ ಕೋಟೆಯ ಕುರುಹು ಇಲ್ಲ. ಇದು ಕೋಟೆಯ ದಕ್ಷಿಣದ ನೆಲೆಯಾಗಿದ್ದು ಕುರಂಗರಾಜನಿಂದಲೇ ಈ ಊರಿಗೆ "ಕುರಂಕೋಟೆ" ಎಂಬ ಹೆಸರು ಬಂದಿದೆ. ನಾಡಿನ ಬಹುತೇಕ ಪ್ರಾಚೀನ ಗ್ರಾಮಗಳಲ್ಲಿ ದಕ್ಷಿಣ ದಿಕ್ಕಿನಲ್ಲಿಯೇ ತಲಸಮುದಾಯದ ಜನರ ವಾಸಸ್ಥಾನಗಳಿರುತ್ತಿದ್ದವು[೬೫] ಎಂಬ ಹೇಳಿಕೆಗೆ ಪೂರಕವಾಗಿಯೇ ತಲವರ್ಗದ

ಕುರಂಗರಾಯನ ಆಡಳಿತ ಕೇಂದ್ರವಾದ ಕುರಂಕೋಟೆಯು ಸಹ ಸಿದ್ಧರಬೆಟ್ಟದ ದಕ್ಷಿಣ ದಿಕ್ಕಿನಲ್ಲಿಯೇ ಇದೆ. ಸ್ಥಳೀಯ ಐತಿಹ್ಯಗಳಂತೆ : ಕುರಂಗರಾಯನು ಬೆಟ್ಟಕ್ಕೆ ಏರಿ ಇಳಿಯಲು ಉಡದರಥವನ್ನು ನಿರ್ಮಿಸಿ ಬಳಸುತ್ತಿದ್ದನು.[೬೬]

ಸಿದ್ಧರಬೆಟ್ಟದ ಸನಿಹದಲ್ಲಿಯೇ ಸೂಳೆಕಲ್ಲುಬೆಟ್ಟ ಎಂಬುದಾಗಿ ಕರೆಯಲಾಗುವ ಬೆಟ್ಟವಿದೆ. ಇದು ಕಡಿದಾದ ಬಂಡೆಯಿಂದಾಗಿದ್ದು ಇದನ್ನು ಏರಲು ಕಿರಿದಾದ ದಾರಿಯಿದೆ. ಈ ದಾರಿಯನ್ನು ಬಂಡಿಹೊಳೆ ಎಂದು ಕರೆಯಲಾಗುತ್ತದೆ. ಈ ಮಾರ್ಗವಾಗಿ ಈತನು ತನ್ನ ಸೂಳೆಯನ್ನು ಕರೆತರುವಾಗ ಆಕೆಯು ಮಾರ್ಗಮಧ್ಯದಲ್ಲಿ ಮಾಸಿಕ ಭಹಿಷ್ಠೆಯಾದಳು. ಸಿದ್ಧರಗಿರಿಯು ಸಿದ್ದೇಶ್ವರರ ನೆಲೆಯಾಗಿದ್ದರಿಂದ ಆಕೆಯನ್ನು ಅಲ್ಲಿಯೇ ತಂಗುವಂತೆ ಸೂಚಿಸಿ ಮುಂದೆ ಬಂದನು ಎಂಬ ಐತಿಹ್ಯವಿದೆ. ಈ ಸ್ಥಳದಲ್ಲಿ ಅಂದಿನ ಅರಮನೆಯ ಅವಶೇಷದಂತೆ ಕಾಣುವ ಕಟ್ಟಡದ ಸ್ಮಾರಕವಿದೆ. ಕುರಂಗರಾಯನ ಹೆಂಡತಿಯು ಹೊಲತಿಯಾದ ಸ್ಥಳವನ್ನು ಇಂದು ಹೊಲತಾಳು ಎಂದು ಕರೆಯಲಾಗುತ್ತಿದೆ. ಹಾಳು ಎಂದರೆ ನೆಲ, ಸ್ಥಳ ಎಂದರ್ಥ. ಪ್ರಸ್ತುತ ಇದೊಂದು ಕಂದಾಯ ಗ್ರಾಮವಾಗಿದೆ. ಇದಕ್ಕೆ ಪೂರಕವೆಂಬಂತೆ ಮಂಟೇಸ್ವಾಮಿ ಕಾವ್ಯದಲ್ಲಿ ತೋಪಿನ ರಾಚಪ್ಪಾಜಿಯ ಹೆಂಡತಿ ದೊಡ್ಡಮ್ಮನವರು ಮುಟ್ಟಾದ ಸ್ಥಳದಲ್ಲಿ ಮುಟ್ಟನಹಳ್ಳಿ ಎಂಬ ಗ್ರಾಮವು ಹುಟ್ಟಿದ ಐತಿಹ್ಯವಿದೆ.[೬೭] ಕುರಂಗರಾಯನು ಚರ್ಮದ ನಾಣ್ಯಗಳನ್ನು ಅಚ್ಚುಹಾಕಿಸಿ ಚಲಾವಣೆಗೆ ತಂದಿದ್ದನು ಎಂಬ ಹೇಳಿಕೆಗಳಿವೆ. ಬೆಟ್ಟದ ಮೇಲೆ ಗಲ್ಲೇಬಾನಿ ಎಂದು ಗುರುತಿಸಲಾಗುವ ಸ್ಮಾರಕವಿದೆ. ಇಲ್ಲಿ ಚರ್ಮದ ನಾಣ್ಯವನ್ನು ತಯಾರಿಸಲು ಚರ್ಮವನ್ನು ನೆನೆಹಾಕಲಾಗುತ್ತಿತ್ತು ಎಂದು ಹೇಳಲಾಗುತ್ತದೆ.

ವಿಜಯನಗರದ ಕಾಲಾವಧಿಯಲ್ಲಿ ಪಾವಗಡ, ಸಿರಾ, ಮಧುಗಿರಿಯ ಪ್ರದೇಶವು ಊಳಿಗ ವ್ಯವಸ್ಥೆಯ ಭಾಗವಾಗಿತ್ತು. ಮಳೆಯಾಧಾರಿತ ಒಣಬೇಸಾಯವನ್ನು ಮಾಡುತ್ತಿದ್ದ, ಅಷ್ಟೇನೂ ಶ್ರೀಮಂತವಲ್ಲದಿದ್ದರೂ ಮಿಲಿಟರಿ ಮತ್ತು ಆಯಕಟ್ಟಿನ ದೃಷ್ಟಿಯಿಂದ ಈ ಪ್ರದೇಶವು ಮಹತ್ವದ್ದು ಎನಿಸಿತ್ತು. ಈ ಪ್ರದೇಶದ ಶಾಸನಗಳು ಅನೇಕ ಉನ್ನತ ಮತ್ತು ಕಡಿಮೆ ಮಟ್ಟದ ಮಂಡಲೇಶ್ವರನ್ನು ಉಲ್ಲೇಖಿಸಿವೆ. ಇದರಿಂದ ಈ ಪ್ರದೇಶವು ಊಳಿಗಮಾನ್ಯತೆಯಿಂದ ಕೂಡಿತ್ತು ಎಂದು ಡಿ. ಎನ್. ಯೋಗೀಶ್ವರಪ್ಪನವರು ಅಭಿಪ್ರಾಯಪಟ್ಟಿದ್ದಾರೆ.[೬೮] ಈ ನೆಲೆಯಲ್ಲಿ ಕುರಂಗರಾಜನು ಈ ನೆಲೆಯ ಊಳಿಗದ ರೂವಾರಿಯಾಗಿದ್ದನು. ಈ ಮೂಲಕ ಮಧುಗಿರಿಯ ಅರಸರಿಗೆ ಆದಾಯವನ್ನು ತೆರುತ್ತಿದ್ದನು ಎಂದು ತಿಳಿಯಬಹುದು.

ಕುರಂಗರಾಯನ ಪ್ರಭುವಾದ ಮದ್ದಗಿರಿಯ ರಾಜನು ನೊಣಬ ಲಿಂಗಾಯಿತನಾಗಿದ್ದು ಗುರುಸಿದ್ಧಲಿಂಗ ಯತಿಗಳನ್ನು ತನ್ನ ರಾಜಗುರುವಾಗಿ ಮಾಡಿಕೊಂಡಿದ್ದನು. ಅದರಂತೆ ತಲವರ್ಗದ ಕುರಂಗರಾಯನೂ ಕೂಡ ಗುರುಸಿದ್ಧಲಿಂಗ ಯತಿಗಳನ್ನು ತನ್ನ ರಾಜಗುರುವಾಗಿ ಸ್ವೀಕರಿಸಿದ್ದನು. ಇದರಿಂದಾಗಿಯೇ ಈತನು ನಿರ್ಮಿಸಿದ್ದನೆಂದು ಹೇಳಲಾಗುವ ಈಶ್ವರ ದೇವಾಲಯವನ್ನು ಇಂದಿಗೂ ನೋಡಬಹುದಾಗಿದೆ. ಇದಕ್ಕೆ ಕುರಂಗರಾಯನು ತನ್ನ ದಣಿಯ ಬಗ್ಗೆ ಹೊದಿದ್ದ ನಿಷ್ಠೆ, ಭಯ ಅಥವಾ ಮುಲಾಜು ಕಾರಣವಾಗಿರಬೇಕು. ಏಕೆಂದರೆ

ತಲವರ್ಗದ ರಾಜನೊಬ್ಬನ ಆಡಳಿತಕ್ಕೆ ಮೇಲ್ವರ್ಗದ ಯಾಜಮಾನ್ಯದ ಕೃಪಾಕಟಾಕ್ಷವು ಅಗತ್ಯವಾಗಿತ್ತು ಎನ್ನುವುದು ಕಟುಸತ್ಯ. ಈ ಕಾರಣಕ್ಕಾಗಿಯೇ ಕುರಂಗರಾಜನು ಶಾಸನವನ್ನು ಬರೆಸುವ ಅಥವಾ ತನ್ನ ಬಗೆಗಿನ ವಿವರಗಳನ್ನು ದಾಖಲಿಸುವ ಪ್ರಯತ್ನವನ್ನು ಮಾಡಿರಲಿಲ್ಲ. ಶಾಸನವನ್ನು ಹಾಕಿಸುವ ಅಧಿಕಾರವು ಅನೇಕ ಸಂದರ್ಭದಲ್ಲಿ ಇಂತಹ ಅಧಿಕಾರಿಗಳಿಗೆ ಇರುತ್ತಿರಲಿಲ್ಲ ಎಂಬ ಹಿನ್ನೆಲೆಯಲ್ಲಿ ಈ ಸನ್ನಿವೇಶವನ್ನು ಅರ್ಥೈಸಿಕೊಳ್ಳಲಾಗಿದೆ. ಶಾಸನ ರಚನಾಶೈಲಿಯ ಜ್ಞಾನ ಅಥವಾ ಶಾಸನವನ್ನು ಬರೆಯುವ ವಿದ್ವಾಂಸರ ಲಭ್ಯತೆಯು ಸ್ಥಳೀಯವಾಗಿ ಇಲ್ಲದಿರಬಹುದು. ಅಥವಾ ಈತನೊಬ್ಬ ತಲವರ್ಗದ ನಾಯಕನೆಂಬ ಕಾರಣಕ್ಕೆ ವಿದ್ವಾಂಸರು ಶಾಸನದಂತಹ ದಾಖಲೆಗಳನ್ನು ಬರೆಯಲು ಒಪ್ಪಿಕೊಳ್ಳದ ಸನ್ನಿವೇಶವೂ ಇದ್ದಿರಬೇಕು.

ವಸು ಮಳಲಿರವರ ಅಭಿಪ್ರಾಯದಂತೆ[೬] "ಸಮುದಾಯಗಳ ಬದುಕು ಜನರ ನೆನಪುಗಳಲ್ಲಿ ಅಡಗಿದೆಯೇ ಹೊರೆತು ಬರಹದ ದಾಖಲೆಗಲ್ಲಿ ಅಲ್ಲ. ಅವರಾಡುವ ಭಾಷೆ, ಕಲೆ, ಕಸುಬು ಆಚರಣೆಗಳು ಎಲ್ಲವೂ ಬದುಕಿನ ಭಾಗವಾಗಿರುತ್ತವೆ. ಅವರು ತೇಯ್ದ ಬದುಕು, ಮಾಡಿದ ಸಾಹಸ, ಅರಿತ ಅರಿವು ಕಥೆಯಾಗಿ, ಹಾಡಾಗಿ, ಲಾವಣಿಯಾಗಿ, ಪದವಾಗಿ ಹೇಳುತ್ತಾ ಸಾಗುತ್ತಾರೆ. ಹೀಗೆ ಉಳಿದು ಬಂದ ನೆನಪುಗಳು ಬರಹರೂಪಕ್ಕೆ ಇಳಿಯದಿದ್ದರೂ ಪೀಳಿಗೆಯಿಂದ ಪೀಳಿಗೆಗೆ ಉಳಿದು ಬಂದಿರುತ್ತವೆ. ಮೌಖಿಕವಾಗಿ ಉಳಿದ ಸಾಹಿತ್ಯವನ್ನು ವಿದ್ವತ್ ವರ್ಗವು ಕಡೆಗಣಿಸುತ್ತದೆ. ಅದೇ ಬರಹ ರೂಪದಲ್ಲಿದ್ದರೆ ಅಪಾರ ಮನ್ನಣೆಗೆ ಒಳಗಾಗುತ್ತದೆ."

ಈ ಹಿನ್ನೆಲೆಯಲ್ಲಿ ಲಿಖಿತ ಆಕರಗಳು ಲಭ್ಯವಿಲ್ಲದಿದ್ದರೂ ಕುರಂಗರಾಯನ ಅಸ್ತಿತ್ವದ ಬಗ್ಗೆ ಹಾಗೂ ಆತನ ಬದುಕು ಮತ್ತು ಆಳ್ವಿಕೆಯ ಕುರಿತು ಇರುವ ಮೌಖಿಕ ಅಭಿಪ್ರಾಯಗಳು, ಮೌಖಿಕ ಸಂಪ್ರದಾಯಗಳು, ಸ್ಮಾರಕಗಳು ಹಾಗೂ ಪ್ರಾಕ್ತನ ಅವಶೇಷಗಳನ್ನು ಆಧರಿಸಿ ಕುರಂಗರಾಯನನ್ನು ಚಾರಿತ್ರಿಕವಾಗಿ ಗುರುತಿಸುವ ಪ್ರಯತ್ನವು ಈ ಅಧ್ಯಯನದ ಮೂಲ ಆಶಯವಾಗಿದೆ.

## ೪.೫ ಜುಂಜಪ್ಪ

ಕರ್ನಾಟಕದ ತುಮಕೂರು, ಚಿತ್ರದುರ್ಗ, ಬಳ್ಳಾರಿ, ಮುಂತಾದ ಕಡೆ ಮತ್ತು ಆಂಧ್ರದ ಕೆಲವು ಭಾಗದಲ್ಲಿ ಜುಂಜಪ್ಪನ ಮೌಖಿಕ ಸಂಪ್ರದಾಯಗಳು ಅಸ್ತಿತ್ವದಲ್ಲಿವೆ. ತುಮಕೂರು ಜಿಲ್ಲೆಯ ಸಿರಾ ತಾಲೂಕಿನ ಕಳುವರಹಳ್ಳಿ, ಜುಂಜಪ್ಪನಗುಡ್ಡೆ, ಬೇವಿನಹಳ್ಳಿ ಗೊಲ್ಲರಹಟ್ಟಿ ಹಾಗೂ ಗುಬ್ಬಿ ತಾಲೂಕಿನ ಹಾಗಲವಾಡಿಗಳು ಜುಂಜಪ್ಪನ ಆರಾಧನಾ ಕೇಂದ್ರಗಳಾಗಿವೆ. ಜುಂಜಪ್ಪನು ಕಾಡುಗೊಲ್ಲರ ಪ್ರಧಾನ ದೈವ, ಸಾಂಸ್ಕೃತಿಕ ವೀರ. ಪಶುಪಾಲನೆಯ ವೃತ್ತಿಯಿಂದ ಬೆಳೆದು ಬಂದವನು. ಈತನ ಬದುಕಿನ ಏಳು ಬೀಳುಗಳು ಕಾಡುಗೊಲ್ಲರ ಸಾಂಸ್ಕೃತಿಕ ಬದುಕಿನ ಪ್ರತೀಕವಾಗಿ ಕಂಡುಬರುತ್ತವೆ. ಕಾಡುಗೊಲ್ಲರ ಸಾಂಸ್ಕೃತಿಕ ವೀರರಾದ

ಜುಂಜಪ್ಪ, ಚಿತ್ರದೇವರು, ಕಾಟಮದೇವರ ಬಗ್ಗೆಯೂ ಮಾಖಿಕ ವಿವರಗಳಿವೆ. ಇವುಗಳಲ್ಲಿ ಅತ್ಯಂತ ದೀರ್ಘವೂ ಮತ್ತು ಪ್ರಮುಖವೂ ಆದದ್ದು ಜುಂಜಪ್ಪ ಬುಡಕಟ್ಟು ಕಾವ್ಯ. ಸುಮಾರು ಕ್ರಿ. ಶ. ೧೫ ಮತ್ತು ೧೬ ನೇ ಶತಮಾನಕ್ಕೆ ಸೇರುವ ಈ ಕಾವ್ಯವು ಜುಂಜಪ್ಪನ ಕುಟುಂಬದ ಮೂರು ತಲೆಮಾರಿನ ಬಗ್ಗೆ ಮಾಹಿತಿಯನ್ನು ಒಳಗೊಂಡಿದೆ. ಜುಂಜಪ್ಪನ ಅಜ್ಜ ದೇವರ ದಯಾಮಾರ ಮತ್ತು ತಂದೆ ಕೆಂಗರು ಮಲ್ಲೇಗೌಡನ ಕತೆಯು ಮೊದಲೆರಡು ತಲೆಮಾರಿನದ್ದಾಗಿದ್ದು, ಈ ಕಾವ್ಯದ ಕಥಾನಾಯಕನಾದ ಜುಂಜಪ್ಪನು ಮೂರನೇ ತಲೆಮಾರಿನವನಾಗಿದ್ದಾನೆ.

ಜುಂಜಪ್ಪನ ಮಹಾಕಾವ್ಯವನ್ನು ಇಲ್ಲಿನ ಕಾಡುಗೊಲ್ಲರಲ್ಲಿ ಕೆಲವರು ನಿರರ್ಗಳವಾಗಿ ಹಲವು ದಿನಗಳಗಟ್ಟಲೆ ಹಾಡಬಲ್ಲರು. ಬಿದಿರಿನ ಕೊಳಲಿನಂತಹ ಗಣೆಯ ಸಹಾಯದಿಂದ ಹಾಡುವ ಇವರನ್ನು 'ಗಣೆಯವರು' ಎಂದು ಕರೆಯಲಾಗುತ್ತದೆ. ಜುಂಜಪ್ಪ ಮತ್ತು ಆತನ ಸೋದರರು, ಅವರ ಮಾವಂದಿರಾದ ಕಂಬೇರ ಗೊಲ್ಲರ ನಡುವಿನ ವೃತ್ತಿ ಸಂಘರ್ಷವು ಈ ಕಾವ್ಯದ ಮುಖ್ಯವಾದ ವಸ್ತುವಾಗಿದೆ. ಜುಂಜಪ್ಪನನ್ನು ಕುರಿತು ಈ ವರೆಗೆ ಮಾಡಿರುವ ಅಧ್ಯಯನಗಳು[೨೦] ಮತ್ತು ತುಮಕೂರು ಜಿಲ್ಲೆಯಲ್ಲಿ ವಿಫುಲವಾಗಿರುವ ಮೌಖಿಕ ಕಾವ್ಯ ಹಾಗೂ ಮೌಖಿಕ ಸಂಪ್ರದಾಯಗಳ ಹಿನ್ನೆಲೆಯಲ್ಲಿ ಜುಂಜಪ್ಪನನ್ನು ಚಾರಿತ್ರಿಕ ನೆಲೆಯಲ್ಲಿ ಗುರುತಿಸುವ ಪ್ರಯತ್ನವನ್ನು ಈ ಅಧ್ಯಯನಲ್ಲಿ ಮಾಡಲಾಗಿದೆ.

ಕಾಡುಗೊಲ್ಲರಲ್ಲಿ ಮೂರು ಬೆಡಗುಗಳಿವೆ. ಈ ಪ್ರತೀ ಬೆಡಗುಗಳಲ್ಲಿಯೂ ಉಪ ಬೆಡಗುಗಳಿವೆ. ಅವುಗಳೆಂದರೆ[೨೧]

೧) ಚಿತ್ತಮುತ್ತಿ ಕುಲದವರು (ಕರಡಿಗೊಲ್ಲರು, ಮಾರನವರಗೊಲ್ಲರು ಇತ್ಯಾದಿ)

೨) ಚಂದಮುತ್ತಿ ಕುಲದವರು (ಅಜ್ಜಿಯರು, ಸನ್ನೋರು, ಸೋಮನೋರು, ಬೊಮ್ಮನೋರು ಇತ್ಯಾದಿ)

೩) ರಾಮಮುತ್ತಿ ಕುಲದವರು (ಅರೇನವರು, ಕಂಬೇನವರು, ಕಹಳೆಯವರು ಇತ್ಯಾದಿ)

ಚಿತ್ತಮುತ್ತಿ ಕುಲದವರು ಎತ್ತಪ್ಪ, ಜುಂಜಪ್ಪ, ಚಿತ್ರದೇವರನ್ನು ಆರಾಧಿಸಿದರೆ ಇತರೆ ಕುಲದವರು ಕ್ಯಾತೇದೇವರು, ಪಾತೇದೇವರು, ಕಾಟಮದೇವರು, ಭೂತಪ್ಪ, ಗೌರಸಂದ್ರದ ಮಾರಕ್ಕರನ್ನು ಆರಾಧಿಸುವರು.

**ಕಥನ** : ಕೊಂಕಿಜರಿಮಲೆ ಸೀಮೆಯಲ್ಲಿ ಪೂಜಾರಿ ಬಕ್ಕದಲೆ ಚಿತ್ತಯ್ಯ, ಬರಿದಲೆ ಚಿತ್ತಯ್ಯ, ಮಾಪಲ್ಲಿ ಚಿತ್ತಯ್ಯ, ಮೋಪಲ್ಲಿ ಚಿತ್ತಯ್ಯ, ಪೂಜಾರಿ ಚಿತ್ತಯ್ಯ, ಗುಡಿ ಚಿತ್ತಯ್ಯ, ದೇವರ ದೈಮಾರ ಮತ್ತು ಬಡಚಿತ್ತಮ್ಮ ಎಂಬ ಸಹೋದರರಿದ್ದರು. ಇವರಲ್ಲಿ ಏಳನೆಯವನಾದ ದೇವರ ದೈಮಾರನಿಗೆ ಪಶುಪಾಲನೆಯಲ್ಲಿ ಅತಿಯಾದ ಕಾಳಜಿಯಿತ್ತು. ಈತನು ಕಂಬಕ್ಕ ಎಂಬುವವಳೊಂದಿಗೆ ವಿವಾಹವಾಗಿದ್ದನು. ಇವರಲ್ಲಿ ಜನಿಸಿದ ಮಗನೇ ಕೆಂಗುರಿಮಲ್ಲೇಗೌಡ (ಜುಂಜಪ್ಪನ ತಂದೆ). ಈತನು ಚಿಕ್ಕವನಾಗಿದ್ದಾಗಲೇ ಆತನ ತಂದೆ ಮತ್ತು ತಾಯಿ ಮಡಿದರು.

ಅದ್ದರಿಂದ ಮಗು ಅತ್ತೆಯಾದ ಬಡಚಿತ್ತಮ್ಮನ ಆಶ್ರಯದಲ್ಲಿ ಬೆಳೆಯಿತು. ಪಶುಪಾಲನೆಯಲ್ಲಿ ಅತೀವ ಆಸಕ್ತಿಯನ್ನು ಹೊಂದಿದ್ದ ಕೆಂಗುರಿ ಮಲ್ಲೇಗೌಡನು ತನ್ನ ದೊಡ್ಡಮ್ಮಂದಿರ ಕಿರುಕುಳದಿಂದಾಗಿ ಕಳುವರಹಳ್ಳಿಯ ಕುಂಚಿಟಿಗರ ಹೊನ್ನಟ್ಟಿ ಆಲೇಗೌಡನ ಮನೆಯಲ್ಲಿ ಬೆಳೆದನು. ವಯಸ್ಸಿಗೆ ಬಂದಾಗ ಹೊನ್ನಟ್ಟಿ ಆಲೇಗೌಡ ಮತ್ತು ಆತನ ಹೆಂಡತಿ ಜಾನಕಲ್ಲು ದೊಡ್ಡಕ್ಕ ದಂಪತಿಗಳು ಕೆಂಗುರಿ ಮಲ್ಲೇಗೌಡನಿಗೆ ಕಂಬೇರಗೊಲ್ಲರ ಚಿನ್ನಮ್ಮಳೊಂದಿಗೆ ವಿವಾಹ ಮಾಡಿಸಿದರು. ತನ್ನ ತಂದೆ ದೇವರ ದೈಮಾರನಂತೆ ಕೆಂಗುರಿ ಮಲ್ಲೇಗೌಡನು ದನಗಳ ಜೊತೆಯೇ ಕಾಲವನ್ನು ಕಳೆಯುತ್ತಿದ್ದನು.

ಮಲ್ಲೇಗೌಡ ಮತ್ತು ಚಿನ್ನಮ್ಮ ದಂಪತಿಗಳಲ್ಲಿ ಅವರ ಕುಲದೇವತೆಯಾದ ಗೌರಸಂದ್ರದ ದೇವಿಯ ಕೃಪೆಯಿಂದ ಜುಂಜಪ್ಪನು ಜನಿಸಿದನು. ಇನ್ನುಳಿದಂತೆ ಮೈಲಣ್ಣ, ಮಾರಣ್ಣ, ಮಾರಕ್ಕ ಎಂಬ ಇತರ ಮೂವರು ಮಕ್ಕಳು ಜನಿಸಿದರು. ಮಕ್ಕಳು ಚಿಕ್ಕವಿರುವಾಗಲೇ ಕೆಂಗುರಿ ಮಲ್ಲೇಗೌಡನು ಮರಣ ಹೊದಿದನು. ತಂದೆಯ ಮರಣಾನಂತರ ಬಡತನದ ಬೇಗೆಯಲ್ಲಿ ಬದುಕಬೇಕಾಯಿತು. ಮಣೆಗಾರ ಕೆಂಚಯ್ಯನ ಸಲಹೆಯನ್ನು ಪಡೆದು ಜುಂಜಪ್ಪನು ವಕ್ಕಲಿಗರ ಆಲೇಗೌಡನ ಮನೆಯಲ್ಲಿಯೇ ಬೆಳೆದನು. ಮುಂದೆ ಜುಂಜಪ್ಪನು ತನ್ನ ತಂಗಿಯಾದ ಮಾರಕ್ಕಳನ್ನು ತನ್ನ ಕಂಬೇರ ಸೋದರಮಾವ ಕೀವಟ್ಟೆ ಎಂಬುವವನಿಗೆ ವಿವಾಹ ಮಾಡಿಕೊಟ್ಟನು.

ಪಶುಗಳನ್ನೇ ಸಂಪತ್ತು ಎಂದು ಪರಿಗಣಿಸಲಾಗಿದ್ದ ಆ ಸನ್ನಿವೇಶದಲ್ಲಿ ಜುಂಜಪ್ಪನು ವಿಭಿನ್ನ ತಳಿಗಳಿದ್ದ ಕೂಡಿದ್ದ ಏಳುಗೂಡಿನ ದನಗಳ ಒಡೆಯನಾಗಿದ್ದನು. ರಾಮಲಕ್ಷ್ಮಣ ಎಂಬ ಈತನ ಮನೆಯ ಕಣಜಗಳು ಐಶ್ವರ್ಯದಿಂದ ತುಂಬಿದ್ದವು. ಜುಂಜಪ್ಪನ ಏಳುಗೂಡಿನ ದನಗಳನ್ನು ಕಂಡಂತಹ ಆತನ ಸೋದರ ಮಾವಂದಿರು ಅಸೂಯೆಪಟ್ಟರು. ಮಾರನೋರ ಕುಲದವನಾದ ಈತನನ್ನು ಆತನ ಕಂಬೇರ ಸೋದರ ಮಾವಂದಿರು (ತನ್ನ ತಾಯಿ ಚಿನ್ನಮ್ಮಳ ಸಹೋದರರಾದ ದೊಡ್ಡಚಿನ್ನೇಗೌಡ, ಎರಿಜಿನ್ನ, ಮರಿಪಿಡ್ಡ, ಕಡೆಹುಟ್ಟಿನ ಕಟ್ಟಾಣಿ, ಬೇವಿನೆಲೆ ಚಿನ್ನ, ಚಿಕ್ಕಚಿನ್ನೇಗೌಡ, ಕೀವಟ್ಟೆ,) ದ್ವೇಷದಿಂದ ಆತನನ್ನು ಮಟ್ಟ ಹಾಕಲು ಹಲವು ತಂತ್ರ, ಪ್ರಯತ್ನಗಳನ್ನು ಮಾಡಿ ವಿಫಲರಾಗುತ್ತಾರೆ. ಈ ಪ್ರಯತ್ನಗಳನ್ನು ಮುಂದಿನಂತೆ ತಿಳಿಯಬಹುದಾಗಿದೆ.

೧) ಜುಂಜಪ್ಪನ ದನಗಳು ನೀರು ಕುಡಿಯಲು ಬರುವ ಪರುಸವ್ವನ ಕೆರೆಯಲ್ಲಿ ಜೀವಂತ ಬಡಕಲು ಹೋರಿ ಕರುವನ್ನು ಹೂತು ಮಾಟ ಮಾಡಿಸಿದರು. ಇದನ್ನು ಕಂಡ ಜುಂಜಪ್ಪನ ಸಹೋದರರು ಗೌರಸಂದ್ರದ ಮಾರಕ್ಕ ದೇವತೆಯಿಂದ ಮಾಟವನ್ನು ಭಿನ್ನಮಾಡಿಸಿ ಹೋರಿ ಕರುವನ್ನು ಕಂಬೇರ ಸೋದರ ಮಾವಂದಿರಿಗೆ ಒಪ್ಪಿಸಲು ಬಂದಾಗ ಕರು ನಮ್ಮದಲ್ಲ ಎಂದರು. ಈ ಕರುವನ್ನು ಜುಂಜಪ್ಪನೇ ಸಾಕಿದನು. ಮುಂದೆ ಇದು ಬೆಳೆದು ಬಡಮೈಲಾರಿ ಎಂದು ಕರೆಯಲ್ಪಡುವ ದೊಡ್ಡಗೂಳಿಯಾಗಿ ಬೇಳೆಯಿತು.

೨) ಜುಂಜಪ್ಪನನ್ನು ಮಾಟಮಂತ್ರದ ಮೂಲಕ ದುರ್ಬಲಗೊಳಿಸಲು ಸಾಧ್ಯವಾಗದಿದ್ದರಿಂದ ಆತನ ಮಾವಂದಿರು ಚೇಳೂರ ರಂಗಪ್ಪನಿಗೆ ಜುಂಜಪ್ಪನ ವಿರುದ್ಧ ಬೆಂಬಲ ನೀಡುವುದಾಗಿ ತಿಳಿಸಿದರು. ಎಂಬ ಮಾಹಿತಿಯನ್ನು ಈ ಮೌಖಿಕ ಕಾವ್ಯದಲ್ಲಿ ಪ್ರಸ್ತಾಪಿಸಲಾಗಿದೆ.

ಏಳೇನೆಜನುವಣ್ಣ
ಸ್ವಾದುರು ಮಾವುಗಳಣ್ಣ
ಸೇಳೂರು ದೊರಿಮಗನ
ಅರುಮನೀಗೆ ಬಂದಾರು
ರತ್ತನುಗಂಬಳಿ
ಗದ್ದಿಗಿ ಹಾಕೆವುನಯ್ಯೋ
ಸೇಳೂರು ದೊರೆಯಣ್ಣ
ಸಿರೇದು ಸಿಗಿಳಡಿಕೆ
ದ್ವಾರಾಳ ದಗ್ಗುರುದಮ ಬಿಳಿಯೇಲೆ
ಸೋಸಿದು ಕೆನಿಸುಣ್ಣ
ತಾಂಬೂಲ ಕೊಟ್ಟಾನು
ಸೇಳೂರ ದೊರೆ
ಕಂಬೇರು ಗೊಲ್ಲುರಿಗೆ ಗಳಿಗಾಗೋ[೭೩]

ಚೇಳೂರು ರಂಗಪ್ಪನಿಗೆ ಸೇರಿದ್ದ ಹುಲ್ಲುಗಾವಲಿನಲ್ಲಿ ಜುಂಜಪ್ಪನು ತನ್ನ ದನಗಳನ್ನು ಮೇಯಿಸಿದ್ದನು. ಈ ಕಾರಣದಿಂದಾಗಿ ಚೇಳೂರು ರಂಗಪ್ಪನು ಜುಂಜಪ್ಪನ ದನಗಳಲ್ಲಿ ಪ್ರಮುಖವಾಗಿದ್ದ 'ಬಡಮ್ಯೆಲ' ಎಂಬ ಹೋರಿಯ ಸಮೇತ ಜುಂಜಪ್ಪನ ದನಗಳನ್ನು ಬಂಧಿಸಿದ್ದನು.[೭೪] ರಂಗಪ್ಪನು ಬಡಮ್ಯೆಲನನ್ನು ಕೋಟೆಯ ಕಲ್ಲಿಗೆ ಕಟ್ಟಿಸಿದನು. ಆದರೆ ಬಡಮ್ಯೆಲನ ಪ್ರಬಲ ಶಕ್ತಿಯ ಮುಂದೆ ರಂಗಪ್ಪನ ಚೇಳೂರು ಕೋಟೆಯು ಛಿದ್ರವಾಯಿತು ಎಂಬ ವಿವರಗಳನ್ನು ಮೌಖಿಕ ಕಾವ್ಯಗಳಿಂದ ತಿಳಿಯಬಹುದಾಗಿದೆ.

೩) ಜುಂಜಪ್ಪನು ಹುಲಿಕುಂಟೆ ತಮ್ಮಣ್ಣನ ಕಾವಲು ಹಾಗೂ ತಾಳೇದುರ್ಗಿಯ ಹುಲ್ಲುಗಾವಲುಗಳಲ್ಲಿ ತನ್ನ ದನಗಳನ್ನು ಮೇಯಿಸಿದನೆಂಬ ಕಾರಣದ ಮೇರೆಗೆ ತಾಳೆದುರ್ಗಿಯು ಈತನ ದನಗಳನ್ನು ಸೆರೆಹಿಡಿದಿದ್ದಳು. ಹೀಗೆ ಎದುರಾದ ಕಂಟಕಗಳನ್ನು ಪುರ್ಲೇಹಳ್ಳಿ ಭೂತಪ್ಪನ ಸಹಾಯದಿಂದ ನಿವಾರಿಸಿಕೊಂಡನು.

೪) ಅಂತಿಮವಾಗಿ ಕಂಬೇರ ಮಾವಂದಿರು ಜುಂಜಪ್ಪನ ತಂಗಿಯಾದ ಮಾರಕ್ಕಳ ಮೂಲಕ ವಿಷ ಹಾಕಿದ್ದ ಅನ್ನವನ್ನು ಉಣಬಡಿಸುವಂತೆ ಮಾಡಿ ಜುಂಜಪ್ಪನನ್ನು ಮತ್ತು ಆತನ ನಾಯಿಯನ್ನು ಕೊಲ್ಲಲಾಯಿತು.[೭೫]

**ಚಾರಿತ್ರಿಕ ವಿಶ್ಲೇಷಣೆ** : ಜುಂಜಪ್ಪನು ತನ್ನ ಜೀವಿತಾವಧಿಯಲ್ಲಿ ಹಲವು ಪವಾಡಗಳನ್ನು ಮಾಡಿದನೆಂದೂ, ಸೋದರ ಮಾವಂದಿರು ವಾಸವಾಗಿದ್ದ ಕಂಬೇರಹಟ್ಟಿಯನ್ನು ತನ್ನ ಹುರಿಗಣ್ಣಿನಿಂದ ಸುಟ್ಟು ಬೂದಿಯನ್ನಾಗಿ ಮಾಡಿನೆಂದೂ, ಈ ಪ್ರದೇಶದಲ್ಲಿ ಗೊಲ್ಲರು ವಾಸಿಸುವಂತಿಲ್ಲವೆಂದೂ, ಅಡಿಗೆಯನ್ನು ಮಾಡಲು ಒಲೆಗುಂಡು ಸಹ

ಹೂಡುವಂತಿಲ್ಲವೆಂದೂ, ನಂಬಿಕೆಗಳು ಮತ್ತು ನಿಷೇಧಿತ ಸಂಪ್ರದಾಯಗಳಿವೆ. ಇದಕ್ಕೆ ಪೂರಕವಾಗಿಯೇ ಕಳುವರಹಳ್ಳಿಯ ಸಮೀಪವಿರುವ ಕಂಬೇರಹಟ್ಟಿಯು ಇಂದು ಬೆಂಗಾಡಾಗಿದೆ. ಇಲ್ಲಿ ಪ್ರಾಚೀನ ಕಾಲದಿಂದಲೂ ಚಿತ್ರದೇವರನ್ನು ಪೂಜಿಸಲಾಗುತ್ತಿದೆ.

ತುಮಕೂರು ಜಿಲ್ಲೆಯ ಸಿರಾ ತಾಲೂಕಿನ ಕಳುವರಹಳ್ಳಿ, ಜುಂಜಪ್ಪನ ಗುಡ್ಡೆ, ಬೇವಿನಹಳ್ಳಿ ಗೊಲ್ಲರಹಟ್ಟಿ ಹಾಗೂ ಗುಬ್ಬಿ ತಾಲೂಕಿನ ಹಾಗಲವಾಡಿಗಳು ಜುಂಜಪ್ಪನ ಆರಾಧನಾ ಕೇಂದ್ರಗಳಾಗಿವೆ. ಸಿರಾ ತಾಲೂಕಿನ ಕಳುವರಹಳ್ಳಿಯಲ್ಲಿ ಜುಂಜಪ್ಪನ ಮೂಲ ದೇವಾಲಯವಿದ್ದ ಜಾಗವನ್ನು ಮಾತ್ರ ಇಂದು ನೋಡಬಹುದಾಗಿದೆ. ಇಂದು ಹೊಸದೊಂದು ದೇವಾಲಯವನ್ನು ನಿರ್ಮಿಸಿದ್ದು ದೇವಾಲಯದಲ್ಲಿ ಲಕ್ಷ್ಮಿ, ಜುಂಜಪ್ಪ, ರಾಮನ ವಿಗ್ರಹಗಳನ್ನು ಇರಿಸಲಾಗಿದೆ. ಜುಂಜಪ್ಪನಿಗೆ ಆಶ್ರಯ ನೀಡಿದ್ದ ಕುಂಚಿಟಿಗರ ಹೊನ್ನಟ್ಟಿ ಆಲೇಗೌಡನ ಮನೆತನದವರು ಇಲ್ಲಿ ಪೂಜಾರಿಕೆ ಮಾಡುತ್ತಿದ್ದಾರೆ. ಇಲ್ಲಿನ ಪೂಜಾರಿಕೆಯ ವಂಶಸ್ಥರಾದ ಭೀಮರಾಜುರವರು ನೀಡಿದ ಮಾಹಿತಿಯಂತೆ : ಈ ಊರಿನ ಕುಂಚಿಟಿಗರು ಬಹುತೇಕ ಗೊಲ್ಲರ ಸಂಪ್ರದಾಯಗಳನ್ನೇ ಪಾಲಿಸುತ್ತಿದ್ದಾರೆ. ಇಲ್ಲಿ ಗೊಲ್ಲರಿಗೆ ಏಳಿಗೆಯಿಲ್ಲ ಎಂಬ ನಂಬಿಕೆಯಿದೆ. ಹಾಗಾಗಿಯೇ ಈ ಗ್ರಾಮದಲ್ಲಿ ಗೊಲ್ಲರ ಒಂದು ಕುಟುಂಬವೂ ಅಸ್ತಿತ್ವದಲ್ಲಿಲ್ಲ. ಹೊನ್ನಟ್ಟಿ ಆಲೇಗೌಡನ ಮನೆತನದವರ ಸುಪರ್ದಿನಲ್ಲಿರುವ ಜಮೀನಿನಲ್ಲಿಯೇ ಜುಂಜಪ್ಪನ ತಂದೆ ಕೆಂಗುರಿ ಮಲ್ಲೇಗೌಡ, ತಾಯಿ ಸಿನ್ನಮ್ಮಳ ಸಮಾಧಿಯಿದ್ದು ಇಂದಿಗೂ ಇವುಗಳನ್ನು ಕುಂಚಿಟಿಗರು ಪೂಜಿಸುತ್ತಾರೆ. ಕಳುವರಹಳ್ಳಿಯಿಂದ ಸುಮಾರು ಒಂದು ಕಿ.ಮೀ. ದೂರದಲ್ಲಿರುವ ಕಂಬೇರಹಟ್ಟಿಯು ಜುಂಜಪ್ಪನ ಸೋದರ ಮಾವಂದಿರ ನೆಲೆಯಾಗಿತ್ತು. ಇಂದು ಇಲ್ಲಿ ಚಿತ್ರದೇವರ ದೇವಾಲಯವನ್ನು ಉಳಿದು ಎಲ್ಲವೂ ಬೆಂಗಾಡಾಗಿದೆ. ಅಲ್ಲದೇ ಈ ನೆಲೆಯು ಪ್ರಾಚೀನ ಗ್ರಾಮವಾಗಿತ್ತು. ಇದನ್ನು ಸಮರ್ಥಿಸಲು ಮಡಿಕೆಚೂರು, ನೇಗಿಲಕುಳದಂತಹ ಲೋಹದ ಅವಶೇಷಗಳು ಇಲ್ಲಿ ಸಿಕ್ಕಿವೆ. ಜುಂಜಪ್ಪನು ಕಂಬೇರ ಹಟ್ಟಿಯನ್ನು ಸುಟ್ಟು ಹಾಕಿರುವ ಉಲ್ಲೇಖವು ಕಾವ್ಯದಲ್ಲಿ ಬರುತ್ತದೆ.

ಜುಂಜಪ್ಪನ ಹಿರಿಯರ ಮೂಲನೆಲೆ ಎರಿಮಲೆ-ಜರಿಮಲೆಯ ಹಿರಿಯಟ್ಟಿ ಎಂಬುದಾಗಿ ಕಾವ್ಯದಲ್ಲಿ ಪ್ರಸ್ತಾಪಿಸಲಾಗಿದೆ. ಹಿರಿಯಟ್ಟಿಯ ಬಗ್ಗೆ ವಿದ್ವಾಂಸರಲ್ಲಿ ಗೊಂದಲಗಳಿವೆ. ಆದರೆ ಹಿರಿಯಟ್ಟಿಯು ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲೂಕಿನಲ್ಲಿರುವ ಜರಿಮಲೆಯ ಸಮೀಪದಲ್ಲಿ ಇತ್ತೆಂದು ತಿಳಿಯಲಾಗಿದೆ.[೨೬] ಬೇವಿನಹಳ್ಳಿಯ ಪೂಜಾರಪ್ಪ, ಚಿತ್ತಯ್ಯ ಮತ್ತು ಯರಪ್ಪರವರು ತಿಳಿಸುವಂತೆಯೂ : ತಮ್ಮ ಮೂಲ ನೆಲೆಯು ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲೂಕಿನಲ್ಲಿರುವ ಜರಿಮಲೆಯ ಸಮೀಪದಲ್ಲಿರುವ ಹಿರಿಯಟ್ಟಿಯೇ ಆಗಿದೆ. ಆದರೇ ಅಲ್ಲಿಗೆ ಅವರ್‍ಯಾರೂ ಹೋಗುವುದಿಲ್ಲ. ಕಾರಣ ಅಲ್ಲಿನ ತಮ್ಮ ಎಲ್ಲ ದೇವರನ್ನು ಜುಂಜಪ್ಪನ ಕಾರ್ಯಕ್ಷೇತ್ರವಾದ ಇಲ್ಲಿಗೇ ತಂದಿದ್ದೇವೆ, ಎಂದು ಹೇಳುತ್ತಾರೆ. ಗುಬ್ಬಿ ತಾಲೂಕಿನ ಹಾಗಲವಾಡಿಯ ಸಮೀಪದಲ್ಲಿ ಜುಂಜಪ್ಪನ ಹಟ್ಟಿಯಿದೆ. ಹಿರಿಯಟ್ಟಿಯಲ್ಲಿ ಆರಾಧಿಸುತ್ತಿದ್ದ ಎಲ್ಲ ದೇವರುಗಳನ್ನು ಇಲ್ಲಿ ನೆಲೆಗೊಳಿಸಿ ಪೂಜಿಸಲಾಗುತ್ತಿದೆ.

"ಕಾವ್ಯದ ಮೇಲಿನ ಒಡೆತನವು ಇಡೀ ಸಮಾಜಕ್ಕೆ ಸೇರುತ್ತದೆ. ಹಾಗಾಗಿ ಎಲ್ಲರೂ ಅದರ ಮೇಲೆ ಹಕ್ಕನ್ನು ಚಲಾಯಿಸುತ್ತಾ ಬಂದಿರುತ್ತಾರೆ. ಇದು ಕೆಲವರಿಗೆ ಕಾವ್ಯವಾದರೇ, ಮತ್ತೆ ಕೆಲವರಿಗೆ ಧರ್ಮ, ಕಲೆ, ಆದರ್ಶ, ಪುರಾಣವಾಗುತ್ತದೆ. ಅಯೋಧ್ಯೆಯ ವಿವಾದದ ಸಂದರ್ಭದ ಹೊತ್ತಿಗೆ ಮಹಾಕಾವ್ಯವು ಚರಿತ್ರೆಯಾಯಿತು". ಎಂಬುದಾಗಿ ವಸು ಮಳಲಿ ರವರು ತಮ್ಮ '*ಮಹಾಕಾವ್ಯಗಳ ಬಹುಮುಖಿ ಜಗತ್ತು*' ಎಂಬ ಲೇಖನದಲ್ಲಿ ಅಭಿಪ್ರಾಯಪಟ್ಟಿದ್ದಾರೆ. ಇದಕ್ಕೆ ಪೂರಕವಾಗಿಯೇ ಕಳುವರಹಳ್ಳಿಯ ಜುಂಜಪ್ಪನ ಗುಡ್ಡೆಯ ಹತ್ತಿರ ಕುಂಚಿಟಿಗರು ತಂದಿದ್ದ ಅಲಂಕೃತವಾದ ಜುಂಜಪ್ಪನ ವಿಗ್ರಹ, ವಸ್ತ್ರ, ಅಂಬು, ಇತ್ಯಾದಿಗಳನ್ನು ಬೇವಿನಹಳ್ಳಿ ಗೊಲ್ಲರಹಟ್ಟಿಯವರು ಕಿತ್ತುಕೊಂಡು ಹೋದರು.[೭೭] ಜುಂಜಪ್ಪನು ಗೊಲ್ಲರವನು ಎಂಬುದು ಗೊಲ್ಲರ ವಾದವಾದರೇ, ಜುಂಜಪ್ಪನಿಗೆ ಆಶ್ರಯ ನೀಡಿದವರು ನಾವು ಎಂಬುದು ಕುಂಚಿಟಿಗರ ವಾದವಾಗಿದೆ. ವಾದಗಳ ನೆಲೆಯಲ್ಲಿ ಪರಸ್ಪರ ನಮ್ಮಗಳಿಗೆ ಜುಂಜಪ್ಪನು ಸೇರಬೇಕೆಂದು ನಡೆದ ವ್ಯಾಜ್ಯವು ಕ್ರಿ. ಶ. ೧೮೭೩ ರಲ್ಲಿ ಕೋರ್ಟ್ ಮೆಟ್ಟಿಲೇರಿ ಕ್ರಿ. ಶ. ೧೮೮೪ ರಲ್ಲಿ ಕೋರ್ಟ್ ತೀರ್ಪು ನೀಡಿತು.[೭೮] ಅದರಂತೆ ಇಂದಿಗೂ ಜುಂಜಪ್ಪನ ಗುಡ್ಡೆಯಲ್ಲಿ ಬೆಳಿಗ್ಗೆ ಕುಂಚಿಟಿಗರು, ಮಧ್ಯಾಹ್ನದ ನಂತರ ಗೊಲ್ಲರು ಪೂಜೆ ಮಾಡುತ್ತಿದ್ದಾರೆ.

ಜುಂಜಪ್ಪನ ಕಾವ್ಯದಲ್ಲಿ ಕುಂಚಿಟಿಗ, ಗೊಲ್ಲ, ಮಣೆಗಾರ, ಜಾತಿಗಳ ಉಲ್ಲೇಖಗಳಿವೆ. ಅಲ್ಲದೇ ಕಾವ್ಯದಲ್ಲಿ ಆ ಕಾಲದ ಜಾತಿಗಳು ಸಮುದಾಯದ ಬದುಕು, ಆರ್ಥಿಕ ನೆಲೆಯಲ್ಲಿ ಗೋ ಸಂಪತ್ತು ಹಾಗೂ ಭಾವನಾತ್ಮಕ ಅಂಶಗಳಾದ ದ್ವೇಷ, ಅಸೂಯೆ, ಪ್ರೀತಿ, ಪ್ರತೀಕಾರಗಳನ್ನು ಕುರಿತು ಪ್ರಸ್ತಾಪಿಸಲಾಗಿದೆ. ಸಂಬಂಧಗಳೊಳಗೇ ನಡೆದ ಕುಲದ ನಾಶವು ಸರ್ವಕಾಲಿಕವಾಗಿರುವ ಈ ಹಿನ್ನೆಲೆಯಲ್ಲಿಯೇ ಕಾಡುಗೊಲ್ಲರು, ಕುಂಚಿಟಿಗ ಅಳುವಿನೋರು, ಕುರುಬರು ಜಾತಿಗಳ ನಡುವೆ ಸಾಮರಸ್ಯವೂ, ಗೊಲ್ಲರು ಬೇಡರ ನಡುವೆ ವೃತ್ತಿ ಸಂಬಂಧಿ ವೈಷಮ್ಯಗಳಿದ್ದವೆಂದು ತಿಳಿದು ಬರುತ್ತವೆ. ಬುಕನಾನ್ ವರದಿಯಲ್ಲಿಯೂ ಜುಂಜಪ್ಪನು ಪೂಜೆಗೊಳ್ಳುತ್ತಿದ್ದ ಬಗ್ಗೆ ಉಲ್ಲೇಖಗಳಿವೆ.[೭೯] ಜುಂಜಪ್ಪನ ಕುರಿತ ಮೌಖಿಕ ಅಭಿಪ್ರಾಯ ಮತ್ತು ಸಂಪ್ರದಾಯಗಳಲ್ಲಿ ಚಾರಿತ್ರಿಕ ನೆಲೆಗಳಿರುವುದನ್ನು ಮನಗಂಡು ವಿದ್ವಾಂಸರ ಅಭಿಪ್ರಾಯಕ್ಕೆ[೮೦] ಪೂರಕವಾಗಿ ಜುಂಜಪ್ಪನು ಕ್ರಿ. ಶ. ೧೫ ರಿಂದ ೧೬ ನೇ ಶತಮಾನದಲ್ಲಿದ್ದ ಗೋವಳಿ ಸಮುದಾಯದ ನಾಯಕನಾಗಿದ್ದನು ಎಂದು ನಿರ್ಧರಿಸಲಾಗಿದೆ.

ಮೂಲದಲ್ಲಿ ಜನಪದರಿಂದಲೇ ಕಟ್ಟಲಾದ ಜನಪದಕಥೆ ಮತ್ತು ಕಾವ್ಯಗಳು ನಂತರದ ಕಾಲಮಾನದಲ್ಲಿ ಒಬ್ಬಿಬ್ಬರು ಕರ್ತೃಗಳಿಂದ ಬಿಗಿಯಾದ ಲಯ, ಛಂದಸ್ಸಿಗೆ ಅನುಗುಣವಾಗಿ ರಚಿತವಾದವು. ಅದರಲ್ಲೂ ಜನರು ಆಡದ ಭಾಷೆಯಲ್ಲಿ ರಚಿತವಾದ ರಾಮಾಯಣ, ಮಹಾಭಾರತದಂತಹ ಮಹಾಕಾವ್ಯಗಳು ನಂತರದ ಕಾಲಮಾನದಲ್ಲಿ ಪ್ರಚುರಗೊಂಡ ಬಗೆಯು ಸೋಜಿಗವಾದುದು. ಈ ಶಿಷ್ಟಕಾವ್ಯಗಳಿಗೆ ಪರ್ಯಾಯವಾಗಿ ಜನಸಮುದಾಯಗಳು ತಮ್ಮೊಳಗಿನ ದ್ವೇಷ, ಅಸೂಯೆ, ಈರ್ಷ್ಯೆ, ಪ್ರೀತಿ, ಛಲ, ಧರ್ಮ, ಶೌರ್ಯ, ಸತ್ಯಸಂಧತೆ, ತಂತ್ರಗಾರಿಕೆ ಇತ್ಯಾದಿ ಭಾವನಾತ್ಮಕ ಅಂಶಗಳನ್ನು ಆದರ್ಶಗಳೆಂದು ಪಾಲಿಸುತ್ತಾ, ತಾವಾಡುವ

ನುಡಿಯಲ್ಲಿಯೇ ಮೌಖಿಕವಾಗಿ ಕಟ್ಟಿಕೊಂಡ ಮಹಾನ್ ಕಾವ್ಯಗಳನ್ನು ಪಾರಂಪರಿಕವಾಗಿ ತಲೆಮಾರುಗಳಿಗೆ ವರ್ಗಾಯಿಸಿಕೊಂಡು ಬರುತ್ತಿವೆ. ಈ ಆದರ್ಶಗಳನ್ನೇ ಆಳುವ ವರ್ಗಗಳಿಗೆ ಸಮೀಕರಿಸಿ ಮೌಲ್ಯಗಳೆಂದು ಒಪ್ಪಿಕೊಳ್ಳಲಾಗಿದೆ. ಇವುಗಳ ನೆಲೆಯಲ್ಲಿಯೇ ಜುಂಜಪ್ಪನ ಕಾವ್ಯವು ಸ್ಥಳೀಯ ಬದುಕಿಗೆ ಅನುಗುಣವಾಗಿ ರಚನೆಯಾಗಿದೆ.

ಕಾಡುಗೊಲ್ಲರು ಅದಿಮ ಬುಡಕಟ್ಟೊಂದರ ಜೀವನ ಪದ್ಧತಿಯನ್ನು ರೂಢಿಸಿಕೊಂಡಿದ್ದಂತೆ ಕಂಡು ಬರುತ್ತದೆ. ಹಾಗಾಗಿಯೇ ಕಾವ್ಯದಲ್ಲಿ ಬೇಟೆ, ಆಹಾರ ಸಂಗ್ರಹಣೆಯಂತಹ ವಿವರಗಳಿವೆ. ಕಾಡುಗೊಲ್ಲರ ವೃತ್ತಿಜೀವನದ ಮುಖ್ಯ ಸ್ಥಿತ್ಯಂತರದ ಮಜಲುಗಳನ್ನು ಇಲ್ಲಿ ಕಾಣಬಹುದಾಗಿದೆ. ಚೇಳೂರ ರಂಗಪ್ಪನೊಂದಿಗೆ ಸೆಣೆಸಲು ಜುಂಜಪ್ಪನು ಕುಲದ ಆಸ್ತಿಯನ್ನೂ ಪಣಕ್ಕಿಡುವ ಸ್ವರೂಪದಂತಹ ಸಮುದಾಯಗಳು ಅದಿಮ ಬುಡಕಟ್ಟುಗಳಲ್ಲಿಯೇ ಕಂಡುಬರುವುದನ್ನು ಗುರುತಿಸಬಹುದಾಗಿದೆ. ಉದಾಹರಣೆಗೆ : ಕೌರವರು ಮತ್ತು ಪಾಂಡವರ ಪಗಡೆಯಾಟದಲ್ಲಿ ದ್ರೌಪದಿಯನ್ನು ಪಣಕ್ಕಿಡುವುದು

ಜುಂಜಪ್ಪನ ಕಾರ್ಯಕ್ಷೇತ್ರವು ಚಿಕ್ಕದಾದ ಗುಡ್ಡ ತಗ್ಗುಗಳಿಂದ ಕೂಡಿದ ಪ್ರದೇಶವಾಗಿದೆ. ಆತನು ಜಾನುವಾರುಗಳಿಗೆ ಮೇವು ಅರಸಿಕೊಂಡು ಕೆರೆಯಂಗಳದ ಹುಲ್ಲುಗಾವಲಿಗೆ ಹೊರಟನು. ಇದಕ್ಕೆ ಇಲ್ಲಿರುವ ತಗ್ಗಿನಿಂದ ಎತ್ತರದ ಭೂ ಸ್ವರೂಪವು ಅನುವು ಮಾಡಿಕೊಟ್ಟಿತ್ತು. ಕಳುವರಹಳ್ಳಿಯಿಂದ ಮಂಚಲದೊರೆ, ಮದುಗದಗುಡ್ಡ, ಹಾಗಲವಾಡಿ, ತಲುಪುವವರೆಗೂ ಯಾವುದೇ ಪ್ರತಿರೋಧಗಳು ಕಂಡುಬರಲಿಲ್ಲ. ಆದರೆ ಚೇಳೂರು ತಲುಪಿದೊಡನೆ ಪಾಳೆಯಗಾರ ರಂಗಪ್ಪನ ಪ್ರತಿರೋಧವು ಎದುರಾಯಿತು. ಇದರಿಂದಾಗಿ ಈ ಪ್ರದೇಶದ ಆಡಳಿತ ಘಟಕವೊಂದರಲ್ಲಿ ಆಳುವ ವರ್ಗವು ಬದಲಾಗಿರುವುದನ್ನು ಗುರುತಿಸಬಹುದಾಗಿದೆ. ಈ ನೆಲೆಯಲ್ಲಿಯೇ ಚೇಳೂರ ರಂಗಪ್ಪನ ಬಂಧನದಿಂದ ಬಿಡಿಸಿಕೊಂಡು ಬರುವಂತೆ ಜುಂಜಪ್ಪನು ತನ್ನ ಬಂಟನಂತಿದ್ದ ಹೋರಿಯಾದ ಬಡಮೈಲನನ್ನು ಕುರಿತು ಈ ಕೆಳಕಂಡಂತೆ ಆಜ್ಞಾಪಿಸುತ್ತಾನೆ.

> ಕಲ್ಲು ಕಂಬ ಮುರಿದು ಕಬ್ಬಿಣದ ಸರಿವರಿದು
> ಮುದ್ದು ಚೇಳೂರ ತೆನೆಮುರಿದು। ಬಡಮೈಲ
> ಗೆದ್ದು ಬಾರೋ ಕಾಲ ಗಳಿಗಿಗೋ॥
> ಆಚೆ ಹಾಗಲವಾಡಿ ಈಚೆ ಮಂಚಲದಾರಿ
> ನಟ್ಟ ನಡುವೈತೊ ದೊಡ್ಡಮದಗ। ಬಡಮೈಲ
> ಗಿನ್ನಿಕ್ಕಿ ನೆಗೆಯಯ್ಯ ಮದುಗಕ್ಕೆ॥[೮೧]

ಜುಂಜಪ್ಪನ ದನಗಳಿಗೆ ಮಾಟ ಮಂತ್ರವನ್ನು ಮಾಡಲು ಆತನ ಸೋದರ ಮಾವಂದಿರು ಪರುಸವ್ವನ ಕೆರೆಯಲ್ಲಿ ರೋಗಗ್ರಸ್ತ ಕರುವೊಂದನ್ನು ಹೂತಿದ್ದು ಆ ಕರುವನ್ನೇ ಜುಂಜಪ್ಪನು ಸಾಕುವ ಮೂಲಕ ಬಡಮೈಲನೆಂಬ ಬಲಶಾಲಿ ಹೋರಿಯಾಗಿ ಬೆಳೆಸಿದ್ದನು. ಇದರಿಂದ ಜುಂಜಪ್ಪನ ವೃತ್ತಿನಿಷ್ಠೆಯನ್ನು ಗುರುತಿಸಬಹುದಾಗಿದೆ. ಮುಂದೆ ಇದೇ ಹೋರಿಯು ಚೇಳೂರು ರಂಗಪ್ಪನ ಸೊಕ್ಕನ್ನು ಮುರಿಯುತ್ತದೆ. ಅಲ್ಲದೆ ಇಂತಹ ಕಥನಗಳು ಜುಂಜಪ್ಪನು ಬಾಳಿ ಬದುಕಿದ ಪ್ರದೇಶದಲ್ಲಿ ಸಾಮಾನ್ಯವಾಗಿ ಕಂಡುಬರುತ್ತವೆ.

ತಲತಲಾಂತರಗಳಿಂದಲೂ ಪಶುಗಳೇ ಸಂಪತ್ತು ಎಂದು ಪರಿಗಣಿಸಿದ್ದ ಆ ಕಾಲದಲ್ಲಿ ಪಶುಪಾಲನೆಯು ಪಾರಂಪರಿಕ ವೃತ್ತಿಯಾಗಿತ್ತು. ಕಾಡುಗೊಲ್ಲರಂತಹ ಬುಡಕಟ್ಟುಗಳ ಪ್ರಧಾನ ವೃತ್ತಿಯು ಪಶುಪಾಲನೆಯೇ ಆಗಿತ್ತು.[೮೨] ಕಾಡುಗೊಲ್ಲರು, ಬೇಡರು, ಲಂಬಾಣಿಗಳು, ಕುರುಬರು ಮತ್ತು ಹಳ್ಳಿಕಾರರು ಗೋಮಂದೆಗಳೊಂದಿಗೆ ಆಹಾರ, ಮೇವು, ನೀರಿಗಾಗಿ ಅಲೆಮಾರಿ ಜೀವನ ನಡೆಸುತ್ತಿದ್ದರು. ಎ. ಕೃಷ್ಣಸ್ವಾಮಿ ಅಯ್ಯಂಗಾರ್, ಕ್ಯಾಪ್ಟನ್ ಹೆಚ್. ಟಿ. ಪೇಯಿಸ್‌ರವರು ತಮ್ಮ ಐತಿಹಾಸಿಕ ದಾಖಲೆಗಳ ಮೂಲಕ ವಿವರಿಸುವಂತೆ ಕ್ರಿ. ಶ. ೧೬ ನೆಯ ಶತಮಾನದಲ್ಲಿ ವಿಜಯನಗರ ಪ್ರದೇಶದಿಂದ ತಂದ ಹಳ್ಳಿಕಾರ್ ಗೋ ತಳಿಯನ್ನು ಶ್ರೀರಂಗಪಟ್ಟಣದ ಬಳಿಯ ಕರುಹಟ್ಟಿಯಲ್ಲಿ ಪೋಷಿಸಿ ಕಾಲಾನಂತರದಲ್ಲಿ ಅಮೃತಮಹಲ್ ತಳಿಯನ್ನು ರೂಪಿಸಿ ಮೈಸೂರಿನಲ್ಲಿ ಅಭಿವೃದ್ಧಿ ಪಡಿಸಲಾಯಿತು. ಈ ತಳಿಯ ದನಗಳು ಮೂಲತಃ ಬುಡಕಟ್ಟು ಪಶುಪಾಲಕರಾದ ಕಾಡುಗೊಲ್ಲರಿಗೆ, ಹಳ್ಳಿಕಾರರಿಗೆ ಸೇರಿದ್ದವೆಂದು ತಿಳಿಸಿದ್ದಾರೆ.[೮೩] ಅಲ್ಲದೇ ಜುಂಜಪ್ಪನ ಕಾರ್ಯಕ್ಷೇತ್ರದಲ್ಲಿ ಹಲವು ಹುಲ್ಲುಗಾವಲುಗಳು ಅಸ್ತಿತ್ವದಲ್ಲಿ ಇದ್ದವೆಂದೂ ತಿಳಿದು ಬರುತ್ತದೆ.

ಕಾಡುಗೊಲ್ಲರಲ್ಲಿ ಜನನ, ಋತುಮತಿ, ಮತ್ತು ಸಾವುಗಳನ್ನು ಇಂದಿಗೂ ಸೂತಕ, ಅಪವಿತ್ರವೆಂದು ಭಾವಿಸಲಾಗುತ್ತದೆ. ಲಿಂಗ ಪೂಜಕರಾಗಿದ್ದ ಕಾಡುಗೊಲ್ಲರು ಹುಟ್ಟನ್ನು ಮೈಲಿಗೆ, ಅಪವಿತ್ರವೆಂದು ಭಾವಿಸಿದ್ದರು. ಈ ಕಾರಣದಿಂದಲೇ ಈಶ್ವರನ ಕೃಪೆಯಿಂದ ತನ್ನ ಪತಿಯೊಂದಿಗೆ ಸೇರಿ ಚಿನ್ನಮ್ಮಳು ಗರ್ಭಿಣಿಯಾದಳು. ನವಮಾಸ ತುಂಬಿದಾಗ ಆಕೆಯ ಬೆನ್ನಿನಿಂದ ಜುಂಜಪ್ಪನು ಜನಿಸಿದನು. ಎಂಬ ಅಸಹಜವಾದ ಹುಟ್ಟಿನ ನಂಬಿಕೆಯು ಸೃಷ್ಟಿಯಾಗಲು ಕಾರಣವಾಗಿದೆ. ಕಾವ್ಯದಲ್ಲಿಯೂ ಉಲ್ಲೇಖಿಸಿರುವಂತೆ : ವೀರಭದ್ರನೇ ನಂತರದಲ್ಲಿ ಜುಂಜಪ್ಪನಾಗಿದ್ದಾನೆ.[೮೪] ಜುಂಜಪ್ಪನು ಹಾವುಗಳ ಆವಾಸಸ್ಥಾನವಾದ ಹುತ್ತದ ದೈವನಾಗಿದ್ದಾನೆ.[೮೫] ಹುತ್ತದ ಪರಿಕಲ್ಪನೆಯು ವಲಸೆಗಾರ ಪಶುಪಾಲಕ ವರ್ಗಕ್ಕೆ ಸೇರಿದ್ದರೂ ಕೃಷಿಕರಲ್ಲಿಯೂ ಸಹ ಹುತ್ತದ ಪರಿಕಲ್ಪನೆಯ ಆರಾಧನೆಯಿದೆ. ಈ ಹುತ್ತಗಳಲ್ಲಿಯೇ ಪಶುಗಳು, ಕುರಿಗಳು ವೃದ್ಧಿಸಿದ ಉಲ್ಲೇಖಗಳು ಕಾವ್ಯದಲ್ಲಿವೆ. ಹುತ್ತದ ಆರಾಧನೆ ಮತ್ತು ನಾಗಾರಾಧನೆಯು ಅದಿಮ ಸಮುದಾಯಗಳಲ್ಲಿ ರೂಢಿಯಲ್ಲಿದೆ. ಬುಡಕಟ್ಟು ವರ್ಗವಾದ ಗೊಲ್ಲರು ಸಹ ಹುತ್ತದ ಆರಾಧಕರಾಗಿದ್ದು ನಂತರದಲ್ಲಿ ಲಿಂಗಾರಾಧನೆಯ ಸಂಪ್ರದಾಯವನ್ನು ರೂಢಿಸಿಕೊಂಡಿದ್ದಾರೆ. ಶೈವ, ವೈಷ್ಣವ ಸಂಪ್ರದಾಯಗಳ ಮಿಶ್ರಣದಂತೆ ಜುಂಜಪ್ಪನ ಕಾವ್ಯವು ಕಂಡುಬರುತ್ತದೆ. ಜುಂಜಪ್ಪನು ವೀರಭದ್ರನ ಅವತಾರವಾಗಿ ಕಂಡುಬರುತ್ತಾನೆ. ಆತನ ಮನೆದೇವತೆಗಳು ಶೈವ ಸಂಪ್ರದಾಯದ ನೆಲೆಯವುಗಳಾಗಿವೆ. ಆದರೆ ಆತನು ತನ್ನ ಸೋದರ ಮಾವಂದಿರೊಂದಿಗೆ ಮಾಡಿದ ಹೋರಾಟವು ವೈಷ್ಣವ ಸಂಪ್ರದಾಯದ ಕೃಷ್ಣ ಮತ್ತು ಕಂಸನ ಹೋರಾಟದ ಕಥೆಯನ್ನು ಹೋಲುತ್ತದೆ. ಕಾಡುಗೊಲ್ಲರು ಚಿತ್ತರಲಿಂಗ, ಕಾಟಮಲಿಂಗರನ್ನು ಆರಾಧಿಸುತ್ತಿದ್ದರು. ನಂತರದಲ್ಲಿ ತಿಮ್ಮಪ್ಪ, ರಂಗನಾಥ ದೇವರನ್ನೂ ಪೂಜಿಸುತ್ತಾರೆ. ಕಳುವರಹಳ್ಳಿಯ ಜುಂಜಪ್ಪನ ಗುಡ್ಡೆ, ಮತ್ತು

ದೇವಾಲಯದ ಮುಂದೆ ವೈಷ್ಣವ ಪ್ರತೀಕವಾಗಿ ಗರುಡ ಸ್ತಂಭವನ್ನು ನಿಲ್ಲಿಸಲಾಗಿದೆ. ದಾಸಯ್ಯಗಳು "ಗೋವಿಂದ" ಎಂದು ಹೇಳುವ ಸಂಪ್ರದಾಯವಿದೆ. ಜುಂಜಪ್ಪನ ಕಥೆಯಲ್ಲಿಯೇ ಬರುವ ಭೂತಪ್ಪ[೮೬] ದೇವಾಲಯವು ವಾಸ್ತವದಲ್ಲಿ ಜುಂಜಪ್ಪನ ದೇವಾಯದ ನೆರೆಯಲ್ಲಿ ಸ್ಥಾಪಿಸಲಾಗಿದೆ. ಇಲ್ಲಿ ಶೈವ, ವೈಷ್ಣವ ನೆಲೆಗಳಿರುವ ಕಾರಣದಿಂದಾಗಿ ಸ್ಥಳೀಯ ಸಮಕಾಲೀನ ಧಾರ್ಮಿಕ ಮತ್ತು ರಾಜಕೀಯ ವಿಷಮತೆಗಳ ಭಾಗವಾಗಿ ಬುಡಕಟ್ಟು ಸಮುದಾಯಗಳೂ ಸಿಲುಕಿ ಹಾಕಿಕೊಂಡಿರುವ ಸಾಧ್ಯತೆಗಳನ್ನು ಜುಂಜಪ್ಪನ ಬದುಕಿನಲ್ಲಿ ಕಾಣಬಹುದು.

ಹಾಗಲವಾಡಿ ಮತ್ತು ಚೇಳೂರು ಪ್ರದೇಶಗಳು ಹಿಂದೊಮ್ಮೆ ದಟ್ಟವಾದ ಹುಲ್ಲುಗಾವಲುಗಳಿಂದ ಕೂಡಿದ್ದು[೮೭] ಅಲ್ಲಿ ಕಾಡುಗೊಲ್ಲರು ಅಸ್ಥಿತ್ವದಲ್ಲಿದ್ದರು. ಇವರುಗಳ ಕುಲದ ವ್ಯಾಜ್ಯಗಳಲ್ಲಿ ಕೂಡ ಒಂದು ಬಗೆಯ ಸ್ಥಳೀಯ ರಾಜ್ಯ ರಾಜಕೀಯವನ್ನು ಗುರುತಿಸಬಹುದಾಗಿದೆ. ಉದಾಹರಣೆಗೆ : ಜುಂಜಪ್ಪನು ಪಶುಸಂಪತ್ತಿನ ಒಡೆಯನಾಗಿದ್ದು ಆತನ ಏಳಿಗೆ ಮತ್ತು ಸಂಪತ್ತಿನ ಸಲುವಾಗಿ ಆತನ ಮಾವಂದಿರಾದ ಕಂಬೇರ ಗೊಲ್ಲರ ಹೆಣ್ಣುಮಕ್ಕಳು ಜುಂಜಪ್ಪನನ್ನೇ ಮದುವೆಯಾಗಲು ಬಯಸುತ್ತಾರೆ. ಒಂದೆಡೆ ತನ್ನದೇ ಕುಲದ ಏಳಿಗೆ, ಮತ್ತೊಂದೆಡೆ ಜುಂಜಪ್ಪನ ಕುಲವನ್ನು ನಾಶ ಮಾಡುವ ಮನಸ್ಥಿತಿಯನ್ನು ಕಂಬೇರ ಗೊಲ್ಲರಲ್ಲಿ ಗುರುತಿಸಬಹುದಾಗಿದೆ.

ಜುಂಜಪ್ಪನು ಬಾಳಿ ಬದುಕಿದ ಪ್ರದೇಶಗಳಲ್ಲಿ ಆ ಸಮುದಾಯಕ್ಕೆ ಸಂಬಂಧಿಸಿದ ಸ್ಮಾರಕಗಳು, ಆಚರಣೆ, ಸಂಪ್ರದಾಯಗಳು ಇಂದಿಗೂ ಅಸ್ತಿತ್ವದಲ್ಲಿವೆ. ಕಾಡುಗೊಲ್ಲರ ಸಮುದಾಯದ ಪ್ರತಿನಿಧಿಯಾಗಿ ಉಂಟುಮಾಡಿದ ಸಾಂಸ್ಕೃತಿಕ ತಲ್ಲಣಗಳು ಹಾಗೂ ಜುಂಜಪ್ಪನ ಕುರಿತು ಇರುವ ಮೌಖಿಕ ಕಾವ್ಯದಲ್ಲಿ ಪ್ರಸ್ತಾಪಿಸಿರುವ ಪಶುಪಾಲನಾ ವೃತ್ತಿ ಹಿನ್ನೆಲೆಯ ಸಂಘರ್ಷದ ಕುರುಹುಗಳು ಇಂದಿಗೂ ಕಂಡುಬರುತ್ತವೆ. ಈ ಎಲ್ಲ ಕಾರಣಗಳಿಂದಾಗಿ ಜುಂಜಪ್ಪನನ್ನು ಚಾರಿತ್ರಿಕ ನೆಲೆಯಲ್ಲಿ ಗುರುತಿಸಲಾಗಿದೆ.

### ೪.೬ ಕೆಂಚಮ್ಮ

ಕೆಂಚಮ್ಮ ಚಿಕ್ಕನಾಯಕನಹಳ್ಳಿ ತಾಲೂಕಿನ ಹುಳಿಯಾರು ಕೆರೆಗೆ ಹಾರವಾದ ಮಹಾಸತಿ. ಈಕೆಯು ಜಾನಕಲ್ಲು ಗ್ರಾಮದ ಶಂಕರೇಗೌಡ ಮತ್ತು ಚೆನ್ನವ್ವರ ಮಗಳಾಗಿದ್ದಾಳೆ. ಹುಳಿಯಾರು ಗ್ರಾಮದಲ್ಲಿ ಮಾರಪ್ಪ ಮತ್ತು ಬೊಮ್ಮವ್ವ ದಂಪತಿಗಳಿದ್ದರು. ಇವರ ಮಗನಾದ ಗಿರೇಗೌಡನಿಗೆ ಬೊಮ್ಮವ್ವಳ ಅಣ್ಣನ ಮಗಳಾದ ಜಾನಕಲ್ಲು ಕುಲದ ಕೆಂಚಮ್ಮಳನ್ನು ವಿವಾಹವಾಗಿ ತಂದುಕೊಳ್ಳುತ್ತಾರೆ. ಚಿಕ್ಕನಾಯಕನಹಳ್ಳಿ ತಾಲೂಕಿನ ಹುಳಿಯಾರು ಗ್ರಾಮದಲ್ಲಿ ಈಕೆಗೆ ದೇವಾಲಯವನ್ನು ನಿರ್ಮಿಸಿ ಆರಾಧಿಸಲಾಗುತ್ತಿದೆ. ಈಕೆಯ ಬಗ್ಗೆ ಹಲವು ಮೌಖಿಕ ಕಾವ್ಯಗಳನ್ನು ಸಂಗ್ರಹಿಸಲಾಗಿದೆ.[೮೮]

**ಹುಳಿಯಾರು ಕೆಂಚಮ್ಮನ ಕಥನ, ಕಾವ್ಯ** : ಹುಳಿಯಾರು ಪ್ರಭುಗಳ ವಂಶದ ಗಿರೇಗೌಡನಿಗೆ ಆತನ ತಾಯಿ ಬೊಮ್ಮವ್ವಳ ಅಣ್ಣನ ಮಗಳಾದ ಜಾನಕಲ್ಲು ಕುಲದ ಕೆಂಚಮ್ಮಳನ್ನು ಬಾಲ್ಯವಿವಾಹ ಮಾಡಿಕೊಳ್ಳಲಾಗಿರುತ್ತದೆ. ವಿವಾಹದ ಮುನ್ನ ಜ್ಯೋತಿಷ್ಯವನ್ನು ಕೇಳುವ ಸಂಪ್ರದಾಯ ಹಾಗೂ ಬಾಲ್ಯವಿವಾಹ ಪದ್ದತಿಯ ಬಗ್ಗೆ ಮೌಖಿಕ ಕಾವ್ಯವನ್ನು ಕಟ್ಟಲಾಗಿದೆ.

ನಿಮ್ಮ ಪುಸ್ತಕವ ತೆಗೀರಯ್ಯ ಜೋಯಿಸರೇ
ಕಂದಮ್ಮನಿಗೆ ಶಕುನ ಕೇಳಬೇಕು ಹತ್ತು ವರ್ಷದ ಮಗನಾದ ಗಿರಿಯಣ್ಣ
ಗಂಡಿಗೂ ಏಳೇ ವರ್ಷ ಕೆಂಚಮ್ಮ ಹೆಣ್ಣಿಗೂ ಮಾಡ್ಬೇಕು ಬಹಳ ಚೆಂದಾಗೈತೇ?
ಬಾಳ ಚೆಂದಾಗೈತೆಂದು ಶಂಭು ಜೋಯಿಸರು
ನುಡಿದರು ಅಣ್ಣ ತಂಗೇರು ಊಟವ ಮಾಡಿ
ಕೊಂಡು ತಾಯಿ ಬೊಮ್ಮವ್ವ ಬರುತಾಳೆ ತನ್ನ ಹುಳಿಯಾರಿನ ಅರಮನೆಗೆ[೮೯]

ಸಮಾಜದಲ್ಲಿ ರೂಢಿಯಲ್ಲಿದ್ದ ಬಾಲ್ಯ ವಿವಾಹಪದ್ಧತಿ, ಅಂತೆಯೇ ಕೆಂಚಮ್ಮ ಹುಳಿಯಾರಿನ ರಾಜನ ಮನೆಗೆ ಸೊಸೆಯಾಗಿ ಬರುವ ಅಂದರೆ ಈಕೆಯು ಆಡಳಿತ ಸಮುದಾಯಕ್ಕೆ ಸೇರಿದ ಮಹಿಳೆ ಎಂಬ ಸೂಕ್ಷ್ಮ ಒಳನೋಟಗಳನ್ನು ಈ ಕಾವ್ಯದಲ್ಲಿ ಗುರುತಿಸಲಾಗಿದೆ. ಕೆಂಚಮ್ಮಳ ವಿವಾಹದ ನಂತರ ದಾಂಪತ್ಯವು ಸುಖಮಯವಾಗಿರುತ್ತದೆ. ಗಿರೇಗೌಡ ಮತ್ತು ಕೆಂಚಮ್ಮ ದಂಪತಿಗಳಲ್ಲಿ ಗಂಡು ಮಗು ಜನಿಸುತ್ತದೆ. ಕೆಂಚಮ್ಮಳು ಹುಳಿಯಾರಿನ ಕೆರೆಗೆ ಗಂಗಾಪೂಜೆ ಮಾಡಲು ಹೋಗಿದ್ದು, ಗಂಗೆ ಪೂಜೆ ಮಾಡಿಕೊಂಡು ಹಿಂತಿರುಗುವಾಗ ದೇವಕನ್ಯೆಯರು ಕೆಂಚವ್ವನ ಸೆರಗು ಹಿಡಿದು ಕೆಂಚಮ್ಮನ ತಾಯಿಯು ಈ ಹಿಂದೆ ಗಂಗೆಯಲ್ಲಿ ಮಾಡಿಕೊಂಡಿದ್ದ ಹರಕೆಯನ್ನು ನೆನಪಿಸುತ್ತಾರೆ.

ಮೂರು ಬೊಗಸೆ ನೀರಾಕಿ ಕೆಂಚವ್ವಾ
ಹಿಂದಕ್ಕೆ ತಿರುಗ್ಯಾಳು। ದೇವಗನ್ಯೆಯರು ಸೆರಗು ಹಿಡಿದಾರು
ಅಕ್ಕಯ್ಯ ನೀನು ನಮ್ಮೊಡನೆ ಬರಬೇಕು॥[೯೦]

ಹಿಂದೆ ಕೆಂಚವ್ವನ ತಾಯಿ ತುಂಬು ಗರ್ಭಿಣಿಯಾಗಿರುವಾಗ ಹೊಳೆ ತುಂಬಿ ಹರಿಯುತ್ತಿರಲು ಹೊಳೆಯನ್ನು ದಾಟಲು ಸಾಧ್ಯವಾಗುವುದಿಲ್ಲ. ತಾಯಿಯು "ಹೆರಿಗೆಯ ನಂತರ ತನ್ನ ಕಂದನ ಜೊತೆ ತೊಟ್ಟಿಲು ಸಹಿತ ಬರುವನೆಂದು" ಗಂಗೆಗೆ ಭಾಷೆಯನ್ನು ಕೊಟ್ಟಿರುತ್ತಾಳೆ" ಈ ಭಾಷೆಯನ್ನು ನಿನ್ನ ತಾಯಿ ಗಂಗಮ್ಮ ತೀರಿಸಲಿಲ್ಲ. ಅವಳ ಮಗಳಾದ ನೀನು ಹರಕೆಯನ್ನು ತೀರಿಸು ಎಂದು ದೇವಕನ್ನೆಯರು ಕೆಂಚಮ್ಮಳಿಗೆ ಹೇಳುತ್ತಾರೆ.

ನಾನು ನಿಮ್ಮೊಡನೆ ಬರ್ತೀನಿ ಅಕ್ಕಗಳಿರಾ
ಹಿಡಿದ ಮಂಜೆರಗ ಬಿಟ್ಟ ದೇವಗನ್ನೆಯರು
ಮುಳದಗಲ ಬಣ್ಣವ ಬಳಿಕೊಂಡರು॥

ಆಗ ಕೆಂಚವ್ವ ನಾನೂ ನಿಮ್ಮೊಡನೆ ಬರ್ತೀನಿ, ಅನ್ನುತ್ತಾ ಬಲಗೈ ಭಾಷೆ ಕೊಡುತ್ತಾಳೆ

ಬಲಗೈ ಭಾಷೆ ಕೊಟ್ಟು ಎಡಗೈ ನಂಬಿಕೆ ಕೊಟ್ಟು
ನೀರು ಬಿಟ್ಟು ಬಂದವಳೇ ಕೆಂಚವ್ವಾ[೯೧]

ಈ ರೀತಿಯಾಗಿ ದೇವಕನ್ಯೆಯರಿಗೆ ಮಾತನ್ನು ಕೊಟ್ಟು ಮನೆಗೆ ಆಗಮಿಸುತ್ತಾಳೆ. ಅತ್ತೆಯಾದ ಬೊಮ್ಮವ್ವಳನ್ನು ಕುರಿತು ತಾನೂ ತಾಯಿಯ ಹರಕೆಯನ್ನು ತೀರಿಸುವ ಸಲುವಾಗಿ ಕೆರೆಗೆ ಹಾರವಾಗುವ ನಿರ್ಧಾರವನ್ನು ತಿಳಿಸುತ್ತಾಳೆ. ಕೆಂಚಮ್ಮಳು ಸತ್ಯವಾಕ್ಯವನ್ನು ಪರಿಪಾಲಿಸುವ

ಸಮುದಾಯದ ಪ್ರತಿನಿಧಿಯಂತೆ ಈ ಸನ್ನಿವೇಶದಲ್ಲಿ ಕಂಡು ಬರುತ್ತಾಳೆ. ತನ್ನ ಸೊಸೆಯಾದ ಕೆಂಚಮ್ಮಳ ಮನದ ಇಂಗಿತವನ್ನು ತಿಳಿದಂತಹ ಆಕೆಯ ಮಾವನಾದ ಮಾರಪ್ಪಗೌಡನು ಮರುಗುತ್ತಾನೆ. ತಳವಾರನ ಕೈಯಲ್ಲಿ ಓಲೆಯನ್ನು ಕೊಟ್ಟು ಸೊಸೆಯ ನಿರ್ಧಾರವನ್ನು ಆಕೆಯ ತವರಿಗೆ ಮುಟ್ಟಿಸುತ್ತಾನೆ.

ತಾಯಿ ಚೆನ್ನವ್ವ ತಂದೆ ಶಂಕರೇಗೌಡ ಏಳು ಜನ
ಅಣ್ಣಗಳು ಗೋಳಾಡಿಕೊಂಡು ಅಳುತಾರೆ
ಒಡೆಯಬೇಕು ಮಾರನ ತಲೆಯ ಏನೋ ಕಷ್ಟವ ಪಡಿಸವರೆ
ಓದ್ಯಾರು ಓಲೆಗಳ ಅವರಿನ್ನು ಉಗುದ್ಯಾರು ವೀಳ್ಯಗಳ

ಕೆಂಚಮ್ಮಳು ಕೆರೆಗೆ ಹಾರವಾಗುವ ವಿಷಯವನ್ನು ತಿಳಿದ ಕೆಂಚಮ್ಮಳ ಏಳು ಜನ ಅಣ್ಣಂದಿರು ದಂಡಿನೊಂದಿಗೆ ಹುಳಿಯಾರಿಗೆ ಆಗಮಿಸುತ್ತಾರೆ. ಹಾಗೂ ಕೆಂಚಮ್ಮಳು ಕೆರೆಗೆ ಹಾರವಾಗುವ ನಿರ್ಧಾರವನ್ನು ತೆಗೆದುಕೊಳ್ಳಲು ಗಂಡನ ಮನೆಯವರ ಕಿರುಕುಳವೇ ಕಾರಣವೆಂದು ಬಗೆದ ಇವರು ಕೆಂಚಮ್ಮಳ ಮಾವನಾದ ಮಾರಪ್ಪಗೌಡನನ್ನು ಅನುಮಾನಿಸುತ್ತಾರೆ. ಆಗ ಕೆಂಚಮ್ಮಳು ಈ ಕಾವ್ಯದಲ್ಲಿ ಹಾಡಿರುವಂತೆ ತಿಳಿಸುವ ಮೂಲಕ ತನ್ನ ತವರಿನ ದಂಡನ್ನು ಸಮಾಧಾನ ಪಡಿಸುತ್ತಾಳೆ.

ತಂದೆ ಕೇಳೋ ಶಂಕರೇಗೌಡ
ನ್ನ ತಾಯಿ ಮಾಡಿದ ಹರಕೆ ನನಗೈತೆ
ತಾಯಿ ಕೇಳೇ ಚೆನ್ನವ್ವ
ನೀನು ಮಾಡಿದ ಹರಕೆ ನನಗೈತೆ
ನಮ್ಮ ಮಾವನ್ನು ನೀವು ಬಯ್ಯಬೇಡಿ
ನಿಮ್ಮ ದಂಡು ತಿರುವಿರಿ ನಾನು ಹೋಗ್ತೀನಿ ಒಡವಿಗೆ

ತನ್ನ ಗಂಡನಾದ ಗಿರಿಯಗೌಡನು ಕೆಂಚಮ್ಮನ ನಿರ್ಧಾರದಿಂದ ಆದ ದುಃಖವನ್ನು ಈ ಕಾವ್ಯದಲ್ಲಿ ಹಾಡಿರುವಂತೆ ತೋಡಿಕೊಳ್ಳುತ್ತಾನೆ.

ಜಾನಕಲ್ಲಿಗೆ ಹೋದರೆ ಭಾವ, ಭಾವ ಎಂದು ಕರೆಯೋರು
ಅದನ್ನು ನಾನೆಂಗೆ ಮರೆಯಲೇ?

ಎಂಬ ಆತನ ಮಾತಿಗೆ ಕೆಂಚಮ್ಮ ಈ ಕೆಳಕಂಡಂತೆ ಸಲಹೆಯನ್ನು ನೀಡುತ್ತಾಳೆ.

ಚಿಕ್ಕಪ್ಪನ ಮಗಳು ಕಿರುಕೆಂಚಿ ಇರುವಳ
ಮತ್ತೆ ಹೋಗಿ ಅವಳನ್ನೇ ಮದುವೆಯಾಗಿ

ಅದಕ್ಕೆ ಉತ್ತರವಾಗಿ, ಗಿರೇಗೌಡನು ಮುಂದಿನಂತೆ ನುಡಿಯುತ್ತಾನೆ.

ಮಲ್ಲಿಗೆ ಹೂವು ಮಡಿದ ಮಂಡೆಯ ಮೇಲೆ
ಗರಗದ ಹೂವು ಎಂಗೆ ಮುಡಿಯಲೇ?
ಗಂಥದ ಗಮನೀ ಬಾರೇ ಎಲೆನಾರೀ ಬಂದೇರು ತೊಡೆಯ ಮೇಲೆ [೯]

ಈ ರೀತಿಯಾಗಿ ದಂಪತಿಗಳ ನಡುವೆ ಸಂಭಾಷಣೆಯು ನಡೆಯುವುದು. ಇಲ್ಲಿ ಬಹುಪತ್ನಿತ್ವದ ಬಗ್ಗೆ ವಿವರಗಳು ಮತ್ತು ಅಭಿಪ್ರಾಯಗಳು ಕಂಡುಬರುತ್ತವೆ. ಇದರಿಂದ ಅಂದಿನ ಸಾಮಾಜಿಕ ವ್ಯವಸ್ಥೆಯಲ್ಲಿ ಬಹುಪತ್ನಿತ್ವದ ಬಗೆಗಿನ ಸ್ತ್ರೀ ಮತ್ತು ಪುರುಷರು ಹೊಂದಿದ್ದ ದೃಷ್ಟಿಕೋನವನ್ನು ಅರಿಯ ಬಹುದಾಗಿದೆ.

ತಾಯಿಯ ಹರಕೆಯನ್ನು ತೀರಿಸುವ ತನ್ನ ನಿರ್ಧಾರವನ್ನು ಮಾಡಿಯೇ ತೀರುವ ಕೆಂಚಮ್ಮಳು ತನ್ನ ಬಂಧು ಬಳಗವು ಒಪ್ಪದಿದ್ದರೂ ಸಮಾಜದಲ್ಲಿನ ಮೌಖಿಕ ಸಂಪ್ರದಾಯವನ್ನು ಪಾಲಿಸುವಂತೆ ಕಂಡು ಬರುತ್ತಾಳೆ. ಹಾಗೂ ಗಂಗೆಗೆ ಕೊಟ್ಟ ಮಾತಿನಂತೆ ತೊಟ್ಟಿಲಿನ ಜೊತೆ ನಾಲ್ಕು ಹುಣಸೆ ಕಡ್ಡಿಗಳನ್ನು ನೆಟ್ಟು ಅದಕ್ಕೆ ತೊಟ್ಟಿಲನ್ನು ಕಟ್ಟಿ ಕೆರೆಗೆಹಾರವಾಗುತ್ತಾಳೆ.

> ಗಂಡ ಕೊಟ್ಟ ವೀಳೆಯವ ಅಂಗೈಯಲ್ಲಿಟ್ಟುಕೊಂಡು
> ಕಂದನ ತೊಟ್ಟಿಲು ಹೊತ್ತುಕೊಂಡು। ಕೆಂಚವ್ವಾ
> ಹೋದಳು ಗುರುಗಳ ಅರಮನೆಗೆ॥ [೯೪]

ತಾಯಿಯ ಹರಕೆಯನ್ನು ತೀರಿಸಲು ಕೆಂಚಮ್ಮ ತಾನೇ ಕೆರೆಗೆ ಬಲಿಯಾಗುವ ತೀರ್ಮಾನವನ್ನು ಕೈಗೊಂಡು ಅತ್ತೆ, ಮಾವ, ಗಂಡ ಇವರ ಪ್ರೀತಿಗೆ ಮತ್ತು ಅನುಕಂಪಕ್ಕೆ ಪಾತ್ರಳಾಗುತ್ತಾಳೆ. ಕೆಂಚಮ್ಮನನ್ನು ಸಾಧ್ವಿಯೆಂಬ ಭಾವನೆಯಿಂದ ದೈವೀಕರಿಸಿ ಆರಾಧಿಸಲಾಗುತ್ತಿದೆ. ಆಕೆಯ ಮಗನೇ ಬೆಳೆದು ದೊಡ್ಡವನಾಗಿ ಶ್ರೀಭೈರವನಾಗಿದ್ದಾನೆ ಎಂದೂ, ಏರಿಯ ಮೇಲಿನ ನೆಲಮಾಳಿಗೆಯಲ್ಲಿ ನೆಲಸಿದನೆಂಬುದು ಜನಪದರ ನಂಬಿಕೆಯಾಗಿದೆ.

ಸಮಾಜದಲ್ಲಿ ಸತಿ ಸಹಗಮನ ಸಂಪ್ರದಾಯಕ್ಕೆ ಬಲಿಯಾದ ಮಹಿಳೆಯ ಪ್ರಾತಿನಿಧಿಕ ರೂಪವಾಗಿ ಕೆಂಚಮ್ಮ ಗೋಚರಿಸುತ್ತಾಳೆ. ಕೆರೆಗೆಹಾರವಾಗುವ ಕೆಂಚಮ್ಮಳ ತೀರ್ಮಾನವನ್ನು ಕೇಳಿ ಬೆಚ್ಚಿಬಿದ್ದ ಗಂಡನನ್ನು ಕುರಿತು ಆಕೆಯು ಆಡಿದ ಮಾತುಗಳು ಹೆಣ್ಣಿನ ತ್ಯಾಗದ ಪ್ರತೀಕವೆಂಬಂತೆ ಕಂಡು ಬರುತ್ತವೆ. ಇದನ್ನೇ ಆದರ್ಶವೆಂಬಂತೆ ಬಿಂಬಿಸುವ ಪುರುಷ ಪ್ರಾಧಾನ್ಯತೆಯ ವ್ಯವಸ್ಥೆಯನ್ನು ಅಣಕಿಸುವಂತೆ ಈ ಕಾವ್ಯದ ಅಂತರಂಗವು ಕಂಡುಬರುತ್ತದೆ.

**ಚಾರಿತ್ರಿಕ ವಿಶ್ಲೇಷಣೆ :** ಇಂದಿಗೂ ಹುಳಿಯಾರಿನ ಪ್ರದೇಶದಲ್ಲಿ ಕೆಂಚಮ್ಮನ ತ್ಯಾಗ, ಬಲಿದಾನಗಳ ಸಲುವಾಗಿ ಆಕೆಯನ್ನು ಆರಾಧಿಸಲಾಗುತ್ತಿದೆ. ಕೆಂಚಮ್ಮನ ಮೌಖಿಕ ಕಾವ್ಯದಲ್ಲಿ ವ್ಯಕ್ತವಾಗಿರುವ ಅಂಶಗಳು ಕೆಲವೊಮ್ಮೆ ಶಾಸನೋಕ್ತವಾಗಿಯೂ ದೊರಕುತ್ತವೆ. ಹುಳಿಯಾರು ಕೆಂಚಮ್ಮಳ ಕಾವ್ಯವನ್ನು ಚಾರಿತ್ರಿಕ ನೆಲೆಯಲ್ಲಿ ಅಧ್ಯಯನ ಮಾಡುವ ಪ್ರಯತ್ನ ಮಾಡಲಾಗಿದೆ.

ಗಂಗವಾಡಿ ೯೬೦೦೦ ಎಂಬ ಆಡಳಿತ ಘಟಕವು ಹೊಯ್ಸಳ ವಿಷ್ಣುವರ್ಧನನ ಆಳ್ವಿಕೆಯಲ್ಲಿದ್ದಾಗ ಆತನ ಮಹಾಸಾಮಂತ ಗೋವಿದೇವನು 'ಹುಳಿಯೆರು ಹನ್ನೆರಡುಮಂ' ನಾಡಿನಲ್ಲಿ ಆಳುತ್ತಿದ್ದನು. ಇವನ ಕೆಳಗಡೆ ಹೆಗ್ಗಡೆಕೇತಣನು ಮತ್ತೂರನ್ನು (ಮತ್ತ ಊರು) ಆಳುತ್ತಿದ್ದನು. ಈ ಕಾಲದಲ್ಲಿ ಶಿಪಾದಶೇಖರ ಮಹಾಮಹೇಶ್ವರ ಬಿರುದಿನ ಚಟ್ಟಯ್ಯನು ಆಳುತ್ತಿದ್ದನು. ಇವನ ಸಾಮಂತ ಜಕ್ಕಗಾವುಡನು ಕಬ್ಬಳ್ಳವನ್ನು ಆಳುತ್ತಿದ್ದನು. ಹೆಗ್ಗೆರೆಯ ಹೊಂನಗೌಡನ ಮಗನಾದ ಕಲ್ಲೇಗೌಡನು ಹುಳಿಯಾರು ನಾಡಿನ ಪ್ರಭುವಾಗಿದ್ದನು. ಈತನಿಗೆ ಹೊಯ್ಸಳ ವೀರಬಲ್ಲಾಳನು ಕ್ರಿ.ಶ ೧೩೧೮ ರಲ್ಲಿ ಹುಳಿಯಾರು ನಾಡಿನ[೯೫] ಬರಿಗೆಯ ಹಳ್ಳಿಯನ್ನು ದಾನವಾಗಿ ನೀಡಿದ್ದನು.[೯೬] ಅಂದು ಹುಳಿಯಾರು ನಾಡಿನಲ್ಲಿ ಹಲವು

ಸೀಮೆಗಳಿದ್ದವು.[೯೭] ಕಲ್ಲೇಗೌಡನ ಸ್ಮರಣಾರ್ಥ ಆತನ ಹೆಸರಿನಲ್ಲಿ ಹುಳಿಯಾರಿಗೆ ಹತ್ತಿರದಲ್ಲಿಯೇ ಕಲ್ಲೇನಹಳ್ಳಿ ಎಂಬ ಸ್ಥಳನಾಮ ಹೊಂದಿರುವ ಗ್ರಾಮವಿದೆ. ಹುಳಿಯಾರು ಪ್ರಭುಗಳ ಅರಸ ಕಲ್ಲೇಗೌಡನ ನಂತರ ಮಾರೇಗೌಡನು ಅಧಿಕಾರಕ್ಕೆ ಬಂದನು. ಈತನೂ ಸಹ ಹೊಯ್ಸಳರ ಸಾಮಂತನಾಗಿದ್ದನು. ಈ ಅವಧಿಯಲ್ಲಿ ಹುಳಿಯಾರಿನ ಸಮೀಪ ಕೆರೆಯೊಂದನ್ನು ನಿರ್ಮಾಣ ಮಾಡಿಸಲಾಯಿತು.[೯೮]

ಕ್ರಿ. ಶ. ೧೩೨೩ ರಲ್ಲಿ ಹೊಯ್ಸಳ ಮೂರನೇ ಬಲ್ಲಾಳನು ಕಂಪಿಲದೇವನ ವಿರುದ್ಧ ದಂಡೆತ್ತಿ ಬರುತ್ತಾನೆ. ಇದರಿಂದ ಕಂಪಲರಾಯನು ಹುಳಿಯಾರಿನ ಮೇಲೆ ಆಕ್ರಮಣವನ್ನು ಮಾಡಿ ಹೊಯ್ಸಳ ಸಾಮಂತ ಪ್ರಭುವನ್ನು ಸೋಲಿಸುತ್ತಾನೆ. ಹೀಗೆ ಹೊಯ್ಸಳರಿಗೂ ಕಂಪಿಲದೇವನಿಗೂ ನಿರಂತರವಾಗಿ ಯುದ್ಧಗಳು ನಡೆದಿರುವುದನ್ನು ಗುರುತಿಸಬಹುದಾಗಿದೆ.[೯೯] ಹೊಯ್ಸಳ ವೀರಬಲ್ಲಾಳನ ಸಾಮಂತನಾಗಿದ್ದರಿಂದ ಬಲ್ಲಾಳನ ದಂಡನಾಯಕ ಬೇಬೆನಾಯಕನ ಸೈನ್ಯವು ಸಕಾಲಕ್ಕೆ ಮಾರೇಗೌಡನ ಸಹಾಯಕ್ಕೆ ಬರಲಿಲ್ಲ. ಅದ್ದರಿಂದಾಗಿ ಮಾರೇಗೌಡನು ಯುದ್ಧದಲ್ಲಿ ಸೋತು ಕುಮಾರರಾಮನಿಗೆ ಕಪ್ಪವನ್ನು ಒಪ್ಪಿಸಬೇಕಾಗುತ್ತದೆ.[೧೦೦]

ಕನ್ನಡ ವಿಶ್ವವಿದ್ಯಾನಿಲಯವು ೨೦೦೧ ಪ್ರಕಟಿಸಿರುವ ಎಂ. ಎಂ. ಕಲಬುರ್ಗಿಯವರ 'ಕೊಮಾರರಾಮಯ್ಯನ ಚರಿತ್ರೆ' ಎಂಬ ಕೃತಿಯಲ್ಲಿ ಒಟ್ಟು ೨೬ ಸಂಧಿಗಳಿವೆ. ಸಂಧಿ ೯ ರಲ್ಲಿ ಹುಳಿಯಾರಿನ ಮೇಲೆ ಕುಮಾರರಾಮ ಧಾಳಿಯನ್ನು ವಿವರಿಸಲಾಗಿದೆ. (ಪ್ರಸ್ತಾವನೆ/೨೧-೨೨ ಮತ್ತು ೧೧೧-೧೨೫)

ಶಿರಗಳನರಿದು ಚೆಂಡಾಡುತ ರಾಮನ
ಪರಿವಾರ ನಾಯಕರೆಲ್ಲ । ತಂದು
ಗೋನಾಳಿಯ ಬಿಡಿಸುತ ಭಟರ್ಗಳ
ಉರುಭಿ ರಣವ ಹೊಕ್ಕರೊಡನೆ ॥

ಹುಳಿಯೇರ ಮಾರಗೊಂಡನು ಕಪ್ಪವನಿತ್ತು
ಘಳಿಲನೆ ಸಮರಸವಾಗಿ । ಅಳಿಕಿ
ಬಿಂದಿಗೆ ಹೊನ್ನ, ಐದೂರುಗಳನಿತ್ತು
ಗಿಳಿಯ ತಂದಿತ್ತು ಒಂದಾದ ॥

ಹೊಯ್ಸಳ ಪಾಳೆಗಾರನಾದ ಹುಳಿಯಾರ ಮಾರಭೂಪಾಲನು ರಾಮನೊಡನೆ ಕಾಳಗ ಮಾಡಲು ಹವಣಿಸಿದನು. ಇದನ್ನು ಕೇಳಿದ ರಾಮಯ್ಯ ಹುಳಿಯಾರ 'ಮಾರಗೊಂಡನ ಗಂಡ' ಎಂಬ ಬಿರುದು ಧರಿಸಿ ಹೊರಟು ಉಜ್ಜಣಿ ಬಯಲಿನ ಮೂಲಕ ಕಣಜದಹಳ್ಳಿ, ಮರಿವುಂಟ್ಲ, ಬೂದಿಹಾಳ ಮಾರ್ಗವಾಗಿ ಹುಳಿಯಾರಿಗೆ ಬಂದನು. ಹಿರಿಯೂರ ನರಸ, ಕುರುಸಾಣಿ ಬಾಗೂರು ಕಟ್ಟೆಯ ನಾಯ್ಕ, ಗೋವಿಂದ, ಸಣ್ಣಕ್ಕಿ ಬಾಗೂರ ನಾಯ್ಕ ಹಾಗೂ ಇತರರ ಜೊತೆಗೂಡಿ ಮಾಡಿದ ಯುದ್ಧದಲ್ಲಿ ಮಾರನಾಯಕನ ಸೈನ್ಯ ಮುರಿಯಿತು. ಸೋತ ಮಾರಗೊಂಡನು ತನ್ನ ಮಂತ್ರಿ ಕಲ್ಲರಸನ ಮೂಲಕ ಬಿಂದಿಗೆ ಹೊನ್ನು, ಐದೂರು, ಅರಗಿಳಿ ಕೊಟ್ಟು ಸಂಧಿ ಮಾಡಿಕೊಂಡನು. ಈ ಚಾರಿತ್ರಿಕ ಪಾಳೆಯಗಾರನಾಗಿದ್ದ ಮಾರಗೊಂಡನನ್ನು

ಕೆಂಚಮ್ಮನ ಮೌಖಿಕ ಕಾವ್ಯದಲ್ಲಿ ಪ್ರಸ್ತಾಪಿಸಿದೆ. ಈ ಮಾರೇಗೌಡನ ಮಗನೇ ಗಿರೇಗೌಡ. ಗಿರೇಗೌಡನು ಶಾಸನ[೧೦೧] ದಲ್ಲಿ ಉಲ್ಲೇಖಿಸಿರುವಂತೆ ಶಾಲೀವಾಹನ ಶಕ ೧೨೯೪ ರಲ್ಲಿ ಅಳ್ಳೂರು ಬಳಿ ನಡೆದ ಕದನದಲ್ಲಿ ಹೋರಾಡಿ ಮರಣ ಹೊಂದಿದ್ದನು. ಹೊಯ್ಸಳ ಮಹಾಸಾವಂತಾಧಿಪತಿ ಮಾರೆಯನಾಯಕನ ಕುಮಾರ ಗಿರೇಗೌಡನ ಹೆಂಡತಿಯೇ ಕೆಂಚಮ್ಮ. ಈಕೆಯೇ ಹುಳಿಯಾರು ಕೆರೆಗೆ ಹಾರವಾಗುತ್ತಾಳೆ. ಶಾಸನೋಕ್ತವಾಗಿರುವ ಹುಳಿಯಾರು ಪ್ರಭುಗಳ ಹೆಸರುಗಳು ಕೆಂಚಮ್ಮನ ಮೌಖಿಕ ಕಾವ್ಯದಲ್ಲಿ ವ್ಯಕ್ತವಾಗಿವೆ.

> ನಿಮ್ಮ ಪುಸ್ತಕವ ತೆಗೀರಯ್ಯ ಜೋಯಿಸರೇ
> ಕಂದಮ್ಮನಿಗೆ ಶಕುನ ಕೇಳಬೇಕು ಹತ್ತು ವರ್ಷದ ಮಗನಾದ ಗಿರಿಯಣ್ಣ
> ಗಂಡಿಗೂ ಏಳೇ ವರ್ಷ ಕೆಂಚಮ್ಮ ಹೆಣ್ಣಿಗೂ ಮಾಡ್ಬೇಕು ಬಹಳ ಚೆಂದಾಗೈತೇ?
> ಮಾರಪ್ಪಗೌಡ ಎಚ್ಚರಿಕೆ ಕಹಳೆ ಹಿಡಿಸೋನೆ
> ಸಂತೇಷಕೆ ಕಹಳೆ ಕಹಳೆ ಹಿಡಿಸೋನೆ
> ತಂದನಾ ನಾ ನಾ ತಾ ನಾ ನಾ ನಾ[೧೦೨]

ಸಾಮಾನ್ಯವಾಗಿ ಕೆರೆಗೆಹಾರದಂತಹ ಸಾಂಪ್ರದಾಯಿಕ ಆಚರಣೆಗಳಲ್ಲಿ ಜನ ಸಾಮಾನ್ಯ ಮಹಿಳೆಯನ್ನು ಬಲಿಯಾಗಿ ನೀಡಲಾಗುತ್ತಿತ್ತು ಎಂಬ ನಂಬಿಕೆಯಿದೆ. ಆದರೆ ಆಳುವ ವರ್ಗದ ಮಹಿಳೆಯನ್ನು ಈ ಸಂದರ್ಭದಲ್ಲಿ ಬಲಿ ನೀಡಲಾಗಿರುವುದನ್ನು ಕಾಣಬಹುದಾಗಿದೆ. ಇಲ್ಲಿ ಮೇಲ್ವರ್ಗದ ಅಥವಾ ಕೆಳವರ್ಗದ ಮಹಿಳೆ ಎಂಬ ವರ್ಗೀಕರಣಕ್ಕಿಂತ ಪುರುಷ ಪ್ರಾಧಾನ ಸಮಾಜದಲ್ಲಿ ಮಹಿಳೆಯು ತಳವರ್ಗದವಳಾಗಿದ್ದಳು ಎಂಬ ಅಂಶವನ್ನು ಗುರುತಿಸಬಹುದು. ಇದಕ್ಕೆ ಪೂರಕವಾಗಿಯೇ ಕೆಂಚಮ್ಮ ಸತಿಹೋಗುವ ಸಂದರ್ಭದಲ್ಲಿ ತನ್ನ ಗಂಡನಿಗೆ ತನ್ನ ತಂಗಿಯಾದ ಕಿರುಕೆಂಚಿಯನ್ನು ವಿವಾಹವಾಗುವಂತೆ ಸಲಹೆ ನೀಡುವುದನ್ನು ಕಾಣಬಹುದಾಗಿದೆ.

ಹೀಗಾಗಿ ಮೌಖಿಕಕಾವ್ಯ, ರೂಢಿಯಲ್ಲಿರುವ ಮೌಖಿಕ ಸಂಪ್ರದಾಯ, ಶಾಸನೋಕ್ತ ವಿವರಗಳು ಹಾಗೂ ಜನರ ಅಭಿಪ್ರಾಯಗಳನ್ನು ಆಧರಿಸಿ ಹುಳಿಯಾರು ಕೆಂಚಮ್ಮ ಸುಮಾರು ಕ್ರಿ. ಶ. ೧೨೯೪ ರ ಸಂದರ್ಭದಲ್ಲಿ ಬದುಕಿದ್ದಳೆಂದು ನಿರ್ಧರಿಸಬಹುದಾಗಿದೆ.

## ೪.೭ ದಿಬ್ಬದ ವೀರಬೊಮ್ಮಣ್ಣ

ಸಿರಾ ತಾಲೂಕಿನ ಹುಲಿಕುಂಟೆ ಹೋಬಳಿಯಲ್ಲಿರುವ ವೀರಬೊಮ್ಮನಹಳ್ಳಿಯಲ್ಲಿ 'ವೀರಬೊಮ್ಮಣ್ಣ' ಎಂಬ ಸಾಂಸ್ಕೃತಿಕ ನಾಯಕನನ್ನು ಆರಾಧಿಸಲಾಗುತ್ತಿದೆ. ಸ್ಥಳೀಯ ಜನರು ಈತನ ಜೀವನ, ಸಾಧನೆ ಮತ್ತು ಅಸಾಮಾನ್ಯ ವ್ಯಕ್ತಿತ್ವವನ್ನು ಕುರಿತು ಕಾವ್ಯವನ್ನು ಕಟ್ಟಿ ಹಾಡುತ್ತಾರೆ.[೧೦೩] ವೀರಬೊಮ್ಮನಹಳ್ಳಿಯ ದಿಬ್ಬದ ವೀರಬೊಮ್ಮಣ್ಣನ ಕಾವ್ಯವು ಅಪೂರ್ಣವಾದ ಮತ್ತು ವಿಭಿನ್ನವಾದ ಕಥೆಗಳನ್ನು ತನ್ನೊಂದಿಗೆ ಸೇರಿಸಿಕೊಂಡು ಸಾಗುತ್ತಿರುವ ಮೌಖಿಕ ಪರಂಪರೆಯಾಗಿದೆ. ಇಲ್ಲಿನ ಮೌಖಿಕ ಸಂಪ್ರದಾಯಗಳಿಗೂ ಹಾಗೂ ಈ ಕಾವ್ಯಕ್ಕೂ ಪೂರಕವಾದ ಸಂಬಂಧಗಳನ್ನು ಗುರುತಿಸಬಹುದಾಗಿದೆ. ಆದರೂ ಕಾವ್ಯವು

ವಾಸ್ತವಿಕವಲ್ಲದ ಅಂಶಗಳನ್ನು ಮೈಗೂಡಿಸಿಕೊಂಡಿರುವುದು ಕಂಡುಬರುತ್ತದೆ. ಈ ಕಾವ್ಯವನ್ನು ಹಾಡುವ ರೀತಿ ಮತ್ತು ಸಾಹಿತ್ಯವು ವ್ಯಕ್ತಿಯಿಂದ ವ್ಯಕ್ತಿಗೆ ವಿಭಿನ್ನವಾಗಿ ಕಂಡುಬರುತ್ತದೆ.

ವೀರಬೊಮ್ಮಣ್ಣನು ಬೊಮ್ಮನಹಳ್ಳಿಯಲ್ಲಿ ನೆಲೆಗೊಂಡಿದ್ದರಿಂದಲೇ ಈ ಊರಿಗೆ 'ವೀರಬೊಮ್ಮನಹಳ್ಳಿ' ಎಂಬ ಹೆಸರು ಪರ್ಯಾಯವಾಗಿ ಬಂದಿದೆ. ಈ ಸ್ಥಳವು ಯಾದಲಡುಕು ಮತ್ತು ಬೊಮ್ಮನಹಳ್ಳಿಗಳ ನಡುವಿನ ಹೊಳೆದಂಡೆಯಾಗಿತ್ತು ಎಂದು ಮೌಖಿಕ ಕಾವ್ಯದಲ್ಲಿಯೂ ಪ್ರಸ್ತಾಪಿಸಲಾಗಿದೆ.

ಹಿಂದಕೆ ಯಾದಲಡುಕು ಮುಂದಕೆ ಬೊಮ್ಮನಹಳ್ಳಿ
ಹೊಂದಿ ಹರಿವೋಳೆ ಸಿರಿಗಂಗೆ। ತನುವೀಗೆ
ತಂದೆ ಈರಣ್ಣ ನೆಲೆಗೊಂಡ॥[೧೦೪]

**ಕಥನ** : ಸಿರಾ ತಾಲೂಕಿನ ತಡಕಲೂರು ಗ್ರಾಮದ ಕುಂಚಿಟಿಗರ ಅಳುವನೋರ ಕುಲದ ಶಿವನೇಗೌಡ ಮತ್ತು ತಿಮ್ಮೋಜಮ್ಮ ದಂಪತಿಗಳಿಗೆ ದೊಡ್ಡೀರಬೊಮ್ಮಣ್ಣ, ಈರಬೊಮ್ಮಣ್ಣ, ಶಿವನಣ್ಣ, ಗಂಗಣ್ಣ, ಈರಣ್ಣ, ಈರಮ್ಮ ಎಂಬ ಮಕ್ಕಳಿದ್ದರು. ಇವರಲ್ಲಿ ಎರಡನೆಯವನಾದ ಈರಬೊಮ್ಮಣ್ಣನೇ ಈ ಅಧ್ಯಯನದ ಕೇಂದ್ರವಾಗಿದ್ದಾನೆ. ಈತನನ್ನೇ ವೀರಬೊಮ್ಮಣ್ಣ, ದಿಬ್ಬದವೀರಬೊಮ್ಮಣ್ಣ ಎಂದು ಸಹ ಕರೆಯಲಾಗುತ್ತದೆ. ಈತನು ಉತ್ತಮ ಬೇಸಾಯಗಾರನಾಗಿದ್ದನು. ಒಮ್ಮೆ ನೇಗಿಲ ಮೂಲಕ ಸಾಲುಗಳನ್ನು ಮಾಡುತ್ತಿದ್ದನು

ಕಟ್ಟೇ ಕಲ್ಲೀಗೆ ಹತ್ತೋಗ ಕಾಳಿಂಗಾನ
ಎತ್ತೀನ ಕೊರಳಿಗೆ ನಗನೂಡಿ। ಈರಣ್ಣ
ಹತ್ತೀಯ ಸಾಲು ಹೊಡೆದಾನು॥[೧೦೫]

ಈತನ ಅತ್ತಿಗೆ ನಾಗಮ್ಮ ಜೋಳವನ್ನು ಬಿತ್ತುತ್ತಿದ್ದಳು. ಸಂಜೆ ಕತ್ತಲಾದರೂ ಶ್ರಮದಾಯಕ ಕೃಷಿ ಕಾಯಕದಲ್ಲಿ ತೊಡಗಿದ್ದ ಮೈದುನನನ್ನು ಕುರಿತು ಅತ್ತಿಗೆಯು 'ನಾವೇನು ಆವಿನ ಗೂಡಿನ ವಾರಸುದಾರರೇ? ಮನೆಯಲ್ಲಿರುವ ಕಂದಮ್ಮಗೆ ಹಾಲು ನೀಡಲು' ಎಂದು ನುಡಿಯುವಳು.[೧೦೬] ಇನ್ನೊಂದು ಮೂಲದಂತೆ ಶ್ರಮದಾಯಕ ಕೆಲಸಮಾಡಿ ಹೊತ್ತಾದ ಬಳಿಕ ಮನೆಗೆ ಬಂದಂತಹ ತನ್ನ ಅತ್ತಿಗೆ ನಾಗಮ್ಮ ಮಗುವಿಗೆ ಹಾಲು ಕುಡಿಸಲು ಮೊದಲು ಮಾಡುವಳು. ಆದರೆ ಎದೆಯಲ್ಲಿನ ಹಾಲು ಸಾಕಾಗದೇ ಮಗು ಅಳತೊಡಗಿತು. ಆಗ ನಾಗಮ್ಮ 'ನಾವೇನು ಆವಿನಗೂಡಿನ ವಾರಸುದಾರರೇ, ಹಸುವಿನ ಹಾಲನ್ನಾದರೂ ಕುಡಿಸಲು ಎಂದು ನೋವಿನಿಂದ ನುಡಿಯುತ್ತಾಳೆ.

ನಾದಿನಿ ನಾಗು ಏನೆಂದು ನುಡಿದಾಳು
ನಾಲಿಗೆಯ ಸೀಳೀ ರೈತಾವ। ಎರಿಯಾಲೆಂದು
ಬಚ್ಚಾಯದ ಮಾತ ನುಡಿದಾಳು॥[೧೦೭]

ಅತ್ತಿಗೆಯ ಈ ಮಾತಿನಿಂದ ಬೇಸತ್ತ ವೀರಬೊಮ್ಮಣ್ಣನು ಗೋವನ್ನು ತರಲೇಬೇಕೆಂಬ ಛಲದಿಂದ ಹಿರಿಯೂರಿನ ಕುನ್ನಿಕೆರೆಯ ಕಾಟುಮಲಿಂಗ ದೇವರಿಗೆ ಪೂಜಿಸಿ ಉತ್ತರದೆಡೆಗೆ ಹೊರಟನು.

ಕುನ್ನಿಕೆರೆಗೆ ಹೋಗಿ ಕುನುಕುಲುಗುಂಡಿಗೆ ಮುಳುಗಿ
ಅಪ್ಪಾ ಹೊರಟಾನು ಪಡುವ ಮುಖನಾಗಿ। ಕುನ್ನಿಕೆರೆಯ
ಅಪ್ಪಾ ಕಾಟಿಮಲಿಂಗ ಶರಣೆಂದ॥
ತುರುಗಲ್ಲು ಬಾದಾಮಿ ಕರು ನಮ್ಮುವಾದರೆ
ಶಿರವನೊಪ್ಪಿಸುವೆ ಶಿವುನೀಗೆ। ಹಾಲೀ ಕ್ಯಾತೇಲಿಂಗ
ಧರಣಿ ಸತ್ಯಾಕೆ ನಡೆದಾನು॥ [೧೦೮]

ಹಸುಗಳನ್ನು ಸಂಪಾದಿಸಿಕೊಂಡು ಗೋ ಹಿಂಡಿನೊಂದಿಗೆ ಬೊಮ್ಮನಹಳ್ಳಿಗೆ ಹಿಂತಿರುಗಿದನು. ಮಾರ್ಗ ಮಧ್ಯದಲ್ಲಿ ತುರುಕರ ಧಾಳಿಗೆ ತುತ್ತಾಗಿ ಕುನ್ನಿಕೆರೆಯ ಬಳಿ ಹತ್ಯೆಗೀಡಾದನು. ಆದರೆ ತನ್ನ ಅತ್ತಿಗೆಯ ಆಶಯದಂತೆ ಆತನ ಮುಂಡವು ಗೋ ಹಿಂಡನ್ನು ತರುವ ಮೂಲಕ ತನ್ನ ಛಲವನ್ನು ಸಾಧಿಸಿತು ಎಂಬ ನಂಬಿಕೆಯಿದೆ.

ಇನ್ನೊಂದು ಮೂಲದಂತೆ, ಕುನ್ನಿಕೆರೆಯ ಕಾಟುಮಲಿಂಗ ದೇವರಿಗೆ ಪೂಜಿಸಿ ಹಸುಗಳನ್ನು ತರಲು ಹೊರಟ ವೀರಬೊಮ್ಮಣ್ಣನು ಉತ್ತರದ ರಾಯಬೆಳ್ಳಾರದ ಗೊಲ್ಲರಹಟ್ಟಿಗೆ ತಲುಪಿದನು. ಈತನನ್ನು ಕಂಡಂತಹ ಗೊಲ್ಲರು ಈತನ ಪರಿಚಯವನ್ನು ಕೇಳುತ್ತಾರೆ.

ಯಾರ ಮಗನಪ್ಪಾ ಯಾರ ಅಳಿಯನಪ್ಪಾ
ಕುಲವೇಳ ನಿನ್ನ ಬೆಡಗೇಳ। ಅಳುವನೋರ
ಹೆಸರು ಈರುಬೊಮ್ಮಣ್ಣ॥ [೧೦೯]

ತನ್ನನ್ನು, ಗೊಲ್ಲರಿಗೆ ಪರಿಚಯಿಸಿಕೊಂಡಂತಹ ದಿಬ್ಬದ ವೀರಬೊಮ್ಮಣ್ಣನು ಗೊಲ್ಲರ ಗೋ ಹಿಂಡನ್ನು ಕಾಯುವ ಕೆಲಸಕ್ಕೆ ನೇಮಕಗೊಂಡನು.

ಆಡಮಗನಾಗಿ ಹೋದಾನು ಆವಿನ ಗೂಡಿನ
ರಾಮಗೊಡಲು ಅವನ ಹೆಗಲಮ್ಯಾಲೆ ಅಕ್ಕಡಿ। ಗೊಲ್ಲಾರು
ಆವಿಗೆ ಈರಣ್ಣ ಒಲಿದವನೆ॥
ಹತ್ತುಪಡಿ ಜೋಳಾಕೆ ಮತ್ತೆ ಜೀತನಿದ್ದ
ಹತ್ತಿಂಡಿಗಾಗಿ ತಪಸಿದ್ದ। ಅಳುವನೋರ
ಪುತ್ರ ಕೊಂಡೋದ ತುರುಗಾಳು॥ [೧೧೦]

ಅದರಂತೆ ಗೊಲ್ಲರ ಗೋವುಗಳನ್ನು ಕಾಯುತ್ತಿದ್ದ ಬೊಮ್ಮಣ್ಣನು ತಾನು ಬಂದ ಉದ್ದೇಶವನ್ನು ಮರೆತಂತೆ ಕಂಡುಬರುವುದಿಲ್ಲ. ಈ ಹಿನ್ನೆಲೆಯಲ್ಲಿ ತನ್ನ ಅತ್ತಿಗೆಯ 'ಆವಿನಗೂಡಿನ ವಾರಸುದರರೇ' ಎಂಬ ನುಡಿಗಳು ನೆನಪಾಗಿ, ತನ್ನ ದಣಿಗಳಾದ ಗೊಲ್ಲರಿಗೆ ಮೋಸವನ್ನು ಮಾಡಿ ಗೊಲ್ಲರ ಗೋ ಹಿಂಡನ್ನು ಬೊಮ್ಮನಹಳ್ಳಿಗೆ ಕರೆತರುವ ನಿರ್ಧಾರವನ್ನು ಮಾಡಿದನು. ಗೋ ಹಿಂಡಿನೊಂದಿಗೆ ಬೊಮ್ಮನಹಳ್ಳಿಗೆ ಬರುವ ಮಾರ್ಗ ಮಧ್ಯದಲ್ಲಿ ಪಶ್ಚಾತ್ತಾಪದ ಭಾವವು ಈತನನ್ನು ಕಾಡುತ್ತದೆ. ಆದರೂ ಸಮುದಾಯದ ನೈತಿಕ ಮೌಲ್ಯದ ಅಧಃಪತನದ ಮುಂದೆ ಆತನ ಛಲವೇ ಮುಖ್ಯವಾಗಿರುವುದು ಈ ಕಾವ್ಯದಲ್ಲಿ ಗೋಚರಿಸುತ್ತದೆ. ಪಶ್ಚಾತ್ತಾಪ ದೊಂದಿಗೆಯೇ ವೀರಬೊಮ್ಮಣ್ಣನು ತುರುಗಳೊಂದಿಗೆ ಬೊಮ್ಮನಹಳ್ಳಿಗೆ ಬಂದನು.

ಗೋವುಗಳ ಹೊಡಕೊಂಡು ಗೋಪಾಲನ ಹಿಡಕೊಂಡು
ಗೋಟಿ ಗಂಬಳಿಯ ಹೊದ್ದುಕೊಂಡು। ಬೊಮ್ಮಾನಹಳ್ಳಿ
ತುರುಗಲ್ಲಾಗೆ ಆವು ತಡೆದಾನು॥ [೧೧೧]

ಆಗ ತನ್ನ ಮನೆಯವರು, ಬಂಧುಗಳು ಈತನನ್ನು ಅನುಮಾನಿಸುವ ಈತನ ಮೋಸದ ಕೃತ್ಯವನ್ನು ಖಂಡಿಸುವ ಪ್ರಸಂಗವು ಕಂಡುಬರುತ್ತದೆ. ಇದು ಗ್ರಾಮೀಣ ಸಮುದಾಯವು ಬಡತನದ ನಡುವೆಯೂ ನೈತಿಕ ಮೌಲ್ಯಗಳಿಗೆ ನೀಡಲಾಗುತ್ತಿದ್ದ ಮಹತ್ವವನ್ನು ಚಿತ್ರಿಸುತ್ತದೆ.

ಯಾರ ಮನೆಯಾಗಿದ್ದೆ ಯಾರ ಹಿಂಡಾ ಕದ್ದೆ
ಯರ್‍ಯಾರಿಗೆ ತಂದೆ ತಲೆಪಿಡುಗ। ಈರಣ್ಣ
ನಾಳೆ ನಮ್ಮನಿಯಾಗೆ ಇರಬ್ಯಾಡ॥[೧೧೨]

ಈ ರೀತಿಯಾಗಿ ವೀರಬೊಮ್ಮಣ್ಣನ ಕಾವ್ಯವು ಅಪರಿಪೂರ್ಣವಾಗಿ ಕಂಡುಬರುತ್ತದೆ. ಆದರೂ ಶಿರಾ ತಾಲೂಕಿನ ಹುಲಿಕುಂಟೆ ಹೋಬಳಿಯ ವೀರಬೊಮ್ಮನಹಳ್ಳಿಯ ಪ್ರದೇಶದಲ್ಲಿ ಸಾಂಸ್ಕೃತಿಕ ವೀರನಾದ ದಿಬ್ಬದ ವೀರಬೊಮ್ಮಣ್ಣನನ್ನು ಆರಾಧಿಸಲಾಗುತ್ತಿದೆ.

**ಚಾರಿತ್ರಿಕ ವಿಶ್ಲೇಷಣೆ** : ದಿಬ್ಬದ ವೀರಬೊಮ್ಮಣ್ಣನ ಬಗೆಗಿನ ಕೆಳಗಿನ ಮೌಖಿಕ ಕಾವ್ಯದಲ್ಲಿ ವೀರಬೊಮ್ಮಣ್ಣನ ಕುನ್ನಿಕೆರೆಯ ಮೂಲವನ್ನು ಹಾಡಿರುವುದರಿಂದ ಈತನು ಒಬ್ಬ ಆಡಳಿತಗಾರನಾಗಿರಬೇಕೆಂಬ ಹಿನ್ನೆಲೆಯನ್ನು ಕಂಡುಕೊಳ್ಳುವ ಪ್ರಯತ್ನವನ್ನು ಈ ಅಧ್ಯಯನದಲ್ಲಿ ಮಾಡಲಾಗಿದೆ.

ಎಪ್ಪತ್ತು ರಾಜ್ಯಾಕೆ ಹೆಸರ ಕುನ್ನಿಕೆರೆಯ
ಪಟ್ಟಣ ನಾಳೋದ ಮಗನೀರು ಬೊಮ್ಮಣ್ಣ॥
ಎಂಬತ್ತು ರಾಜ್ಯಾಕೆ ಹೆಸರ ಕುನ್ನೀಕೆರೆಯ
ಗ್ರಾಮನಾಲ ಮಗನೀರ ಬಮ್ಮಣ್ಣ॥[೧೧೩]

ಕಾವ್ಯದಲ್ಲಿ ಹಾಡಿರುವಂತೆ ವೀರಬೊಮ್ಮಣ್ಣನು ಕುನ್ನಿಕೆರೆ ಮತ್ತು ಬೊಮ್ಮನಹಳ್ಳಿ ಪ್ರದೇಶದ ಸ್ಥಳೀಯ ನಾಯಕನಾಗಿರಬೇಕು. ಇಂದಿಗೂ ಹಿರಿಯೂರಿನ ಕುನ್ನಿಕೆರೆಯಲ್ಲಿ ವೀರಬೊಮ್ಮಣ್ಣನ ಶಿರಕ್ಕೂ, ವೀರಬೊಮ್ಮನಹಳ್ಳಿಯಲ್ಲಿ ವೀರಬೊಮ್ಮಣ್ಣನ ಮುಂಡಕ್ಕೂ ಪೂಜೆಯನ್ನು ಮಾಡಲಾಗುತ್ತದೆ. ಇಲ್ಲಿ ವೀರಗಲ್ಲುಗಳಿವೆ. ಅಂತೆಯೇ ಕಾವ್ಯದಲ್ಲಿ ಹಾಡಲಾಗುವ ಭೌಗೋಳಿಕ ಸ್ಥಳಗಳಾದ ಕುನ್ನಿಕೆರೆ, ಕುನುಕುಲಗುಂಡಿ, ಬೊಮ್ಮನಹಳ್ಳಿ, ಯಾದಲಡುಕು, ಸಿರಿಗಂಗೆಹೊಳೆ ಇವೆಲ್ಲವೂ ವಾಸ್ತವದಲ್ಲಿ ಅಸ್ತಿತ್ವದಲ್ಲಿವೆ. ಅಲ್ಲದೇ ಸಾಮಾನ್ಯವಾಗಿ ಗೊಲ್ಲರು ಪೂಜಿಸುವ ಕಾಟುಮಲಿಂಗ ದೇವರನ್ನು ಕುಂಚಿಟಿಗರು ಸಹ ಆರಾಧಿಸುತ್ತಾರೆ.[೧೧೪] ಕಾಲಾನಂತರದಲ್ಲಿ ವೀರಬೊಮ್ಮಣ್ಣನ ಕುಲದವರಿಗೆ ಈತನನ್ನು ಆರಾಧಿಸುತ್ತಿರುವ ಸ್ಥಳವನ್ನು (ಹೊಲವನ್ನು) ಉಂಬಳಿಯಾಗಿ ನೀಡಿರುವ ಸಾಧ್ಯತೆಯೂ ಇದೆ.

ಸಿರಾ ಪ್ರದೇಶದಲ್ಲಿ ಹಲವು ತುರುಕಾಳಗಗಳು ನಡೆದಿರುವ ಉಲ್ಲೇಖಗಳಿವೆ. ದಿಬ್ಬದ ವೀರಬೊಮ್ಮಣ್ಣನು ತುರುಕಾಳಗದಲ್ಲಿ ಗೊಲ್ಲರ ಗೋವುಗಳನ್ನು ಬಿಡಿಸಿಕೊಳ್ಳಲು ಹೋರಾಟ ಮಾಡಿ ಮಡಿದಿರುವನೆಂದು ಕೂಡ ನಿಶ್ಚಯಿಸಬಹುದಾಗಿದೆ. ಈತನು ತನ್ನ ಪ್ರಜೆಗಳ ಗೋವುಗಳನ್ನು ರಕ್ಷಿಸಿದ್ದರಿಂದಲೇ ಇತರ ಕುಲದವರೂ ಈತನನ್ನು ಪೂಜಿಸುತ್ತಾರೆ. ಇದರಿಂದ ಈತನಿಗೆ 'ವೀರ' ಎಂಬ ಹೆಸರು ಪರ್ಯಾಯವಾಗಿದೆ. ಈತನು ಬೊಮ್ಮನಹಳ್ಳಿಯಲ್ಲಿ ನೆಲೆಗೊಂಡ ಬಗ್ಗೆ ಈ ಮುಂದಿನ ಮೌಖಿಕ ಕಾವ್ಯವು ಹಾಡಲಾಗಿದೆ.

ಎತ್ತು ಕಾವ್ಹೋರಿಂದೆ ಮತ್ತೆ ಬಂದ ಈರಣ್ಣ
ಮುತ್ತೀನ ಚೆಂಬೆ ಬರಿಗ್ಯೆಲಿ। ಬೊಮ್ಮಾನಹಳ್ಳಿ
ದಿಕ್ಕೊಳ್ಳೇದಂದೇ ನೆಲಗೊಂಡ॥ [೧೧೫]

ನಿಡಗಲ್ಲು ಚೋಳರ ರಾಜನಾಗಿದ್ದ ಇರುಂಗೋಳನ ಉತ್ತರಾಧಿಕಾರಿಯಾಗಿ ವೀರಗಣೇಶ್ವರನು ನಿಡಗಲ್ಲಿನಲ್ಲಿ ಆಳುತ್ತಿದ್ದನು. ಇವರು ಕಲ್ಯಾಣದ ಚಾಲುಕ್ಯರ ಸಾಮಂತರಾಗಿದ್ದರು. ಹೊಳಕಲ್ಲು ವಂಶದ ಶಾಸನೋಕ್ತ ಆಡಳಿತಗಾರನಾದ ಗಂಗೆಯನಾಯಕನು ಈತನ ದಂಡನಾಯಕನಾಗಿದ್ದನು ಎಂಬುದು ಶಾಸನದಿಂದ ದೃಢಪಡುತ್ತದೆ.[೧೧೬] ಇವನು ಹೊಯ್ಸಳ ಬಲ್ಲಾಳನ ದಂಡನಾಯಕನಾಗಿದ್ದ ಮಾರೆಯಾನ ಕುಟುಂಬದೊಂದಿಗೆ ವೈವಾಹಿಕ ಸಂಬಂಧಗಳನ್ನು ಏರ್ಪಡಿಸಿಕೊಂಡಿದ್ದನು.[೧೧೭] ಹೊಳಕಲ್ಲು ವಂಶದವರಿಗೂ ಮತ್ತು ಹೊಯ್ಸಳರ ದಂಡನಾಯಕ ಮಾರೆಯಾನನ ಕುಟುಂಬದೊಂದಿಗಿನ ವೈವಾಹಿಕ ಸಂಬಂಧಗಳು ಹುಲಿಕುಂಟೆಯ ಕಾಳಗಕ್ಕೆ ಪರೋಕ್ಷವಾಗಿ ಕಾರಣವಾಗಿದ್ದವೆಂದು ಭಾವಿಸಲಾಗಿದೆ.[೧೧೮]

ನಿಡಗಲ್ಲು ಅರಸ ವೀರಗಣೇಶ್ವರನು ಅಸಮರ್ಥನಾಗಿರುವನೆಂದು ತಿಳಿದ ಗಂಗೆಯನಾಯಕನು ಮಾರೆಯನ ಕುಮ್ಮಕ್ಕಿನಿಂದ ನಿಡಗಲ್ಲುದರ್ಗವನ್ನು ವಶಪಡಿಸಿಕೊಳ್ಳುವ ಸಂಚನ್ನು ರೂಪಿಸಿದ್ದನು. ಇದನ್ನು ಅರಿತ ನಿಡಗಲ್ಲು ಅರಸ ವೀರಗಣೇಶ್ವರನು ಗಂಗೆಯನಾಯಕನನ್ನು ಪದಚ್ಯುತಗೊಳಿಸಿ ಬೈಚಯ್ಯ ನಾಯಕನನ್ನು ನಿಡಗಲ್ಲಿನ ದಂಡನಾಯಕನನ್ನಾಗಿ ನೇಮಿಸಿಕೊಂಡನು. ಅಲ್ಲದೇ ಶತೃ ಸಂಹಾರಕ್ಕಾಗಿ ತನ್ನ ಸಾಮಂತನಾಗಿದ್ದ ಕುಡ್ಲೂರ ರಾಯನಾಯಕನನ್ನು ನೇಮಿಸಿದನು. ರಾಯನಾಯಕನು ಹುಲಿಕುಂಟೆಯ ಮೇಲೆ ಆಕ್ರಮಣ ಮಾಡಿದಾಗ ಧಾಳಿಯಲ್ಲಿ ಗಂಗೆಯನಾಯಕನ ಮಗ ಪೆಂಮೆಯನಾಯಕ ಪೆಂಮೆಯನಾಯಕನ ಮಗ ಅಭಯನಾಯಕ ಮತ್ತು ಆತನ ಮಾವ ಬೊಂಮೆಯನಾಯಕರು ಸ್ವರ್ಗಸ್ತರಾದರು.[೧೧೯]

ಹೀಗೆ ಮಡಿದವರ ಕುಟುಂಬಕ್ಕೆ ಗ್ರಾಮಸ್ಥರು ದಾನದತ್ತಿಗಳನ್ನು ನೀಡುತ್ತಿದ್ದರು ಅಲ್ಲದೇ ಅವರ ಸ್ಮರಣೆಯಲ್ಲಿ ನೆಟ್ಟ ವೀರಗಲ್ಲಿಗೆ ಪೂಜೆಯನ್ನು ಮಾಡುತ್ತಿದ್ದರು. ಎಂಬ ವಿಚಾರವನ್ನು ಎಫಿಗ್ರಾಫಿಯಾ ಕರ್ನಾಟಿಕ ಸಂ. ೨೪ (ಮೈಸೂರು ವಿಶ್ವವಿದ್ಯಾಲಯ ಪ್ರಕಟಣೆ) ತುಮಕೂರು ಜಿಲ್ಲೆ ಚಿಕ್ಕನಾಯಕನಹಳ್ಳಿ ಶಾಸನ ಸಂಖ್ಯೆ ೭೩ ರಲ್ಲಿಯೂ ಉಲ್ಲೇಖಿಸಿದೆ.

ಅದರಂತೆ ಚಾರಿತ್ರಿಕವಾಗಿ ಉಲ್ಲೇಖಿಸಿರುವ ಬೊಂಮೆಯನಾಯಕನನ್ನೇ ದಿಬ್ಬದ ವೀರಬೊಮ್ಮಣ್ಣನೆಂದು ಗುರುತಿಸಲಾಗಿದೆ.[೧೨೦] ಹುಲಿಕುಂಟೆ ಹೋಬಳಿಯ ಬೊಮ್ಮನಹಳ್ಳಿ ಬಳಿ ಈ ಕದನ ನಡೆದಿದೆ ಎಂದು ಭಾವಿಸಲಾಗುವ ಈ ಜಾಗದಲ್ಲಿ ಇಂದಿಗೂ ಮೂರು ವೀರಗಲ್ಲುಗಳನ್ನು ನೆಟ್ಟು ಪೂಜಿಸಲಾಗುತ್ತಿದೆ.

ಹುಲಿಕುಂಟೆಯಲ್ಲಿ ಕುಂಚಿಟಿಗರ ಹೊಳಕಲ್ಲು ಮತ್ತು ಅಳುವನೋರ ಉಪಜಾತಿಗೆ ಸೇರಿರುವ ಜನರಿದ್ದಾರೆ. ಇವರ ನಡುವೆ ನೆಂಟಸ್ತಿಕೆ ಸಂಬಂಧವಿದೆ. ಗಂಗೆಯನಾಯಕನು

ಕುಂಚಿಟಿಗರ ಹೊಳಕಲ್ಲು ಬೆಡಗಿನವನಾಗಿದ್ದನು. ಶಾಸನದಲ್ಲಿ ಬೊಮ್ಮಣ್ಣನನ್ನು ಮಾವನೆಂದು ಉಲ್ಲೇಖಿಸಿರುವುದರಿಂದ ಮೌಖಿಕ ಸಂಪ್ರದಾಯಕ್ಕೆ ಪೂರಕವಾಗಿಯೇ ಈತನು ಅಳುವನೋರ ಕುಲಕ್ಕೆ ಸೇರಿದವನಾಗಿದ್ದನೆಂಬು ಸ್ಥಳೀಯರ ಅಭಿಪ್ರಾಯವೂ ಆಗಿದೆ. ಈ ಕೆಳಗಿನ ಮೌಖಿಕ ಕಾವ್ಯವೂ ಇದನ್ನೇ ಪ್ರಸ್ತಾಪಿಸುತ್ತದೆ.

ಮಾವಗಳ ದೇವರಿಗೆ ಕೈಗೊಂಡು ಕಳುವ್ಯಾನು
ಮಾವಗಳ ದೇವರ ಕುಲವೆತ್ತಿ ಹಾಡದ ಮೇಲೆ
ಅಪ್ಪ ನಾವುಟ್ಟಿ ಫಲವೇನು॥ [೧೨೧]

ನಿಡಗಲ್ಲು ಅರಸ ವೀರಗಣೇಶ್ವರನ ದಂಡನಾಯಕನಾಗಿದ್ದ ಗಂಗೆಯನಾಯಕನು ತನ್ನ ಅಧಿಕಾರವನ್ನು ದುರುಪಯೋಗ ಪಡಿಸಿಕೊಂಡು ಹೊಯ್ಸಳ ದಂಡನಾಯಕ ಹಾಗೂ ತನ್ನ ಸಂಬಂಧಿಯಾದ ಮಾರೆಯನ ಕುಮ್ಮಕ್ಕಿನಿಂದ ನಿಡಗಲ್ಲುದರ್ಗವನ್ನು ವಶಪಡಿಸಿಕೊಳ್ಳುವ ಸಂಚನ್ನು ರೂಪಿಸಿದ್ದನು. ಇದು ತನ್ನ ಸಮುದಾಯದ ನೈತಿಕತೆಯನ್ನು ಅವಮಾನಿಸಿದಂತೆ, ಅಲ್ಲದೇ ತನ್ನ ಸ್ವಾಮಿನಿಷ್ಠೆಯನ್ನು ಮರೆಯುವಂತೆ ಮಾಡಿದ್ದು ಹಾಗೂ ಇಂತಹ ಸಂಚಿಗೆ ಸಹಕರಿಸಿದ್ದು ಸಹ ವೀರಬೊಮ್ಮಣ್ಣನ ವ್ಯಕ್ತಿತ್ವಕ್ಕೆ ಅಂಟಿದ ಕಳಂಕವಾಗಿತ್ತು. ಇದರ ಪ್ರತೀಕವಾಗಿಯೇ ಜನಪದರು ಪಶ್ಚಾತ್ತಾಪದ ನೆಲೆಯಲ್ಲಿ ಕಾವ್ಯವನ್ನು ಕಟ್ಟಿ ಹಾಡಿದ್ದಾರೆ.

ಅಂಬಲಿಯ ಉಂಡೇನು ಕಂಬಳಿಯ ಹೊದ್ದೇನು
ಉಂಡ ಮನೆಗೆ ಎರಡು ಬಗೆಯಲಾರೆ। ಹೇ ಶಿವನೇ
ಹಿಂಡ ಮುಂದಾಕೆ ಹೊಡೆಯಲಾರೆ॥ [೧೨೨]

ಸನ್ನಿವೇಶ ಮತ್ತು ಪ್ರಭುತ್ವಗಳು ಮಾತ್ರ ಇಲ್ಲಿ ಬದಲಾಗಿರುವುದನ್ನು ಗುರುತಿಸಬಹುದಾಗಿದೆ. ಆದರೂ ಮೌಖಿಕ ಕಾವ್ಯಗಳ ಸ್ವರೂಪದ ಹಿನ್ನೆಲೆಯಲ್ಲಿ ಜನಸಾಮಾನ್ಯರು ಹೊಂದಿರುವ ಆಶಯವು ಒಂದೇ ಆಗಿದೆ.

ಎಫಿಗ್ರಾಫಿಯ ಕರ್ನಾಟಿಕ ಸಂಪುಟ ೧೨ ಸಿರಾ ಶಾಸನ ಸಂಖ್ಯೆ ೬೦ ರಲ್ಲಿ ಉಲ್ಲೇಖಿಸಿರುವ ಬೊಂಮೆಯನಾಯಕನೇ ದಿಬ್ಬದ ವೀರಬೊಮ್ಮಣ್ಣನಾಗಿದ್ದಾನೆ ಎಂದು ಗುರುತಿಸಲಾಗಿದೆ. ಈ ಶಾಸನದ ಕಾಲವು ಶಕ ೧೨೧೪ ಆಗಿರುವುದರಿಂದ ಈ ಕಾಲಕ್ಕೂ ಮುಂಚೆಯೇ ದಿಬ್ಬದವೀರ ಬೊಮ್ಮಣ್ಣನು ಜೀವಿಸಿದ್ದನೆಂದು ನಿರ್ಧರಿಸಲಾಗಿದೆ.

## ೪.೮ ಇತರೆ ವೀರರು

ತುಮಕೂರು ಜಿಲ್ಲೆಯಾದ್ಯಂತ ಆರಾಧಿಸಲ್ಪಡುವ ಇಲ್ಲಿನ ಸಮುದಾಯಗಳ ನಾಯಕರಿಗೆ ಸಂಬಂಧಿಸಿದಂತೆ ಮೌಖಿಕ ಆಕರಗಳ ಸಹಾಯದಿಂದ ಕಥನಗಳನ್ನು ಸಂಗ್ರಹಿಸಲಾಗಿದೆ. ಅಂತಹ ಸಾಂಸ್ಕೃತಿಕ ವೀರರೆಂದರೆ : ಉಂಡೇತ್ರಾಯ, ಜಲಧಿ ಬೊಪ್ಪರಾಯ, ಬಂದ್ಕುಂಟೆ ಈರುಚಿಕ್ಕಣ್ಣ, ಬರಗೂರು ಈರಮ್ಮ, ಬಳ್ಳಕಟ್ಟೆ ಈರಣ್ಣ, ಭೀಮಾಸತಿ, ಮದಲಿಂಗ, ಶೂಲದ ಈರಣ್ಣ, ಹೊನ್ನೇಮರದ ಈರಣ್ಣ ವೀರಸೀಗಣ್ಣ, ಮುಂತಾದವರು.

### ೪.೮.೧ ಉಂಡೇತ್ರಾಯ

ಕೆಂಪನಂಜುಂಡ ಎಂಬುವವನು ಕ್ರಿ.ಶ ೧೩೦೫ ರಲ್ಲಿ ಯಕ್ಷಗಾನ ರೂಪದಲ್ಲಿ 'ವಡ್ಡಗೆರೆ ವೀರನಾಗಮ್ಮನವರ ಚರಿತ್ರೆ' ಅಥವಾ 'ವೀರಕ್ಯಾತರಾಯನ ದಿಗ್ವಿಜಯ' ವನ್ನು ರಚಿಸಿದ್ದಾನೆ. ತಾಳೆಗರಿಗಳಲ್ಲಿ ರಚಿಸಲಾಗಿದ್ದ ಇದನ್ನು 'ಕುಂಚಿಟಿಗರ ಮಹಾಪುರಾಣ' ಎಂದೂ ಕರೆಯಲಾಗುತ್ತದೆ.[೧೨೩] ಈ ಕುಂಚಿಟಿಗರ ಮಹಾಪುರಾಣದ ಆಕರಗಳಾದ ತಾಳೇಗರಿಯ ಕಟ್ಟುಗಳು ಕುಂಚಿಟಿಗರ ಸಮುದಾಯದ ಹಲವರ ಮನೆಗಳಲ್ಲಿ ಪೂಜೆಗೊಳ್ಳುತ್ತಿದ್ದುವು. ಉದಾಹರಣೆಗೆ ಮಧುಗಿರಿ ತಾಲೂಕಿನ ಕಾಟಗೊಂಡನಹಳ್ಳಿಯ ದೊಡ್ಡಕ್ಯಾತಯ್ಯನವರ ಮನೆಯಲ್ಲಿ ಅವರ ತಾತ ಮುತ್ತಾತಂದಿರ ಕಾಲದಿಂದಲೂ ಇಂತಹ ತಾಳೇಗರಿಯ ಕಟ್ಟುಗಳಿಗೆ ಪೂಜೆಯನ್ನು ಮಾಡಲಾಗುತ್ತಿತ್ತು. ಇವುಗಳನ್ನು ಸುಮಾರು ೧೯೬೮ ರಲ್ಲಿ ಉಪಾಧ್ಯಾಯರಾದ ಮಧುಗಿರಿಯ ಎನ್. ನಾರಾಯಣರಾಯರು ಅಧ್ಯಯನ ಮಾಡಿದ್ದು, ಕೆಂಪನಂಜುಂಡ ಕವಿ ರಚಿಸಿದ ಯಕ್ಷಗಾನ ಕೃತಿಗೆ ಇವುಗಳೇ ಆಕರಗಳಾಗಿದ್ದುವು, ಎಂದು ಅಭಿಪ್ರಾಯ ಪಟ್ಟಿದ್ದಾರೆ.[೧೨೪] ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಈ ಮನೆತನದವರು ಇಂದು ತಮ್ಮ ಬಳಿ ಇಂತಹ ಯಾವ ಆಕರಗಳು ಇಲ್ಲವೆಂದು ಹೇಳುತ್ತಾರೆ.

**ಕಥನ** : ಕುಂಚಿಟಿಗರ ಮಹಾಪುರಾಣದಲ್ಲಿ ಪ್ರಸ್ತಾಪಿಸಿರುವಂತೆ, ಕುಂಚಿಟಿಗರ ಮೂಲಪುರುಷನಾದ ಉಂಡೇಯತ್ರಾಯನು ಅಂಡಸಾವಿರ ಉಂಡಸಾವಿರ ಹಸುಗಳ ಒಡೆಯನಾಗಿದ್ದು, ದ್ವಾರಕಾ ಪಟ್ಟಣದ ಪ್ರದೇಶದಲ್ಲಿ ಆಳುತ್ತಿದ್ದನು. ಈತನಿಗೆ ಏಳು ಮಂದಿ ಹೆಣ್ಣು ಮಕ್ಕಳಿದ್ದರು. ಇವರು ತುಪ್ಪ ಮಾರುವ ಕಾಯಕವನ್ನು ಮಾಡುತ್ತಿದ್ದರು. ತುಪ್ಪಕ್ಕಾಗಿ ದ್ವಾರಕಾ ನಗರಕ್ಕೆ ಬಂದ ದಾದಾಶೆಟ್ಟಿ, ಕರೀಮಲ್ಲಶೆಟ್ಟಿ, ದಬ್ಬಳದಶೆಟ್ಟಿ, ಸೋಜಿಗದಶೆಟ್ಟಿ, ಸುಣ್ಣದಶೆಟ್ಟಿ, ಗೋಣಿಶೆಟ್ಟಿ ಎಂಬುವವರು ಉಂಡೇತ್ರಾಯನ ಹೆಣ್ಣುಮಕ್ಕಳ ಸೌಂದರ್ಯದ ಬಗ್ಗೆ ಡೆಲ್ಲಿಯ ಸುಲ್ತಾನನಿಗೆ ತಿಳಿಸಿದ್ದರು. ಇದರಿಂದ ಅವರನ್ನು ವಿವಾಹವಾಗಲು ಡೆಲ್ಲಿಯ ಸುಲ್ತಾನನು ಪೀಡಿಸಿದ್ದನು. ಹೀಗಾಗಿ ಪಶುಪಾಲನಾ ಸಮುದಾಯದ ಇವರು ಉತ್ತರದ ದ್ವಾರಕಾ ನಗರದಿಂದ ದಕ್ಷಿಣದೆಡೆಗೆ ವಲಸೆ ಬಂದರು. ಹೀಗೆ ಬರುವಾಗ ಡೆಲ್ಲಿಯ ಸುಲ್ತಾನನ ಕಡೆವರು ಉಂಡೇತ್ರಾಯನ ಮಗಳಾದ ದೊಡ್ಡಬೈರೇದೇವಮ್ಮಳನ್ನು ಸೆರೆಹಿಡಿದರು.[೧೨೫]

**ಚಾರಿತ್ರಿಕ ವಿಶ್ಲೇಷಣೆ** : ಸಿಂಧೂ ನದಿಯ ಬಲದಂಡೆಯಲ್ಲಿ 'ಉಂಡಬಂಡ' ಎಂಬ ಪಟ್ಟಣವಿದೆ. ಇದನ್ನು 'ಉಂಡ್' ಎಂದೂ ಕರೆಯಲಾಗುತ್ತದೆ. ಈತನು ಈ ಪ್ರದೇಶದ ಆಡಳಿತಗಾರನಾಗಿದ್ದನು.[೧೨೬] ಈ ಅಭಿಪ್ರಾಯದಲ್ಲಿ ಚಾರಿತ್ರಿಕ ಸೂಕ್ಷ್ಮತೆಗಳನ್ನು ಗುರುತಿಸಬಹುದಾಗಿದೆ.

ಕುಂಚಿಟಿಗರ ಮಹಾಪುರಾಣದಲ್ಲಿನ ಕಥನಕ್ಕೆ ಪೂರಕವಾಗಿಯೇ ಚರಿತ್ರೆಯ ಕೆಲವು ಘಟನೆಗಳನ್ನು ಗಮನಿಸಬಹುದಾಗಿದೆ. ೧. ಮಹ್ಮದ್ ಜೈಸಿಯ ಪದ್ಮಾವತ್ ಕೃತಿಯಲ್ಲಿ ಪದ್ಮಿನಿ ವೃತ್ತಾಂತದಂತೆ ಮೇವಾಡದ ಚಿತ್ತೋರ್‌ನ ರಜಪೂತ ರಾಜ ರಾಣಾರತನ್‌ಸಿಂಗ್‌ನ ರಾಣಿ

ಪದ್ಮಿನಿಯನ್ನು ಪಡೆಯಲು ಅಲ್ಲಾವುದ್ದೀನ್‌ಖಿಲ್ಜಿಯು ಯುದ್ಧವನ್ನು ಮಾಡಿದ್ದನು.[೧೨೭] ೨. ಗುಜರಾತ್‌ನ ಅನಿಲವಾಡವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳುತ್ತಿದ್ದ ರಜಪೂತರ ರಾಜಾಕರ್ಣದೇವನ (ರಾಯ್‌ಕರಣ್) ಮೇಲೆ ಅಲ್ಲಾವುದ್ದೀನನ ದಂಡನಾಯಕ ಉಲುಘ್‌ಖಾನ್‌ನು ಆಕ್ರಮಣ ಮಾಡಿದ್ದನು. ಸದರಿ ಯುದ್ಧದಲ್ಲಿ ಸೋತ ರಾಜಾ ಕರ್ಣದೇವನ ಹೆಂಡತಿ ರಾಣಿ ಕಮಲಾದೇವಿಯನ್ನು ಸೆರೆಹಿಡಿದು ಡೆಲ್ಲಿಗೆ ಕೊಂಡೊಯ್ದನು. ಕರ್ಣದೇವ ಮತ್ತು ಅವನ ಮಗಳು ದೇವಲದೇವಿಯರು ದೇವಗಿರಿಯ ರಾಮಚಂದ್ರದೇವನ ಆಶ್ರಯವನ್ನು ಪಡೆದರು ಎಂಬುದು ಚಾರಿತ್ರಿಕ ಅಂಶವಾಗಿದೆ.

ದ್ವಾರಕಾ ನಗರಕ್ಕೆ ಬಂದ ಶೆಟ್ಟಿಗಳ ನಾಮಧೇಯಗಳನ್ನು ಈ ಕೆಳಕಂಡಂತೆ ವಿಶ್ಲೇಷಿಸಲಾಗಿದೆ.[೧೨೮] ದಾದಾಶೆಟ್ಟಿ ಎಂಬುವವನು ದಾದ್ರಾ ಕೇಂದ್ರಾಡಳಿತ ಪ್ರದೇಶದ ವ್ಯಾಪಾರಿಯೆಂದೂ, ಕರೀಮಲ್ಲಶೆಟ್ಟಿ ಎಂಬುವವನನ್ನು ಕರೀಂಉಲ್ಲಾ ಎಂಬ ತುಪ್ಪದ ವ್ಯಾಪಾರಿಯೆಂದೂ, ದಬ್ಬಳದ ಶೆಟ್ಟಿಯು ಗುಜರಾತ್‌ನ ರಾಜಪಿಪ್ಲ ಜಿಲ್ಲೆಯ ದಭೋಲ್ ನಗರದ ವ್ಯಾಪಾರಿಯಾಗಿದ್ದನೆಂದು, ಸೋಜಿಗದ ಶೆಟ್ಟಿಯನ್ನು ರಾಜಸ್ಥಾನದ ಪಾಳಿ ಜಿಲ್ಲೆಯ ಸೋಜಿತ್ ನಗರದಲ್ಲಿ ವ್ಯಾಪಾರಿಯಾಗಿದ್ದನೆಂದೂ, ಸುಣ್ಣದ ಶೆಟ್ಟಿಯನ್ನು ಛತ್ತೀಸ್‌ಗಡದ ವೈಕುಂಟಪುರ ಜಿಲ್ಲೆಯ ಸೊನ್ಹಾಟ್ ನಗರದ ವ್ಯಾಪಾರಿಯೆಂದೂ, ಗೋಣೀಶೆಟ್ಟಿಯನ್ನು ಮಧ್ಯಪ್ರದೇಶದ ಗುಣಾ ಎಂಬ ನಗರದ ವ್ಯಾಪಾರಿಯೆಂದೂ ಗುರುತಿಸಬಹುದಾಗಿದೆ. ಆದರೆ ಇದಕ್ಕೆ ಪೂರಕವಾದ ಚಾರಿತ್ರಿಕ ಆಕರಗಳು ಲಭ್ಯವಿಲ್ಲ.

ಕುಂಚಿಟಿಗರ ಮಹಾಪುರಾಣದಲ್ಲಿ ಉತ್ತರದಿಂದ ದಕ್ಷಿಣದೆಡೆಗೆ ವಲಸೆ ಹೊರಟ ಉಂಡೇತ್ರಾಯನ ವಂಶಸ್ಥರಾದ ನೂರಾ ಎಂಟು ಜಾತಿಗಳು, ಹನ್ನೆರಡು ಕೈವಾಡವನ್ನು ಹೆಸರಿಸಲಾಗಿದೆ. ಇವರಲ್ಲಿ ಮೇದರ ಚೆನ್ನಯ್ಯ, ಹಡಪದ ಅಪ್ಪಣ್ಣ, ಕುಂಬಾರ ಗುಂಡಯ್ಯ, ಮಡಿವಾಳ ಮಾಚಯ್ಯ, ಕಮ್ಮಾರ ನಾಗಲಿಂಗಯ್ಯ, ತಳವಾರ ರಾಮಣ್ಣ, ಬಲಗೈ ಚಿಕ್ಕ, ಎಡಗೈ ಈರ, ಬೇಲಿ ಗೊಲ್ಲ, ಚಂದಮುತ್ತಿ, ಚಿತ್ತಮುತ್ತಿ, ಮಗ್ಗದ ಕುರುಬರನ್ನು ಪ್ರಸ್ತಾಪಿಸಲಾಗಿದೆ.[೧೨೯]

ಇವರಲ್ಲಿ ಮೇದರ ಚೆನ್ನಯ್ಯ, ಹಡಪದ ಅಪ್ಪಣ್ಣರನ್ನು ಶಾಸನೋಕ್ತವಾಗಿ ಉಲ್ಲೇಖಿಸಲಾಗಿದೆ. ಉದಾಹರಣೆಗೆ ಶಾ.ಶಕ ೧೨೯೪ ರಲ್ಲಿ ಅಳ್ಳೂರು ಬಳಿ ನಡೆದ ಕದನದಲ್ಲಿ ಹೊಯ್ಸಳ ಮಹಾಸಾವಂತಾಧಿಪತಿ ಮಾರೆಯನಾಯಕನ ಕುಮಾರ, ದಳಪತಿ ಹಡಪದ ಅಪ್ಪಣ್ಣನೂ, ಹಾಗೂ ಸಕಲಗುಣಸಂಪೂರ್ನ ಚೆಂನಪ್ಪನಾಯಕನು ಶತ್ರುಗಳೊಡನೆ (ಚೋಳ?) ಹೋರಾಡಿ ಮರಣ ಹೊಂದಿದರು. ಎಂಬ ವಿಚಾರವನ್ನು ಎಫಿಗ್ರಾಫಿಯಾ ಕರ್ನಾಟಿಕ ಶಾಸನ ಸಂಪುಟ ೧೨ ತಿಪಟೂರು ಶಾಸನ ಸಂಖ್ಯೆ ೧೦೦ ರಿಂದ ತಿಳಿಯಬಹುದು.

### ೪.೮.೨ ಜಲಧಿ ಬೊಪ್ಪರಾಯ

ತುಮಕೂರು ಜಿಲ್ಲೆಯಲ್ಲಿ ಅಸ್ಥಿತ್ವದಲ್ಲಿರುವ ಜಾತಿಗಳಲ್ಲಿ ವಕ್ಕಲಿಗ ಸಮುದಾಯವೂ ಒಂದು. ವಕ್ಕಲಿಗ ಜಾತಿಯಲ್ಲಿ ಒಂದು ನೂರಕ್ಕೂ ಹೆಚ್ಚು ಉಪಜಾತಿಗಳಿವೆ. ಇವುಗಳಲ್ಲಿ

ಕುಂಚಿಟಿಗ ಎಂಬುದು ಪ್ರಮುಖವಾದುದು. ಕುಂಚಿಟಿಗ ಎಂಬ ಪದದಲ್ಲಿನ ಕುಂಚ ಎಂದರೆ ಕುಚ್ಚು, ಗುಂಪು ಎಂಬರ್ಥವಿದೆ. ಮತ್ತೊಂದು ಮೂಲದಂತೆ ಕಂಬಳಿಯನ್ನು ನೇಯುವ ಕುರುಬರಿಗೆ ಕುಂಚವನ್ನು ಒದಗಿಸುತ್ತಿದ್ದರಿಂದ ಕುಂಚಿಟಿಗ ಎಂಬ ಹೆಸರು ಬಂದಿದೆ ಎಂದೂ ಹೇಳಲಾಗುತ್ತದೆ.[೧೩೦] ಕುಂಚಿಟಿಗ ಉಪಜಾತಿಯಲ್ಲಿ ನಲವತ್ತೆಂಟಕ್ಕೂ ಹೆಚ್ಚು ಬೆಡಗುಗಳಿವೆ. ಇಂತಹ ಒಂದು ಬೆಡಗು 'ಜಲಧೇನರು'. ಕುಂಚಿಟಿಗರ ಮಹಾಪುರಾಣದಲ್ಲಿ ವ್ಯಕ್ತಪಡಿಸಿರುವಂತೆ ಜಲಧೇನರು ಬೆಡಗಿನ ಮೂಲಪುರುಷ ಜಲಧಿ ಬೊಪ್ಪರಾಯ ಎಂಬ ನಂಬಿಕೆಯೂ ಇದೆ.

**ಕಥನ** : ಉತ್ತರದ ದ್ವಾರಕೆಯಿಂದ ದಕ್ಷಿಣದೆಡೆಗೆ ವಲಸೆ ಬಂದ ಗೂರ್ಜರು ಕುಂಚಿಟಿಗರಾಗಿದ್ದಾರೆ ಎಂಬ ನಂಬಿಕೆಯಿದೆ. ಇದರಿಂದಲೇ ಕುಂಚಿಟಿಗರು ಗೂರ್ಜರ ಮೂಲದವರೆಂಬುದಕ್ಕೆ ತುಮಕೂರು ಪ್ರದೇಶದಲ್ಲಿರುವ ಗ್ರಾಮದ ಸ್ಥಳನಾಮಗಳನ್ನು ಪೂರಕವಾಗಿ ಬಳಸಿಕೊಳ್ಳಲಾಗಿದೆ. ಪಾವಗಡ ತಾಲೂಕಿನ ಗುಜ್ಜನಡು, ಗುಜ್ಜಾರಹಳ್ಳಿ, ತುಮಕೂರು ತಾಲೂಕಿನ ಅರೇಗುಜ್ಜನಹಳ್ಳಿ, ಕೊರಟಗೆರೆ ತಾಲೂಕಿನ ಗುಜ್ಜನಹಳ್ಳಿ ಅಲ್ಲದೇ ಪಾವಗಡದ ಅರಸೀಕೆರೆಯ ಗುಜ್ಜಾರಿ ಆಂಜನೇಯಸ್ವಾಮಿಯ ನಾಮಧೇಯವು ಗೂರ್ಜರ ಸ್ಮರಣೆಯಿಂದಲೇ ಬಂದಿವೆ.[೧೩೧]

ಕುಂಚಿಟಿಗರ ಮಹಾಪುರಾಣದಲ್ಲಿ ವ್ಯಕ್ತಪಡಿಸಿರುವಂತೆ ಉತ್ತರದ ದ್ವಾರಕೆಯಿಂದ ದಕ್ಷಿಣದೆಡೆಗೆ ವಲಸೆ ಬಂದ ಉಂಡೇತ್ರಾಯನ ವಂಶಸ್ಥರಿಗೆ ಮಾರ್ಗ ಮಧ್ಯದಲ್ಲಿ ನದಿಯು (ತುಂಗಭದ್ರ?) ಅಡ್ಡಲಾಗಿತ್ತು. ತಮ್ಮನ್ನು ನದಿ ದಾಟಿಸಲು ತಮ್ಮದೇ ಆವಿನಗೂಡಿನ ಹಂಡೇಕುರುಬ ಸಮುದಾಯದ ಜಲಧಿಬೊಪ್ಪರಾಯನನ್ನು ಪ್ರಾರ್ಥಿಸಿದರು.[೧೩೨] ಆಗ ಬೊಪ್ಪರಾಯನು ಗಂಗಾಭವಾನಿಯನ್ನು ಪ್ರಾರ್ಥಿಸಿ ತನ್ನ ಶಿರವನ್ನು ಬಲಿಯಾಗಿ ನೀಡುವ ಮೂಲಕ ಉಂಡೇತ್ರಾಯನ ವಂಶಸ್ಥರಿಗೆ ನದಿಯನ್ನು ದಾಟಲು ಅನುವು ಮಾಡಿಕೊಟ್ಟಿದ್ದನು. ಜಲಧಿ ಬೊಪ್ಪರಾಯನ ಈ ಸಹಾಯಕ್ಕೆ ಕೃತಜ್ಞತಾಪೂರ್ವಕವಾಗಿ ಆತನ ಮುಂಡಕ್ಕೆ ತಮ್ಮ ಮಗಳನ್ನು ವಿವಾಹಮಾಡಿ ಕೊಟ್ಟರೆಂಬ ನಂಬಿಕೆಯಿದೆ. ಈತನ ವಂಶಸ್ಥರೇ ಮುಂದೆ ಜಲಧೇನರ ಕುಂಚಿಟಿಗರಾಗಿದ್ದಾರೆಂಬ ಮೌಖಿಕ ಅಭಿಪ್ರಾಯಗಳಿವೆ. ಹಾಗೂ ಇಂದಿಗೂ ಈ ಕುರಿತ ಮೌಖಿಕ ಸಂಪ್ರದಾಯಗಳು ಅಸ್ತಿತ್ವದಲ್ಲಿವೆ.

**ಚಾರಿತ್ರಿಕ ವಿಶ್ಲೇಷಣೆ** : ಜಲಧಿ ಬೊಪ್ಪರಾಯನ ಕಾಲಮಾನವನ್ನು ನಿಖರವಾಗಿ ದಾಖಲಿಸಲು ಸಾಧ್ಯವಾಗುವುದಿಲ್ಲ. ಸಿಂಧ್‌ನ್ನು ಆಕ್ರಮಿಸಿದ ಅರಬ್ಬರನ್ನು ಉತ್ತರ ಭಾರತದ ಚಿತ್ತೋಡ್‌ನ ಆಡಳಿತಗಾರನಾಗಿದ್ದ 'ಬಪ್ಪರಾವಲ್' ಮತ್ತು ಗೂರ್ಜರ ಪ್ರತಿಹಾರರ ನಾಗಭಟನು ಜೊತೆಯಾಗಿ ಎದುರಿಸಿದರು. ಪದೇ ಪದೇ ನಡೆಯುತ್ತಿದ್ದ ಯುದ್ಧಗಳಿಂದಾಗಿ ಗಂಗಾನದಿಯು ಯಮುನಾ ನದಿಯನ್ನು ಸೇರಿದ ನಂತರ ಮಂದಾಕಿನಿ ಎಂದು ಕರೆಯಲಾಗುವ ಪಾತ್ರ ಪ್ರದೇಶದಲ್ಲಿ ಶಾಂತವಾಗಿ ಹರಿಯುವುದರಿಂದ ಹಡಗುಗಳ ಸಂಚಾರಕ್ಕೆ ಅನುಕೂಲವಾಗಿರುವ

ಈ ಪ್ರದೇಶದಲ್ಲಿರುವ 'ಶೀರ್ಷ' ಎಂಬ ಪಟ್ಟಣವನ್ನು[೧೩೩] ಕಳೆದುಕೊಂಡರೂ ಸಹ ಸಮುದಾಯದ ಜನರ ಆಸ್ತಿ, ಮಾನ, ಪ್ರಾಣ ರಕ್ಷಣೆಯಲ್ಲಿ ಬಪ್ಪರಾವಲ್ ಪ್ರಮುಖ ಪಾತ್ರವನ್ನು ವಹಿಸಿದ್ದನು. ಹೀಗಾಗಿ ಈತನ ಜನಪ್ರಿಯತೆ ಮತ್ತು ಪೂರ್ವಸ್ಮರಣೆಯು ಜಲಧಿ ಬೊಪ್ಪರಾಯನ ಕಥನದ ಹುಟ್ಟಿಗೆ ಕಾರಣವಾಗಿದೆ ಎಂದು ಭಾವಿಸಲಾಗಿದೆ.

ಅಲ್ಲದೇ ಶೀರ್ಷ ಪದದ ಅಪಭ್ರಂಶದಿಂದಾಗಿ ಶಿರವನ್ನು ಬಲಿಯಾಗಿ ನೀಡಿ ಗೂರ್ಜರು ದಕ್ಷಿಣದೆಡೆಗೆ ವಲಸೆ ಬರುವ ಸಂದರ್ಭದಲ್ಲಿ ಅವರಿಗೆ ಬೊಪ್ಪರಾಯನು ಸಹಾಯ ಮಾಡಿದನು.

## ೪.೮.೩ ಬಂದ್ಕುಂಟೆ ಈರುಚಿಕ್ಕಣ್ಣ

**ಕಥನ** : ಸಿರಾ ತಾಲೂಕಿನ ಬಂದ್ಕುಂಟೆ ಗ್ರಾಮದ ಗೊಲ್ಲರ ತಿಮ್ಮವ್ವನ ಮಗ ಈರುಚಿಕ್ಕಣ್ಣನು ಪಶುಪಾಲಕನಾಗಿದ್ದನು. ಈತನ ಪಶುಸಂಪತ್ತನ್ನು ಕಂಡು ಬೇಡರ ಏಳು ಜನ ಸಹೋದರರ ಒಬ್ಬಳೇ ತಂಗಿಯಾದ ಓಬವ್ವಳು ಪ್ರೀತಿಯನ್ನು ಬೇಡಿದಳು. ಇದಕ್ಕೆ ಪೂರಕವಾಗಿ ಈ ಕೆಳಗಿನ ಪದ್ಯವಿದೆ.

ಆವೀನಾ ಗೂಡೀಗೆ ಹೋದಾಳು ಬೇಡರ ಹುಡುಗಿ
ಹುಟ್ಟಿದ ಸೀರೆ ಕಳಪಿಳಿಯೇ। ಮಾಡ್ಕಂಡು
ದಾಯ್ವಾನಾ ಡಾಕೆ ಕರೆದಾಳು॥ [೧೩೪]

ಬಂದಕುಂಟೆ ಈರುಚಿಕ್ಕಣ್ಣನಲ್ಲಿ ಓಬವ್ವಳು ತನ್ನ ಪ್ರೀತಿಯನ್ನು ಬೇಡಿದಾಗ ಈ ಮುಂದಿನ ಪದ್ಯದಲ್ಲಿ ವ್ಯಕ್ತವಾಗಿರುವ ರೀತಿಯಲ್ಲಿ ಬಂದ್ಕುಂಟೆ ಈರಣ್ಣನು ಆಕೆಗೆ ಬುದ್ಧಿವಾದವನ್ನು ಹೇಳಿದನು.

ಕಾಸಿನುಂಡೆಯಂಗೆ ಕರುವಳು ಬೇಡರ ಹುಡುಗಿ
ಯಾಕೆ ನಿಂತಿದ್ದಿ ಗೆಲುವಿಲ್ಲ। ಜೀವಾಕೆ
ಆಸೆ ಬೀಳೋರ ಮಗನಲ್ಲ॥ [೧೩೫]

ಇದನ್ನು ತಿಳಿದ ಈರುಚಿಕ್ಕಣ್ಣನಿಗೆ ಆತನ ತಾಯಿ, ಬಂಧು, ಬಳಗವು ಬೇಡರ ಓಬವ್ವಳ ಸಂಗವನ್ನು ಮಾಡಬಾರದೆಂದು ಹೇಳುತ್ತಾರೆ. ಆದರೆ ಅಂತಿಮವಾಗಿ ಆತನು ಆಕೆಯ ಪ್ರೇಮವನ್ನು ಸಮ್ಮತಿಸುತ್ತಾನೆ. ತನ್ನ ತಾಯಿ, ಬಂಧುಗಳೆಲ್ಲರನ್ನೂ ಬಿಟ್ಟು ಓಬವ್ವಳ ಮೋಹಕ್ಕೆ ಮಾರು ಹೋದ ಈರುಚಿಕ್ಕಣ್ಣನು ಹಿಂತಿರುಗಿ ಬರಲಿಲ್ಲವೆಂದು ಕಾವ್ಯದಲ್ಲಿ ಹಾಡಲಾಗಿದೆ.

ಬೇಡಾರ ಮನೆಗೆ ಹೋಗದಿರೋ ಸಿಕ್ಕಣ್ಣ
ಮೋಸಾಗ್ಯೆದಾವೋ ಕತ್ತಾಲು। ಸೀರ್ಯಾದ
ನಡು ಪ್ಯಾಟ್ಯಾಗೂ ತಲಿಯಾ ಹೊಡುದಾರೊ॥ [೧೩೬]

ಈರುಚಿಕ್ಕಣ್ಣನು ಹತ್ಯೆಯಾಗಿರಬೇಕೆಂದು ಭಾವಿಸಿದ ಜನಪದ ಸಮುದಾಯವು ಆತನನ್ನು ಬಂದ್ಕುಂಟೆ ಊರಬಾಗಿಲಿನಲ್ಲಿ ದೈವವಾಗಿ ಆರಾಧಿಸತೊಡಗಿದರು.

ಈರಾನ ತಲಿಯಾಗಿ ಓರೇಲಿ ಮೆರುದಾವೊ
ಈರುಚಿಕ್ಕಣ್ಣನ ತಲೆಯೋಗಿ। ಬಂದ್ಕುಂಟೆ

ಊರ್ಬಾಗ್ಲಾಗೆ ಮೆರುದಾವೊ॥ [೧೩೭]

ಈರುಚಿಕ್ಕಣ್ಣನನ್ನು ಹತ್ಯೆ ಮಡಲಾಯಿತು ಎಂದು ನಂಬಿರುವ ಸ್ಥಳದಲ್ಲಿ ಇಂದಿಗೂ ಬಂದ್ಕುಂಟೆ ಕೆರೆಯಿದೆ. ಶಿರಚ್ಛೇದದ ನಂತರ ಈತನ ತಲೆಯು ಬಂದ್ಕುಂಟೆಯ ಊರಬಾಗಿಲ ಮುಂದೆಯೂ, ಮುಂಡವು ಬಂದ್ಕುಂಟೆ ಕೆರೆಯಲ್ಲಿಯೂ ಬೀಳುತ್ತದೆ. ದೇಹದಿಂದ ರಕ್ತದ ಹೊಳೆಯೇ ಹರಿದು ಕೆರೆಯು ರಕ್ತದ ಮಡುವಾಗುತ್ತದೆ. ಇದರಿಂದಾಗಿ ಇಂದಿಗೂ ಈ ಕೆರೆಯ ನೀರು ರಕ್ತವರ್ಣದಿಂದ ಕಾಣುತ್ತದೆ ಎಂಬುದು ಈ ಪ್ರದೇಶದ ಜನರ ನಂಬಿಕೆಯಾಗಿದೆ. ಆದರೆ ಪ್ರಾಕೃತಿಕ ಸ್ವರೂಪವನ್ನು ಗಮನಿಸಿದಾಗ ಇಲ್ಲಿನ ಮಣ್ಣು ಕಡುಗೆಂಪು ವರ್ಣದಿಂದ ಕೂಡಿರುವುದರಿಂದ ಈ ಕೆರೆಯ ನೀರು ಕೆಂಪು ವರ್ಣದಿಂದ ಕೂಡಿದೆ ಎಂದು ತಿಳಿಯಬಹುದಾಗಿದೆ.

ಕಾವ್ಯದಲ್ಲಿ ಅಂತರ್ಜಾತಿ ವಿವಾಹದ ಪರಿಕಲ್ಪನೆಯಿದೆ. ಹೀಗಾಗಿ ಬಂದ್ಕುಂಟೆ ಈರುಚಿಕ್ಕಣ್ಣನು ಅಂತರ್ಜಾತಿ ವಿವಾಹದ ಪರಿಣಾಮವಾಗಿ ಬಂಧು, ಬಳಗವನ್ನು ತೊರೆದು ಬದುಕಿದ ರೀತಿಯನ್ನು ತಿಳಿಯಬಹುದು. ಆಸ್ತಿಯ ಕಾರಣವು ಸಮಾಜದಲ್ಲಿ ಸೃಷ್ಟಿಸಿದ ಸಂಘರ್ಷಗಳನ್ನು ಈ ಕಾವ್ಯದಲ್ಲಿ ಗುರುತಿಸಲಾಗಿದೆ.

### ೪.೮.೪ ಬರಗೂರು ಈರಮ್ಮ

**ಕಥನ** : ಸಿರಾ ತಾಲೂಕಿನ ಹುಲಿಕುಂಟೆ ಹೋಬಳಿಯ ತಡಕಲೂರಿನ ಕುಂಚಿಟಿಗರ ಅಳುವಿನೋರ ಬೆಡಗಿನ ಶಿವನೇಗೌಡ ಮತ್ತು ತಿಮ್ಮಾಜಮ್ಮ ದಂಪತಿಗಳಿಗೆ ದೊಡ್ಡಬೊಮ್ಮಣ್ಣ, ಬೊಮ್ಮಣ್ಣ, ಶಿವನಣ್ಣ, ಗಂಗಣ್ಣ, ಈರಣ್ಣ ಎಂಬ ಐವರು ಗಂಡುಮಕ್ಕಳ ನಂತರ ಈರಮ್ಮ ಎಂಬ ಹೆಣ್ಣು ಮಗಳಿದ್ದಳು. ತನ್ನ ಮಗಳು ಈರಮ್ಮನನ್ನು ಪ್ರೀತಿಯಿಂದ ಸಾಕಿ ಬೆಳೆಸಿದ್ದು ಬಾಲ್ಯ ವಿವಾಹವನ್ನು ಮಾಡಲು ಮನಸಿಲ್ಲದಿದ್ದರೂ ಗಂಡಿನ ಮನೆಯವರ ಭರವಸೆಯಂತೆ ಈಕೆಯನ್ನು ಮಂಗಳವಾಡದ ಕುಂಚಿಟಿಗರ ಆವಿನೋರ ಬೆಡಗಿನ ಬೊಮ್ಮಲಿಂಗಯ್ಯನೊಂದಿಗೆ ಸಂಪ್ರದಾಯದಂತೆ ಬಾಲ್ಯವಿವಾಹ ಮಾಡಲಾಗಿತ್ತು.

ಹಿರಿಯಳು ನಿಮ್ಮ ಮಗಳಿಗೆ ಕೀರಿಗೆ ಉಡಲು ಕಲಿಸೇವು
ಹರಿವಾಣ ಬೆಳಗೋ ಕಲಿಸೇವು। ತಡಕಲೂರ
ದೊರಿಗಾಳು ಮಗಳ ಬಿಡಲಿಲ್ಲ॥ [೧೩೮]

ವಿವಾಹವಾದ ಈರಮ್ಮ ತನ್ನ ಅತ್ತೆ, ಮಾವಂದಿರು, ನಾದಿನಿಯರು ನೀಡಿದ ಕಿರುಕುಳವನ್ನು ಸಹಿಸಿಕೊಂಡು ಬದುಕಬೇಕಾಯಿತು. ಈಕೆಯು ಹೊಲದಲ್ಲಿ ಹತ್ತಿಯನ್ನು ಬಿಡಿಸಲು ಹೋದಾಗ ಈಕೆಗೆ ಬಾಯಾರಿಕೆಯಾಗಿ ಕುಡಿಯಲು ನೀರಿಲ್ಲದಾಗ ನೀರಿಗಾಗಿ ಹಳ್ಳದಲ್ಲಿ ಚಿಲುಮೆಯನ್ನು ತೋಡುತ್ತಾಳೆ. ಈ ಚಿಲುಮೆಯಲ್ಲಿ ತನ್ನ ಗಂಡ ಬೊಮ್ಮಯ್ಯಲಿಂಗನು ಮಡಿದಿರುವ ಮತ್ತು ಆತನ ಸಂಗಡವಿದ್ದ ನಾಯಿಯ ಮುಖವು ರಕ್ತಸಿಕ್ತವಾಗಿದ್ದ ಚಿತ್ರವನ್ನು ಕಾಣುತ್ತಾಳೆ. ಆಕೆಯು ನೋಡಿದ ಚಿತ್ರವನ್ನು ಕಾವ್ಯದಲ್ಲಿ ಬೊಮ್ಮಲಿಂಗಯ್ಯನ ಸಾವಿನ

ರೂಪದಲ್ಲಿ ಚಿತ್ರಿಸಲಾಗಿದೆ. ಇದೇ ಸ್ವರೂಪದ ಜನಪದ ಕಥನವು 'ಈರುನಾಗಮ್ಮನ ಕಾವ್ಯ'ದಲ್ಲಿಯೂ ಕಂಡು ಬರುತ್ತದೆ. ಇದರಿಂದಾಗಿ ಒಂದು ಸೀಮಿತ ಭೌಗೋಳಿಕ ವ್ಯಾಪ್ತಿಯಲ್ಲಿ ಪಾತ್ರಧಾರಿಗಳು ಬೇರೆಯಾಗಿದ್ದರೂ ಒಂದೇ ಮಾದರಿಯ ಕಥನಗಳು ಕಂಡುಬರುವುದನ್ನು ಗುರುತಿಸಬಹುದಾಗಿದೆ.

ಮಹಾಸತಿ ಈರಮ್ಮಳು ಹಲವು ಸ್ಥಳೀಯ ದೇವತೆಗಳನ್ನೆಲ್ಲಾ ನೆನೆಯುತ್ತಾ ತನ್ನ ಗಂಡನ ಶವದ ಜೊತೆ ಕೊಂಡವೇರಲು ಸಿದ್ಧಳಾಗುತ್ತಾಳೆ. ಇದನ್ನು ತಿಳಿದ ಆಕೆಯ ತವರುಮನೆಯವರಲ್ಲಿ ಶೋಕವು ಮಡುಗಟ್ಟುತ್ತದೆ. ಈ ಸಂದರ್ಭದಲ್ಲಿ ಸಮಾಜದ ಆಚರಣೆಗೆ ಬಲಿಯಾಗಬೇಕಾದ ಈರಮ್ಮ ತನ್ನ ಮಗನಾದ ಉದ್ದಈರಣ್ಣನಿಗೆ ಬುದ್ಧಿವಾದವನ್ನು ಹೇಳುತ್ತಾಳೆ. ಇದು ಸಮುದಾಯದ ನೈತಿಕ ಮೌಲ್ಯಗಳ ಪ್ರತೀಕದಂತೆ ತೋರುತ್ತದೆ. ಗರ್ಭಿಣಿಯಾಗಿದ್ದ ಈರಮ್ಮ ಕಟ್ಟುಪಾಡುಗಳಿಗೆ ಬಲಿಯಾಗುತ್ತಾಳೆ. ಊರವರು ಮತ್ತು ಬಂಧುಗಳ ಈಕೆಯನ್ನು ಮಹಾಸತಿ ಎಂದು ಭಾವಿಸಿ ಪೂಜಿಸುತ್ತಾರೆ. ಈ ಸನ್ನಿವೇಶದಲ್ಲಿ ಸತಿಸಹಗಮನ ಪದ್ಧತಿಯ ಆಚರಣೆಗಳನ್ನು ವಿವರವಾಗಿ ಜನಪದರು ಮೌಖಿಕ ಕಾವ್ಯಗಳಲ್ಲಿ ಹಾಡುತ್ತಾರೆ. ಇದು ಈ ಪ್ರದೇಶದಲ್ಲಿ ಇದ್ದಂತಹ ಸತಿಪದ್ಧತಿಯ ಪ್ರಾತಿನಿಧಿಕ ಕಾವ್ಯವಾಗಿ ಮೂಡಿಬಂದಿದೆ.

### ೪.೮.೫ ಬಳ್ಳಕಟ್ಟೆ ಈರಣ್ಣ

**ಕಥನ** : ಪಾವಗಡ ತಾಲೂಕಿಗೆ ಹೊಂದಿಕೊಂಡಂತೆ ಆಂಧ್ರಪ್ರದೇಶದ ಹೆಂಜೇರು ಗ್ರಾಮದ ಸಮೀಪದಲ್ಲಿ ಬಳ್ಳಕಟ್ಟೆ ಎಂಬ ಗ್ರಾಮವಿದೆ. ಪಶುಪಾಲಕನಾಗಿದ್ದ ಈರಣ್ಣನು ಹುಲಿಕುಂಟೆ, ಶಿವುರ, ಹೆಂಜೇರುಗಳ ಪರಿಸರದ ಕಾವಲುಗಳಲ್ಲಿ ತನ್ನ ದನಗಳನ್ನು ಮೇಯಿಸುತ್ತಿದ್ದನು.

ನಿಡಗಲ್ಲು ಪ್ರದೇಶದಲ್ಲಿ ಹುಲ್ಲುಗಾವಲುಗಳು ಸೊಂಪಾಗಿ ಬೆಳೆದಿವೆ ಎಂದು ತಿಳಿದು ಕೊಂಡನು. ನಿಡಗಲ್ಲು ಕಾವಲುಗಳಲ್ಲಿ ತನ್ನ ದನ ಕರುಗಳನ್ನು ಚೆನ್ನಾಗಿ ಮೇಯಿಸಬಹುದು. ಎಂಬ ತನ್ನ ಇಂಗಿತವನ್ನು ತನ್ನ ತಾಯಿಯಲ್ಲಿ ವ್ಯಕ್ತಪಡಿಸಿದನು. ಹಾಗೂ ಆಕೆಯ ಅನುಮತಿಯನ್ನು ಬೇಡಿದನು. ಅದರಂತೆ ತಾಯಿಯು ಬುತ್ತಿಯನ್ನು ಕಟ್ಟಿಕೊಟ್ಟು ಈರಣ್ಣನನ್ನು ಬೀಳ್ಕೊಡುವಾಗ ಈ ಕೆಳಗಿನಂತೆ ಸಲಹೆಗಳನ್ನು ನೀಡಿದಳು

ನಿಲ್ಲು ನಿಲ್ಲೆಂದಾರೆ ನಿಲ್ಲದಿರೋ ಈರಣ್ಣ
ನಿಂತೆಜ್ಜೆಗೈತೋ ನಿಡುಗಲ್ಲು। ಬ್ಯಾಡರು
ನಿಲ್ಲಿಸಿ ತಲೆಯ ಹೊಡುದಾರು॥
ಬಗ್ಗು ಬಗ್ಗೆಂದರೆ ಬಗ್ಗದಿರೋ ಈರಣ್ಣ
ಕೈಮಗ್ಗುಲಾಗೈತೋ ನಿಡುಗಲ್ಲು। ಬ್ಯಾಡರು
ಬಗ್ಗೀಸಿ ತಲೆಯ ಹೊಡುದಾರು॥[೧೩೯]

ಎಂಬಂತಹ ತಾಯಿಯ ಸಲಹೆಯನ್ನು ಪಡೆದ ಈರಣ್ಣನು ನಿಡಗಲ್ಲು ಕಾವಲಿನೆಡೆಗೆ ಹೊರಟನು. ಈತನ ಗಣೆಯ ನಾದಕ್ಕೆ ಮನಸೋತ ನಿಡಗಲ್ಲಿನ ಮಾಳಮ್ಮ ಎಂಬುವಳು

ಈತನಲ್ಲಿ ಪ್ರೇಮವನ್ನು ನಿವೇದಿಸಿಕೊಂಡಳು. ಅದರಂತೆ ಆಕೆಯ ಸಂಗವನ್ನು ಮಾಡಿದನು. ಒಮ್ಮೆ ಈರಣ್ಣ ಮತ್ತು ಮಾಳಮ್ಮ ಸರಸ ಸಲ್ಲಾಪದಲ್ಲಿರುವಾಗ ನಿಡಗಲ್ಲು ನಾಯಕರು ಈರಣ್ಣನ ದನಗಳ ಅಂದಕ್ಕೆ ಮನಸೋತು ಅವುಗಳನ್ನು ವಶಮಾಡಿಕೊಳ್ಳುವ ಸಂಚನ್ನು ರೂಪಿಸಿದ್ದರು. ಅದರಂತೆ ಈರಣ್ಣನ ದನಗಳು ತಮ್ಮ ಬೆಳೆಯನ್ನು ಮೇಯ್ದಿವೆ ಎಂಬ ಆರೋಪವನ್ನು ಮಾಡಿ ಈತನ ತಲೆಯನ್ನು ಕಡಿದರು. ಆದರೆ ಈರಣ್ಣನು ನೆಲಕ್ಕೆ ಬೀಳದೆ ತನ್ನ ಗಣೆಯೊಂದಿಗೆ ರುಂಡದಲ್ಲಿ ಹಿಮ್ಮುಖವಾಗಿ ನಡೆಯುತ್ತಾ ಶತೃಗಳನ್ನು ಹಿಮ್ಮೆಟ್ಟಿಸಿದನು. ಅಂತಿಮವಾಗಿ ಗಿಡವೊಂದಕ್ಕೆ ಎಡವಿ ಬಿದ್ದನು. ಈರಣ್ಣನು ಎಡವಿಬಿದ್ದ ಸ್ಥಳಕ್ಕೆ ತನ್ನ ದನಗಳು, ಬಂಧು, ಬಳಗವೆಲ್ಲವೂ ಆಗಮಿಸಿತು. ಈತನು ತನ್ನ 'ನಡೆತೆ ಕೆಟ್ಟಿದೆ' ಎಂದು ಹೇಳಿ, ಇಲ್ಲಿಯೇ ತನ್ನನ್ನು ಸಮಾಧಿ ಮಾಡುವಂತೆ ವಿನಂತಿಸಿಕೊಂಡನು. ಅದರಂತೆಯೇ ಬಳ್ಳಕಟ್ಟೆಯ ಊರಿನ ಹೊರಭಾಗದಲ್ಲಿ ಬೇವಿನ ಮರಗಳ ನೆರಳಿನಲ್ಲಿ ಮಂಟಪವನ್ನು ಕಟ್ಟಲಾಗಿದೆ.

> ಅಣ್ಣಾ ದೈವಾಗು। ಅಣ್ಣಯ್ಯ ದೈವಾಗು
> ಎಣ್ಣೆ ನೊಯ್ದಂಗೆ ಬೆವತೇವು। ಬೆಂಡಾದೇವು
> ಬೇವಿನ ಮರದೀರ ದೈವಾಗು॥ [೧೪೦]

ಆವರಣವನ್ನು ಹೊಂದಿರುವ ಈ ಮಂಟಪದಲ್ಲಿ ಕಲ್ಲಿನ ಮೂರು ಶಿಲೆಗಳಿವೆ. ಮಧ್ಯದ ಶಿಲೆಯನ್ನು ಈರಣ್ಣನೆಂದೇ ಆರಾಧಿಸಲಾಗುತ್ತಿದೆ. ಪಶ್ಚಿಮಾಭಿಮುಖವಾಗಿರುವ ಈ ಮಂಟಪದಲ್ಲಿ ಗಣೆ, ಕತ್ತಿಯಂತಹ ಅಲಗನ್ನು ಭಕ್ತಿಭಾವದಿಂದ ಪೂಜಿಸಲಾಗುತ್ತದೆ. ಹಾಗೂ ಈ ಕೆಳಗಿನಂತೆ ಹಾಡಲಾಗುತ್ತದೆ.

> ಅಪ್ಪಾ ದೈವಾಗು। ಅಪ್ಪಯ್ಯ ದೈವಾಗು
> ತುಪ್ಪ ನೊಯ್ದಂಗೆ ಬೆವತೇವು। ಬೆಂಡಾದೇವು
> ಅಪ್ಪಾ ಈರಣ್ಣ ದೈವಾಗು॥ [೧೪೧]

### ೪.೮.೬ ಭೀಮಾಸತಿ

**ಕಥನ** : ಭೀಮಾಸತಿ ಮತ್ತು ಆಕೆಯ ಪತಿ ತೀಥಾರಾಜಸ್ವಾಮಿ ದೇವಾಲಯವು ಚಿಕ್ಕನಾಯಕನಹಳ್ಳಿ ತಾಲೂಕಿನ ಹಂದನಕೆರೆ ಹೋಬಳಿಯ ದೊಡ್ಡೆಣ್ಣೆಗೆರೆ ಬಳಿಯಿದೆ. ಇದು ಲಂಬಾಣಿ ಜನಾಂಗದವರು ಆರಾಧಿಸುವ ದೈವಗಳಾಗಿವೆ. ಈ ದೈವಗಳ ಕುರಿತು ಕಥನವನ್ನು ಹೇಳಲಾಗುತ್ತದೆ.[೧೪೨] ಲಂಬಾಣಿ ಸ್ಥಳೀಯ ಭಾಷೆಯಲ್ಲಿ ಭೀಮಾಸತಿಯ ಕಥನವು ವಿಶೇಷವಾಗಿ ಮೂಡಿಬಂದಿದೆ. ಅದರಂತೆಯೇ ಈಗಿನ ಹೊಸದುರ್ಗ ತಾಲ್ಲೂಕಿನ ಗೊಲ್ಲರಹಟ್ಟಿ ತಾಂಡ್ಯದ ತೀಥಾರಾಜನಿಗೂ ಕಡೂರು ತಾಲೂಕಿನ ತಂಗಲಿ ಗ್ರಾಮದ ಭೀಮಾಸತಿಗೂ ವಿವಾಹವಾಗುತ್ತದೆ. ಕೆಲಕಾಲ ಇವರ ದಾಂಪತ್ಯವು ಸುಖ, ಸಂತೋಷದಿಂದ ನಡೆದಿತ್ತು. ಒಮ್ಮೆ ತೀತಾರಾಜನಿಗೂ ಆತನ ತಂದೆ ಈಶ್ವರನಾಯಕನಿಗೂ ವ್ಯಾಜ್ಯವಾಗಲು, ಇದರಿಂದ ನೊಂದುಕೊಂಡ ತೀಥಾರಾಜನು ಕತ್ತಿಯಿಂದ ತನ್ನನ್ನು ತಾನೇ ಇರಿದುಕೊಂಡು

ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ. 'ಬಲಿಯಾ' ಎಂದು ಕರೆಯಲಾಗುವ ತೋಳುಪಟ್ಟಿಯು ಕೆಳಗೆ ಬೀಳುವುದು ಇದನ್ನು ಭೀಮಾಸತಿಯು ಆಪತ್ತಿನ ಗಂಡಾಂತರದ ಪ್ರತೀಕ ಎಂದು ತಿಳಿಯುತ್ತಾಳೆ. ಇದರಿಂದ ತನ್ನ ಗಂಡನಿಗೆ ಆಪತ್ತು ಒದಗಿರಬೇಕೆಂದು ಭಾವಿಸಿ ಭೀಮಾಸತಿಯು ತನ್ನ ಪತಿಯನ್ನು ಹುಡುಕುವ ಪ್ರಯತ್ನದಲ್ಲಿದ್ದಾಗ ಕೊಟ್ಟಿಗೆಯಲ್ಲಿ ಹೆಣವಾಗಿ ಬಿದ್ದಿರುವ ತೀಥಾರಾಜನ ಶವವನ್ನು ಕಂಡು ಶೋಕಭರಿತಳಾಗುತ್ತಾಳೆ. ಗಂಡನ ಶವವನ್ನು ಅಂತ್ಯಸಂಸ್ಕಾರ ಮಾಡಲು ಮುಂದಾದಳು. ಆದರೆ ಯಾರೂ ಸಹ ಅಂತ್ಯ ಸಂಸ್ಕಾರಕ್ಕೆ ಭೂಮಿಯನ್ನು ನೀಡಲಿಲ್ಲ. ಇದರಿಂದಾಗಿ ತುಂಡು ಭೂಮಿಗಾಗಿ ಊರೂರು ಅಲೆಯುತ್ತಾಳೆ. ಕೊನೆಗೆ ಚಿಕ್ಕನಾಯಕನಹಳ್ಳಿಯ ದೊಡ್ಡಣ್ಣೇಗೆರೆಗೆ ಬರುತ್ತಾಳೆ.

ಇಲ್ಲಿನ ಊರಿನ ಗೌಡನನ್ನು ಭೂಮಿಗಾಗಿ ಕೇಳಿಕೊಳ್ಳುತ್ತಾಳೆ. ಹನ್ನೆರಡು ವರ್ಷಗಳಿಂದ ಮಕ್ಕಳಿಲ್ಲದ ಗೌಡನು, ಮಕ್ಕಳ ಫಲವನ್ನು ಬೇಡುತ್ತಾನೆ. ಭೀಮಾಸತಿಯು 'ಗಂಡು ಸಂತಾನವನ್ನು ನೀಡುವ' ಅಭಯವನ್ನು ನೀಡುತ್ತಾಳೆ. ಈಕೆಯ ಭರವಸೆಯನ್ನು ಸಂದೇಹಿಸಿದ, ಗೌಡನಿಗೆ ಶವ ಸಂಸ್ಕಾರದ ಮಾರನೇ ದಿನ ಬೂದಿಯಲ್ಲಿ ನಿಂಬೆಹಣ್ಣು ದೊರೆಯುತ್ತದೆ. ಅದೇ ಸಾಕ್ಷಿ ಎಂಬ ವಿಚಾರವನ್ನು ಹೇಳುತ್ತಾಳೆ. ಗಂಧದ ಸೌದೆಯಿಂದ ಚಿತೆ ಸಿದ್ಧವಾಗುತ್ತದೆ. ಗಂಡನ ಶವದ ಜೊತೆಯಲ್ಲಿ ತಾನೂ ಚಿತೆಗೆ ಹಾರುತ್ತಾಳೆ. ಸತಿಸಹಗಮನದ ಮಾರನೇ ದಿನ ಆ ಬೂದಿಯನ್ನು ಪರೀಕ್ಷಿಸಲಾಗುತ್ತದೆ. ಅದರಲ್ಲಿ ನಿಂಬೆಹಣ್ಣು ದೊರೆಯುತ್ತದೆ. ಭೀಮಾಸತಿಯು ಹೇಳಿದಂತೆಯೇ ಗೌಡ ದಂಪತಿಗಳಲ್ಲಿ ಒಂದು ಗಂಡು ಮಗುವಿನ ಜನನವಾಗುತ್ತದೆ.

ಭೀಮಾಸತಿಯ ಅತ್ತೆಯಾದ ಜಾಡಿಸೀತಾಬಾಯಿಯು ಪಶುಪಾಲಕಿಯಾಗಿದ್ದು, ಆಕೆಯ ದನಕರುಗಳಿಗೆ ರೋಗ ಬಂದು ತೊಂದರೆಗೆ ಒಳಗಾಗುತ್ತವೆ. ಇದಕ್ಕೆ ಕಾರಣವನ್ನು ಯೋಚಿಸಿದ ಅತ್ತೆಯು ನನ್ನ ಸೊಸೆಯ ಶಾಪವಿರಬೇಕೆಂದು ಭಾವಿಸಿ ದೊಡ್ಡಣ್ಣೇಗೆರೆಗೆ ಬಂದು ತನ್ನ ಸೊಸೆ ಭೀಮಾಸತಿಯು ಸತಿ ಸಹಗಮನವಾದಂತಹ ಸ್ಥಳದಲ್ಲಿ ಮೂರ್ತಿಯನ್ನು ಪ್ರತಿಷ್ಠಾಪಿಸಿ ಮಣ್ಣಿನ ದೇವಾಲಯವನ್ನು ನಿರ್ಮಿಸುವ ಮೂಲಕ ಸೊಸೆಯನ್ನು ಪೂಜಿಸುತ್ತಾಳೆ. ಹಾಗೂ ಒಳಿತು ಮಾಡುವಂತೆಯೂ, ಪಶುಗಳ ರೋಗವನ್ನು ವಾಸಿ ಮಾಡುವಂತೆಯೂ ಪ್ರಾರ್ಥಿಸುತ್ತಾಳೆ. ಇದರಿಂದಾಗಿ ದನ ಕರುಗಳ ಕಾಯಿಲೆಯು ವಾಸಿಯಾಯಿತೆಂಬುದು ಜನರ ನಂಬಿಕೆಯಾಗಿದೆ. ಅತ್ತೆಯಿಂದ ಮಹಾಸತಿ ಭೀಮಾಳ ಪೂಜೆಯನ್ನು ಪ್ರಾರಂಭಿಸಿ, ಈಕೆಯನ್ನು ಜನರು ಅಸಾಮಾನ್ಯಳೆಂದು ಭಾವಿಸಿ ಆರಾಧಿಸುತ್ತಿದ್ದಾರೆ.

ಭೀಮಾಸತಿಯ ದೇವಾಲಯದ ಆವರಣದಲ್ಲಿ ಸಪ್ತ ಸಹೋದರಿಯ ಶಿಲ್ಪಗಳಿವೆ. ಭೀಮಾಸತಿಯ ಮೂಲವಿಗ್ರಹದ ಎಡಭಾಗದಲ್ಲಿ ತೀಥಾರಾಜನ ಶಿಲ್ಪವಿದೆ. ಈಕೆಯು ಸಹಗಮನ ಮಾಡುವ ಕಾಲದಲ್ಲಿ ಆಕೆ ಗರ್ಭಿಣಿಯಾಗಿದ್ದಳಂತೆ ಆಗ ತನ್ನ ಹೊಟ್ಟೆಯೊಳಗಿನ ಪಿಂಡವನ್ನು ತೆಗೆದು ಹಾಕಿ ಸಹಗಮನ ಮಾಡಿದಳಂತೆ. ಆ ಪಿಂಡವನ್ನು ಊರ ಹೊರಗೆ

ಸಂಸ್ಕಾರ ಮಾಡಲಾಗಿದೆ. ಇಂದಿಗೂ ಭೀಮಾಸತಿ ದೇವಾಲಯಕ್ಕೆ ಬಂದ ಭಕ್ತರು ಆ ಪಿಂಡವನ್ನು ಅಂತ್ಯ ಸಂಸ್ಕಾರ ಮಾಡಿದ ಸ್ಥಳಕ್ಕೆ ಹೋಗಿ ಚಿಕ್ಕಕಲ್ಲನ್ನು ಗುಡ್ಡೆಗೆ ಎಸೆಯುವಂತಹ 'ಕಲ್ಯಾಣ' ವನ್ನು ಮಾಡುತ್ತಾರೆ. ಗರ್ಭಿಣಿಯಾಗಿದ್ದ ಭೀಮಾಸತಿಯು ಸಹಗಮನ ಹೊಂದಿದ್ದರಿಂದ ಗರ್ಭಿಣಿ ಸ್ತ್ರಿಯರು ಈ ದೇವಾಲಯದ ಒಳಗೆ ಹೋಗಬಾರದೆಂಬ ನಿಷೇಧಿತ ನಂಬಿಕೆಯಿದೆ.

ಶಿವರಾತ್ರಿ ಹಬ್ಬವಾದ ನಂತರದ ಹೋಳಿ ಹುಣ್ಣಿಮೆಯಂದು (ಸಾಮಾನ್ಯವಾಗಿ ಶುಕ್ರವಾರದಂದು) ಜಾತ್ರೆಯು ಪ್ರಾರಂಭವಾಗುತ್ತದೆ. ಗ್ರಾಮದೇವತೆ ಕರಿಯಮ್ಮದೇವಿಯ ಪೂಜೆ, ಹಾಗೂ ನಂದಾದೀಪವನ್ನು ಬೆಳಗಿಸಲಾಗುತ್ತದೆ. ಎರಡನೇ ದಿನ ಪುಣ್ಯಾರ್ಚನೆ ನಡೆಯುತ್ತದೆ. ಭೀಮಾಸತಿ ದೇವಾಲಯದ ಮುಂದಿರುವ ಸಪ್ತಸತಿಯರಿಗೆ ವಿಶೇಷ ಪೂಜೆಯು ನಡೆಯುತ್ತದೆ. ನಂತರ ಪಂಚಾಮೃತ ಅಭಿಷೇಕ, ಕುಂಕುಮಾರ್ಚನೆ ಪೂಜಾಕಾರ್ಯ ಕ್ಷೀರಾಭಿಷೇಕ, ಗಂಗಾಪೂಜೆಯಂತಹ ವಿವಿಧ ಪೂಜಾ ಕೈಂಕರ್ಯಗಳು ನಡೆಯುತ್ತದೆ. ಭಾನುವಾರ ಮಹಾಮಂಗಳಾರತಿ, ಮಧ್ಯಾಹ್ನ ೧೨ ಗಂಟೆಯ ನಂತರ ಶ್ರೀ ತೀಥಾರಾಜಸ್ವಾಮಿಯ ವಿಶೇಷ ಪೂಜೆ ಶುಕ್ರವಾರದಂದು ಭೀಮಾಸತಿಯ ಪೂಜಾಕಾರ್ಯದಲ್ಲಿ ಸಿಹಿ ಅಡುಗೆ ನೈವೇದ್ಯವಾದರೆ, ಭಾನುವಾರ ತೀಥಾರಾಜ ದೇವರಿಗೆ ಕುರಿ ಅಥವಾ ಮೇಕೆ ಹೋತವನ್ನು ಬಲಿ ನೀಡಲಾಗುತ್ತದೆ. ಮಾಂಸಾಹಾರದ ಸಹಭೋಜನವು ಬಯಲಿನಲ್ಲಿ ನಡೆಯುತ್ತದೆ. ಬೇಡಿಕೊಂಡವರಿಗೆ ಪುತ್ರಸಂತಾನ ಭಾಗ್ಯವನ್ನು ನೀಡುವಳೆಂಬ ನಂಬಿಕೆಯಿದೆ.

### ೪.೮.೭ ಮದಲಿಂಗ

**ಕಥನ** : ಮದಲಿಂಗ ಎಂಬುವವನು ಮದುಮಗನಾಗಿದ್ದು ಆತನ ಹೆಸರಿನಿಂದಲೇ ಚಿಕ್ಕನಾಯಕನಹಳ್ಳಿ ತಾಲೂಕಿನಲ್ಲಿರುವ ಗುಡ್ಡಕ್ಕೆ ಮದಲಿಂಗನಗುಡ್ಡ, ಅದಕ್ಕೆ ಹೊಂದಿಕೊಂಡಂತೆ ಇರುವ ಕಣಿವೆಗೆ 'ಮದಲಿಂಗನ ಕಣಿವೆ', 'ಸುತ್ತುಕಣಿವೆ' ಎಂತಲೂ ಕರೆಯಲಾಗುತ್ತದೆ.

ಮದಲಿಂಗ ಎಂಬ ಮದುಮಗನು ಮದುವಣಗಿತ್ತಿಯನ್ನು ಮನೆದುಂಬಿಸಿಕೊಳ್ಳುವ ಸಲುವಾಗಿ ಮದುವಣಗಿತ್ತಿಯ ತಾಯಿ ಮತ್ತು ಅವಳ ತಂಗಿಯಾದ ಜಾಣೆ ಎಂಬುವವರೊಂದಿಗೆ ಈ ಕಣಿವೆಯ ಮೂಲಕ ಹಾದು ಹೋಗುತ್ತಿದ್ದನು. ಮಾರ್ಗ ಮಧ್ಯದಲ್ಲಿ ಜಾಣೆಯನ್ನು ತನಗೇ ಕೊಟ್ಟು ಮದುವೆ ಮಾಡುವಂತೆ ಅತ್ತೆಯನ್ನು ಕೇಳಿದನು. ಇದಕ್ಕೆ ಅತ್ತೆಯು ಉತ್ತರವಾಗಿ ನಕ್ಕಳು, ಹಾಗೂ 'ಅಸಮರ್ಥ ಗಂಡಸಿಗೆ ಎರಡೆರಡು ಹೆಂಡಿರು' ಎಂದು ಛೇಡಿಸಿದಳು. ಅತ್ತೆಯ ಈ ಮಾತು ಮದಲಿಂಗನ ಸ್ವಾಭಿಮಾನವನ್ನು ಮೆಟ್ಟಿದಂತಾಯಿತು. ಅತ್ತೆ ಮತ್ತು ಅಳಿಯನ ನಡುವೆ ಈ ಕುರಿತು ನಡೆದ ಮಾತಿನ ಜವಾಬಿಗೆ ಅತ್ತೆಯು 'ಈ ಬೆಟ್ಟವನ್ನು ಓಮ್ಮುರಿಕೆಯಾಗಿ ಹತ್ತಿ, ಓಮ್ಮುರಿಕೆಯಾಗಿ ಇಳಿಯಬೇಕೆಂಬ

ಸವಾಲು ಹಾಕಿದಳು'. ಅತ್ತೆಯ ಸವಾಲು ಸ್ವೀಕರಿಸಿದ ಅಳಿಯನು ಬೆಟ್ಟವನ್ನು ಹಿಂದು ಹಿಂದಾಗಿ ಹತ್ತಲು ತೊಡಗಿದನು. ಆಗ ಬಿಸಿಲು ಮೇಲೇರಿತ್ತು. ಅತ್ತೆಗೆ ಈ ರೀತಿಯಾಗಿ ಹೇಳಿದನು : 'ನಾನು ಇಳಿದು ಬರುವಷ್ಟರಲ್ಲಿ ಬೆಟ್ಟದ ಕೆಳಗೆ ಜಾಣೆಯು ಮೊಗೆ ನೀರು ಹಿಡಿದು ಕಾದಿರಲಿ, ಅವಳ ಕೈಯಿಂದಲೇ ನೀರು ಕೊಡಿಸು' ಎಂದು ಹೇಳಿದನು. ಆ ಮೊಗೆ ನೀರು ಬಿಟ್ಟರೆ ಬೆಟ್ಟಪ್ರದೇಶದ ಹತ್ತಿರದಲ್ಲಿ ಎಲ್ಲಿಯೂ ನೀರು ಸಿಗುತ್ತಿರಲಿಲ್ಲ. ಮದಲಿಂಗನು ಬೆಟ್ಟದ ತುದಿಗೆ ಹೋಗಿ ಕೆಲಕಾಲ ವಿಶ್ರಮಿಸಿಕೊಂಡು ಒಂದು ನಿಂಬೆಹಣ್ಣು ತಿಂದು ಬೀಜ ಉಗಿದನಂತೆ. ಆ ಬೀಜವು ಗಜನಿಂಬೆ ಗಿಡವಾಗಿ ಅಲ್ಲಿ ಹುಟ್ಟಿದೆ ಎಂಬುದು ಈ ಭಾಗದ ಜನರ ನಂಬಿಕೆಯಾಗಿದೆ. ಹಿಮ್ಮುರಿಕೆಯಲ್ಲೇ ಬೆಟ್ಟವನ್ನು ಇಳಿದು ಬಂದನು. ಅತ್ತೆಯು ಮಗಳನ್ನು ಕೊಡಬೇಕೆಂಬ ಅಸೂಯೆಯಿಂದ ಮೊಗೆಯನ್ನು ಕೆಡವಿದಳಂತೆ.[೧೪೩] ಇನ್ನೊಂದು ಹೇಳಿಕೆಯಂತೆ, ಮದಲಿಂಗನು ತಾನು ಗೆದ್ದೆನೆಂಬ ಸಂತಸದಿಂದ ಜಾರಿಬಿದ್ದನೆಂದೂ ಇದರಿಂದ ಮೊಗೆಯು ಒಡೆದು ಹೋಗಿ ನೀರು ನೆಲಕ್ಕೆ ಚೆಲ್ಲಿತು.[೧೪೪]

ಮದಲಿಂಗನು ಅತಿಯಾದ ಬಾಯಾರಿಕೆಯಿಂದ ನೀರು ಇಲ್ಲದೆ ಗಂಟಲು ಒಣಗಿ ಏದುಸಿರು ಬಿಡುತ್ತಾ ಅಲ್ಲಿಯೇ ಒರಗಿದನು. ಇದರಿಂದ ಮದುವಣಗಿತ್ತಿಯು ಮಡುವಿನಲ್ಲಿ ಬಿದ್ದು ಸತ್ತಳು. ಆ ಸ್ಥಳ 'ಮದುವಣಮಡು' ಅಥವಾ 'ಮದನಮಡು' ಎಂಬುದಾಗಿ ಹೆಸರು ಪಡೆಯಿತು. ಮದುವಣಗಿತ್ತಿಯ ತಂಗಿ 'ಜಾಣೆ'ಯು ತನ್ನ ಬಾಯಿಯ ಜೊಲ್ಲನ್ನೇ ಮದಲಿಂಗನ ಬಾಯಿಗೆ ತುಂಬಿ ಮದಲಿಂಗನನ್ನು ಬದುಕಿಸಿಕೊಳ್ಳಲು ಯತ್ನಿಸಿದಳು. ಆದರೆ ತನ್ನ ಪ್ರಯತ್ನವು ವಿಫಲವಾಗಿ ಮದಲಿಂಗನು ಮರಣ ಹೊಂದಿದನು. ಇದರಿಂದ ಈ ಗುಡ್ಡಕ್ಕೆ 'ಮದಲಿಂಗನಗುಡ್ಡ', ಕಣಿವೆಗೆ 'ಮದಲಿಂಗನಕಣಿವೆ' ಎಂದು ಹೆಸರಾಯಿತು. ಜಾಣೆಯು ಅಲ್ಲೇ ಪಕ್ಕದಲ್ಲಿ ಮಡಿದಳು. ಅವಳು ಮಡಿದ ಜಾಗವೇ 'ಜಾಣೇಹಾರ' ಆಯಿತು. ಘಟಿಸಿ ಹೋದ ದುರಂತದಿಂದಾಗಿ ಅತ್ತೆಯು ಅತ್ತಂತಹ ಸ್ಥಳವು 'ಅತ್ತಾಳು' ಆಯಿತು. ಕೊನೆಗೆ ಮಡಿದ ಅತ್ತೆಯನ್ನು ಸಮಾಧಿ ಮಾಡಿದ ಸ್ಥಳವು 'ಅಜಿಗುಡ್ಡೆ' ಆಯಿತು ಎಂಬ ಐತಿಹ್ಯಗಳಿವೆ.

ಈ ಐತಿಹ್ಯಗಳಿಗೆ ಪೂರಕವಾಗಿ ಬಂದಿರುವ ಸ್ಥಳಗಳು ವಾಸ್ತವವಾಗಿ ಅಸ್ತಿತ್ವದಲ್ಲಿವೆ. ಮೌಖಿಕ ಅಭಿಪ್ರಾಯಗಳು ಮತ್ತು ನಂಬಿಕೆಗಳ ಹಿನ್ನೆಲೆಯಲ್ಲಿ ಚಾರಿತ್ರಿಕ ಸೂಕ್ಷ್ಮತೆಗಳನ್ನು ತಿಳಿಯಬಹುದಾಗಿದೆ.

### ೪.೮.೮ ವೀರಸೀಗಣ್ಣ

**ಕಥನ :** ವೀರಸೀಗಣ್ಣನನ್ನು ಕುರಿತು ಪಾವಗಡ ತಾಲೂಕಿನ ಕೃಷ್ಣಗಿರಿ ಆಲದಮರದ ಗೊಲ್ಲರಹಟ್ಟಿಯ ಪ್ರದೇಶದಲ್ಲಿ ಮೌಖಿಕ ಕಾವ್ಯಗಳನ್ನು ಹಾಡಲಾಗುತ್ತದೆ. ವೀರಸೀಗಣ್ಣನು ರಾಮನಹಳ್ಳಿ ಕಟ್ಟೇಮನೆಯ ಮಾರಸೋರ ರಾಮವ್ವಳ ಮಗನಾಗಿದ್ದನು. ದೊಡ್ಡಚಿತ್ತಪ್ಪ, ಮತ್ತು ಸಣ್ಣಚಿತ್ತಪ್ಪ ಎಂಬುವರು ಈತನ ಹಿರಿಯ ಸಹೋದರರು. ಇವರು ಪಶುಪಾಲಕರಾಗಿದ್ದರು.

ಒಮ್ಮೆ ಇವರು ಹಿರಿಯೂರಿನ ಮಾರಿಕಣಿವೆ ಅರಣ್ಯ ಪ್ರದೇಶಕ್ಕೆ ಬೇಟೆಗಾಗಿ ಹೋಗಿದ್ದರು. ಅಲ್ಲಿ ಕಾಡುಹಂದಿಯನ್ನು ಬೇಟೆಯಾಡಿದ್ದರು, ಅದರಲ್ಲಿ ಪಾಲು ಕೇಳಲು ಬಂದ ಬೇಡರಿಗೆ ಪಾಲು ನೀಡಬಾರದೆಂದು ವೀರಸೀಗಣ್ಣನು ಹೇಳಿದನು. ಆದರೂ ಈತನ ಸಹೋದರರು ಈತನ ಮನವೊಲಿಸಿ ಬೇಡರಿಗೆ ಪಾಲನ್ನು ನೀಡಿದರು. ಇದನ್ನೇ ಸೇಡನ್ನಾಗಿಸಿಕೊಂಡ ಬೇಡರ ಕರಿಹಲ್ಲಿನ ಪಾಲನಾಯಕನು ಈತನನ್ನು ಹತ್ಯೆ ಮಾಡಿದನು.[೧೪೫] ಸೀರೇದ ನಾಯಕರ ಕತ್ತಿಗೆ ಬಲಿಯಾಗಿ ಸಾವನ್ನಪ್ಪಿದ ಸೀಗಣ್ಣನ ಸಮಾಧಿಯು ಪಾವಗಡದ ಚಿಕ್ಕಕೋರ್‍ಯೈವು ಎಂಬಲ್ಲಿದೆ. ಇಲ್ಲಿನ ವೀರಗಲ್ಲಿಗೆ ಪೂಜೆಯನ್ನೂ ಮಾಡಲಾಗುತ್ತಿದೆ.

### ೪.೮.೯ ಶೂಲದ ಈರಣ್ಣ

**ಕಥನ** : ನಿಡಗಲ್ಲಿನ ಬಂದ್ರೇಹೊಸಹಳ್ಳಿ ಗ್ರಾಮದಲ್ಲಿ ನರಸಿಂಹ ಮತ್ತು ನಾಗಮ್ಮ ಎಂಬ ದಂಪತಿಗಳಿಗೆ ಏಳು ಮಂದಿ ಗಂಡು ಮಕ್ಕಳಿದ್ದರು. ಇವರಲ್ಲಿ ಹಿರಿಯವನು ಈರುಚಿಕ್ಕಣ್ಣ. ತನ್ನ ತಂದೆ ನರಸಿಂಹನಿಗೆ ಸೇರಿದ ಹೊಲದ ಕಂದಾಯವನ್ನು ನೀಡಲಿಲ್ಲ. ಎಂಬ ಕಾರಣದಿಂದ ಹೆಂಜೇರಿನ ರಾಜರು ನರಸಿಂಹನ ಹೊಲವನ್ನು ಮುಟ್ಟುಗೋಲು ಹಾಕಿಕೊಂಡಿದ್ದರು. ಕಡು ಬಡತನದಲ್ಲಿಯೇ ನಾಗಮ್ಮ ತನ್ನ ಮಕ್ಕಳನ್ನು ಬೆಳೆಸಿದಳು. ಈರುಚಿಕ್ಕಣ್ಣ ದೊಡ್ಡವನಾದ ಮೇಲೆ ದುಡಿಯಲು ಹೇಮಾವತಿ ಪಟ್ಟಣದ ಮೂಲಕ ನಿಡುಗಲ್ಲಿಗೆ ಬರುತ್ತಾನೆ. ಕೂಲಿ ಕೆಲಸ ಮಾಡುತ್ತಾ ನಂತರದ ದಿನಗಳಲ್ಲಿ ತನ್ನ ತಾಯಿ ಮತ್ತು ಸಹೋದರರನ್ನು ನಿಡಗಲ್ಲಿಗೆ ಕರೆಸಿಕೊಳ್ಳುತ್ತಾನೆ. ಈರುಚಿಕ್ಕಣ್ಣನಿಗೆ ವಿವಾಹವಾಗಿದ್ದು ನೀಲಾವತಿ ಎಂಬ ಮಗಳಿದ್ದಳು. ಈಕೆಯು ಸೌಂದರ್ಯವತಿಯಾಗಿದ್ದಳು. ನಿಡಗಲ್ಲಿನ ಯುವರಾಜನು ಈಕೆಯನ್ನು ವಿವಾಹವಾಗಲು ಪೀಡಿಸಿದ್ದರಿಂದಾಗಿ ನಾವು ವಕ್ಕಲಿಗರು, ರಾಜರು ಬೇಡರು ಆವನನ್ನು ಎದುರಿಸಿ ಬದುಕುವುದು ಕಷ್ಟಸಾಧ್ಯವೆಂದು ತಿಳಿದು ಈರುಚಿಕ್ಕಣ್ಣನು ಕುಟುಂಬ ಸಮೇತವಾಗಿ ಊರುಬಿಟ್ಟು ಮಡಕಸಿರಾದ ಶಂಕರಗಲ್ಲು ಗ್ರಾಮಕ್ಕೆ ಹೊರಟರು. ಮಾರ್ಗಮಧ್ಯದ ಗುಂಡಾರ್ಲಹಳ್ಳಿಯ ಬಳಿ ಈರುಚಿಕ್ಕಣ್ಣನ ಹೆಂಡತಿ ಬಾಣಂತಿಯಾಗಿದ್ದು ತನ್ನ ಮಗುವನ್ನು ತೊಟ್ಟಿಲಿನಲ್ಲಿಯೇ ಬಿಟ್ಟು ಬಂದಿರುವುದಾಗಿ ದುಃಖಿಸತೊಡಗಿದಳು. ಮಗುವನ್ನು ದೇವರು ಕಾಪಾಡಲೀ ಎಂದು ಹಾರೈಸುತ್ತಾ ಮುಂದೆ ನಡೆದರು. ಈ ಮಗುವೇ ಮುಂದೆ ನಿಡಗಲ್ಲಿನ ಶೆಟ್ಟಿಯೊಬ್ಬರ ಮನೆಯಲ್ಲಿ ಬೆಳೆದು 'ಶೂಲದ ಈರಣ್ಣ' ಎಂದು ಪ್ರಖ್ಯಾತಿಯಾಗಿದ್ದಾನೆ. ಮುಂದೆ ದೊಡ್ಡವನಾದ ಈತನಲ್ಲಿ ಶೆಟ್ಟಿಯ ಹೆಂಡತಿಯು ಮೋಹಗೊಳ್ಳುವಳು. ಆದರೆ ಆಕೆಯ ಮನದ ಇಂಗಿತವನ್ನು ತಿರಸ್ಕರಿಸಿದ ಈರಣ್ಣನ ಮೇಲೆ ಒಡವೆಗಳನ್ನು ಕದ್ದಿರುವ ಆಪಾದನೆಗಳನ್ನು ಹೊರಿಸುವಳು. ಹಾಗೂ ನಿಡಗಲ್ಲು ನಾಯಕನಿಗೆ ದೂರು ನೀಡುತ್ತಾಳೆ.

ಇನ್ನೊಂದು ಮೂಲದಂತೆ[೧೪೬] ಶೆಟ್ಟಿಯ ಹೆಂಡತಿಯು ನಿಡಗಲ್ಲು ರಾಜನ ವ್ಯಾಮೋಹಕ್ಕೆ ಒಳಗಾಗಿದ್ದು ಇದಕ್ಕೆ ಈರಣ್ಣನು ಅಡ್ಡಿಪಡಿಸುತ್ತಾನೆ ಇದರಿಂದಾಗಿ ಈರಣ್ಣನನ್ನು ನಿಡಗಲ್ಲು ನಾಯಕನು ಶೂಲಕ್ಕೆ ಏರಿಸುತ್ತಾನೆ. ಇದರಿಂದ ಈತನನ್ನು ಶೂಲದ ಈರಣ್ಣ ಎಂದೇ ಕರೆಯಲಾಗುತ್ತದೆ. ಶುಲಕ್ಕೇರಿಸಿದ್ದಾಗ ಈತನಿಗೆ ಯಾರೂ ಅನ್ನ ನೀರು ನೀಡಬಾರದು ಎಂದು ಆದೇಶಿಸಲಾಗಿರುತ್ತದೆ. ಆದರೆ ಮಾದಿಗರ ಹೆಣ್ಣುಮಗಳೊಬ್ಬಳು ಈತನಿಗೆ ನೀರು ಕುಡಿಸಿದಳಂತೆ. ಕೃತಜ್ಞತಾಪೂರ್ವಕವಾಗಿ ತಾನು ಆಕೆಯಲ್ಲಿ ಅಂಗವಿಕಲ ಮಗನಾಗಿ ಹುಟ್ಟುವುದಾಗಿ ಭರವಸೆ ನೀಡುತ್ತಾ ತನಗೆ ಆಕೆಯ ಕುಲದವರೇ ಪೂಜಿಸಬೇಕೆಂದು ಮನವಿ ಮಾಡುತ್ತಾನೆ. ಅದರಂತೆ ಶೂಲದ ಈರಣ್ಣನಿಗೆ ಮಾದಿಗ ಜನಾಂಗದವರು ಪೂಜಾರಿಗಳಾಗಿದ್ದಾರೆ. ಇದಕ್ಕೆ ಪೂರಕವೆಂಬಂತೆ ಇಂದಿಗೂ ಆಕೆಯ ವಂಶದಲ್ಲಿ ಹುಟ್ಟುವ ಮಕ್ಕಳು ಅಂಗವಿಕಲರಾಗಿಯೇ ಇರುತ್ತಾರೆ.[೧೪೭]

ನಿಡಗಲ್ಲು ಗ್ರಾಮದ ಹತ್ತಿರವಿರುವ ಗುಡ್ಡದ ತಪ್ಪಲಿನಲ್ಲಿ ಪೂರ್ವಾಭಿಮುಖವಾಗಿ ನಿರ್ಮಿಸಿರುವ ಶೂಲದ ಈರಣ್ಣನ ಗುಡಿಯಲ್ಲಿ ಕಪ್ಪುಶಿಲೆಯ ಶಿಲ್ಪವನ್ನು ಪೂಜಿಸಲಾಗುತ್ತಿದೆ.[೧೪೮] ಇಲ್ಲಿ ಶೂಲದ ಈರಣ್ಣನೆಂದೇ ಗುರುತಿಸುವ ಶಿಲ್ಪವು ವಿಶೇಷವಾಗಿದೆ. ವ್ಯಕ್ತಿಯೊಬ್ಬನನ್ನು ಮೇಲಕ್ಕೆ ಎತ್ತಿ ಶೂಲದ ಮೇಲೆ ಆತನ ಗುದವು ಬೀಳುವಂತೆ ಮಾಡಲಾಗಿದ್ದು ಶೂಲವು ಆತನ ಗುದದ್ವಾರದ ಮೂಲಕ ನೆತ್ತಿಯವರೆಗೆ ತೂರಿರುವಂತೆ ಶಿಲ್ಪವನ್ನು ಕೆತ್ತಲಾಗಿದೆ. ಶೂಲದ ಎರಡೂ ಕಡೆ ವ್ಯಕ್ತಿಯ ಕಾಲುಗಳು ನೇತಾಡುವಂತೆ ಹಾಗೂ ಆತನ ಬಲಪಾದದ ಬಳಿ ಇನ್ನೊಬ್ಬ ವ್ಯಕ್ತಿಯ ಶಿಲ್ಪವನ್ನು ಕೆತ್ತಲಾಗಿದೆ.

### ೪.೮.೧೦ ಹೊನ್ನೇಮರದ ಈರಣ್ಣ

**ಕಥನ** : ತುಮಕೂರು ಪ್ರದೇಶದಲ್ಲಿ ಒಂದೇ ಹೆಸರಿನಲ್ಲಿ ಕಂಡುಬರುವ ಸಾಂಸ್ಕೃತಿಕ ವೀರರಲ್ಲಿ ಹೊನ್ನೇಮರದಈರಣ್ಣ, ಬಳ್ಳೆಕಟ್ಟಈರಣ್ಣ, ಶೂಲದಈರಣ್ಣ, ಪ್ರಮುಖರಾಗಿದ್ದಾರೆ. ಇವರೆಲ್ಲರೂ ಗೋಪಾಲಕರಾಗಿದ್ದು, ಗೋವುಗಳ ಪಾಲನೆ ಮತ್ತು ಪೋಷಣೆಯ ಮೂಲಕ ತಮ್ಮ ಬದುಕನ್ನು ರೂಪಿಸಿಕೊಂಡಿದ್ದಾರೆ. ಈ ಸಾಂಸ್ಕೃತಿಕ ವೀರರನ್ನು ಧೈರ್ಯ, ಸಾಹಸ, ಆದರ್ಶ, ತ್ಯಾಗ, ಬಲಿದಾನದಂತಹ ಮೌಲ್ಯಗಳ ಪ್ರತಿನಿಧಿಗಳಂತೆ ಪರಿಗಣಿಸಲಾಗಿದೆ.

ಚಿಕ್ಕನಾಯಕನಹಳ್ಳಿ ತಾಲೂಕು ತಿಮ್ಮನಹಳ್ಳಿಯ ಹತ್ತಿರದ ಬಡಕೆಗುಡ್ಲು ಪ್ರದೇಶದ ಸ್ಥಳೀಯರ ನಾಯಕ ಹೊನ್ನೇಮರದ ಈರಣ್ಣ.[೧೪೯] ಈತನು ಇಲ್ಲಿನ ಬುಕ್ಕಯ್ಯ ಮತ್ತು ಕದರಮ್ಮ ಎಂಬ ದಂಪತಿಗಳ ಮಗ. ಈ ದಂಪತಿಗಳು ಸೌದೆಗಳನ್ನು ಮಾರುವ ಕಾಯಕ ಮಾಡುತ್ತಾ ಜೀವನ ನಿರ್ವಹಣೆ ಮಾಡುತ್ತಿದ್ದರು. ಬಾಲಕನಾಗಿದ್ದ ಈರಣ್ಣನು ಅಸಾಧಾರಣ ತುಂಟನಾಗಿದ್ದು ಈತನನ್ನು ನೋಡಿಕೊಳ್ಳಲು ಅಜ್ಜಿಯೋರ್ವಳಿಗೆ ವಹಿಸಲಾಗಿತ್ತು. ಈ ಸಂದರ್ಭದಲ್ಲಿ ಈರಣ್ಣನು ಅಜ್ಜಿಗೆ ಕಾಣದಂತೆ ತೊಟ್ಟಿಲಿನಿಂದ ಹೊರ ಬಂದು ಬಡಕೇಗುಡ್ಲಿನ

ಊರೊಳಗೆ ತುಂಟಾಟ ನಡೆಸಿ ಅಜ್ಜಿಗೆ ಕಾಣದಂತೆ ಮತ್ತೆ ಬಂದು ತೊಟ್ಟಿಲಲ್ಲಿ ಪವಡಿಸುತ್ತಿದ್ದನು. ಊರಿನ ಜನರು ಈತನ ತಂದೆ ತಾಯಿಗಳ ಬಳಿ ಈ ಕುರಿತು ದೂರು ತಂದಾಗ 'ಚಿಕ್ಕವಯಸ್ಸಿನ ಬಾಲಕ ತುಂಟಾಟ ಮಾಡುವನೆ' ಎಂದು ನಂಬುವುದಿಲ್ಲ. ಹೀಗೆ ಆಟವಾಡಿಕೊಂಡು ದೊಡ್ಡವನಾಗಿ ಬೆಳೆಯುತ್ತಾನೆ.

ಇಲ್ಲಿನ ಕಂದಿಕೆರೆಯ ತೋಟಗಳಿಗೆ ಕೋತಿಗಳ ಹಾವಳಿ ಹೆಚ್ಚಾಗಿದೆ, ಈ ಹಾವಳಿಯನ್ನು ನಿವಾರಿಸಿದವರಿಗೆ ಸೂಕ್ತವಾದ ಉಡುಗೊರೆಯನ್ನು ಕೊಡುವುದಾಗಿ ಅಲ್ಲಿನ ಸ್ಥಳೀಯ ನಾಯಕನು ಡಂಗೂರ ಹಾಕಿಸುತ್ತಾನೆ. ಈ ಸುದ್ದಿಯನ್ನು ಕೇಳಿದ ಈರಣ್ಣನು ಮುಂದೆ ತನ್ನನ್ನು ಪಶುಪಾಲನೆಯಲ್ಲಿ ತೊಡಗಿಸಿಕೊಳ್ಳುವ ಉದ್ದೇಶದೊಂದಿಗೆ ತಾನು ಕೋತಿಗಳನ್ನು ಓಡಿಸಲು ನಿಶ್ಚಯಿಸಿ ಮುಂದಾಗುತ್ತಾನೆ. ಕೇರೆ ಹಾವನ್ನು ಹಿಡಿದು ಸೊಂಟಕ್ಕೆ ಸುತ್ತಿಕೊಂಡು, ಕೇಕೆ ಹಾಕಿ ಹೆಗಲ ಮೇಗಲ ವಲ್ಲಿಬಟ್ಟೆಯನ್ನು ತೆಗೆದು ಕಿರುಚಿದ ಕೂಡಲೇ ಕಂದಿಕೆರೆ ತೋಟದಲ್ಲಿದ್ದ ಕೋತಿಗಳು ದಿಕ್ಕಾಪಾಲಾಗಿ ಓಡಿಹೋಗುತ್ತವೆ. ಹೀಗೆ ಕೋತಿ ಓಡಿಸಿದ್ದರಿಂದ ಬಂದಂತಹ ಹಣದಿಂದ ದನಗಳನ್ನು ಕೊಂಡುಕೊಳ್ಳುತ್ತಾನೆ. ಏಳು ಗೂಡಿನ ದನಗಳವರೆಗೆ ತನ್ನ ಪಶುಗಳನ್ನು ಹೆಚ್ಚಿಸಿಕೊಂಡು ಲಕ್ಕೇನಹಳ್ಳಿ ಬಯಲಿನಲ್ಲಿ ಬೀಡು ಬಿಡುತ್ತಾನೆ.

ಈತನು ಉತ್ತಮ ಗಣೆವಾದಕನೂ ಆಗಿ ಸುಮಧುರ ಸಂಗೀತವನ್ನು ನುಡಿಸುತ್ತಾ ಗೋವುಗಳನ್ನು ಕಾಯುತ್ತಿರಲು ಅವನ ಗಣೆಯಗಾನಕ್ಕೆ ಬೇಡರ ಹುಡುಗಿಯೊಬ್ಬಳು ಮಾರು ಹೋಗುತ್ತಾಳೆ. ತನ್ನನ್ನು ವರಿಸುವಂತೆ ಒತ್ತಾಯಿಸುತ್ತಾಳೆ. ಈರಣ್ಣನು ಅವಳ ಕೋರಿಕೆಯನ್ನು ನಿರಾಕರಿಸುತ್ತಾನೆ. ಕುಪಿತಳಾದ ಈಕೆಯು ಈರಣ್ಣನು ತನ್ನನ್ನು ಅವಮಾನಗೊಳಿಸಲು ಯತ್ನಿಸಿದನೆಂದು ತನ್ನ ಅಣ್ಣಂದಿರಿಗೆ ದೂರು ಹೇಳುತ್ತಾಳೆ. ಸುದ್ಧಿಯನ್ನು ಕೇಳಿ ಕೋಪಗೊಂಡ ಆಕೆಯ ಆರು ಜನ ಅಣ್ಣಂದಿರು ಈರಣ್ಣನನ್ನು ಬಾಣದಿಂದ ಕೊಲ್ಲುತ್ತಾರೆ.

ಬಂದಕುಂಟೆ ಈರುಚಿಕ್ಕಣ್ಣನ ಕಾವ್ಯ, ಮತ್ತು ಬಳ್ಳಕಟ್ಟೆ ಈರಣ್ಣನ ಕಾವ್ಯದಲ್ಲಿಯೂ ಇಂತಹುದೇ ಸ್ವರೂಪದ ಕಥೆಯು ಕಂಡುಬರುತ್ತದೆ.

ಹೊನ್ನೇಮರದ ಈರಣ್ಣನು ತನಗೆ ಈ ದುರ್ಗತಿಯು ಬಂದಿದ್ದನ್ನು ಮನಗಂಡು ಬೇಡರನ್ನು ನಾಶಮಾಡಲು ಶಕ್ತಿಯನ್ನು ನೀಡುವಂತೆ ಹೊಯ್ಸಳಕಟ್ಟೆಯ ಕರಿಯಮ್ಮ ದೇವರನ್ನು ಕೋರಿಕೊಳ್ಳುತ್ತಾನೆ. ಆಗ ಆ ದೇವಿಯು ಊರ ಮುಂದಿನ ಅರಳಿಮರವನ್ನು ಬೇರು ಸಹಿತ ಕಿತ್ತರೆ ಶಕ್ತಿ ತುಂಬುವುದಾಗಿ ಹೇಳಿದಳು. ಬಲಶಾಲಿಯಾದ ಈರಣ್ಣನು ಎಡೆಗೈಯ ಹೆಬ್ಬೆಟ್ಟಿನಿಂದ ಅರಳಿಮರವನ್ನು ಬೇರುಸಹಿತ ಕೀಳುತ್ತಾನೆಂಬ ನಂಬಿಕೆಯಿದೆ. ನಂತರ ಕರಿಯಮ್ಮ ದೇವಿಯಿಂದ ಶಕ್ತಿಯನ್ನು ಪಡೆದು ಆ ಬೇಡರನ್ನು ಹೇಳಲು ಹೆಸರಿಲ್ಲದಂತೆ ಮಾಡುತ್ತಾನೆ. ನಂತರ ಅಂಬು ಇರಿತದಿಂದ ಹೊಟ್ಟೆಯ ಕರುಳು ಹೊರಬಂದಿರಲು ಅದನ್ನು ಪಂಚೆಯಿಂದ ಸೊಂಟಕ್ಕೆ ಸುತ್ತಿಕೊಂಡು ಲಕ್ಕೇನಹಳ್ಳಿ ಬಯಲಲ್ಲಿದ್ದ 'ಹೊನ್ನೆಮರ'ದ ಬುಡಕ್ಕೆ ಒರಗಿ ಪ್ರಾಣ ಬಿಡುತ್ತಾನೆ. ಈ ಮೌಖಿಕ ಕಥನವು ಕಂದಿಕೆರೆ,

ಲಕ್ಕೇನಹಳ್ಳಿಯ ಪ್ರದೇಶಗಳಲ್ಲಿ ಇಂದಿಗೂ ಪ್ರಚಲಿತವಿದೆ. ಗೋಪಾಲಕನಾಗಿ, ಗಣೆವಾದಕನಾಗಿದ್ದ ಈರಣ್ಣನ ಸಮಾಧಿಯು ಲಕ್ಕೇನಹಳ್ಳಿಯ ಬಯಲಿನಲ್ಲಿದೆ. ಈ ಸ್ಥಳದಲ್ಲಿ ಪ್ರತಿವರ್ಷದ ವಿಜಯದಶಮಿಯಂದು ಜಾತ್ರೆ, ಉತ್ಸವಾದಿಗಳು ನಡೆಯುತ್ತವೆ.

ಹೊನ್ನೇಮರದ ಈರಣ್ಣ, ಬಳ್ಳಿಕಟ್ಟೆ ಈರಣ್ಣ, ಬಂದಕುಂಟೆ ಈರುಚಿಕ್ಕಣ್ಣನ ಮೌಖಿಕ ಕಾವ್ಯಗಳಲ್ಲಿ ಗೋ ಪಾಲಕರು ಮತ್ತು ಬೇಡರ ನಡುವಿನ ಮೋಹ, ವಿರಸ, ಹತ್ಯೆಗಳಂತಹ ಘಟನೆಗಳು ಸಾಮಾನ್ಯವಾಗಿ ಕಂಡುಬರುತ್ತವೆ.

## ಟಿಪ್ಪಣಿಗಳು

೧. ವಿರೂಪಾಕ್ಷಿ ಪೂಜಾರಹಳ್ಳಿ ೨೦೦೨, “*ಚಿತ್ರದುರ್ಗ ಜಿಲ್ಲೆಯ ಬುಡಕಟ್ಟು ವೀರರು*” ಹಂಪಿ, ಕವಿವಿ. ಪುಟ ೩೨-೩೩

೨. ಈರುಗ್ಯಾತರಾಯನನ್ನು ಕುರಿತು ಇರುವ ಮೌಖಿಕ ಆಕರಗಳನ್ನು ಸಂಗ್ರಹಿಸಿ ಪ್ರಕಟಿಸಿದ್ದಾರೆ. ಇವುಗಳೆಂದರೆ, ಕೆಂಪನಂಜುಂಡ ಎಂಬ ಕವಿಯು ವಡ್ಡಗೆರೆ ವೀರನಾಗಮ್ಮನ ಭಕ್ತನಾಗಿದ್ದ ಈತನ ಮೂಲ ನೆಲೆಯು ತುಮಕೂರಿನ ತೋವಿನಕೆರೆ ಗ್ರಾಮವಾಗಿತ್ತು. ಈತನು ಕ್ರಿಶ ೧೩೦೫ ರಲ್ಲಿ ಯಕ್ಷಗಾನ ರೂಪದಲ್ಲಿ ‘ವಡ್ಡಗೆರೆ ವೀರನಾಗಮ್ಮನವರ ಚರಿತ್ರೆ ಅಥವಾ ವೀರಕ್ಯಾತರಾಯನ ದಿಗ್ವಿಜಯ’ವನ್ನು ರಚಿಸಿದ್ದಾನೆ. ತಾಳೆಗರಿಗಳಲ್ಲಿರುವ ಇದನ್ನು ‘ಕುಂಚಿಟಿಗರ ಮಹಾಪುರಾಣ’ ಎಂದೂ ಕರೆಯಲಾಗುತ್ತದೆ. ಈ ಪ್ರಾಚೀನ ದಾಖಲೆಯನ್ನು ಕೆಲವು ಕುಂಚಿಟಿಗರ ಮನೆಯಲ್ಲಿ ಪೂಜಿಸಲಾಗುತ್ತಿದೆ. ಈ ಕೃತಿಯನ್ನು ಅದೇ ಹೆಸರಿನಲ್ಲಿ ಶಿಕ್ಷಕರಾಗಿದ್ದ ಮಧುಗಿರಿಯ ಎನ್.ನಾರಾಯಣರವರು ಕ್ರಿಶ ೧೯೬೮ ರಲ್ಲಿ ಸರಳಗನ್ನಡದಲ್ಲಿ ಪುಸ್ತಕರೂಪದಲ್ಲಿ ಪ್ರಕಟಿಸಿದ್ದಾರೆ. ನಂತರ ವಡ್ಡಗೆರೆ ಗ್ರಾಮದವರೇ ಆದ ಕಚೇರಿಕ್ಯಾತಯ್ಯನವರು ‘ವೀರನಾಗಮ್ಮನವರ ಚರಿತೆ’ ಎಂಬ ಕೃತಿಯನ್ನು ರಚಿಸಿದ್ದಾರೆ. ಆ ನಂತದಲ್ಲಿ ವೈಜಯಂತಿಮಾಲರವರು ‘ವಡ್ಡಗೆರೆ ವೀರನಾಗಮ್ಮ ಕಾವ್ಯ’ವನ್ನು ಸಂಗ್ರಹಿಸಿದ್ದರು. ಕಸಾಪ ಬೆಂಗಳೂರು ರವರು ೧೯೮೧ ರಲ್ಲಿ ಈ ಕೃತಿಯನ್ನು ಪ್ರಕಟಿಸಿದ್ದಾರೆ. ಇದೇ ಕಾವ್ಯವನ್ನು ವಡ್ಡಗೆರೆ ನಾಗರಾಜಯ್ಯನವರು ಅವರ ತಾಯಿ ಕದರಮ್ಮ ಮತ್ತು ಅವರ ವಾರಿಗೆಯ ಜನಪದ ಕವಯತ್ರಿಯರಿಂದ ಹಾಡಿಸಿ ಕ್ರಿಶ ೨೦೧೦ ರಲ್ಲಿ ‘ವಡ್ಡಗೆರೆ ನಾಗಮ್ಮ ಮಹಾಸತಿಕಾವ್ಯ’ ಎಂಬ ಎಂಬ ಕೃತಿಯನ್ನು ರಚಿಸಿದ್ದಾರೆ.

ಚಳ್ಳಕೆರೆಯಿಂದ ಸುಮಾರು ೪೦ ಕಿ.ಮೀ ದೂರದಲ್ಲಿ ಆಂಧ್ರಪ್ರದೇಶದ ಗಡಿಗೆ ಹೊಂದಿಕೊಂಡಂತೆ ‘ಓಬಳಾಪುರ. ಎಂಬ ಗ್ರಾಮವಿದೆ. ಇದನ್ನು ಹಿಂದೆ ‘ಸಿರಿವೊಳಲು’, ‘ಸಿರಿವಾಳ’ ಎಂದು ಕರೆಯಲಾಗುತ್ತಿತ್ತು. ಇಲ್ಲಿ ಈರುಗ್ಯಾತರಾಯನು ಸಿರಿವಾಳ ಶೆಟ್ಟಿ ಎಂಬುವವನಿಂದ ಧನಸಹಾಯವನ್ನು ಪಡೆದು ಸಿದ್ದರಾಮೇಶ್ವರ ದೇವಾಲಯವನ್ನು ನಿರ್ಮಿಸಿದ್ದನು ಎಂಬ ಐತಿಹ್ಯವಿದೆ. ಕೆಂಪನಂಜುಂಡನೂ ಸಹ ತನ್ನ ತಾಳೆಗರಿಗಳಲ್ಲಿ ವಡ್ಡಗೆರೆ ನಾಗಮ್ಮ ಮತ್ತು ಈರುಗ್ಯಾತರಾಯನ ಕುರಿತು ಈ ವಿವರವನ್ನು ಉಲ್ಲೇಖಿಸಿದ್ದಾನೆ. ಕುಂಚಿಟಿಗರ ಮಹಾಪುರಾಣದಲ್ಲಿ ವಿವರಿಸಿರುವಂತೆ ಮುಸ್ಲಿಂರ ಹಾವಳಿಯಿಂದ ಉತ್ತರದಿಂದ ದಕ್ಷಿಣದೆಡೆಗೆ ಬಂದ ಕುಂಚೊಕ್ಕಲು ಮುಖಂಡ ಈರುಗ್ಯಾತರಾಯನು ಸಿರಿವಾಳದಲ್ಲಿ ತನ್ನ ಗುರು ಸಿದ್ಧರಾಮೇಶ್ವರ ದೇವಾಲಯವನ್ನು ಮತ್ತು ಕೆರೆಯನ್ನು ನಿರ್ಮಿಸಿದ್ದನು. ಸಿರಿವಾಳ ಗ್ರಾಮದ ಹತ್ತಿರವೇ ಇರುವ ‘ಎರಡುಕೆರೆ’ ಗ್ರಾಮದ ಕುಂಚಿಟಿಗರ ಎರಡುಕೆರೆಯೋರ ಬೆಡಗಿನ ಸಮುದಾಯದ ವೀರ ಮಲಗೊಂಡಸಿಂಗ್ರಿ ಮತ್ತು ಈರುಗ್ಯಾತರಾಯನ ನಡುವೆ ಏರ್ಪಟ್ಟಿದ್ದ ಸ್ಪರ್ಧೆಯಲ್ಲಿ ಈರುಗ್ಯಾತರಾಯನೇ ವಿಜಯಿಯಾಗಿದ್ದ ಬಗ್ಗೆಯೂ ಮೌಖಿಕ ಕಥನಗಳಿವೆ. -ವಡ್ಡಗೆರೆ ನಾಗರಾಜಯ್ಯ ೨೦೧೦ “*ವಡ್ಡಗೆರೆ ನಾಗಮ್ಮ ಮಹಾಸತಿ ಕಾವ್ಯ*” ಅನ್ನಪೂರ್ಣ ಪಬ್ಲಿಷಿಂಗ್ ಹೌಸ್ ಬೆಂಗಳೂರು

೩. ಶಾಲೀವಾಹನ ಶಕ ೧೧೯೨ (ಕ್ರಿ.ಶ.೧೨೭೦) ರಲ್ಲಿ ಹೊಯ್ಸಳ ಮೂರನೇ ನರಸಿಂಹನ ದಂಣಾಯಕ ಚಿಕ್ಕವೀರಕೇತಯ್ಯನು ಆನೆಬಿದ್ದಸರಿಯನ್ನು ಆಳುತ್ತಿದ್ದನು. ಈತನ ಸಾಮಂತನಾದ ಗೂಳೆನಾಯಕನು ಸಿಡಗಲ್ಲು ಚೋಳ ಅರಸು ಯಿರುಂಗೋಳನ ಸಂವರಣೆಯಲ್ಲಿ ಭಾಗವಹಿಸಿ ಚಿಕ್ಕಕೇತಯದಂಣಾಯಕನ ಸಾಮಂತ ಅಪ್ಪೆಯನಾಯಕನ ಮೇಲೆ ಆಕ್ರಮಣ ಮಾಡಿ ತುರುಗಳನ್ನು ವಶಪಡಿಸಿಕೊಂಡಿದ್ದನು. ಈ ಯುದ್ಧದಲ್ಲಿ ಅಪ್ಪೆಯನಾಯಕನು ಮರಣವನ್ನು ಅಪ್ಪಿದನು.

೪. ಶಕ ವರ್ಷ ೧೧೯೯ ನೆಯ ಧಾತು ಸಂವತ್ಸರದ ವೈಸಾಖ ಸು. ೧೧ (ಕ್ರಿ.ಶ.೧೨೭೬) ರಂದು ಪ್ರತಾಪಚಕ್ರವರ್ತಿ ವೀರನರಸಿಂಹನ ರಾಜಧಾನಿ ದ್ವಾರಸಮುದ್ರಕ್ಕೆ ಸೇವುಣರ ಸಾಳುವತಿಕ್ಕಮ, ಜಯಿದೇವ, ಹರಿಪಾಳಯ್ಯರು ಆಕ್ರಮಣ ಮಾಡಿದಾಗ ಹೊಯ್ಸಳ ೩ನೇ ವೀರನರಸಿಂಹನ ಪ್ರಧಾನಗಾಯಿಗೋವಳ

ಗಂಡಪೆಂಡಾರ ಪಡೆಮೆಚ್ಚೆಗಂಡ ಚಿಕ್ಕಕೇತಯ ದಂಣಾಯಕ, ಮತ್ತು ಇತರರು ವೀರಮರಣ ಹೊಂದಿದರು.

೫. ಶಕ ವರ್ಷ ೧೧೯೮ (ಕ್ರಿ.ಶ.೧೨೭೬)ರಲ್ಲಿ ಹೊಸಗುಂದದ ಹೆಗ್ಗಡೆ ಸೋವಣನ ಮಗ ಬೊಮ್ಮೆಯ ಸಾಹಣಿಯು ಕಾಳಗದಲ್ಲಿ ವೀರಮರಣವನ್ನಪ್ಪಿದನು. ಕಾಳಗದಲ್ಲಿ ಮೂರನೇ ನರಸಿಂಹನ ದಂಣಾಯಕ ಚಿಕ್ಕವೀರಕೇತಯನೂ ಇದ್ದನು.

೬. ಶಕ ವರ್ಷ ೧೧೯೮ (೧೨೭೬) ರಲ್ಲಿ ಚಿಕ್ಕಕೇತಯದಂಣಾಯಕನ ಮಗ ಅಪ್ಪೆಯನಾಯಕನು ಸಾಳ್ವ ತಿಕ್ಕಮ, ದಂಡನಾಯಕ ರಾಮದೇವ (ರಾಮಚಂದ್ರ) ರೊಂದಿಗೆ ಕಾದಾಡಲಾಗಿತ್ತು.

೭. ಬೇಲೂರಿನ ವೀರಗಲ್ಲಿನಲ್ಲಿ ಉಲ್ಲೇಖಿಸಿರುವಂತೆ ಶಕ ವರ್ಷ ೧೧೯೮ (೧೨೭೬) ರಲ್ಲಿ ಚಿಕ್ಕಕೇತಯದಂಣಾಯಕನು ಅಬ್ಬರನಾಯಕನ ಮಗ ಬಪ್ಪೆಯ, ದುಗ್ಗಯನಾಯಕನು ಬೆಳವಾಡಿಯ ಕದನದಲ್ಲಿ ಕಾದಾಡಿದರು.

೮. ಕ್ರಿ. ಶ. ೧೨೭೯ರಲ್ಲಿ ಚಿಕ್ಕಕೇತಯ ದಂಣಾಯಕನ ಮಗ ವೀರಸಿಂಗೆಯ ದಂಣಾಯಕನು ಮರುಗಲ ನಾಡೊಳಗಣ ಸೀತಕಲ ರಾಮನಾಥ ದೇವರ ಅಮೃತಪಡಿಗೆ ಮಲ್ಲಿಗೆ ಮತ್ತು ಕುಟುಕುವೇರಿಯಪುರ ಗ್ರಾಮದ ಗದ್ದೆಯನ್ನು ಮಾನ್ಯಕ್ಕೆ ನೀಡಿದ್ದನು.

೯. ಶಕ ವರ್ಷ ೧೨೦೧ (ಕ್ರಿ.ಶ.೧೨೭೯) ರಲ್ಲಿ ಹೊಯ್ಸಳ ಶ್ರೀಮತ್‌ಪ್ರತಾಪಚಕ್ರವರ್ತಿ ಮೂರನೇ ವೀರನರಸಿಂಹನ ದಂಣಾಯಕನಾಗಿ ಚಿಕ್ಕಕೇತಯನಿದ್ದನು.

೧೦. ಯೋಗೀಶ್ವರಪ್ಪ. ಡಿ. ಎನ್ ೨೦೧೨ ***"ಕಲ್ಪಶೋಧ"*** ಬೆಂಗಳೂರು, ಪ್ರಗತಿ ಗ್ರಾಫಿಕ್ಸ್

೧೧. ***ಎ. ಕ.*** (ಸಂ) ೨೪ (೨೦೦೯) ತುಮಕೂರು ೪೧. ೧೨೭೫ ಸೆಪ್ಟೆಂಬರ್ ೭ ಶಾಲೀವಾಹನ ಶಕ ೧೧೯೨ನೆಯ ಶುಕ್ಲಸಂವತ್ಸರದ ಪ್ರಥಮ ಅಶ್ವೀಜ ಸುದ್ದ ೧೦ ಹೊಯ್ಸಳ ೩ನೇ ವೀರನರಸಿಂಹನ ಪ್ರಧಾನ ಗಾಯಿಗೋವಳ, ಗಂಡಪೆಂಡಾರ, ಪಡೆಮೆಚ್ಚೆಗಂಡ, ಮಂಡಳಿ ಕಜೂಬು, ಮಾವನಂಕಕಾರ, ಮೂವರಗಂಡ ಕುಮಾರ ಚಿಕ್ಕಕೇತಯದಂಣಾಯಕ ಆನೆಬಿದ್ದಸರಿಯನ್ನು ಕೇಂದ್ರವನ್ನಾಗಿಸಿಕೊಂಡು ಆಳುತ್ತಿರಲು ಸಾಮಂತ ಗೂಳೆನಾಯಕನು ನಿಡಗಲ್ಲು ಚೋಳ ಅರಸು ಯಿರುಂಗೋಳನ ಸಂವರಣೆಯಲ್ಲಿ ಭಾಗವಹಿಸಿ ಚಿಕ್ಕಕೇತಯದಂಣಾಯಕನ ಸಾಮಂತ ಅಪ್ಪೆಯನಾಯಕನ ಮೇಲೆ ಆಕ್ರಮಣ ಮಾಡಿ ತುರುಗಳನ್ನು ವಶಪಡಿಸಿಕೊಂಡಿದ್ದನು ಈ ಯುದ್ಧದಲ್ಲಿ ಅಪ್ಪೆಯನಾಯಕನು ವೀರಮರಣವನ್ನಪ್ಪಿದನು.

೧೨. ವಡ್ಡಗೆರೆ ನಾಗರಾಜಯ್ಯ ೨೦೧೦ ***"ವಡ್ಡಗೆರೆ ನಾಗಮ್ಮ ಮಹಾಸತಿ ಕಾವ್ಯ"*** ಬೆಂಗಳೂರು ಅನ್ನಪೂರ್ಣ ಪಬ್ಲಿಷಿಂಗ್ ಹೌಸ್ ಪುಟ-೧೧೩ ಪದ್ಯ ೮೯

೧೩. ವೈಜಯಂತಿಮಾಲ ೧೯೮೧ ***"ವಡ್ಡಗೆರೆ ನಾಗಮ್ಮ ಕಾವ್ಯ"*** ಬೆಂಗಳೂರು ಕಸಾಪ ಪುಟ-೧೧ ಪದ್ಯ ೯೩

೧೪. ವಕ್ತೃ ಹನುಮಂತಪ್ಪಜ್ಜ. ಸು ೮೦ ವ. ಯಾದಗೆರೆ, ಕೊರಟಗೆರೆ ತಾ. ೨೦/೧೧/೨೦೧೫

೧೫. ವೈಜಯಂತಿಮಾಲ ***"ಪೂರ್ವೋಕ್ತ"*** ಪುಟ-೮೯ ಅನುಬಂಧ-೧ ಪದ್ಯ ೧೪

೧೬. ನಾಗರಾಜಯ್ಯ ಬಿ. ವಿ. ಸು ೮೨ ವ. ಬಂದ್ರೆಹಳ್ಳಿ

೧೭. ***ಎ. ಕ.*** ಸಂ. ೯ ೨೦೦೯ ಹಳೇಬೀಡು ೩೮೧

೧೮. ವೈಜಯಂತಿಮಾಲ ***"ಪೂರ್ವೋಕ್ತ"*** ಪುಟ-೯೪ ಅನುಬಂಧ-೧ ಪದ್ಯ ೨೩

೧೯. ಕೆಂಕೆರೆ ಹನುಮಂತೇಗೌಡ ೨೦೧೨ ***"ಸ್ಥಳೀಯ ಇತಿಹಾಸ ಹೊಸ ಶೋಧಗಳು"*** ಬೆಂಗಳೂರು, ಕೆಂಕೆರೆ ಪ್ರಕಾಶನ ಪುಟ-೧೪೩.

೨೦. ***ಎ. ಕ.*** (ಸಂ) ೨೪ (೨೦೦೯) ತುಮಕೂರು ೮೮

೨೧. ***ಅದೇ*** ತುಮಕೂರು ೪೧

೨೨. ವೀರನಾಗಮ್ಮಳು ವಡ್ಡಗೆರೆಯಿಂದ ಸಿರಿವೊಳಲಿಗೆ ಕುದುರೆಯ ಮೇಲೆ ಒಂದೇ ದಿನದಲ್ಲಿ ಹೋಗಿ ಬರುತ್ತಿದ್ದಳಂತೆ. ಸಿರಿವೊಳಲಿನ ಜನರು ಇಂದಿಗೂ ವಡ್ಡಗೆರೆ ಈರುನಾಗಮ್ಮನ ಆರಾಧಕರಾಗಿದ್ದಾರೆ. ಸಿರಿವೊಳಲಿಗೆ ಹತ್ತಿರದ ಆಂಧ್ರಪ್ರದೇಶದ ಮಡಕಸಿರಾ ತಾಲೂಕಿನ ಅಮರಾಪುರದ ತಮ್ಮಡಿಹಳ್ಳಿ ಮತ್ತು ಗೌಡನಕುಂಟೆ ಯಿಂದ ಹನ್ನೆರಡು ಬಂಡಿಗಳಲ್ಲಿ ಈರುನಾಗಮ್ಮಳು ತನ್ನ ಪತಿ ನಾಗಣ್ಣನೊಂದಿಗೆ ಚಿತೆಯೇರಲು ಸೌದೆಯನ್ನು ತರಲಾಗಿತ್ತು. ಕ್ರಿ.ಶ ೧೧೦೮ ರಲ್ಲಿ ತ್ರಿಭುವನಮಲ್ಲ ಮಲ್ಲಿದೇವ ಚೋಳ ಮಹಾರಾಜನಿಗೆ ಕೇತಣನೆಂಬ ಬಂಡಾರಿ ಇದ್ದನು. ಸಿರಿವೊಳಲಿನ ಸಿದ್ದರಾಮೇಶ್ವರ ದೇವಾಲಯದಲ್ಲಿನ ಶಾಸನವೊಂದನ್ನು ಆಧರಿಸಿರುವುದಾಗಿ ಹೇಳುತ್ತಾ ಕೇತಣನೇ ಈರುಗ್ಯಾತರಾಯ ನಾಗಿಬಹುದೆಂದು ವಡ್ಡಗೆರೆ ನಾಗರಾಜಯ್ಯನವರು ಅಭಿಪ್ರಾಯ ಪಟ್ಟಿದ್ದಾರೆ. -ವಡ್ಡಗೆರೆ ನಾಗರಾಜಯ್ಯ ೨೦೧೦ **"ವಡ್ಡಗೆರೆ ನಾಗಮ್ಮ ಮಹಾಸತಿ ಕಾವ್ಯ"** ಅನ್ನಪೂರ್ಣ ಪಬ್ಲಿಷಿಂಗ್ ಹೌಸ್ ಬೆಂಗಳೂರು

**ಜನಪದರ ಆರಾಧನಾ ದೈವವಾದ ಈರುನಾಗಮ್ಮನ ಹೆಸರನ್ನು ಭಿನ್ನ ರೀತಿಯಲ್ಲಿ ವಿಶ್ಲೇಷಿಸುವ ಪ್ರಯತ್ನವನ್ನು ಮಾಡಲಾಗಿದೆ.** ವೀರನಾಗಮ್ಮ, ಜನಪದರ ನುಡಿಯಲ್ಲಿ ಈರುನಾಗಮ್ಮ ಎಂದೇ ಪ್ರಖ್ಯಾತಿಯಾಗಿದ್ದಾಳೆ. ಬಹುತೇಕವಾಗಿ ಪುರುಷರಿಗೆ ಅವರ ಶೌರ್ಯಯುತ ಕಾರ್ಯದ ಕಾರಣವಾಗಿ "ವೀರ" ಎಂಬುದಾಗಿ ಕರೆಯುವುದು ವಾಡಿಕೆಯಿದೆ. ಈಕೆಗೆ ವೀರ ಎಂಬುದಾಗಿ ತನ್ನ ಹೆಸರಿನ ಮುಂದೆ (ಕಿಡಿಜಜಿಮಿಥ) ಸೇರಿಸಲಾಗಿರುವ ಬಗ್ಗೆ ಪ್ರಶ್ನೆಯು ಮೂಡುವುದು ಸಹಜವಾಗಿದೆ. ಅಂದರೆ ಸ್ತ್ರೀ ದೈವವಾದ ನಾಗಮ್ಮನಿಗೆ ವೀರನಾಗಮ್ಮ >ಈರುನಾಗಮ್ಮ ಎಂದು ಕರೆಯಲಾಗಿದೆ. ಈರುನಾಗಮ್ಮ ಈ ಹೆಸರಿನ "ಈರು" ಎಂಬ

ಪದವನ್ನು ನೀರು ಎಂದು ಅರ್ಥೈಸಬಹುದಾಗಿದೆ. ಮಹಿಳೆ ಮತ್ತು ನೀರು ಅವಿನಾಭಾವ ಸಂಬಂಧವನ್ನು ಹೊಂದಿವೆ. ಮಳೆ ಬಂದಾಗ ಚೆಲ್ಲುವ ಅಥವಾ ಸಿಡಿಯುವ ನೀರನ್ನು "ಇರಚಲು" ಎಂದು ಸ್ಥಳೀಯವಾಗಿ ಕರೆಯಲಾಗುತ್ತದೆ. ಈರುನಾಗಮ್ಮ ಕಾವ್ಯದಲ್ಲಿ ನೀರು ತುಂಬಿದ ಏಳುಮಟ್ಟಿನ ಬಾವಿಯ ಉಲ್ಲೇಖವಿದೆ. ಕೆರೆಗೆ ಏರಿಯನ್ನು ಅಥವಾ ಒಡ್ಡನ್ನು ನಿರ್ಮಿಸಿದ್ದರಿಂದಲೇ ಈ ಗ್ರಾಮಕ್ಕೆ ಒಡ್ಡುಕೆರೆ ಅಥವಾ ವಡ್ಡಗೆರೆ ಎಂಬ ಹೆಸರು ಬಂದಿದೆ ಎಂದೂ ವಿಶ್ಲೇಷಿಸಲಾಗಿದೆ. ನಾಗಮ್ಮ ತುಂಬಾಡಿಯ ಹಳ್ಳದಲ್ಲಿ ತೋಡಿದ ಚಿಲುಮೆಯಲ್ಲಿ ನೀರಿನ ಬದಲು ರಕ್ತವು ಬಂದಿದ್ದರಿಂದಲೇ ಅಪಶಕುನದ ಸಂಕೇತವಾಗಿ ಈರನಾಗಮ್ಮಳ ಗಂಡ ನಾಗಣ್ಣನ ಸಾವಿನ ವಿಚಾರವು ತಿಳಿದ ಬಗ್ಗೆ ಉಲ್ಲೇಖವಿದೆ. ಅಂತೆಯೇ ಜನಪದರ ನುಡಿಯಲ್ಲಿ 'ಊರಿಗೆ ಬಂದವಳು ನೀರಿಗೆ ಬರುವುದಿಲ್ಲವೇ?' ಎಂಬ ನಾಣ್ಣುಡಿಯು ಸ್ಥಳೀಯವಾಗಿ ಸಾಮಾನ್ಯವಾಗಿ ರೂಢಿಯಲ್ಲಿದೆ. ಈ ಎಲ್ಲ ಅಂಶಗಳ ಹಿನ್ನೆಲೆಯಲ್ಲಿ ಈರುನಾಗಮ್ಮ ಎಂಬ ಹೆಸರನ್ನು ವೀರ ಎಂಬ ಪರಿಕಲ್ಪನೆಯ ನೆಲೆಯಲ್ಲಿ ಪರಿಭಾವಿಸುವುದಕ್ಕೆ ಬದಲಾಗಿ ಜಲದ/ನೀರಿನ ಪರಿಕಲ್ಪನೆಯ ನೆಲೆಯಲ್ಲಿ ಈ ಹೆಸರು ಬಂದಿದೆ ಎಂಬುದಾಗಿ ವಿಶ್ಲೇಷಿಸಲು ಸಾಧ್ಯವಿದೆ. ಈ ಕುರಿತು ರವಿಕುಮಾರ್‌ನೀಹಾ ರವರೊಂದಿಗೆ ಚರ್ಚಿಸಲಾಗಿದ್ದು ಇವರು ಇಂತಹ ಚರ್ಚೆಗೆ ತಮ್ಮ ಸಹಮತವನ್ನು ನೀಡುವ ಮೂಲಕ ಸಹಕರಿಸಿರುತ್ತಾರೆ.

೨೩. ವಡ್ಡಗೆರೆ ನಾಗರಾಜಯ್ಯ ಲೇ. ೨೦೧೨ ***"ಸುವರ್ಣಮುಖಿ"*** ಕೊರಟಗೆರೆ ಪುಟ–೨೧

೨೪. ವಕ್ತೃ ಲಕ್ಷ್ಮಮ್ಮ ಕೋಂ ದಿ.ಪಳ್ಳರಂಗಯ್ಯ ಜೆಟ್ಟಿ ಅಗ್ರಹಾರ

೨೫. ಕೆಂಕೆರೆ ಹನುಮಂತೇಗೌಡ(ಸಂ) ೨೦೧೧ ***"ಪೂರ್ವೋಕ್ತ"*** ಪುಟ–೩೦೦ ಪದ್ಯ ೮೧

೨೬. ವೈಜಯಂತಿಮಾಲ ***"ಪೂರ್ವೋಕ್ತ"*** ಪುಟ–೨೬ ಪದ್ಯ ೨೨೬

೨೭. ಲಕ್ಷ್ಮಮ್ಮ ಕೋಂ ದಿ. ಪಳ್ಳರಂಗಯ್ಯ ಸು ೬೮ ವ. ಅಗ್ರಹಾರ ಕೊರಟಗೆರೆ ತಾಲೂಕು

೨೮. ಕಾವಲ್ಲಮ್ಮ ೨೦೦೫ ***"ಮಧುಗಿರಿ ಮಹಾನಾಡು ಪ್ರಭುಗಳು"*** ಪುಟ–೧೭೭

೨೯. ಸಿರಾದ್ ಫಯಾಜ್‌ಖಾನ್ ಮತ್ತು ಮದ್ದೆ ಗ್ರಾಮವು ಸ್ವಾರಮ್ಮನ ಪದಗಳಲ್ಲಿ ಬಂದಿರುವುದರಿಂದ ಈಕೆಯ ಕಾಲಮಾನವನ್ನು ಸುಮಾರು ಕ್ರಿ.ಶ ೧೮ನೇ ಶತಮಾನ ಎಂದು ಗುರ್ತಿಸಲಾಗಿದೆ – ಇತಿಹಾಸ ದರ್ಶನ ಸಂ. ೨೧ ೨೦೦೬ ಪುಟ–೧೦೬.

೩೦. ಶಿವಶರಣೆಯಾದ ಸ್ವಾರಮ್ಮನ ಮನೆಯ ಮುಂದಿನ ನೀರಿನ ಕೊಳದಲ್ಲಿ ಕಟುಕನೊಬ್ಬನು ಪ್ರಾಣಿಯನ್ನು ಕತ್ತರಿಸಿದ ಆಯುಧವನ್ನು ತೊಳೆದಿದ್ದರಿಂದ ಮನನೊಂದಿದ್ದಳು. ಆದರೇ ತುಮಕೂರು ಜಿಲ್ಲೆಯಲ್ಲಿ ಪ್ರಚಲಿತವಿರುವ ದಿಬ್ಬದವೀರ ಬೊಮ್ಮಣ್ಣನ ಕಾವ್ಯ, ಜಲಧಿಬೊಪ್ಪರಾಯಚರಿತೆ ಯಂತಹ ಹಲವು ಮೌಖಿಕ ಸಂಪ್ರದಾಯಗಳಲ್ಲಿ ಮುಸಲ್ಮಾನರ ಆಕ್ರಮಣಗಳ ಪ್ರಸಂಗವನ್ನು ಪದೇ–ಪದೇ ಉಲ್ಲೇಖಿಸಲಾಗಿದೆ.

೩೧. ಸ್ವಾರಮ್ಮ ತನ್ನ ಪತಿಯು ಅನ್ಯ ಸ್ತ್ರೀಯೊಂದಿಗೆ ಸಂಸಾರ ನಿರತನಾಗಿದ್ದ ಶಂಕರಲಿಂಗನನ್ನು ಕಂಡು ಆತನ ಜುಟ್ಟನ್ನು ಹಿಡಿದು ಬೆಟ್ಟದಿಂದ ಕೆಳಗೆ ತಳ್ಳಿದಾಗ ಆತನ ತಲೆಯ ಕೂದಲು ಕಿತ್ತು ಸ್ವಾರಮ್ಮಳ ಕೈಗೆ ಬಂದಿತ್ತು ಎಂಬ ನಂಬಿಕೆಯ ಹಿನ್ನೆಲೆಯಲ್ಲಿ ಇಂದಿಗೂ ಜುಟ್ಟು ಇಲ್ಲದ ತೆಂಗಿನಕಾಯಿಯನ್ನು ಒಡೆಯಲಾಗುತ್ತದೆ. ತನ್ನ ಪತಿಯ ಪ್ರೇಯಸಿ ಗೊಲ್ಲರ ಮದ್ದೆಮ್ಮಳು ತನ್ನ ಪತಿಯೊಂದಿಗೆ ಸಂಸಾರ ನಿರತಳಾಗಿದ್ದುದನ್ನು ಕಂಡು ಗಾರೆಬೆಟ್ಟದಲ್ಲಿ ಆಕೆಯನ್ನು ಕೊಂದಳು. ಮದ್ದೆಮ್ಮಳ ಗರ್ಭದಲ್ಲಿದ್ದ ತನ್ನ ಪತಿಯ ಪಿಂಡವನ್ನು ಹೊರಬರುವಂತೆ ತುಳಿದು ಕೊಂದಳೆಂಬ ಐತಿಹ್ಯವಿದೆ. ಹೀಗೆ ಪತಿ ಹತ್ಯೆ, ಸ್ತ್ರೀ ಹತ್ಯೆ, ಶಿಶು ಹತ್ಯೆಗಳನ್ನು ಮಾಡಿದವಳೆಂಬ ವಿಮರ್ಶೆಗಳು ಕೇಳಿ ಬರುತ್ತವೆ.

೩೨. ಸ್ವಾರಮ್ಮಳನ್ನು ಕುರಿತು ಮಾಡಲಾಗಿರುವ ಅಧ್ಯಯನಗಳೆಂದರೆ ಸಣ್ಣನಾಗಪ್ಪರವರ "ಮದ್ದೇದ ಸ್ವಾರಮ್ಮನ ಪದನೂರು" ಎಂಬ ಜನಪದ ಕಾವ್ಯಗಳ ಸಂಗ್ರಹ. ಇತಿಹಾಸದರ್ಶನ ಸಂ.೨೧ ೨೦೦೬ ರಲ್ಲಿ ಪ್ರಟವಾಗಿರುವ ವಿ.ಆರ್ ಚೆಲುವರಾಜನ್‌ರವರು "ಸ್ವಾರಮ್ಮನ ದೇವಾಲಯ ಮತ್ತು ಅಪ್ರಕಟಿತ ಶಾಸನ" ಎಂಬ ಶೀರ್ಷಿಕೆಯ ಲೇಖನ. ಡಾ.ಡಿ.ಕೆ.ಚಿತ್ತಯ್ಯ ಪೂಜಾರ್ ರವರ "ಬಿಸಿಲಬೇವು" ಎಂಬ ಗ್ರಂಥದಲ್ಲಿ ಸ್ವಾರಮ್ಮನ ಕುರಿತು ನೀಡಿರುವ ಮಾಹಿತಿ ಮುಂತಾದುವು.

೩೩. ನೊಳಂಬವಾಡಿ ೩೨೦೦೦ ಎಂದು ಕರೆಯುತ್ತಿದ್ದ ರಾಜ್ಯಕ್ಕೆ ತುಮಕೂರು ಜಿಲ್ಲೆಯ ಗಡಿ ಪ್ರದೇಶವಾಗಿದ್ದು ಆಂಧ್ರಪ್ರದೇಶಕ್ಕೆ ಸೇರಿದ ಹೆಂಜೇರು /ಹೇಮಾವತಿ ರಾಜಧಾನಿಯಾಗಿತ್ತು. ಇಲ್ಲಿ ಆಳುತ್ತಿದ್ದ ಅರಸರನ್ನು ನೊಳಂಬಪಲ್ಲವರೆಂದು ಕರೆಯಲಾಗುತ್ತದೆ. ನೊಳಂಬಾದಿರಾಜ ಮಹೇಂದ್ರನ ಕಾಲದಲ್ಲಿ ನೊಳಂಬವಾಡಿ ೩೨೦೦೦ ರಾಜ್ಯವು ಧರ್ಮಪುರಿ, ಮಂಡ್ಯ, ಚಿತ್ತೂರು, ಬಳ್ಳಾರಿ, ತುಮಕೂರುಗಳ ನಡುವೆ ವಿಸ್ತರಿಸಿತ್ತು. ಈತನು ಪರಮ ಶಿವನ ಮಹಾನ್ ಭಕ್ತನಾಗಿದ್ದನು.

೩೪. ***"ತುಮಕೂರು ಜಿಲ್ಲಾ ಗ್ಯಾಸೆಟಿಯರ್"*** ೨೦೧೭, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ. ಬೆಂಗಳೂರು. ಪುಟ–೧೧

೩೫. ಕಪ್ಪಳಿಯಂತೆ ಒಂದು ಗಡಿಗೆ ತುಪ್ಪವನ್ನು ನೀಡಲಿಲ್ಲ ಎಂಬ ಕಾರಣಕ್ಕೆ ದೊಡ್ಡಬೋರೇಗೌಡ ಎಂಬುವವನ ಕುಟುಂಬವನ್ನೇ ಕೊಲ್ಲಲಾಗಿತ್ತು ಇದರಿಂದ ಭೀತಿಗೊಂಡ ಜನರು ವಲಸೆ ಹೋಗಲಾರಂಭಿಸಿದರು.

೩೬. ***ಇತಿಹಾಸ ದರ್ಶನ ಸಂ. ೨೧,*** ೨೦೦೬ ಪುಟ-೧೦೮. ಬಾಗಿಲುವಾಡದ ಶಾಸನದ ಪಾಠ- "ಸಿದ್ಧಂ ಸ್ವಸ್ತಿಶ್ರೀ ನೀಲಕಣ್ಠೋಜ ರಾಮಗ ಬುವಿರೈವೋಜ ಪ್ರಸಾದವ ಬೆಸಗೆಯ್ದ" ಶಾಸನದ ವಿವರ- ಸ್ವಾರಮ್ಮನ ದೇವಾಲಯದಲ್ಲಿ ನವರಂಗದಿಂದ ಅಂತರಾಳಕ್ಕೆ ಹೋಗುವ ಬಾಗಿಲಿನ ಚೌಕಟ್ಟಿನ ಅಡ್ಡಪಟ್ಟಿಯ ಮೇಲೆ ೨೪ ಅಕ್ಷರಗಳಿಂದ ಕೂಡಿದ ಕನ್ನಡ ಶಾಸನವಿದೆ. ಇಲ್ಲಿ ಬಳಸಿರುವ ಲಿಪಿ ಸ್ವರೂಪವನ್ನು ಆಧರಿಸಿ, ಲಿಪಿತಜ್ಞರಾದ ದೇವರಕೊಂಡಾರೆಡ್ಡಿರವರು ಈ ಶಾಸನದ ಕಾಲಮಾನವನ್ನು ಕ್ರಿಶ ೭೫೦ ರಿಂದ ೮೦೦ ಎಂದು ಅಭಿಪ್ರಾಯ ಪಟ್ಟಿದ್ದಾರೆ. ಸ್ವಸ್ತಿಶ್ರೀ ಗೆ ಮೊದಲು ಇರುವ ಸುರುಳಿಯಾಕಾರದ ಸಂಕೇತಾಕ್ಷರವು ಶುಭ ಚಿಹ್ನೆಯೆಂದು ಗುರ್ತಿಸಲಾಗಿದೆ. ಎ.ಕ ದ ಹಲವು ಸಂಪುಟಗಳಲ್ಲಿ ಇದಕ್ಕೆ "ಸಿದ್ಧಂ" ಎಂಬ ಅರ್ಥವನ್ನು ನೀಡಲಾಗಿದೆ.

೩೭. ಸಣ್ಣನಾಗಪ್ಪ ೨೦೦೨ ***"ಮದ್ದೇದ ಸ್ವಾರಮ್ಮನ ಪದನೂರು"*** ಪಾವಗಡ, ಸ್ಫೂರ್ತಿ ಪ್ರಕಾಶನ, ಪುಟ-೮ ಪದ್ಯ ೧೦

೩೮. ***ಇತಿಹಾಸ ದರ್ಶನ ಸಂ. ೨೧*** ೨೦೦೬. ವಿ. ಆರ್. ಚೆಲುವರಾಜನ್ ಲೇ.

೩೯. ಸಣ್ಣನಾಗಪ್ಪ ***"ಪೂರ್ವೋಕ್ತ"*** ಪುಟ-೧೭ ಪದ್ಯ ೮೦

೪೦. ***ಅದೇ*** ಪುಟ-೮ ಪದ್ಯ ೧೧

೪೧. ***"ತುಮಕೂರು ಜಿಲ್ಲಾ ಗೆಜೆಟಿಯರ್"*** ೨೦೧೭ ಪುಟ-೫೦

೪೨. ***ಎ. ಕ.*** ಸಂ. ೧೨ ಪಾವಗಡ ೫೪. ೧೪೮೭

೪೩. ವಸು ಎಂ. ವಿ. (ಸಂ) ೨೦೦೧ ***"ದಕ್ಷಿಣ ಕರ್ನಾಟಕದ ಅರಸು ಮನೆತನಗಳು"*** ಹಂಪಿ ಪ್ರಸಾರಂಗ ಕ. ವಿ. ವಿ. ಪುಟ-೦೪

೪೪. ***ಎ. ಕ.*** ಸಂ ೧೨ ಸಿರಾ ೩೭

೪೫. ***ಎಸ್. ಐ. ಐ.*** ix ಭಾಗ-೧ ೧೪೬

೪೬. ವಸು. ಎಂ. ವಿ. (ಸಂ) ೨೦೦೧ ***"ಪೂರ್ವೋಕ್ತ"*** ಪುಟ-೨೭

೪೭. ಸಣ್ಣನಾಗಪ್ಪ ***"ಪೂರ್ವೋಕ್ತ"*** ಪುಟ-೨೦ ಪದ್ಯ ೧೦೪

೪೮. ಸಣ್ಣನಾಗಪ್ಪ ಮತ್ತು ವಿ. ಆರ್. ಚೆಲುವರಾಜನ್ ರವರೊಂದಿಗೆ ಸಂವಾದ

೪೯. ವಸು ಎಂ. ವಿ. *ಕಳ್ಳುಬಳ್ಳಿ-ಪುರಾಣದೊಳಗೆ* ***ಚರಿತ್ರೆಯ ಹೂರಣ*** ***"ಪ್ರಜಾವಾಣಿ"*** ದಿನಾಂಕ: ೩೦/೦೯/೨೦೧೪

೫೦. ***ಅದೇ,***

೫೧. ಚಿತ್ತಯ್ಯ ಪೂಜಾರ್ ೨೦೧೧ ***"ಬಿಸಿಲಬೇವು"*** ಬೆಂಗಳೂರು, ಸಿವಿಜಿ ಇಂಡಿಯಾ. ಪುಟ-೮೩

೫೨. ಚಂದ್ರಶೇಖರ್. ಎನ್ (ಸಂ) ೨೦೧೭ ***"ತುಮಕೂರು ಜಿಲ್ಲಾ ಗ್ಯಾಸೆಟಿಯರ್"*** ಕರ್ನಾಟಕ ಗ್ಯಾಸೆಟಿಯರ್ ಇಲಾಖೆ. ಬೆಂಗಳೂರು ಪುಟ-೧೧

೫೩. **ಸಿದ್ಧರಬೆಟ್ಟ-** ಈ ನೆಲೆಯಲ್ಲಿ ಸಿದ್ಧಪುರುಷರ ಪರ್ಣಶಾಲೆಗಳಿವೆ. ಯೋಗಶಕ್ತಿಯ ತೇಜಸ್ಸಿನ ಸೂಚಕವಾದ ಗದ್ದುಗೆಗಳಿವೆ. ಸಿದ್ದರ, ಯತಿಗಳ ನೆಲೆವೀಡಾಗಿರುವುದರಿಂದ ಈ ಗಿರಿಯನ್ನು ಸಿದ್ಧರಗಿರಿ, ಸಿದ್ಧರಬೆಟ್ಟ ಎಂದು ಕರೆಯಲಾಗುತ್ತದೆ. ವಿಜಯನಗರದ ಪ್ರೌಢದೇವರಾಯನಿಗೆ ಅನುಗ್ರಹ ನೀಡಿದ ಹಾಗೂ ನೂರೊಂದು ವಿರಕ್ತರಿಗೆ ತತ್ವೋಪದೇಶ ಮಾಡಿದ ಹರದನಹಳ್ಳಿಯ ೧೩ನೇ ಗುರುಗಳಾದ ಶಂಕರಸಿದ್ಧೇಶ್ವರರ ಗದ್ದುಗೆ ಇಲ್ಲಿದೆ. ವೆಂಕಟಾವಧೂತರು, ಮಾತೆ ಅಮ್ಮಾಜಮ್ಮ, ಗಮಲದಪ್ಪನ ಗದ್ದುಗೆಗಳಿವೆ. ವೀ.ಚಿಕ್ಕವೀರಯ್ಯ ೧೯೯೧ "ಸಿದ್ಧರಬೆಟ್ಟ ಒಂದು ದರ್ಶನ" ದಲ್ಲಿ ಉಲ್ಲೇಖಿಸಿರುವಂತೆ ಓ.ಎನ್.ಲಿಂಗಣ್ಣನವರು ಮೈಸೂರು ವಿ.ವಿ. ದ ಪ್ರಚಾರೋಪನ್ಯಾಸ ಮಾಲೆಯ ತಮ್ಮ "ಎಡೆಯೂರು ತೋಟದ ಸಿದ್ಧಲಿಂಗ ಯತಿ" ಎಂಬ ಕಿರುಹೊತ್ತಿಗೆಯಲ್ಲಿ ನಿರೂಪಿಸಿದ್ದಾರೆ. ಆದರೇ ಶಂಕರ ಸಿದ್ಧೇಶ್ವರರ ಗದ್ದುಗೆ ಬೆಟ್ಟದ ಯಾವ ನೆಲೆಯಲ್ಲಿದೆ ಎಂಬುದನ್ನು ಗುರ್ತಿಸಲು ಅಸಾಧ್ಯವಾಗಿದೆ.

**ಸುವರ್ಣಗಿರಿ-** ಸಿದ್ಔಷಧಿಗಳ ಗುಣವನ್ನೊಂದಿರುವ ಗಿಡಮೂಲಿಕೆಗಳು ಇಲ್ಲಿವೆ. ಸರ್ವರೋಗ-ರುಜಿನಗಳನ್ನು ಪರಿಹರಿಸಬಲ್ಲ ಔಷಧಿ ಗುಣವಿರುವ ಸಸ್ಯಕ್ಷೇತ್ರ ಇದಾಗಿದೆ. ಇಂದಿಗೂ ಬೆಟ್ಟದ ಮೇಲಿನ ಜಲಗುಂಡಿಯ ನೀರನ್ನು ದೇಹದ ಮೇಲೆ ಹಾಕಿಕೊಳ್ಳುವ ಮೂಲಕ ಪಾವನರಾಗುವೆವೆಂಬ ಭಾವನೆಯನ್ನು ಇಲ್ಲಿನ ಜನ ಸಮೂಹ ಹೊಂದಿದ್ದಾರೆ. ಇಲ್ಲಿ ಕಬ್ಬಿಣವನ್ನು ಬಂಗಾರವನ್ನಾಗಿಸುವ ಸಕಲ ವಿಧ್ಯಾಸಾಧಕರಿದ್ದರೆಂದೂ ಹೇಳಲಾಗುತ್ತದೆ. ಕುರಂಗರಾಜನ ಪಟ್ಟದ ಆನೆಯು ಲಾಯದಿಂದ ತಪ್ಪಿಸಿಕೊಂಡು ಕಾಲಿಗೆ ಕಟ್ಟಿದ್ದ ಸರಪಳಿಯ ಸಮೇತ ಸಿದ್ದರಬೆಟ್ಟದ ಕಾಡಿನಲ್ಲಿ ಅಡ್ಡಾಡಿ ಹಿಂತಿರುಗಿತ್ತು. ಸುವರ್ಣಮೂಲಿಕೆಯ ಚಮತ್ಕಾರಕ ಸ್ಪರ್ಶಗುಣದಿಂದ ಆನೆಯಕಾಲಿಗೆ ಕಟ್ಟಿದ್ದ ಸರಪಳಿಯು ಬಂಗಾರದ ಗುಣವನ್ನು ಪಡೆದಿತ್ತು ಎಂಬ ಐತಿಹ್ಯವೂ ಇಲ್ಲಿದೆ. ಜೀವರಕ್ಷಕ ಸಂಜೀವಿನಿ ಸಸ್ಯದ ನೆಲೆಯೂ ಇದಾಗಿದೆ ಎಂಬ ನಂಬಿಕೆಯಿದೆ. ಹಾಗೂ ಇಲ್ಲಿ ಸಸ್ಯಗಳ ಬೇರುಗಳ ಮೂಲಕ ಬರುವ ಉದ್ಭವ ಗಂಗೆಯ ನೀರಿನಿಂದ ಸಕಲ ರೋಗಗಳು ನಿವಾರಣೆಯಾಗುವುವೆಂಬ ಮೌಖಿಕ ಸಂಪ್ರದಾಯವಿದೆ.

**ಕಾಕನಗಟ್ಟಲು-** ಶ್ರೀರಾಮಚಂದ್ರನು ಸೀತೆಯೊಂದಿಗೆ ಇಲ್ಲಿಗೆ ಆಗಮಿಸಿದ್ದನು. ಇಲ್ಲಿ ವಾಸಿಸುತ್ತಿದ್ದ ಕಾಕಾಸುರನು ಇವರಿಗೆ ತೊಂದರೆ ನೀಡಿದನೆಂದೂ ಆಗ ಶ್ರೀರಾಮಚಂದ್ರನು ಕಾಕಾಸುರನ ಗರ್ವಭಂಗ

ಮಾಡಿ ಇಲ್ಲಿ ಸುಳಿಯದಂತೆ ಆಜ್ಞೆ ಮಾಡಿದನೆಂದು ಐತಿಹ್ಯವಿದೆ. ಇಲ್ಲಿ ಕಾಗೆಗಳ ಸಂಚಾರವೇ ಇಲ್ಲದಿರುವುದರ ಹಿನ್ನೆಲೆಯಲ್ಲಿ ಈ ನೆಲೆಯನ್ನು ಕಾಕನಗಟ್ಟಲು ಎಂದು ಕರೆಯಲಾಗುತ್ತದೆ.

ಇದೇ ರೀತಿಯ ಇನ್ನೊಂದು ನಂಬಿಕೆ, ವನವಾಸದ ಸನ್ನಿವೇಶದಲ್ಲಿ ಶ್ರೀರಾಮಚಂದ್ರನು ಪಾವಗಡ ತಾಲೂಕಿನ ತಿರುಮಣಿ ಕಡೆಯಿಂದ ಇಲ್ಲಿನ ಕಾಮನಬೆಟ್ಟ, /ಕಾವಿನಬೆಟ್ಟ, /ಕಾಕಾದ್ರಿಗಿರಿ, /ಕಾಮಿನಿಕೊಂಡ, /ಕಾಕಾದ್ರಿಪರ್ವತ, /ಕಾವಿನಕೊಂಡ ಬೆಟ್ಟಕ್ಕೆ ಬಂದಿದ್ದು ಇಲ್ಲಿ ಶ್ರೀರಾಮನು ಸೀತೆಯ ತೊಡೆಯಮೇಲೆ ಪವಡಿಸಿರಲು ಕಾಕರಾಜನು ಸೀತೆಗೆ ಹಿಂಸೆಯನ್ನು, ಶ್ರೀರಾಮನಿಗೆ ನಿದ್ರಾಭಂಗವನ್ನು ಉಂಟುಮಾಡಿದನು. ಇದರಿಂದ ಕುಪಿತನಾದ ಶ್ರೀರಾಮನು ಕಾಕಾಸುರನ ಗರ್ವಭಂಗ ಮಾಡಿ ಇಲ್ಲಿ ಸುಳಿಯದಂತೆ ಆಜ್ಞೆ ಮಾಡಿದನೆಂದು ಐತಿಹ್ಯವಿದೆ. ಇಲ್ಲಿಯು ಕೂಡ ಕೊರಟಗೆರೆ ತಾಲೂಕಿನ ಸಿದ್ಧರಬೆಟ್ಟದಂತೆ ರಸಸಿದ್ಧ ಸಿದ್ಧರಗವಿಯಲ್ಲಿ ಸಿದ್ಧಯೋಗಿಯೊಬ್ಬರು ತಪಸ್ಸನ್ನು ಮಾಡಿದ್ದರೆಂಬ ಐತಿಹ್ಯವೂ ಇದೆ.

**ಬೂದಗವಿ–** ಜಾತಿರಹಿತವಾದ ಶಿವನ ಅನುಯಾಯಿಗಳಾದ ಬೂದಿಸಿದ್ಧರು ಇಲ್ಲಿ ಧ್ಯಾನಾಸಕ್ತರಾಗಿ ತಂಗಿದ್ದು ಆಧ್ಯಾತ್ಮಿಕ ಸಾಧನೆ ಮಾಡಿದ್ದರ ಪರಿಣಾಮವಾಗಿ ಇಲ್ಲಿನ ಬೇಚರಾಕ್ ಗ್ರಾಮಕ್ಕೆ "ಬೂದಗವಿ" ಎಂದು ಕರೆಯಲಾಗುತ್ತದೆ. ಪ್ರಸ್ತುತ ಧಾರ್ಮಿಕ ಕ್ಷೇತ್ರವಾಗಿರುವ ಕೊರಟಗೆರೆ ತಾಲೂಕಿನ ಸಿದ್ಧರಬೆಟ್ಟಕ್ಕೆ ಭಕ್ತರು ಉತ್ತರದ ದಿಕ್ಕಿನ ಬೂದಗವಿ ಎಂಬ ಸ್ಥಳದ ಕಡೆಯಿಂದ ಈ ಬೆಟ್ಟದ ಮೇಲಿನ ಸಿದ್ದೇಶ್ವರ ದೇವರ ದರ್ಶನಕ್ಕೆ ಆಗಮಿಸುತ್ತಾರೆ.

೫೪. ಕುರಂಗರಾಜನ ಬಗ್ಗೆ ಉಲ್ಲೇಖಿಸಿರುವ ಕೃತಿಗಳೆಂದರೆ ಲಲಿತಮ್ಮರವರು ಕ್ರಿಶ ೧೯೮೦ ರಲ್ಲಿ ಮಧುಗಿರಿ ಇತಿಹಾಸ ಎಂಬ ಕೃತಿಯನ್ನು ರಚಿಸಿದ್ದಾರೆ. ಸದರಿ ಕಿರುಹೊತ್ತಿಗೆಯಲ್ಲಿ ಮಧುಗಿರಿಯ ಅರಸ ಇಮ್ಮಡಿಚಿಕ್ಕಪ್ಪಗೌಡರು ಕುರಂಕೋಟೆಯ ಬಳಿಯ ಪಾಳೆಯಗಾರನಾದ ಕುರಂಗರಾಯನನ್ನು ಸಿದ್ಧರಗಿರಿಗೆ ಕೋಟೆಕಟ್ಟಿಸಿ ಅಲ್ಲಿನ ಮೇಲ್ವಿಚಾರಣೆಗಾಗಿ ನೇಮಿಸಿದ್ದರೆಂದು ಉಲ್ಲೇಖಿಸಿದ್ದಾರೆ. ವೀ. ಚಿಕ್ಕವೀರಯ್ಯ ರವರು ೧೯೯೧ ರಲ್ಲಿ ಸಿದ್ಧರಬೆಟ್ಟ ಒಂದು ದರ್ಶನ ಎಂಬ ಕಿರುಹೊತ್ತಿಗೆಯನ್ನು ರಚಿಸಿದ್ದಾರೆ. ಓ. ನಾಗರಾಜು ರವರು ಕುರಂಗರಾಜ ವೈಭವ ಎಂಬ ಕಾದಂಬರಿಯನ್ನು ರಚಿಸಿದ್ದಾರೆ. ವಡ್ಡಗೆರೆ ನಾಗರಾಜಯ್ಯರವರು ಸುವರ್ಣಮುಖಿ ಸ್ಮರಣ ಸಂಚಿಕೆಯಲ್ಲಿ ಕೊರಟಗೆರೆ ತಾಲೂಕಿನ ಸಾಂಸ್ಕೃತಿಕ ಪರಂಪರೆಗಳು ಎಂಬ ಲೇಖನವನ್ನು ರಚಿಸಿದ್ದಾರೆ. ಈ ಲೇಖನದಲ್ಲಿ ಕುರಂಗರಾಜನ ಕುರಿತು ಮಾಹಿತಿಯನ್ನು ನೀಡಿದ್ದಾರೆ.

೫೫. ರೆ. ಜಾನ್ ಎಫ್ ಕಿಟಲ್. ೧೯೯೯ ***"ಕನ್ನಡ–ಇಂಗ್ಲೀಷ್ ಡಿಕ್ಷನರಿ"*** ಏಷಿಯನ್ ಎಜುಕೇಷನಲ್ ಸರ್ವೀಸ್ ನ್ಯೂಡೆಲ್ಲಿ, ಮದಾಸ್.

೫೬. ಮೌರ್ಯ ವಂಶದ ಸ್ಥಾಪಕ ಚಂದ್ರಗುಪ್ತ ಮೌರ್ಯನು ನವಿಲುಗಳ ಪೋಷಕನಾಗಿದ್ದು ಮಯೂರಸುತ ನೆಂಬ ಪರ್ಯಾಯ ನಾಮವನ್ನು ಹೊಂದಿದ್ದು ಗುಪ್ತ ಸಾಮ್ರಾಜ್ಯದ ಸ್ಥಾಪಕನಾಗಿದ್ದನು.

೫೭. ಮಧುಗಿರಿಯ ಮಹಾನಾಡಪ್ರಭು ಇಮ್ಮಡಿ ಚಿಕ್ಕಪ್ಪಭೂಪಾಲ (೧೫೮೫–೧೬೨೦) ರಿಗೆ ಮೂವರು ಮಕ್ಕಳು ತೋಟೇಂದ್ರ, ಚನ್ನಪ್ಪಗೌಡ, ಸಪ್ಪೇಂದ್ರ (ಮುಮ್ಮಡಿ ಚಿಕ್ಕಪ್ಪಗೌಡ). ಹರುವೇಕೋಟೆ ಕದನದಲ್ಲಿ ತೋಟೇಂದ್ರನು ಮರಣವಾಗಿ, ಚನ್ನಪ್ಪಗೌಡನು ಅಕಾಲ ಮರಣಕ್ಕೆ ತುತ್ತಾದನು. ಮಲ್ಲಿಕಾರ್ಜುನ ಕವಿಯ "ಇಮ್ಮಡಿ ಚಿಕ್ಕಭೂಪಾಲ ಸಾಂಗತ್ಯದಲ್ಲಿ ತೋಟೇಂದ್ರ ಮತ್ತು ಸಪ್ಪೇಂದ್ರರ ಬಗ್ಗೆ ವಿವರಗಳಿದ್ದು, ಚನ್ನಪ್ಪಗೌಡರ ಬಗ್ಗೆ ವಿವರಗಳಿಲ್ಲ. ಆದರೇ ಕೆ.ನಾರಾಯಣಾಚಾರ್‌ರವರ ಅಭಿಪ್ರಾಯದಲ್ಲಿ ಚನ್ನಪ್ಪಗೌಡನು ಚೆನ್ನರಾಯನದುರ್ಗವನ್ನು ಆಳುತ್ತಿದ್ದನೆನ್ನಲಾಗಿದೆ. ಈತನ ಹೆಸರಿನ ಸ್ಮರಣಾರ್ಥವಗಿ ಈ ದುರ್ಗಕ್ಕೆ "ಚೆನ್ನರಾಯನದುರ್ಗ"ವೆಂದು ಹೆಸರಿಸಲಾಗಿದೆ. ಸಪ್ಪೇಂದ್ರ /ಮುಮ್ಮಡಿ ಚಿಕ್ಕಪ್ಪಗೌಡರು ತಮ್ಮ ಜೀವಿತದ ಕಾಲದಲ್ಲಿಯೇ ತಮ್ಮ ಮೂವರು ಮಕ್ಕಳಾದ ಸಂಗಪ್ಪಗೌಡ, ಹಿರೇತೋಂಟದಪ್ಪಗೌಡ, ಮತ್ತು ಕಾಳಚಿಕ್ಕಪ್ಪಗೌಡರಿಗೆ ಚೆನ್ನರಾಯನದುರ್ಗ, ಮಿಡಿಗೇಶಿ ಮತ್ತು ಮಧುಗಿರಿಗಳನ್ನು ಹಂಚಿಕೊಟ್ಟರು. ೧೬೧೩–೧೬೧೪ ರ ಸಂದರ್ಭದಲ್ಲಿ ಚೆನ್ನರಾಯನದುರ್ಗದ ಕೋಟೆಯ ಕಾಮಗಾರಿ ನಡೆದಿತ್ತು.– ಕಾವಲ್ಲಮ್ಮ ಆರ್ ೨೦೦೫ "ಮಧುಗಿರಿಯ ಮಹಾನಾಡ ಪ್ರಭುಗಳು" ಪುಟ–೬೮.

೫೮. ಯೋಗೀಶ್ವರಪ್ಪ. ಡಿ. ಎನ್. ಲೇ. ೨೦೦೮ ***"ಜ್ಞಾನಾದ್ರಿ"*** ಪುಟ–೨೨.

೫೯. *ಎ. ಕ. ೧೨* ತುಮಕೂರು ಮದ್ದಗಿರಿ–೩೧

೬೦. ಹರದನಹಳ್ಳಿಯ ಹದಿಮೂರನೇ ಗುರುಗಳಾದ ಶಂಕರ ಸಿದ್ದೇಶ್ವರರ ಗದ್ದುಗೆಯು ಸಿದ್ಧರಬೆಟ್ಟದಲ್ಲಿದೆ ಎಂಬ ಅಂಶವನ್ನು ಓ. ಎನ್. ಲಿಂಗಣ್ಣಯ್ಯನವರು ಮೈಸೂರು ವಿಶ್ವಿದ್ಯಾನಿಲಯದ ಪ್ರಚಾರೋಪನ್ಯಾಸ ಮಾಲೆಯ ತಮ್ಮ "ಎಡೆಯೂರು ತೋಂಟದ ಸಿದ್ಧಲಿಂಗ ಯತಿ" ಎಂಬ ಪುಸ್ತಕದಲ್ಲಿ ಉಲ್ಲೇಖಿಸಿದ್ದಾರೆ. –ವೀ.ಚಿಕ್ಕವೀರಯ್ಯ ರವರು ೧೯೯೧ ರಲ್ಲಿ ***"ಸಿದ್ಧರಬೆಟ್ಟ ಒಂದು ದರ್ಶನ"*** ಸಿದ್ಧೇಶ್ವರಸ್ವಾಮಿ ಸೇವಾ ಸಮಿತಿ, ಸಿದ್ಧರಬೆಟ್ಟ,

೬೧. ಒಮ್ಮೆ ಕುರಂಗರಾಯನು ಅನಾರೋಗ್ಯದಿಂದ ಬಳಲುತ್ತಿದ್ದನು. ಆತನ ತಾಯಿಯು ಸಿದ್ಧಲಿಂಗ ಯತಿಗಳಿಂದ ಪಡೆದು ತಂದಂತಹ ಗಿಡಮೂಲಿಕೆಯಿಂದ ಕುರಂಗರಾಯನ ಅನಾರೋಗ್ಯವು ಗುಣಮುಖವಾಯಿತು. ಇಲ್ಲಿ ಸಂಜೀವಿನಿಯಂತಹ ಔಷಧೀಯ ಗುಣವುಳ್ಳ ಗಿಡಮೂಲಿಕೆಗಳಿದ್ದ ಬಗ್ಗೆ ಜನರು ವಿವರಿಸುತ್ತಾರೆ.

೬೨. ಬೇಡರ ಕಣ್ಣಪ್ಪನು ಶಿವನಿಗೆ ಮಾಂಸಾಹಾರವನ್ನು ನೈವೇದ್ಯವನ್ನಾಗಿ ಮಾಡಿದ ಸಂಗತಿಯನ್ನು ಇಲ್ಲಿ ಸ್ಮರಿಸಬಹುದಾಗಿದೆ.

೬೩. ಸಿದ್ದಪ್ಪನ ತಂಗಿಯರಾದ ಬುಕ್ಕಪಟ್ನದ ದೊಡ್ಡಮ್ಮ, ಚೆನ್ನಪಟ್ಟಣದ ಕಾವಲಮ್ಮ, ನೇಗಲಾಲದ ಕಾವಲ್ಲಮ್ಮ, ಜೆಟ್ಟಿಅಗ್ರಹಾರದ ಬೇವಿನಳ್ಳಮ್ಮ ಸಂಕಾಪುರದಮ್ಮ, ಗೊಲ್ಲಹಳ್ಳಿಯ ಅಮ್ಮ, ದೇವತೆಗಳು ಈ ಕೆರೆಯಲ್ಲಿ ಜಲಕ್ರೀಡೆಯಾಡಿ ಅಚ್ಚಂಡೆ /ಅಚ್ಚಿನಕಲ್ಲಿನ (ಹೆಣ್ಣು ಮಕ್ಕಳು ಕಲ್ಲು ಹರಳಿನಲ್ಲಿ ಆಡುವ ಅಲಿಕಲ್ಲಿ ಆಟ) ಆಟವಾಡುತ್ತಿದ್ದರು. ಎಂಬ ಐತಿಹ್ಯವೂ ಇದೆ. ಇಂದಿಗೂ ವರ್ಷಕ್ಕೊಮ್ಮೆ ಈ ದೇವತೆಗಳನ್ನು ಸಿದ್ದರಬೆಟ್ಟಕ್ಕೆ ಊರು ಸಮೇತ ಕರೆತಂದು ಇದೇ ಕೆರೆಯಲ್ಲಿ ದೇವರಿಗೆ ಮಡಿ (ಜಳಕ) ಮಾಡಿಸಿ ಅಲ್ಲಿಯೇ ಪೂಜಿಸಲಾಗಿತ್ತದೆ. ಜನಸಮೂಹವು ತಂದಿರುವ ದವಸ, ಧಾನ್ಯಗಳನ್ನು ಇಲ್ಲಿಯೇ ಒಟ್ಟಾಗಿ ಅಡುಗೆ ಮಾಡಿ ಎಲ್ಲರೂ ಭೇಧವಿಲ್ಲದೇ ಸಾಮೂಹಿಕ ಪಂಕ್ತಿ ಭೋಜನ ಮಾಡುವುದು ವಾಡಿಕೆಯಾಗಿದೆ.

೬೪. ದೊಡ್ಡನರಸಪ್ಪ ಸು ೯೩ ವ. ಮುಖಂಡರು ದೊಡ್ಡಕಾಯಪ್ಪ ದೇವಸ್ಥಾನ, ಕುರಂಕೋಟೆ, ಕೊರಟಗೆರೆ

೬೫. ದಿನಾಂಕ:೦೬/೧೦/೨೦೧೭ ರಂದು ತುಮಕೂರಿನಲ್ಲಿ ನಡೆದ ರಾಷ್ಟ್ರೀಯ ಮಟ್ಟದ ವಿಚಾರ ಸಂಕಿರಣದಲ್ಲಿ ಡಾ. ಚಿನ್ನಸ್ವಾಮಿ ಸೋಸಲೆ ರವರು ಈ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

೬೬. ನಾಗರಾಜು ಓ. ೨೦೧೦ ***"ಕುರಂಗರಾಜ ವೈಭವ"*** ತುಮಕೂರು ಶಶಾಂಕ ಪ್ರಕಾಶನ.

೬೭. ವಡ್ಡಗೆರೆ ನಾಗರಾಜಯ್ಯ. ಲೇ. ೨೦೧೨ ***"ಸುವರ್ಣಮುಖಿ"*** ಕೊರಟಗೆರೆ ತಾಲೂಕಿನ ಸಾಂಸ್ಕೃತಿಕ ಪರಂಪರೆಗಳು

೬೮. ಯೋಗೀಶ್ವರಪ್ಪ. ಡಿ. ಎನ್. ೨೦೦೯ ***"ಮಧ್ಯಕಾಲೀನ ಕರ್ನಾಟಕದ ಪಾಳೆಯಗಾರರು"*** ಬೆಂಗಳೂರು, ಧಾತ್ರಿ ಪುಸ್ತಕ. ಪುಟ-೧೫೭

೬೯. ವಸು ಮಳಲಿ ೧೦ ಜೂನ್ ೨೦೧೪ ಪ್ರಜಾವಾಣಿ ***"ತಿರುಳ ಬಿಟ್ಟು ಸಿಪ್ಪೆ ಮೆಲ್ಲುವ ಸಿರಿ"***.

೭೦. ಜುಂಜಪ್ಪನ ಕುರಿತು ಮಾಡಲಾಗಿರುವ ಅಧ್ಯಯನಗಳಲ್ಲಿ ಪ್ರಮುಖವಾದುವು ಚೆಲುವರಾಜು ರವರು ಮಧುಗಿರಿ ತಾಲೂಕಿನ ಮಾಡಗಾನಹಟ್ಟಿಯ ದಾಸಪ್ಪರವರಿಂದ ಹಾಡಿಸಿ ಜುಂಜಪ್ಪನ ಮಹಾಕಾವ್ಯವನ್ನು ಸಂಗ್ರಹಿಸಿದ್ದಾರೆ. ಸದರಿ ಕಾವ್ಯವನ್ನು ಕ.ವಿ.ವಿ ಹಂಪಿರವರು ಬುಡಕಟ್ಟು ಮಹಾಕಾವ್ಯ ಮಾಲೆಯಲ್ಲಿ ಜುಂಜಪ್ಪ ಎಂಬ ಶೀರ್ಷಿಕೆಯೊಂದಿಗೆ ೧೯೯೭ ರಲ್ಲಿ ಪ್ರಕಟಿಸಿದ್ದಾರೆ. ಡಾ.ಕಾಳೇಗೌಡ ನಾಗವಾರ ರವರ ಕಾಡುಗೊಲ್ಲರಹಟ್ಟಿ ಒಂದು ಅಧ್ಯಯನ, ಚಿಕ್ಕಣ್ಣಯಣ್ಣೆಕಟ್ಟೆಯವರ ವೀರಜುಂಜಪ್ಪ, ಮೀರಾಸಾಬಿಹಳ್ಳಿ ಶಿವಣ್ಣನವರ ಕಾಡುಗೊಲ್ಲರ ಬುಡಕಟ್ಟು ವೀರರು, ತೀ. ನಂ. ಶಂಕರನಾರಾಯಣರವರು ರಚಿಸಿರುವ ಕಾಡುಗೊಲ್ಲರ ಸಂಪ್ರದಾಯಗಳು ಮತ್ತು ನಂಬಿಕೆಗಳು. ಪಿ. ಎಂ. ಗಂಗಾಧರಯ್ಯರವರ ಕಾಡುಗೊಲ್ಲರು ಎಂಬ ಕೃತಿಯನ್ನು, ಎಸ್.ಶಿವಣ್ಣನವರು ಕಾಡುಗೊಲ್ಲರ ಸಾಂಸ್ಕೃತಿಕ ವೀರರು ಎಂಬ ಕೃತಿಯನ್ನು. ರತ್ನಮ್ಮ.ಡಿ ರವರು ೨೦೦೮ ರಲ್ಲಿ ಜುಂಜಪ್ಪನ ಕಾವ್ಯ ಎಂ,ಫಿಲ್ ಸಂಶೋಧನಾ ಪ್ರಬಂಧವನ್ನು ರಚಿಸಿದ್ದಾರೆ. ಬಸವರಾಜ ಕೆ.ಪಿ ರವರು ೨೦೦೭ ರಲ್ಲಿ ಸಿರಾ ಸೀಮೆಯ ಸಾಂಸ್ಕೃತಿಕ ವೀರರು ಪಿಎಚ್.ಡಿ ಮಹಾಪ್ರಬಂಧವನ್ನು ರಚಿಸಿ ಜನಪದ ಅಧ್ಯಯನ ವಿಭಾಗ, ಕವಿವಿ, ಹಂಪಿಗೆ ಸಲ್ಲಿಸಿದ್ದಾರೆ.

೭೧. ಪೂಜಾರಪ್ಪ ಸು ೭೫ ವ. ಚಿತ್ತಯ್ಯ ಸು ೭೦ ವ. ಯರಪ್ಪ ಸು ೭೦ ವ. ಪೂಜಾರಿ, ಬೇವಿನಹಳ್ಳಿ ಗೊಲ್ಲರಹಟ್ಟಿ, ಸಿರಾ ತಾಲೂಕು. ಇವರು ಜುಂಜಪ್ಪನ ಹಿನ್ನಲೆ, ಹುಟ್ಟು, ಬದುಕು, ಹಾಗೂ ಆತನು ದೈವೀಕರಣಗೊಂಡ ಬಗೆಯನ್ನು ಕುರಿತು ಮಾಹಿತಿಯನ್ನು ನೀಡಿದ್ದಾರೆ.

೭೨. ಬಡಮೈಲ- ಜುಂಜಪ್ಪನ ಬಂಟನಂತಿದ್ದ ಹೋರಿ. ಜುಂಜಪ್ಪನ ಗೋ ಸಂಪತ್ತು ಹೆಚ್ಚಿದಂತೆ ಅಸೂಯೆಗೊಂಡ ಕಂಬೇರ ಮಾವಗಳು ಜುಂಜಪ್ಪನ ಗೋ ಸಂಪತ್ತು ನಾಶಪಡಿಸುವ ಸಲುವಾಗಿ ಜುಂಜಪ್ಪನ ಹಸುಗಳು ನೀರು ಕುಡಿಯಲು ಬರುವ ಪರುಸವ್ವನ ಕೆರೆಯಲ್ಲಿ ಹುಲಿಕುಂಟೆಯ ಮಾಟಗಾರ ತಮ್ಮಣ್ಣನಿಂದ ಮಾಟ-ಮಂತ್ರ ಮಾಡಿಸಿ ಒಂದು ಜೀವಂತ ಕರುವನ್ನು ಹೂತಿದ್ದರು. ನೀರು ಕುಡಿಯಲು ಬಂದ ಜುಂಜಪ್ಪ ಮತ್ತು ಆತನ ತಮ್ಮಂದಿರು ಈ ಕರುವನ್ನು ರಕ್ಷಿಸಿ ಸಾಕಿದರು. ರೋಗದ ಕರುವಾಗಿದ್ದ ಇದುವೇ ಬೆಳೆದು ದಷ್ಟ-ಪುಷ್ಟವಾದ ಹೋರಿಯಾಯಿತು. ಜುಂಜಪ್ಪನ ಗುಡ್ಡೆಯ ಸಮೀಪದಲ್ಲಿಯೇ ಬಡಮೈಲನ ಸಮಾಧಿಯಿದೆ.

೭೩. ಚೆಲುವರಾಜು (ಸಂ) ೧೯೯೭ ***"ಜುಂಜಪ್ಪನ ಕಾವ್ಯ"*** ಪುಟ-೩೫೧

೭೪. ಎನ್. ನಂದೀಶ್ವರ್ (ಸಂ) ೨೦೧೭ ***"ಸೀರೆನಾಡು"*** ಪುಟ-೮೪

೭೫. ಏಳುಗೂಡಿನ ಪಶುಸಂಪತ್ತಿನ ಒಡೆಯನಾಗಿದ್ದ ಜುಂಜಪ್ಪನನ್ನು ಕಂಡ ತನ್ನ ಕಂಬೇರ ಸೋದರ ಮಾವಂದಿರು ಆತನನ್ನು ಕೊಲ್ಲುವ ಸಂಚು ಮಾಡಿ, ಅನ್ನದಲ್ಲಿ ವಿಷವನ್ನು ಬೆರೆಸಿದ್ದರು. ವಿಷದ ಅನ್ನವನ್ನು ತಿಂದಂತಹ ಜುಂಜಪ್ಪನ ಸಾಕು ನಾಯಿಯು ಸತ್ತುಹೋಯಿತು. ಅದರ ಸಮಾಧಿಯನ್ನು ಕಳುವರಹಳ್ಳಿಯ ಜುಂಜಪ್ಪನ ಗುಡ್ಡೆಯಿಂದ ಸುಮಾರು ಒಂದು ಕಿ.ಮೀ ದೂರದಲ್ಲಿ ಸಮಾಧಿ ಮಾಡಲಾಗಿದೆ ಎಂಬ ನಂಬಿಕೆಯಿದೆ. ಗುಡ್ಡೆಗೆ ಬರುವ ಭಕ್ತರು ಸಣ್ಣ ಕಲ್ಲುಗಳು ಮತ್ತು ತಂಗಡಿ ಸೊಪ್ಪನ್ನು ಸಮಾಧಿಯಿದೆ ಎನ್ನಲಾದ ಮರದ ಬುಡಕ್ಕೆ ಹಾಕುವ ಮೂಲಕ ಧನ್ಯತಾ ಭಾವವನ್ನು ಪಡೆಯುತ್ತಿದ್ದಾರೆ.

೭೬. ಪೂಜಾರಪ್ಪ ಸು. ೫೮ ವ. ಬೇವಿನಹಳ್ಳಿ ಗೊಲ್ಲರಹಟ್ಟಿ, ಹಾಗೂ ಡಾ.ಎನ್.ನಂದೀಶ್ವರ್ (ಸಂ) ೨೦೧೭ ***"ಪೂರ್ವೋಕ್ತ"*** ಪುಟ-೮೯

೭೭. ಜುಂಜಪ್ಪನಿಗೆ ಸೇರಿದ ಪೂಜಾ ವಿಗ್ರಹ ಮತ್ತು ಸಾಮಗ್ರಿಗಳನ್ನು ಬೇವಿನಹಳ್ಳಿ ಗೊಲ್ಲರಹಟ್ಟಿಯಲ್ಲಿ ಇಂದಿಗೂ ಇಟ್ಟಿದ್ದು ಇವುಗಳನ್ನು ಇಟ್ಟಿರುವ ಪೆಟ್ಟಿಗೆಯನ್ನು ಇಂದಿಗೂ ತೆಗೆದಿಲ್ಲ. ಭದ್ರವಾದ ಬೀಗವನ್ನು ಹಾಕಿದ್ದು ಪೆಟ್ಟಿಗೆಗೇ ಪೂಜೆ ಮಾಡಲಾಗುತ್ತಿದೆ. ಅದರೊಳಗೆ ಚಿನ್ನದ ವಿಗ್ರಹ, ವಸ್ತ್ರ, ಅಂಬು ಇತ್ಯಾದಿಗಳಿರ ಬಹುದೆಂದು ಹೇಳುತ್ತಾರೆಯೇ ವಿನಃ ನಿಖರವಾಗಿ ಪೆಟ್ಟಿಗೆಯೊಳಗೆ ಏನಿದೆ ಎಂಬುದು ಗೊತ್ತಿಲ್ಲ.

೭೮. ಪೂಜಾರಪ್ಪ ಸು. ೫೮ ವ. ಬೇವಿನಹಳ್ಳಿ ಗೊಲ್ಲರಹಟ್ಟಿ. ಹಾಗೂ ಎನ್. ನಂದೀಶ್ವರ್ (ಸಂ) ೨೦೧೭ ***"ಪೂರ್ವೋಕ್ತ"***

೭೯. ಪ್ರಾನ್ಸಿಸ್ ಬುಕನಾನ್ ೨೦೧೦ ***"ಎ ಜರ್ನಿ ಪ್ರಂ ಮದ್ರಾಸ್ ಥ್ರೂ ದಿ ಕಂಟ್ರೀಸ್ ಆಫ್ ಮೈಸೂರ್ ಕೆನರಾ ಅಂಡ್ ಮಲಬಾರ್"*** ಪುಟ ೭-೧೫

೮೦. ಪುಟ್ಟರಾಜು ೨೦೧೦ ***"ಮೈಸೂರು ಸಂಸ್ಥಾನದ ಇತಿಹಾಸದಲ್ಲಿ ಜಾನುವಾರು ಅಮೃತಮಹಲ್ ತಳಿ ಕುರಿತ ವಿಶೇಷ ಅಧ್ಯಯನ"*** ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧ.

೮೧. ಶಿವಣ್ಣ ಎಸ್ ೨೦೧೧ ***"ಕಾಡುಗೊಲ್ಲರ ಸಾಂಸ್ಕೃತಿಕ ವೀರರು"*** ತುಮಕೂರು ವಿ.ವಿ ಪುಟ-೫೧

೮೨. ಪ್ರಾನ್ಸಿಸ್ ಬುಕನಾನ್ ೨೦೧೦ ***"ಪೂರ್ವೋಕ್ತ"*** ಪುಟ ೭-೧೫

೮೩. ಪುಟ್ಟರಾಜು ೨೦೧೦ ***"ಪೂರ್ವೋಕ್ತ"***

೮೪. ಶಿವ ಪಾರ್ವತಿಯರ ಮಗ ವೀರಭದ್ರನು ಜನರನ್ನು ಹಾವು ಚೇಳುಗಳಿಂದ ರಕ್ಷಿಸಲು ನರಲೋಕದಲ್ಲಿ ಸಿನ್ನಮ್ಮಳ ಬಲಭುಜದಿಂದ ಬಂಗಾರದ ಹಲ್ಲಿಯಾಗಿ ಹುಟ್ಟಿಬಂದನೆಂಬ ಐತಿಹ್ಯವಿದೆ. ಶಿವನ ಪ್ರತಿರೂಪವೆಂದೇ ಆರಾಧಿಸಲಾಗುತ್ತದೆ. ಜುಂಜಪ್ಪನಿಗೆ ಇಂದಿಗೂ ಲಿಂಗಧಾರಣೆ ಮಾಡಲಾಗುತ್ತಿದೆ.

೮೫. ಜುಂಜಪ್ಪನು ತನ್ನ ಹುಟ್ಟಿನ ಬಗ್ಗೆ ತನ್ನ ತಾಯಿಯ ಸತ್ವ ಪರೀಕ್ಷೆಗೆಗಾಗಿ ಹಾವು ಚೇಳುಗಳನ್ನು ಸೃಷ್ಟಿಸಿ ಪವಾಡಗಳನ್ನು ಮಾಡಿದನೆಂಬ ನಂಬಿಕೆಯಿದೆ. ಇದನ್ನು ಕಾವ್ಯದಲ್ಲಿಯೂ ಪ್ರಸ್ತಾಪಿಸಲಾಗಿದೆ. ಹಾಗೂ ಇಂದಿಗೂ ಹಾಗಲವಾಡಿಯಲ್ಲಿರುವ ದೇವಾಲಯದಲ್ಲಿ ಜುಂಜಪ್ಪನನ್ನು ಆರಾಧಿಸಿ ಹಾವು ಚೇಳುಗಳಿಂದ ಬರಬಹುದಾದ ಆತಂಕವನ್ನು ಹೋಗಲಾಡಿಸುವಂತೆ ಬೇಡಿಕೊಳ್ಳಲಾಗುತ್ತದೆ.

೮೬. ಜುಂಜಪ್ಪನ ಆರಾಧನಾ ಕೇಂದ್ರದ ಪಕ್ಕದಲ್ಲಿಯೇ ಭೂತಪ್ಪನ ಗುಡಿಯಿದೆ. ಈತನು ಜುಂಜಪ್ಪನ ಸಹಾಯದಿಂದ ದುಷ್ಟಶಕ್ತಿಗಳನ್ನು ಪರಿಹರಿಸಿದ್ದರಿಂದ ಪೂಜಾರಿ ಚಿತ್ತಯ್ಯನಂತೆ ನನಗಿಂತ ನಿನಗೊಂದು ಪೂಜೆ ಜಾಸ್ತಿಯಾಗಲೀ ಎಂದು ಜುಂಜಪ್ಪನು ಭೂತಪ್ಪನಿಗೆ ವರ ನೀಡಿದನು.

೮೭. ಕ್ರಿ. ಶ. ೧೫೪೧ರ ಬ್ಯಾಡನಕಟ್ಟೆ ಶಾಸನವು ಅಚ್ಯುತರಾಯನು ಚೇಳೂರ ಗೌಡಗಳಿಗೆ ಬ್ಯಾಡನಕಟ್ಟೆ ಗ್ರಾಮವನ್ನು ಉಂಬಳಿಯನ್ನಾಗಿ ದಯಪಾಲಿಸಿದ್ದನ್ನು ದಾಖಲಿಸಿದೆ. ಇಲ್ಲಿ ಗೋಸಂಪತ್ತು ವಿಫುಲವಾಗಿದ್ದರಿಂದ ಉಂಬಳಿಯನ್ನು ಕೇಳಿಕೊಂಡಿರುವುದು ಸ್ಪಷ್ಟ. ಇಲ್ಲಿನ ದೃಷ್ಟೇಶ್ವರ ಗುಡಿಯ ಲಿಂಗದ ಮೇಲಿನ ಹೂಮಾಲೆಯನ್ನು ವಿಜಯನಗರದ ರಾಮರಾಯನು ಬಂದಾಗ ಅರ್ಚಕನು ಹೂ ಪ್ರಸಾಸವನ್ನು ನೀಡಿದ್ದನು. ಅದರಲ್ಲಿ ನೀಳವಾದ ಕೂದಲು ಕಂಡುಬಂದಿದ್ದು ಆಗ ಅದನ್ನು ಅರ್ಚಕನು ಲಿಂಗ ಜಟೆಯ ಕೂದಲು ಎಂದನು. ಅದರ ಪರೀಕ್ಷೆಗಾಗಿ ಶಿವನ ಕರುಣೆಯಿಂದ ಲಿಂಗದ ಜಟೆಯು ಗುಡಿಯ ತುಂಬ ಹರಡಿತ್ತೆಂಬ ಐತಿಹ್ಯವಿದೆ. -ತುಮಕೂರು *ಜಿಲ್ಲಾ ಗೆಜೆಟಿಯರ್* ೨೦೧೭ ಗೆಜೆಟಿಯರ್ ಇಲಾಖೆ ಬೆಂಗಳೂರು. ಪುಟ-೫೫

೮೮. ಜೀ. ಶಂ. ಪರಮಶಿವಯ್ಯನವರು ನಂತರ ಲಕ್ಷ್ಮಣಯ್ಯರವರು ಜನಪದ ಕಾವ್ಯಗಳನ್ನು ಸಂಗ್ರಹಿಸಿದ್ದಾರೆ. ಕೆಂಕೆರೆ ಹನುಮಂತೇಗೌಡರು ರಚಿಸಿರುವ ಕೃತಿಯಲ್ಲಿ ಹುಳಿಯಾರ ಪ್ರಭುಗಳ ಬಗ್ಗೆ ಹಾಗೂ ಕೆಂಚಮ್ಮಳ ಕುರಿತು ಮಾಹಿತಿಯನ್ನು ನೀಡಿದ್ದಾರೆ.

೮೯. ಕೆಂಕೆರೆ ಹನುಮಂತೇಗೌಡ (ಸಂ) ೨೦೧೧ ***'ಪೂರ್ವೋಕ್ತ'*** ಪುಟ ೨೫೪-೨೫೫ (ಲಕ್ಷ್ಮಣಯ್ಯ ಹುಳಿಯಾರು ಕೆಂಚಮ್ಮ ಜನಪದ ಸಂಗ್ರಹ)

೯೦. ***ಅದೇ*** ಪುಟ-೨೬೭

೯೧. ***ಅದೇ*** ಪುಟ-೨೬೭

೯೨. ***ಅದೇ*** ಪುಟ-೨೭೦

೯೩. ***ಅದೇ*** ಪುಟ-೨೭೧

೯೪. ***ಅದೇ*** ಪುಟ-೨೭೧

೯೫. ಚೆನ್ನಬಸವಯ್ಯ ಹಿರೇಮಠ, ೨೦೧೪, ***"ಪ್ರಾಚೀನ ಕರ್ನಾಟಕದ ರಾಜಕೀಯ ವಿಭಾಗಗಳು"*** ಹಂಪಿ ಕ.ವಿ.ವಿ ಪುಟ-೨೪೦

೯೬. ***ಎ. ಕ. ಸಂ. ೨೪*** ೨೦೦೯ ಚಿಕ್ಕನಾಯಕನಹಳ್ಳಿ ೫೩

೯೭. ಹುಳಿಯಾರು ನಾಡಿನಲ್ಲಿದ್ದ ಸೀಮೆಗಳು- ಮಗರೆ ೩೦೦, ಹಿರಿಯೂರು, ಸವಣುಗೆರೆ, ಬೂದಿಹಾಳು, ಮನ್ನೆಯ(ಮಣ್ಣೆ), ಬದಿರೆ, ತಂಡಗ, ಡಿಂಕನಹಾಳು, ಭೀಮಸಂದ್ರ, ಪುಟ್ಟದಗೋಣಡು, ಕಾಡನೂರು ೭೦, ದುರುಹಸೆ ೭೦, ಹೆಜ್ಜಾಜಿ ೧೨. (ಇವುಗಳಲ್ಲಿ ಕಾಡನೂರು ೭೦, ದುರುಹಸೆ ೭೦, ಹೆಜ್ಜಾಜಿ ೧೨ ಸೈನಿಕ ಆಡಳಿತ ಕೇಂದ್ರಗಳಾಗಿದ್ದವು) -ಕೆಂಕೆರೆಹನುಮಂತೇಗೌಡ ೨೦೧೨ ***"ಸ್ಥಳೀಯ ಇತಿಹಾಸ ಹೊಸ ಶೋಧಗಳು"*** ಬೆಂಗಳೂರು, ಕೆಂಕೆರೆ ಪ್ರಕಾಶನ ಪುಟ ೪೩-೪೪.

೯೮. ಕೆಂಕೆರೆ ಹನುಮಂತೇಗೌಡ (ಸಂ) ೨೦೧೨ *ಅದೇ* ಪುಟ–೪೩

೯೯. ಮಹದೇವ ಸಿ. ೨೦೧೫ ***"ಶಾಸನಗಳಲ್ಲಿ ಕುಮ್ಮಟದುರ್ಗದ ಅರಸರು"*** ಹಂಪಿ ಕ.ವಿ.ವಿ ಪುಟ–೬ (ಎ.ಕ ಸಂ ೧೧ ಹಿರಿಯೂರು ನಂ ೧೬ ಮತ್ತು ಎ.ಕ ಸಂ ೧೨ ತಿಪಟೂರು ನಂ ೧೬)

೧೦೦. ಕೆಂಕೆರೆ ಹನುಮಂತೇಗೌಡ (ಸಂ) ೨೦೧೨ ***"ಪೂರ್ವೋಕ್ತ"*** ಪುಟ–೪೪ ತುಮಕೂರು ಜಿಲ್ಲೆಯ ಕೊರಟಗೆರೆ ತಾಲೂಕಿನ ಪಾಲನಹಳ್ಳಿಯ ಕುಮಾರರಾಮ ದೇವರನ್ನು ಆರಾಧಿಸಲಾಗುತ್ತದೆ.
ಕುಮಾರರಾಮನ ಮೌಖಿಕ ಸಂಪ್ರಧಾಯಗಳನ್ನು ರಾಜ್ಯದಾದ್ಯಂತ ಗುರುತಿಸಬಹುದಾಗಿದೆ. ಕರ್ನಾಟಕದಾದ್ಯಂತ ಮತ್ತು ನೆರೆಯ ಪ್ರದೇಶಗಳಲ್ಲಿ ಕುಮಾರರಾಮನ ಜನಪ್ರಿಯತೆಗೆ ಕಾರಣವಾದ ಅಂಶಗಳನ್ನು ವಿದ್ವಾಂಸರಾದ ಪುರುಷೋತ್ತಮ ಬಿಳಿಮಲೆ ಮತ್ತು ಇತರರು ವಿಶ್ಲೇಷಿಸಿದ್ದಾರೆ. ಕುಮಾರರಾಮನು ಮಧ್ಯಕಾಲೀನ ಕರ್ನಾಟಕದ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ, ಧಾರ್ಮಿಕ ಸ್ಥಿತ್ಯಂತರಗಳ ಸಂಕೇತವಾಗಿದ್ದಾನೆ. ಇಲ್ಲಿಯವರೆವಿಗೂ ಕೇವಲ ಸ್ವಾಭಾವಿಕ ನದಿಗಳ ನೀರನ್ನು ಬಳಸಿಕೊಳ್ಳುತ್ತಿದ್ದುದರ ಜೊತೆಗೆ ಕೃತಕ ಕೆರೆಗಳನ್ನು ನಿರ್ಮಿಸಿ ಸಂಗ್ರಹಿತ ನೀರಿನಿಂದ ಅಪಾರವಾದ ಕೃಷಿಯನ್ನು ಮಾಡಲಾಯಿತು. ಇದರಿಂದ ಸಂಪತ್ತು ಕ್ರೂಢೀಕೃತಗೊಂಡು ಜನರ ಜೀವನ ಮಟ್ಟ ಉತ್ತಮ ಗೊಂಡಿದ್ದು, ಅಲೆಮಾರಿ ಜೀವನ ನಡೆಸುತ್ತಿದ್ದ ಜನರು ಕೃಷಿಯ ಕಾರಣ ಸ್ಥಿರವಾದ ಜೀವನವನ್ನು ನಡೆಸಲು ಸಾಧ್ಯವಾಗಿ ಕುಮಾರರಾಮನನ್ನು ಇಷ್ಟಪಡಲು ಕಾರಣವಾಯಿತು.

ಈ ವರೆಗೆ ಧಾಳಿಗಳಿಂದ ಬೇಸತ್ತಿದ್ದ ಜನತೆಗೆ ಸಿಕ್ಕಂತಹ ಆಕ್ರಮಣರಹಿತ ನೆಮ್ಮಧಿಯ ಜೀವನ. ಕ್ರಿ.ಶ.೧೨೯೬ ರಿಂದ ಸುಮಾರು ೧೭ ವರ್ಷಗಳ ಅವಧಿಯಲ್ಲಿ ದೆಹಲಿಯ ಸುಲ್ತಾನರು ದಕ್ಷಿಣ ಭಾರತದ ಮೇಲೆ ಧಾಳಿ ಮಾಡಿದರಾದರೂ ಕುಮ್ಮಟದ ಮೇಲೆ ಒಮ್ಮೆಯೂ ಧಾಳಿ ಮಾಡಲಿಲ್ಲ. ೧೩೧೮ರಲ್ಲಿ ಅಲ್ಲಾವುದ್ಧೀನನ ಮಗ ಮುಭಾರಕನು ಗುಲ್ಬರ್ಗದವರೆಗೆ ಬಂದರೂ ಕುಮ್ಮಟದ ಮೇಲೆ ಧಾಳಿ ಮಾಡುವ ಸಾಹಸವನ್ನು ಮಾಡಲಿಲ್ಲ. ೧೩೨೫ರಲ್ಲಿ ತೊಘಲಕನು ಕೂಡ ಕಮ್ಮಟದ ಆಕ್ರಮಣದಲ್ಲಿ ವಿಫಲನಾಗುತ್ತಾನೆ. ಆದರೇ ೧೩೨೭ರಲ್ಲಿ ಮಹಮದ್ ತೊಘಲಕನು ಮಾಡಿದ ನಿರ್ಣಾಯಕ ಯುದ್ಧದಲ್ಲಿ ಕುಮ್ಮಟವು ಸೋಲಬೇಕಾಗುತ್ತದೆ.

ಸಂಪತ್ತಿನ ಲೂಟಿಗೆಂದೇ ಮಾಡಿದ ಈ ಸಂಘರ್ಷದ ದುಃಸ್ವಪ್ನ, ನೋವು, ಅವಮಾನಗಳನ್ನು ಮರೆಯಲೆಂದೇ ಜನಪದರು "ಕುಮಾರರಾಮ ಮತ್ತು ಮಹಮದ್ ತೊಘಲಕನ ಮಗಳ ನಡುವೆ ಪ್ರೇಮಾಂಕುರವಾದ ಕಥೆ", ಪಾಂಚಾಳಗಂಗನ ಚನ್ನರಾಮನ ಸಾಂಗತ್ಯದಲ್ಲಿ ಬಾಬಮ್ಮ ಮತ್ತು ಕುಮಾರರಾಮರು ಮರುಹುಟ್ಟಿನಲ್ಲಿ ವಿವಾಹವಾಗುವ ಅಂದರೆ ಅರ್ಜುನ ಮತ್ತು ಊರ್ವಶಿಯರಲ್ಲಿ ಬಾಬಮ್ಮ ಮತ್ತು ಕುಮಾರರಾಮರನ್ನು ಕಾಣುವಂತಹ ಮೌಖಿಕ ಆಕರಗಳನ್ನು ಸೃಷ್ಟಿಸಿಕೊಳ್ಳಲಾಗಿದೆ. – ವಸು. ಎಂ. ವಿ. ಸಂಪಾದಕರು ***"ಕನ್ನಡದೊಲ್ ಭಾವಿಸಿದ ಜನಪದಂ"*** ಚಿಂತನ ಪುಸ್ತಕ ಪ್ರಕಾಶನ, ಬೆಂಗಳೂರು ೨೦೦೯ ***"ಕುರಿತೋದದೆಯೂ ಕಟ್ಟಿದ ಕಥನ"*** ಲೇಖನ ಪುರುಷೋತ್ತಮ ಬಿಳಿಮಲೆ.

೧೦೧. ***ಎ. ಕ. ಸಂ. ೧೨*** ತಿಪಟೂರು ಶಾಸನ ೧೦೦ (ಶಾ.ಶಕ ೧೨೯೪ ರಲ್ಲಿ ಅಳ್ಳೂರು ಬಳಿ ನಡೆದ ಕದನದಲ್ಲಿ ಹೊಯ್ಸಳ ಮಹಾಸಾವಂತಾಧಿಪತಿ ಮಾರೆಯನಾಯಕನ ಕುಮಾರ, ದಳಪತಿ ಹಡಪದ ಅಪ್ಪಣ್ಣನೂ, ಹಾಗೂ ಸಕಲಗುಣಸಂಪೂರ್ನ ಚೆಂನಪ್ಪನಾಯಕನು ಶತ್ರುಗಳೊಡನೆ (ಚೋಳ?) ಹೋರಾಡಿ ಮರಣ ಹೊಂದಿದರು)

೧೦೨. ಕೆಂಕೆರೆ ಹನುಮಂತೇಗೌಡ (ಸಂ) ೨೦೧೨ ***"ಪೂರ್ವೋಕ್ತ"*** ಪುಟ–೪೪

೧೦೩. ಮುದ್ದುವೀರಪ್ಪ ಕೆ. ವಿ. ರವರು ದಿಬ್ಬದ ವೀರಬೊಮ್ಮಣ್ಣನ ಕಾವ್ಯಗಳನ್ನು ಸಂಗ್ರಹಿಸಿದ್ದಾರೆ. ಈ ಹಾಡುಗಳನ್ನು ಸ್ಥಳೀಯರಾದ ತಿಮ್ಮಜ್ಜಿ, ಜಯಮ್ಮ, ಸಿಕ್ಕಜ್ಜಿ, ಈರಜ್ಜಿ, ನಿಂಗಜ್ಜಿ ರವರು ಹಾಡಿದ್ದಾರೆ. – ಮುದ್ದುವೀರಪ್ಪ ಕೆ.ವಿ. (ಸಂ) ೨೦೧೧ "ವೀರಬೊಮ್ಮನಹಳ್ಳಿ ದಿಬ್ಬದ ವೀರಬೊಮ್ಮಣ್ಣನ ಕಾವ್ಯ" ತುಮಕೂರು ಸಾಹಿತ್ಯ ಪ್ರಕಾಶನ. ಕೆಂಕೆರೆ ಹನುಮಂತೇಗೌಡರು *'ತುಮಕೂರು ಜಿಲ್ಲೆಯ ಸಾಂಸ್ಕೃತಿಕ ವೀರರಕಾವ್ಯ ಮತ್ತು ಮಹಾಸತಿಯರ ಕಾವ್ಯ'* ಎಂಬ ಗ್ರಂಥವನ್ನು ಸಂಪಾದಿಸಿದ್ದಾರೆ. ಸದರಿ ಗ್ರಂಥದಲ್ಲಿ ವೀರಬಂಡಣ್ಣ ಸ್ವಾಮಿಯ ಜನಪದ ಗೀತೆಗಳು, ದಿಬ್ಬದ ವೀರಬೊಮ್ಮಣ್ಣನ ಕಾವ್ಯ (ಮುದ್ದುವೀರಪ್ಪ ಕೆ.ವಿ. ರವರು ಸಂಗ್ರಹಿಸಿರುವ ಪದ್ಯಗಳನ್ನೇ) ವೀರನಾಗಪ್ಪನ ಪದ, ನಿಡಗಲ್ಲು ಶೂಲದ ಈರಣ್ಣನ ಕಾವ್ಯ, ಹುಳಿಯಾರು ಕೆಂಚಮ್ಮನ ಕಾವ್ಯ, ಮದ್ದೇ ಮತ್ತು ಕರೇಕ್ಯಾತಗಾನಹಳ್ಳಿಯ ಸ್ವಾರಮ್ಮನ ಪದಗಳು, ವಡ್ಡಗೆರೆ ಈರುನಾಗಮ್ಮನ ಕಾವ್ಯ, ಬರಗೂರು ವೀರಮ್ಮನ ಗೀತೆಗಳನ್ನು ಪ್ರಕಟಿಸಿದ್ದಾರೆ. – ಕೆಂಕೆರೆ ಹನುಮಂತೇಗೌಡ (ಸಂ) ೨೦೧೧ "ಸಂಸ್ಕೃತಿಕ ವೀರರ ಮತ್ತು ಮಹಾಸತಿಯರ ಲಾವಣಿಗಳು" ತುಮಕೂರು ತು.ವಿ.ವಿ

೧೦೪. ಮುದ್ದುವೀರಪ್ಪ ಕೆ. ವಿ. (ಸಂ) ೨೦೧೧ ***"ವೀರಬೊಮ್ಮನಹಳ್ಳಿ ದಿಬ್ಬದ ವೀರಬೊಮ್ಮಣ್ಣನ ಕಾವ್ಯ"*** ತುಮಕೂರು ಪುಟ–೩

೧೦೫. ***ಅದೇ*** ಪುಟ–೩

೧೦೬. ವಕ್ತೃ, ತಿಪ್ಪೇಶ್ ೩೮ ವ. ವೀರಬೊಮ್ಮನಹಳ್ಳಿ

೧೦೭. ಮುದ್ದುವೀರಪ್ಪ ಕೆ. ವಿ. (ಸಂ) ೨೦೧೧ ***"ಪೂರ್ವೋಕ್ತ"*** ಪುಟ ೪

೧೦೮. ***ಅದೇ*** ಪುಟ ೫

೧೦೯. ***ಅದೇ*** ಪುಟ ೭
೧೧೦. ***ಅದೇ*** ಪುಟ ೧೨
೧೧೧. ***ಅದೇ*** ಪುಟ ೧೫
೧೧೨. ***ಅದೇ*** ಪುಟ ೧೬
೧೧೩. ***ಅದೇ*** ಪುಟ ೭
೧೧೪. ಮಧುಗಿರಿ ತಾಲೂಕಿನ ಪರಿಸರದಲ್ಲಿರುವ ವಿಶೇಷವಾಗಿ ಕೊಂಡವಾಡಿ ಗ್ರಾಮದಲ್ಲಿರುವ ಕಾಟುಮಲಿಂಗ ದೇವರಿಗೆ ಪೂಜೆ ಮಾಡುವವರು ಕುಂಚಿಟಿಗರಾಗಿದ್ದು, ನಾಯಕರು ಜಾತ್ರಾ ಉತ್ಸವದಲ್ಲಿ ಪ್ರಧಾನ ಪಾತ್ರ ವಹಿಸುತ್ತಾರೆ.
೧೧೫. ಮುದ್ದುವೀರಪ್ಪ ಕೆ. ವಿ. (ಸಂ) ೨೦೧೧ ***"ಪೂರ್ವೋಕ್ತ"*** ಪುಟ-೩
೧೧೬. ***ಎ. ಕ. ಸಂ ೧೨*** ಪಾವಗಡ ೫೨
೧೧೭. ***ಎ. ಕ. ಸಂ ೧೨*** ಪಾವುಗಡ ೫೨ ನಿಡಗಲ್ಲುಚೋಳರ ವೀರಗಣೇಶ್ವರನ ದಂಡನಾಯಕನಾದ ಗಂಗೆಯ ನಾಯಕನು ಹೊಯ್ಸಳ ಮೂರನೇ ಬಲ್ಲಾಳನ ದಂಡನಾಯಕ ಮಾರೆಯಾನ ತಂಗಿ ಚಾಮಲದೇವಿಯನ್ನು ವಿವಾಹವಾಗಿದ್ದನು.
೧೧೮. ಕೆಂಕೆರೆ ಹನುಮಂತೇಗೌಡ ೨೦೧೨ ***"ಪೂರ್ವೋಕ್ತ"*** ಪುಟ ೬೬-೬೭
೧೧೯. ***ಎ. ಕ. ಸಂ ೧೨*** ಸಿರಾ ೬೦
೧೨೦. ***"ಸ್ಥಳೀಯ ಇತಿಹಾಸ ಹೊಸಶೋಧಗಳು"*** ರಲ್ಲಿ ವಿವೇಚಿಸಿರುವಂತೆ ನಿಡಗಲ್ಲಿನೊಂದಿಗೆ ಮುಂದುವರೆದ ಯುದ್ಧದಲ್ಲಿ ದಿಬ್ಬದವೀರಬೊಮ್ಮಣ್ಣನ ಬಾವ ಮೈದುನ (ತನ್ನ ತಂಗಿ ಬರಗೂರು ವೀರಮ್ಮಳ ಗಂಡ) ಬೊಮ್ಮಲಿಂಗನು ವಿರೋಚಿತವಾಗಿ ಹೋರಾಡಿ ಮರಣ ಹೊಂದುತ್ತಾನೆ. ಯುದ್ಧದ ಸಂದರ್ಭದಲ್ಲಿ ಸೆರೆಸಿಕ್ಕಿದ ಈರಣ್ಣನನ್ನು ನಿಡಗಲ್ಲು ಅರಸ ಶೂಲಕ್ಕೇರಿಸುತ್ತಾನೆ. ಈತನನ್ನು ಶೂಲದ ಈರಣ್ಣನೆಂದೇ ಗುರುತಿಸಲಾಗಿದೆ.
೧೨೧. ಮುದ್ದುವೀರಪ್ಪ ಕೆ. ವಿ. (ಸಂ) ೨೦೧೧ ***"ಪೂರ್ವೋಕ್ತ"*** ಪುಟ-೧೭
೧೨೨. ಮುದ್ದುವೀರಪ್ಪ ಕೆ. ವಿ. (ಸಂ) ೨೦೧೧ ***ಅದೇ*** ಪುಟ-೧೩
೧೨೩. ನಾಗರಾಜು ಎಂ. ಹೆಚ್ ೨೦೦೩ ***"ಕುಂಚಿಟಿಗರ ಸಾಂಸ್ಕೃತಿ ಇತಿಹಾಸ"*** ತುಮಕೂರು ಅನಿಕೇತನ ಪ್ರಕಾಶನ ಪುಟ-೬೦
೧೨೪. ವಡ್ಡಗೆರೆ ನಾಗರಾಜಯ್ಯ ೨೦೧೦ ***"ವಡ್ಡಗೆರೆ ನಾಗಮ್ಮ ಮಹಾಸತಿ ಕಾವ್ಯ"*** ಬೆಂಗಳೂರು ಅನ್ನಪೂರ್ಣ ಪಬ್ಲಿಷಿಂಗ್ ಹೌಸ್ ಪುಟ-೬
೧೨೫. ನಾಗರಾಜು ಎಂ. ಹೆಚ್ ೨೦೦೩ ***"ಪೂರ್ವೋಕ್ತ"*** ಪುಟ-೬೩
೧೨೬. ಕೆಂಕೆರೆ ಹನುಮಂತೇಗೌಡ ೨೦೧೨ ***"ಪೂರ್ವೋಕ್ತ"*** ಪುಟ-೧೪೬ (ಲೇ. ***ಕುಂಚಿಟಿಗರ ಜಾನಪದದಲ್ಲಿನ ಸತ್ಯಾಂಶಗಳು)*** ಪುಟ-೧೪೬
೧೨೭. Aditya behi ೨೦೧೨ ***"Love's Subtle Magic: An Indian Islamic Literary Tradition, ೧೩೭೯-೧೫೪೫"*** UK , Oxford University Press p-೧೭೮
೧೨೮. ಕೆಂಕೆರೆ ಹನುಮಂತೇಗೌಡ ೨೦೧೨ ***"ಪೂರ್ವೋಕ್ತ"*** ಪುಟ ೧೫೪-೧೫೬
೧೨೯. ನಾಗರಾಜು ಎಂ.ಹೆಚ್ ೨೦೦೩ ***"ಪೂರ್ವೋಕ್ತ"*** ಪುಟ-೬೪
೧೩೦. ವಕ್ತೃ ನಾಗರಾಜು ಎಂ. ಹೆಚ್.
೧೩೧. ಕೆಂಕೆರೆ ಹನುಮಂತೇಗೌಡ ೨೦೧೨ ***"ಪೂರ್ವೋಕ್ತ"*** ಪುಟ-೧೪೮
೧೩೨. ಜಲಧಿಬೊಪ್ಪರಾಯನನ್ನು ಕುರಿತು ವಿಭಿನ್ನ ಕಥನಗಳು ಕಂಡುಬರುತ್ತವೆ ಅದರಂತೆ ಇರುವ ಇನ್ನೊಂದು ಕಥನವು ಹೀಗಿದೆ. ಈತನು ಕುಂಚಿಟಿಗರ ಬೆಡಗಾದ ಜಲಧೇನರ ಆರಾಧ್ಯ ದೈವವಾಗಿದ್ದಾನೆ. ಜಲಧಿಬೊಪ್ಪರಾಯ ಎಂಬುವನು ವಿಜಯನಗರ ಸಾಮ್ರಾಜ್ಯದಲ್ಲಿ ಸೈನಿಕನಾಗಿದ್ದನು. ಈತನು ಚಿಕ್ಕನಾಯಕನಹಳ್ಳಿ ತಾಲ್ಲೂಕಿನ ಗಾಣಧಾಳು ಪ್ರದೇಶದವನಾಗಿದ್ದು ಕಾರಬ್ಬದಂದು ಬೇರೆ ಊರಿನ ಕರೆ/ಸೊಪ್ಪಿನಿಂದ ಕಟ್ಟಿದ ತೋರಣವನ್ನು ಕೀಳಲು ಆ ಊರಿನ ಜನರು ಆತನನ್ನು ಅಟ್ಟಿಸಿಕೊಂಡು ಬಂದರು. ಇದರಿಂದ ಭೀತಿಗೊಂಡು ತನ್ನ ತಲೆಯನ್ನು ತಾನೇ ಕತ್ತರಿಸಿಕೊಂಡು ಪ್ರಾಣ ಬಿಡುತ್ತಾನೆ. ಇದನ್ನು ಸೂತಕದ ಪ್ರತೀಕವಾಗಿ ಪರಿಗಣಿಸಿದ್ದು, ಆತ್ಮಾರ್ಪಣೆ ಮಾಡಿಕೊಂಡಿದ್ದರಿಂದ ಆತನ ವಂಶಸ್ಥರು ಕಾರಬ್ಬವನ್ನು ಆಚರಿಸುವುದಿಲ್ಲ. ಅಂದು ಮನೆಯ ಕಸವನ್ನು ಸಹ ಗುಡಿಸುವುದಿಲ್ಲ, ಸ್ನಾನ ಮಾಡುವುದಿಲ್ಲ, ಅಂದು ಹುಳಿ ಊಟವನ್ನು ಮಾಡುತ್ತಾರೆ.

ಕಾರಬ್ಬವು ಕೃಷಿ ಸಂಬಂಧಿ ಸುಗ್ಗಿಯ ಆಚರಣೆಯಾಗಿದೆ. ಕೃಷಿಕ ವರ್ಗವು ಹೊಲದಲ್ಲಿ ಬಿತ್ತನೆಯನ್ನು ಬಿತ್ತನೆ ಮಾಡಿದಾಗಿನಿಂದ ಆರಂಭಿಸಿ ಫಸಲು ಕೈಗೆ ಸೇರುವವರೆಗೆ ಬೆಳೆ ಸಂಬಂಧಿಯಾಗಿ ಹಲವು ರೀತಿಯ ಆಚರಣೆಗಳನ್ನು ಮಾಡುತ್ತಾರೆ. ಬಿತ್ತಿದ ಬೀಜ ಮೊಳೆತು ಬೆಳೆಗಳಿಗೆ ರೋಗ ಬಾಧೆ ಉಂಟಾಗದೆ, ಸಮೃದ್ಧವಾದ ಬೆಳೆ ಕೈ ಸೇರಲಿ ಎಂಬ ಆಶಯವು ಈ ಸಮುದಾಯದ್ದಾಗಿದೆ. ಕಾರ್ ಎಂದರೆ ಮಳೆಗಾಲ ಎಂದು ಅರ್ಥೈಸಿಕೊಳ್ಳಲಾಗಿದೆ. ಸಿರಾ ತಾಲೂಕಿನ ಕೆಲವು ಭಾಗಗಳು ಮತ್ತು

ಚಿಕ್ಕನಾಯಕನಹಳ್ಳಿ ತಾಲೂಕಿನ ಶೆಟ್ಟಿಕೆರೆ, ಗಾಣಧಾಳು ಪ್ರದೇಶಗಳಲ್ಲಿ, ಸಾಮಾನ್ಯವಾಗಿ ಮೃಗಶಿರ, ಆರಿದ್ರಾ ಮಳೆಗಳ ಸಂದರ್ಭದಲ್ಲಿ ಈ ಹಬ್ಬವನ್ನು ವಿಶೇಷವಾಗಿ ಆಚರಿಸುವರು.

೧೩೩. ಕೆಂಕೆರೆ ಹನುಮಂತೇಗೌಡ ೨೦೧೨ ***"ಪೂರ್ವೋಕ್ತ"*** ಪುಟ-೧೪೯

೧೩೪. ಹೊನ್ನಗಾನಹಳ್ಳಿ ಕರಿಯಣ್ಣ (ಸಂ) ೨೦೦೬ ***"ಬಂದ್ಕುಂಟೆ ಈರುಚಿಕ್ಕಣ್ಣ ಕಾವ್ಯ"*** ತುಮಕೂರು ಪುಣ್ಯಕೋಟಿ ಪ್ರಕಾಶನ ಪುಟ-೧೨ ಪದ್ಯ ೧೨

೧೩೫. ***ಅದೇ*** ಪುಟ-೧೪ ಪದ್ಯ ೨೦

೧೩೬. ***ಅದೇ*** ಪುಟ-೧೬ ಪದ್ಯ ೩೧

೧೩೭. ***ಅದೇ*** ಪುಟ-೩೧ ಪದ್ಯ ೯೭

೧೩೮. ಬರಗೂರು ಈರಮ್ಮನ ಕಾವ್ಯಗಳನ್ನು ಮುದ್ದುವೀರಪ್ಪ ಕೆ.ವಿ. ರವರು ಸಂಗ್ರಹಿಸಿದ್ದಾರೆ. ಈ ಹಾಡುಗಳನ್ನು ಸ್ಥಳೀಯರಾದ ಕೆಂಚಮ್ಮ ಮತ್ತು ಜಯಮ್ಮ ಎಂಬುವರು ಮುಮ್ಮೇಳನದಲ್ಲಿ ಹಾಗೂ ದೇವರಾಜಮ್ಮ ಮತ್ತು ಲಕ್ಷ್ಮೀದೇವಿ ಎಂಬುವರು ಹಿಮ್ಮೇಳನದಲ್ಲಿ ಹಾಡಿದ್ದಾರೆ. - ಮುದ್ದುವೀರಪ್ಪ ಕೆ.ವಿ. (ಸಂ) ೨೦೧೧ *"ಬರಗೂರು ಈರಮ್ಮನ ಕಾವ್ಯ"* ತುಮಕೂರು ಸಾಹಿತ್ಯ ಪ್ರಕಾಶನ. ಕೆಂಕೆರೆ ಹನುಮಂತೇಗೌಡರು *'ತುಮಕೂರು ಜಿಲ್ಲೆಯ ಸಾಂಸ್ಕೃತಿಕ ವೀರರಕಾವ್ಯ ಮತ್ತು ಮಹಾಸತಿಯರ ಕಾವ್ಯ'* ಎಂಬ ಗ್ರಂಥವನ್ನು ಸಂಪಾದಿಸಿದ್ದಾರೆ. ಸದರಿ ಗ್ರಂಥದಲ್ಲಿ ಬರಗೂರು ವೀರಮ್ಮನ ಗೀತೆಗಳನ್ನು ಪ್ರಕಟಿಸಿದ್ದಾರೆ.

ನಿಡಗಲ್ಲಿನೊಂದಿಗೆ ಮುಂದುವರೆದ ಯುದ್ದದಲ್ಲಿ ದಿಬ್ಬದವೀರಬೊಮ್ಮಣ್ಣನ ಬಾವ ಮೈದುನ (ತನ್ನ ತಂಗಿ ಬರಗೂರು ವೀರಮ್ಮಳ ಗಂಡ) ಬೊಮ್ಮಲಿಂಗನು ವಿರೋಚಿತವಾಗಿ ಹೋರಾಡಿ ಮರಣ ಹೊಂದುತ್ತಾನೆ. ಯುದ್ಧದ ಸಂದರ್ಭದಲ್ಲಿ ಸೆರೆಸಿಕ್ಕಿದ ಈರಣ್ಣನನ್ನು ನಿಡಗಲ್ಲು ಅರಸ ಶೂಲಕ್ಕೇರಿಸುತ್ತಾನೆ. ಈತನನ್ನು ಶೂಲದ ಈರಣ್ಣನೆಂದೇ ಗುರುತಿಸಲಾಗಿದೆ.

೧೩೯. ಚಿತ್ತಯ್ಯ ಪೂಜಾರ್ ೨೦೧೧ ***"ಬಿಸಿಲಬೇವು"*** ಬೆಂಗಳೂರು ಸಿವಿಜಿ ಇಂಡಿಯಾ ಪ್ರಕಾಶನ ಪುಟ ೧೫೦

೧೪೦. ***ಅದೇ*** ಪುಟ-೧೫೧

೧೪೧. ***ಅದೇ*** ಪುಟ-೧೫೨ ವಕ್ತೃ: ಬಳ್ಳಕಟ್ಟೆ ಗ್ರಾಮದ ಈರಣ್ಣನ ದೇವಾಲಯದ ಪೂಜಾರಿ.

೧೪೨. ವಕ್ತೃ ಮಂಜುನಾಥ ದೊಡ್ಡೆಣ್ಣೆಗೆರೆ.

೧೪೩. ಕಮಲೇಶ್ ಕೆ.ಆರ್ ೨೦೦೯ ***"ಚಿಕ್ಕನಾಯಕನಹಳ್ಳಿ ತಾಲೂಕು ಐತಿಹಾಸಿಕ ಮತ್ತು ಸಾಂಸ್ಕೃತಿಕ ಅಧ್ಯಯನ ೧೭೨೦-೧೯೦೦"*** ಪುಟ-೨೩೪

೧೪೪. ವಕ್ತೃ ಅನಂತರಾಜು ಉಪನ್ಯಾಸಕರು ಚಿಕ್ಕನಾಯಕನಹಳ್ಳಿ.

೧೪೫. ಸಣ್ಣನಾಗಪ್ಪ (ಸಂ) ೨೦೧೪ ***"ವೀರಸೀಗಣ್ಣನ ಜನಪದಕಾವ್ಯ"*** ಬೆಂಗಳೂರು, ಗಣೆ ಪ್ರಕಾಶನ.

೧೪೬. ಚಿತ್ತಯ್ಯ ಪೂಜಾರ್ ೨೦೧೧ ***"ಪೂರ್ವೋಕ್ತ" ಪುಟ-೧೪೯***

೧೪೭. ವಕ್ತೃ ಸಣ್ಣನಾಗಪ್ಪನವರು. ಇವರು ನಿಡಗಲ್ಲು ಶೂಲದ ಈರಣ್ಣನ ಮೌಖಿಕ ಕಾವ್ಯಗಳನ್ನು ಸಂಗ್ರಹಿಸಿದ್ದಾರೆ.

೧೪೮. ನಿಡಗಲ್ಲಿನೊಂದಿಗೆ ಮುಂದುವರೆದ ಯುದ್ದದಲ್ಲಿ ದಿಬ್ಬದವೀರಬೊಮ್ಮಣ್ಣನ ಬಾವ ಮೈದುನ (ತನ್ನ ತಂಗಿ ಬರಗೂರು ವೀರಮ್ಮಳ ಗಂಡ) ಬೊಮ್ಮಲಿಂಗನು ವಿರೋಚಿತವಾಗಿ ಹೋರಾಡಿ ಮರಣ ಹೊಂದುತ್ತಾನೆ. ಯುದ್ಧದ ಸಂದರ್ಭದಲ್ಲಿ ಸೆರೆಸಿಕ್ಕಿದ ಈರಣ್ಣನನ್ನು ನಿಡಗಲ್ಲು ಅರಸ ಶೂಲಕ್ಕೇರಿಸುತ್ತಾನೆ. ಈತನನ್ನು ಶೂಲದ ಈರಣ್ಣನೆಂದೇ ಗುರುತಿಸಲಾಗಿದೆ.

-ಮುದ್ದುವೀರಪ್ಪ ಕೆ.ವಿ. (ಸಂ) ೨೦೧೧ ***"ವೀರಬೊಮ್ಮನಹಳ್ಳಿ ದಿಬ್ಬದ ವೀರಬೊಮ್ಮಣ್ಣನ ಕಾವ್ಯ"*** ತುಮಕೂರು ಸಾಹಿತ್ಯ ಪ್ರಕಾಶನ.

-ಚಿತ್ತಯ್ಯ ಪೂಜಾರ್ ೨೦೧೧ ***"ಪೂರ್ವೋಕ್ತ"*** ಪುಟ-೮೩

೧೪೯. ವಕ್ತೃ ಲಿಂಗರಾಜು ಉಪನ್ಯಾಸಕರು. ಗುಬ್ಬಿ

-೦೦೦-

# ಅಧ್ಯಾಯ : ೫

# ಮೌಖಿಕ ಆಕರಗಳಲ್ಲಿ ಆರ್ಥಿಕ ವ್ಯವಸ್ಥೆ

# ಅಧ್ಯಾಯ : ೫

# ಮೌಖಿಕ ಆಕರಗಳಲ್ಲಿ ಆರ್ಥಿಕ ವ್ಯವಸ್ಥೆ

## ೫.೧ ವ್ಯವಸಾಯ

ಜನ ಸಮುದಾಯವು ಬೇಟೆ ಜೀವನ ಕ್ರಮದಿಂದ ಕ್ರಮೇಣವಾಗಿ ಪಶುಪಾಲನೆ ಮತ್ತು ಬೇಸಾಯ ವೃತ್ತಿಗಳಿಗೆ ಸ್ಥಳಾಂತರಗೊಂಡಿತು. ಹೀಗಾಗಿ ಮಾನವನ ಹೊಸ ಆರ್ಥಿಕ ಪ್ರವೃತ್ತಿಗಳು ಹುಟ್ಟಿಕೊಂಡವು. ಪಶುಪಾಲನೆಯು ಕೃಷಿಗೆ ಪೂರಕವಾಗಿದ್ದು ಭೂಮಿಯನ್ನು ಉಳುಮೆ ಮಾಡಲು ದನಗಳನ್ನು ಒದಗಿಸಿತು. ದನಗಳ ಗೊಬ್ಬರವು ಕೃಷಿ ಭೂಮಿಯ ಫಲವತ್ತತೆಯನ್ನು ಹೆಚ್ಚಿಸುವ ಮೂಲಕ ಕೃಷಿ ಉತ್ಪನ್ನದ ಹೆಚ್ಚಳಕ್ಕೂ ಪೂರಕವಾಯಿತು. ನಂತರ ಪಶುಪಾಲನೆಯು ಹೈನೋದ್ಯಮ, ಚರ್ಮೋದ್ಯಮದಂತಹ ಇತರೆ ಕಸುಬುಗಳ ಸೃಷ್ಟಿಗೆ ಕಾರಣವಾಯಿತು. ಇವುಗಳಿಂದ ಉತ್ಪಾದಿಸಲಾದ ಉತ್ಪನ್ನಗಳ ಮಾರಾಟವು ಸಾರಿಗೆ ಸಂಪರ್ಕಗಳಂತಹ ಆರ್ಥಿಕ ಚಟುವಟಿಕೆಗಳಿಗೆ ಕಾರಣವಾಯಿತು. ಇಂತಹ ಕೃಷಿ, ಪಶುಪಾಲನೆ, ಹೈನುಗಾರಿಕೆ, ಚರ್ಮೋದ್ಯಮ, ಸಾರಿಗೆ, ಇವೇ ಮೊದಲಾದವುಗಳು ಮಾನವನಿಗೆ ಲಾಭ ತಂದುಕೊಡುವ ಆರ್ಥಿಕ ಕ್ಷೇತ್ರಗಳಾಗಿ ಪರಿಣಮಿಸಿವೆ.

ಕೃಷಿಯು ತುಮಕೂರು ಜಿಲ್ಲೆಯ ಜನರ ಮುಖ್ಯ ಕಸುಬಾಗಿದೆ. ಕೃಷಿಯನ್ನು ಬೇಸಾಯ, ವ್ಯವಸಾಯ, ಒಕ್ಕಲುತನ, ಆರಂಭ ಹೀಗೆ ವಿವಿಧ ಹೆಸರುಗಳಿಂದ ಕರೆಯಲಾಗುತ್ತದೆ. ಸಕಲ ಜೀವರಾಶಿಗಳಿಗೆ ಅನ್ನವೇ ಆಧಾರ, ಅನ್ನವೇ ದೇವರು. ಇಂತಹ ಆಹಾರದ ಉತ್ಪಾದನೆಗೆ ಕೃಷಿಯು ಮೂಲವಾಗಿದೆ. ಕೃಷಿಯು ಹೊಲಗದ್ದೆಗಳನ್ನು ಉತ್ತುವ, ಬೀಜಗಳನ್ನು ಬಿತ್ತುವ, ಬೆಳೆಯನ್ನು ರಕ್ಷಿಸುವ ಮೂಲಕ ಫಸಲನ್ನು ಕಟಾವು ಮಾಡುವ ಪ್ರಕ್ರಿಯೆಯಾಗಿದೆ. ಫಲವತ್ತಾದ ಭೂ ಸ್ವರೂಪ, ಸೂಕ್ತ ವಾತಾವರಣ ಮತ್ತು ನೀರಾವರಿ ಸೌಲಭ್ಯವು ಕೃಷಿಗೆ ಅಗತ್ಯವಾಗಿದೆ. ತುಮಕೂರಿನ ಬಹುತೇಕ ಭೂ ಪ್ರದೇಶವು ಸಮತಟ್ಟಾದ ಹಾಗೂ ಕೆಲವೆಡೆ ದಿನ್ನೆ ತಗ್ಗುಗಳಿಂದ ಕೂಡಿದೆ. ಹಾಗೂ ಬಹುತೇಕ ಮರುಳು ಮಿಶ್ರಿತ ಕೆಂಪು ಮತ್ತು ಕಪ್ಪು ಮಣ್ಣಿನಿಂದ ಕೂಡಿದ ಭೂಮಿಯಾಗಿದೆ. ಕಾಲಮಾನಕ್ಕೆ ಅನುಗುಣವಾಗಿ

ಮಳೆಯನ್ನು ಆಧರಿಸಿ ಮುಂಗಾರು ಮತ್ತು ಹಿಂಗಾರು ಬೆಳೆಗಳನ್ನು ಬೆಳೆಯಲಾಗುತ್ತದೆ. ಪ್ರಮುಖವಾಗಿ ರಾಗಿ, ಜೋಳ, ಭತ್ತ ಇತ್ಯಾದಿ ಆಹಾರದ ಬೆಳೆಗಳನ್ನು, ನವಣೆ, ಸಜ್ಜೆ, ಆರ್ಕ, ಕೊರ್ಲೆ ಮುಂತಾದ ಸಿರಿಧಾನ್ಯಗಳನ್ನು, ಅವರೆ, ತೊಗರಿ, ಅರಳು, ಸಾಸಿವೆ, ಉಚ್ಚೆಳ್ಳು, ಹುರುಳಿ ಇತರ ಅಕ್ಕಡಿ ಬೆಳೆಗಳನ್ನು, ತೆಂಗು, ಅಡಿಕೆ, ಹೂ ಗಳನ್ನು ತೋಟಗಾರಿಕೆ ಬೆಳೆಗಳಾಗಿ ಹಾಗೂ ನೆಲಗಡಲೆ, ಸೂರ್ಯಕಾಂತಿ, ರೇಷ್ಮೆ ಇತ್ಯಾದಿಗಳನ್ನು ವಾಣಿಜ್ಯ ಬೆಳೆಗಳಾಗಿ ಬೆಳೆಯಲಾಗುತ್ತದೆ.

ಮೌಖಿಕ ಕಾವ್ಯಗಳಲ್ಲಿಯೂ ಈ ಪ್ರದೇಶದಲ್ಲಿ ಬೆಳೆಯುತ್ತಿದ್ದ ಹಾಗೂ ಬಳಸಲಾಗುತ್ತಿದ್ದ ಉದ್ದು, ಕಡಲೆ, ಎಳ್ಳು, ಜೋಳ, ಗೋಧಿ, ಮಲ್ಲಿಗೆ ಹೂ, ಹಲಸು, ಕುಂಬಳ, ನಿಂಬೆಯಂತಹ ಬೆಳೆಗಳನ್ನು ಉಲ್ಲೇಖಿಸಲಾಗಿದೆ. ಹಾಗೂ ವೀರಸೀಗಣ್ಣನ ಕಾರ್ಯಕ್ಷೇತ್ರದಲ್ಲಿ ಕೆರೆ ಕಟ್ಟೆಗಳಿದ್ದು, ಕೆರೆಯ ಏರಿಯ ಹಿಂದೆ ಜೋಳದ ಬೆಳೆಯನ್ನು ಬೆಳೆಯಲಾಗುತ್ತಿತ್ತು. ಸಾಮಾನ್ಯವಾಗಿ ಬೆಳೆ (ಫಸಲು) ಯನ್ನು ದೇವರೆಂಬ ನಂಬಿಕೆಯಿಂದ ಪೂಜಿಸಲಾಗುತ್ತದೆ. ಆದರೂ ಪುತ್ರಶೋಕದ ಕಾರಣ ಅನ್ನ ದೇವರನ್ನೇ ನಿಂದಿಸುವ ಮನಸ್ಥಿತಿಯು ತಾಯಿಯಲ್ಲಿ ಕಂಡುಬರುತ್ತದೆ. ತಾಯಿಯ ಪುತ್ರ ಶೋಕದ ತೀವ್ರತೆಯನ್ನು ಮೌಖಿಕ ಕಾವುಗಳಲ್ಲಿ ಗುರುತಿಸಬಹುದಾಗಿದೆ.[೧] ಸಾಂಸ್ಕೃತಿಕ ವೀರನಾದ ದಿಬ್ಬದ ವೀರಬೊಮ್ಮಣ್ಣನು ಉತ್ತಮ ಕೃಷಿಕನಾಗಿದ್ದನು. ಈರುನಾಗಮ್ಮಳ ಕಾವ್ಯದಲ್ಲಿ ಈರುನಾಗಮ್ಮ ಮತ್ತು ಆಕೆಯ ಅತ್ತೆ ಪದುಮವ್ವಳು ಹತ್ತಿ ಬಿಡಿಸುವ ಕಾಯಕವನ್ನು ಮಾಡಿದ್ದ ಬಗ್ಗೆ ಕಾವ್ಯದಲ್ಲಿ ಉಲ್ಲೇಖಿಸಲಾಗಿದೆ.

ಕೃಷಿ ಸಂಬಂಧಿತ ಆಚರಣೆಗಳಲ್ಲದೆ ಕೃಷಿ ಸಂಸ್ಕೃತಿಯಲ್ಲಿ ವಿಶಿಷ್ಟವಾದ ಅನೇಕ ಪದ್ಧತಿಗಳಿವೆ. ಈ ಭಾಗದಲ್ಲಿ ಕಂಡು ಬರುವ ಅಂತಹ ಕೆಲವು ಪದ್ಧತಿಗಳಾದ ಆಯಗಾರ ಪದ್ಧತಿ, ಮುಯ್ಯಾಳು ಪದ್ಧತಿ, ಕೋರಿ ಪದ್ಧತಿ ಹಾಗೂ ಕೊನೆಕಾರ ಪದ್ಧತಿಗಳನ್ನು ದಾಖಲಿಸಲಾಗಿದೆ.

**ಆಯಗಾರ ಪದ್ಧತಿ** : ಪ್ರಾಚೀನ ಕಾಲದಿಂದಲೂ ಕೃಷಿಗೆ ಪೂರಕವಾದ ಕಸುಬುಗಳನ್ನು ಮಾಡಿಕೊಂಡು ಬಂದಿರುವುದನ್ನು ಗುರುತಿಸಬಹುದಾಗಿದೆ. ಕೃಷಿಗೆ ಪೂರಕವಾದ ಇಂತಹ ಉಪವೃತ್ತಿಗಳು ಸಮಾಜದಲ್ಲಿ ಜನಸಾಮಾನ್ಯರ ಸ್ವಾವಲಂಬಿ ಬದುಕಿಗೆ ಸಹಾಯಕವಾಗಿದ್ದವು ಅಲ್ಲದೇ ಅಗತ್ಯವೂ ಆಗಿದ್ದವು. ಕೃಷಿಕನಿಗೆ ವಿವಿಧ ಸೇವೆಗಳನ್ನು ಸಲ್ಲಿಸಿದ ಅಗಸ, ಪೂಜಾರಿ, ಗೌಡ, ಮಣೆಗಾರ, ಕುಂಬಾರ, ಕ್ಷೌರಿಕ, ತಳವಾರ, ನೀರಗಂಟಿ ಮೊದಲಾದವರು ಸುಗ್ಗಿಯ ವೇಳೆ ಧವಸ, ಧಾನ್ಯಗಳ ರೂಪದಲ್ಲಿ ಪ್ರತಿಫಲವನ್ನು ಪಡೆಯುತ್ತಿದ್ದರು. ಹೀಗೆ ಧಾನ್ಯದ ಮೂಲಕ ಪ್ರತಿಫಲ ಪಡೆಯುವವರನ್ನು ಆಯಗಾರ, ಬಾಬುದಾರ, ಹಕ್ಕುದಾರ, ಕೈವಾಡದವರೆಂದೂ ಸ್ಥಳೀಯವಾಗಿ ಕರೆಯಲಾಗುತ್ತದೆ. ಹಣದ ಚಲಾವಣೆಯಿರುವ ಈ ಸಂದರ್ಭದಲ್ಲಿ ವಾಣಿಜ್ಯೀಕರಣದ ಪ್ರಭಾವದಿಂದ ಇಂತಹ ಪದ್ಧತಿಗಳು ಕಣ್ಮರೆಯಾಗುತ್ತಿವೆ.

**ಮುಯ್ಯಾಳು** : ಕೂಲಿಯನ್ನು ಪಡೆಯದೇ ಪರಸ್ಪರ ಕೃಷಿ ಕಾರ್ಯಗಳನ್ನು ಮಾಡುವುದನ್ನು ಮುಯ್ಯಾಳು ಎನ್ನುವರು. ಸಹಕಾರಿ ತತ್ವದ ಮೇರೆಗೆ ಈ ಪದ್ಧತಿಯು ನೆಡೆಯುತ್ತದೆ. ಹೊಲ, ಗದ್ದೆ, ತೋಟಗಳಲ್ಲಿ ಉಳುಮೆ, ಬಿತ್ತನೆಯಿಂದ ಆರಂಭವಾಗಿ ಕಣದಲ್ಲಿ ಧಾನ್ಯ ಒಕ್ಕಿದ ನಂತರ ಮನೆಗೆ ತರುವವರೆಗೂ ಮುಯ್ಯಾಳು ಪದ್ಧತಿಯು ರೂಢಿಯಲ್ಲಿರುತ್ತದೆ. ಇದರಿಂದ ದುಬಾರಿ ಕೂಲಿ, ಕೂಲಿಕಾರರ ಕೊರತೆಯಂತಹ ಸಮಸ್ಯೆಗಳಿಗೆ ಪರಿಹಾರ ಸಿಗುತ್ತದೆ. ಕಡಿಮೆ ಪ್ರಮಣದ ಜಮೀನನ್ನು ಸಾಗುವಳಿ ಮಾಡುವ ರೈತರಲ್ಲಿ ಈ ಪದ್ಧತಿಯು ಸಾಮಾನ್ಯವಾಗಿ ಕಂಡುಬರುತ್ತದೆ.

**ಕೋರಿ ಪದ್ಧತಿ** : ಕೋರಿ ಪದ್ದತಿಯನ್ನು ಗೇಣಿ ಪದ್ಧತಿ ಎಂದೂ ಕರೆಯಲಾಗುತ್ತದೆ. ಕಡಿಮೆ ಜಮೀನನ್ನು ಹೊಂದಿರುವ ಸಣ್ಣ ಹಿಡುವಳಿದಾರರು ದೊಡ್ಡ ಹಿಡುವಳಿದಾರರಿಂದ ಅಥವಾ ಬೇಸಾಯ ಮಾಡಲು ಸಾಧ್ಯವಾಗದವರಿಂದ ಒಂದು ಒಪ್ಪಂದವನ್ನು ಮಾಡಿಕೊಂಡು ಕೃಷಿ ಮಾಡುವರು. ಬಂದ ಬೆಳೆಯಲ್ಲಿ ಹುಲ್ಲು-ಧಾನ್ಯವನ್ನು ಸಮನಾಗಿ ಹಂಚಿಕೊಳ್ಳುವರು. ಇದೇ ಕೋರಿ ಪದ್ಧತಿ. ಈ ಪದ್ಧತಿಯು ಇಂದಿಗೂ ಅಸ್ತಿತ್ವದಲ್ಲಿದೆ.

**ಕೊನೆಕಾರರು** : ತೆಂಗಿನಕಾಯಿ, ಅಡಿಕೆ ಕಾಯಿಗಳನ್ನು ಕೀಳುವ ವೃತ್ತಿ ಮಾಡುವವರೇ ಕೊನೆಕಾರರು. ರೋಟಿ, ಹಗ್ಗ, ಮಣೆ, ಇತ್ತೀಚೆಗೆ ಬಂದಿರುವ ಮರವನ್ನು ಏರುವ ಯಂತ್ರಗಳನ್ನು ಬಳಸಿಕೊಂಡು ಮರಗಳನ್ನು ಹತ್ತುವ ಮೂಲಕ ಅಡಿಕೆ, ತೆಂಗಿನಕಾಯಿಗಳನ್ನು ಕೀಳುವರು. ಒಬ್ಬ ಕೊನೆಕಾರನು ನಾಲ್ಕಾರು ತೋಟಗಳನ್ನು ಒಪ್ಪಂದದ ಪ್ರಕಾರ ಗೌರಿ, ಶಿವರಾತ್ರಿ, ಮಹಾನವಮಿ, ದೀಪಾವಳಿ ಹಬ್ಬಗಳ ಕಾಲದಲ್ಲಿ ೪ ಕೊಯ್ಲು ಮಾಡುತ್ತಾನೆ. ಇತ್ತೀಚಿನ ದಿನಗಳಲ್ಲಿ ಮರವನ್ನೇರಿ ಕಾಯಿ ಕೀಳಲು ಮರವೊಂದಕ್ಕೆ ೩೦ ರಿಂದ ೫೦ ರೂಪಾಯಿಗಳವರೆಗೆ ಕೂಲಿಯನ್ನು ಪಡೆಯುತ್ತಾನೆ. ಕೆಲವೊಮ್ಮೆ ಸಂಭಾವನೆಯಾಗಿ ತೆಂಗಿನಕಾಯಿಯನ್ನು ಪಡೆಯುತ್ತಾನೆ. ಈ ವೃತ್ತಿಗೆ ಜಾತಿಯ ನಿರ್ಬಂಧವಿಲ್ಲ. ಹಾಗಾಗಿ ಕೊನೆಕಾರಿಕೆ ವೃತ್ತಿಯನ್ನು ಮಾಡುವವರು ವಿವಿಧ ಜಾತಿಗಳಿಗೆ ಸೇರಿದ್ದಾರೆ.

## ೫.೨ ನೀರಾವರಿ

ಭೂಮಿಗೆ ಬಿದ್ದಂತಹ ಮಳೆಯ ನೀರನ್ನು ಸಂಗ್ರಹಿಸಿ ಸಮರ್ಪಕವಾಗಿ ಕೃಷಿಗೆ ಬಳಸುವ ಕಾರ್ಯ ವಿಧಾನವನ್ನು ನೀರಾವರಿ ಎಂದು ಕರೆಯಲಾಗುತ್ತದೆ. ಇಂತಹ ನೀರಾವರಿ ಪದ್ಧತಿಯು ಬಹಳ ಹಿಂದಿನಿಂದಲೂ ಅಸ್ತಿತ್ವದಲ್ಲಿದೆ. ಮನುಕುಲದ ಉಳಿವು ಮತ್ತು ಏಳಿಗೆಗೆ ನೀರು ಅತೀ ಅಗತ್ಯವಾಗಿದೆ.ಪ್ರಪಂಚದ ಎಲ್ಲ ನಾಗರೀಕತೆಗಳ ಉಗಮವೂ ನದಿ ತೀರದಲ್ಲಿಯೇ ಆಗಿರುವುದು ಗಮನಾರ್ಹವಾದುದಾಗಿದೆ. ಹಳ್ಳಗಳು, ಸರೋವರಗಳು, ನದಿಗಳು ನೀರಿನ ಸ್ವಾಭಾವಿಕ ಆಕರಗಳಾದರೆ ಕೆರೆ, ಕುಂಟೆ, ಬಾವಿ, ಕಾಲುವೆಗಳು

ಕೃತಕವಾದುವು. ಮನುಕುಲದ ಬದುಕು ಇವುಗಳೊಂದಿಗೆ ಬೆರೆತುಕೊಂಡಿರುವುದನ್ನು ಗಮನಿಸಬಹುದಾಗಿದೆ. ರುದ್ರಧಾಮನ ಜುನಾಗಡ ಶಾಸನವು ಕ್ರಿ. ಪೂ. ೪ ನೇ ಶತಮಾನದಲ್ಲಿದ್ದ ಜಲಾಶಯದ ವಿವರಣೆಯನ್ನು ನೀಡುತ್ತದೆ.[೧೨] ಲಕ್ಷ್ಮೀಧರಮಾತ್ಯನ ಅಭಿಪ್ರಾಯದಲ್ಲಿ[೧೩] ತಾಯಿ ತನ್ನ ಕಂದನಿಗೆ ಕೆರೆಯನ್ನು ಕಟ್ಟಿಸುವ ಬಾವಿಯನ್ನು ತೆಗೆಯಿಸುವ ಲೋಕೋಪಕಾರದ ನುಡಿಗಳನ್ನು ಹೇಳುವುದನ್ನು ಸ್ಮರಿಸಬಹುದಾಗಿದೆ. ರಾಜನು ಕೆರೆಗಳನ್ನು, ಅಣೆಕಟ್ಟೆಗಳನ್ನು ಕಟ್ಟಿಸಬೇಕು, ಕಟ್ಟಿಸುವವರಿಗೆ ಸಕಲ ಸೌಲಭ್ಯಗಳನ್ನು ಒದಗಿಸಬೇಕೆಂದು ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಹೇಳಲಾಗಿದೆ.[೯] ಒಕ್ಕಲುತನವು ನೀರಾವರಿಗಾಗಿ ಮಳೆ, ಬಾವಿ, ಕೆರೆ, ಕುಂಟೆ, ಕಾಲುವೆಗಳನ್ನು ಆಶ್ರಯಿಸಿತ್ತು.

ಬೇಸಾಯವನ್ನು ರೂಢಿಸಿಕೊಂಡ ಜನಪದ ಸಮುದಾಯವು ಮಳೆಗೂ ಬೆಳೆಗೂ ಇರುವ ನಂಟನ್ನು ಕಾಲಕ್ರಮೇಣ ಅರ್ಥ ಮಾಡಿಕೊಳ್ಳುತ್ತಾ ಬಂದರು. ನಿಗಧಿತ ಕಾಲಮಾನದಲ್ಲಿ ಸುರಿಯುವ ಮಳೆಗೆ ಕಾಲಮಾನವನ್ನು ಆಧರಿಸಿ ಹೆಸರುಗಳನ್ನು ಇಟ್ಟರು.[೩] ಯಾವ ಕಾಲದಲ್ಲಿ ಯಾವ ಮಳೆ ಬರುತ್ತದೆ, ಯಾವ ಬೀಜ ಬಿತ್ತಬೇಕೆಂಬುದನ್ನೂ ಅರಿತರು.ಮಳೆಯು ಕೇವಲ ನೀರಲ್ಲ. ಸಕಲ ಜೀವಿಗಳ ಜೀವಜಲ ಎಂಬುದನ್ನು ಸ್ಪಷ್ಟವಾಗಿ ಅರಿತುಕೊಂಡರು.

ಮಳೆಯ ನೀರನ್ನು ಕೆರೆ, ಕುಂಟೆ ಮತ್ತು ಬಾವಿಗಳಲ್ಲಿ ಸಂಗ್ರಹಿಸಿಕೊಂಡು ಕೃಷಿಗೆ ಬಳಸಿಕೊಳ್ಳಲಾಗುತ್ತದೆ. ಮಳೆಗಾಲದಲ್ಲಿ ಸಮರ್ಪಕವಾಗಿ ಮಳೆಯಾದರೆ ಮಾತ್ರ ಇಲ್ಲಿನ ಕೆರೆ, ಕುಂಟೆ, ಬಾವಿಗಳು ನೀರಿನಿಂದ ತುಂಬಿರುತ್ತವೆ. ಆದರೆ ಬೇಸಿಗೆಯ ವೇಳೆಗೆ ನೀರಿನ ಪ್ರಮಾಣವು ಕಡಿಮೆಯಾಗುತ್ತದೆ. ಕೆಲವೊಮ್ಮೆ ಬರಿದಾಗುತ್ತವೆ. ಇತ್ತೀಚೆಗೆ ಅಂತರ್ಜಲದ ಮಟ್ಟವು ಕಡಿಮೆಯಾಗಿರುವುದರಿಂದ ಹೆಚ್ಚಾಗಿ ಕೊಳವೆ ಬಾವಿಗಳನ್ನೇ ಆಶ್ರಯಿಸಲಾಗಿದೆ. ಕೆರೆಗಳು, ಕುಂಟೆಗಳು ಮತ್ತು ಬಾವಿಗಳನ್ನು ನಿರ್ಮಾಣ ಮಾಡಿಸುವ ಮೂಲಕ ಜನರು ಮತ್ತು ಜಾನುವಾರುಗಳಿಗೆ ನೀರನ್ನು ಒದಗಿಸುವುದನ್ನು ಉಪಕಾರಯುತವಾದ ಧಾರ್ಮಿಕ ಕಾರ್ಯವೆಂದೇ ಭಾವಿಸಲಾಗಿತ್ತು. ಇದರಿಂದಾಗಿ ಜನಸಮುದಾಯ ಮತ್ತು ಪ್ರಭುತ್ವಗಳ ಸಹಭಾಗಿತ್ವದೊಂದಿಗೆ ಕೆರೆಗಳು, ಕುಂಟೆಗಳು ಮತ್ತು ಬಾವಿಗಳು ನಿರ್ಮಾಣಗೊಂಡವು. ರಾಜರು, ಮಂತ್ರಿಗಳು, ಪ್ರಧಾನರು, ದಂಡನಾಯಕರು, ಪಾಳೇಗಾರರು, ಗೌಡರು, ವೇಶ್ಯೆಯರು, ಶೆಟ್ಟಿಗಳು, ಸಂತರು, ಸನ್ಯಾಸಿಗಳು, ಬಳೆಗಾರರು, ಕಾವಲುಗಾರರು, ಮಾವುತರು, ದೇವಾಲಯದ ನಿರ್ವಹಣಾ ಸಮಿತಿಗಳು ಹಾಗೂ ಸಂಸ್ಥೆಗಳು ಕೆರೆಗಳು, ಕುಂಟೆಗಳು ಮತ್ತು ಬಾವಿಗಳ ನಿರ್ಮಾಣದಲ್ಲಿ ಪಾಲ್ಗೊಳ್ಳುವ ಮೂಲಕ ಪ್ರಮುಖ ಪಾತ್ರವನ್ನು ವಹಿಸಿರುವುದನ್ನು ಕಾಣಬಹುದಾಗಿದೆ. ಕೆಲವೊಮ್ಮೆ ಬೃಹತ್ ಸೇನೆಗೆ ನೀರು ಪೂರೈಸುವ ಸಲುವಾಗಿ ಆಡಳಿತ ವರ್ಗವು ಕೆರೆ, ಕಟ್ಟೆಗಳನ್ನು ನಿರ್ಮಿಸಿತು. ಇವುಗಳು ಕೇವಲ ಮಾನವನಿಗಷ್ಟೇ ಅಲ್ಲದೇ ಜೀವವೈವಿಧ್ಯದ ಉಳಿವು ಮತ್ತು ಏಳಿಗೆಗೆ ನೆರವಾದವು. ತುಮಕೂರು ಜಿಲ್ಲೆಯ ಪ್ರದೇಶದಲ್ಲಿ ಅನೇಕ ಕೆರೆಗಳು ಅಸ್ತಿತ್ವದಲ್ಲಿ ಇರುವುದನ್ನು ಕಾಣಬಹುದು. ಅವುಗಳಲ್ಲಿ ಕುಣಿಗಲ್‌ಕೆರೆ,

ತೀತಾಕೆರೆ, ತುಂಬಾಡಿಕೆರೆ, ಮಧುಗಿರಿಕೆರೆ, ಸಿದ್ದಾಪುರಕೆರೆ, ಹೊಸಕೆರೆಯ ಕೆರೆ, ಚೋಳೇನಹಳ್ಳಿಕೆರೆ, ಕರಡಿಕೆರೆ, ಅಗ್ರಹಾರಕೆರೆ, ತುಮಕೂರು ಅಮಾನಿಕೆರೆ, ಗೂಳೂರುಕೆರೆ, ಕೊರಟಗೆರೆಯ ಗೋಕುಲದಕೆರೆ, ಸಿರಾದ ಹೊಸೂರುಕೆರೆ, ಬಿಜ್ಜಾವರದಕೆರೆ ಇತ್ಯಾದಿ. ಇಲ್ಲಿನ ಬಹುತೇಕ ಎಲ್ಲ ಊರುಗಳಲ್ಲಿಯೂ ಕೆರೆಗಳಿರುವುದನ್ನು ಕಾಣಬಹುದಾಗಿದೆ. ಸುಮಾರು ೮ನೇ ಶತಮಾನದಿಂದ ೧೮ನೆಯ ಶತಮಾನದವರೆಗೆ ನಿರ್ಮಾಣಗೊಂಡ ಅನೇಕ ಕೆರೆಗಳ ಬಗ್ಗೆ ಶಾಸನಾತ್ಮಕ ಉಲ್ಲೇಖಗಳು ಲಭಿಸುತ್ತವೆ. ಕ್ರಿ. ಶ. ೧೭೮೯ ರ ಮೆಕೆಂಜಿಯ ದಾಖಲೆಗಳಲ್ಲಿ ಕೆರೆಗಳನ್ನು ಕುರಿತಂತಹ ಸ್ಪಷ್ಟವಾದ ಮಾಹಿತಿಯು ಸಿಗುತ್ತದೆ. ದಾಖಲೆಗಳ ಪ್ರಕಾರ ಸುಮಾರು ೨೧೧೩ ಕೆರೆಗಳು ಅಸ್ತಿತ್ವದಲ್ಲಿದ್ದವು. ಆದರೆ ೧೯೧೩-೧೪ ರ ವೇಳೆಗೆ ಕೆರೆಗಳ ಸಂಖ್ಯೆಯು ೧೮೭೪ಕ್ಕೆ ಇಳಿಕೆಯಾಗಿರುವುದು ಕಂಡುಬರುತ್ತದೆ.[೪] ಈ ಜಿಲ್ಲೆಯಲ್ಲಿ ಲಭ್ಯವಿರುವ ಸುಮಾರು ೧೦೦೦ ಶಾಸನಗಳಲ್ಲಿ ಸುಮಾರು ೧೦೨ ಶಾಸನಗಳಲ್ಲಿ ಕೆರೆ ನೀರಾವರಿಗೆ ಸಂಬಂಧಿಸಿದ ಮಾಹಿತಿಯು ದೊರಕುತ್ತದೆ.

- ಈರುಗ್ಯಾತರಾಯನ ಕಾವ್ಯದಲ್ಲಿ ತುಂಬೋಡಿ ಕೆರೆಯನ್ನು ಉಲ್ಲೇಖಿಸಲಾಗಿದೆ. ಈರುಗ್ಯಾತರಾಯನು ತುಂಬೋಡಿಯ ಪಾಳೆಯಗಾರ ಮಲ್ಲನಾಯಕನನ್ನು ಪಗಡೆಯಾಟದಲ್ಲಿ ಸೋಲಿಸಿದ್ದನು. ಪಗಡೆಯಾಡಿದ ಸ್ಥಳದಲ್ಲಿಯೇ ತುಂಬೋಡಿಯ ನಾಯಕನು ಈರುಗ್ಯಾತರಾಯನ ಮಗನಾದ ವೀರನಾಗಪ್ಪನನ್ನು ಕೊಲೆ ಮಾಡಿಸಿದ್ದನು. ಇದು ವಡ್ಡಗೆರೆಯವ ಜನರು ತುಂಬೋಡಿಯ ಪಾಳೆಯಗಾರ ಮಲ್ಲನಾಯಕನನ್ನು ದ್ವೇಷಿಸಲು ಕಾರಣವಾಗಿತ್ತು.

> ತುಂಬೋಡಿ ಕೆರೆ ತುಂಬಿ ಇಂಗೋಡಿ ಹರಿದಾವೆ
> ಕಂದಮ್ಮ ಕಾಲು ತೊಳೆಯೋಕೆ। ಬಸಿಲೇನೋರು
> ಈರುಗ್ಯಾತಯ್ಯ ಪಗಡೀಯ॥[೫]

ತುಂಬೋಡಿಯ ಕೆರೆಯು ತುಂಬಿ, ಕೋಡಿ ಹರಿದರೂ ಕೂಡ ವಡ್ಡಗೆರೆಯ ಜನರಲ್ಲಿ ತುಂಬೋಡಿ ನೆಲದ ನೀರನ್ನು ಬಳಸಬಾರದೆಂಬ ಭಾವನೆಯಿತ್ತು. ಈ ಬಗೆಯ ನೇತ್ಯಾತ್ಮಕ ಭಾವನೆಯನ್ನು ಇದನ್ನು ಇಂದಿಗೂ ಮುಂದುವರೆಸಿಕೊಂಡು ಬರಲಾಗಿದೆ. ಈ ಸಂಪ್ರದಾಯಕ್ಕೆ ಪೂರಕವಾಗಿಯೇ ಮುಂದಿನ ಕಾವ್ಯವು ಮೂಡಿ ಬಂದಿದೆ.

> ತುಂಬೋಡಿ ಕೆರೆಯಾಗೆ ಇಂಬುಳ್ಳ ಇಳಿಜಾಲಿ
> ಮುಂಗಾಲಿ ತಾಕಿ ಮೊಣಕಾಲು। ಮೂಡಿದರೆ
> ಮುಂದಾಕೆ ನೀನು ನಡೆಯದಿರು॥[೬]

ತುಂಬೋಡಿಯ ಕೆರೆಯಂಗಳದಲ್ಲಿ ಜಾಲಿ ಮುಳ್ಳಿನ ಮರಗಳು ಇದ್ದವೆಂದು ತಿಳಿಸಲಾಗಿದೆ. ಈ ಕೆರೆಯಂಗಳದಲ್ಲಿಯೇ ಈರುಗ್ಯಾತರಾಯನ ಮಗ ನಾಗಣ್ಣನನ್ನು ತುಂಬೋಡಿಯ ಮಲ್ಲನಾಯಕನ ಕಡೆಯವರು ಹತ್ಯೆಮಾಡಿದ್ದರಿಂದ ಈ ಸ್ಥಳದಲ್ಲಿ ವಡ್ಡಗೆರೆಯ ಜನರು ಓಡಾಡಬಾರದೆಂಬ ನಂಬಿಕೆಯಿದೆ.

- ಅಲ್ಲದೇ ಅಮ್ಮಾಜಮ್ಮ ಎಂಬ ಮಧುಗಿರಿಯ ಮಹಾನಾಡ ಪ್ರಭುಗಳ ರಾಣಿಯು ಕೊರಟಗೆರೆ ತಾಲೂಕಿನ ಜೆಟ್ಟಿಅಗ್ರಹಾರ ಗ್ರಾಮದ ಕೆರೆಯನ್ನು ನಿರ್ಮಿಸಿದ್ದ ಬಗ್ಗೆ ಮೌಖಿಕ ಅಭಿಪ್ರಾಯಗಳಿವೆ. ಜನ ಸಮುದಾಯದ ಬದುಕಿನ ಅನುಭವದ ನೆಲೆಯಲ್ಲಿ ಹಲವು ಜಲಸಂಬಂಧಿ ನಾಣ್ಣುಡಿಗಳು ರೂಢಿಯಲ್ಲಿರುವುದನ್ನು ಗುರುತಿಸಬಹುದಾಗಿದೆ.
- ಬಿಜ್ಜಾವರದ ಕೆರೆಯ ಕೋಡಿಗೆ ಸಂಬಂಧಿಸಿದಂತೆ ಈ ರೀತಿಯಾಗಿ ಹೇಳಲಾಗುತ್ತದೆ. ಅಂದರೆ ಮಹಾನಾಡಪ್ರಭುಗಳ ರಾಜಧಾನಿಯಾಗಿದ್ದ ಬಿಜವರದ ಕೆರೆಯ ಹಿಂಭಾಗದ ಸಣ್ಣ ಕೆರೆಗಳು, ಕುಂಟೆಗಳು, ತೊರೆಗಳು ನೀರಿನಿಂದ ತುಂಬಿ ಹರಿದರೂ ಸಹ ಮಧುಗಿರಿಯ ಚೋಳೇನಹಳ್ಳಿ ಕೆರೆಯು ನೀರಿನಿಂದ ತುಂಬಿ ಕೋಡಿಯಾಗುವುದಿಲ್ಲ. ಆದರೆ ಚೋಳೇನಹಳ್ಳಿಯ ಕೆರೆಯು ನೀರಿಂದ ತುಂಬಿ ಕೋಡಿಹೋದರೆ ಚೋಳೇನಹಳ್ಳಿಯ ಕೆರೆಗೆ ಹೆಚ್ಚಾದ ನೀರು ಬಿಜವರ ಕೆರೆಗೆ ಹರಿಯುತ್ತದೆ. ಆಗ ಮಾತ್ರ ಬಿಜವರದ ಕೆರೆಯು ನೀರಿಂದ ತುಂಬಿ ಕೋಡಿ ಹೋಗುತ್ತದೆ.

  > ಆರು ಬಂದರೆ ಆಕಳಿಸುತ್ತೇನೆ
  > ಮೂರು ಬಂದರೆ ಮುಕ್ಕಳಿಸುತ್ತೇನೆ
  > ಚೋಳೇನಹಳ್ಳಿ ಅಕ್ಕಯ್ಯ ಬಂದರೆ ನಾನು ಮಾತ್ರ ನಿಲ್ಲೋದಿಲ್ಲ[2]

  ಎಂಬುದು ಜನರು ಅನುಭವದ ಹಿನ್ನೆಲೆಯಲ್ಲಿ ಕಟ್ಟಿಕೊಂಡಿರುವ ನಾಣ್ಣುಡಿಯಾಗಿದೆ. ಎತ್ತರದಲ್ಲಿರುವ ಚೋಳೇನಹಳ್ಳಿ ಕೆರೆಯ ಅಚ್ಚುಕಟ್ಟು ಹಿರಿದಾಗಿದ್ದು ಕೋಡಿ ಹೋದಾಗ ನೀರಿನ ಹೊರ ಹರಿವು ಬೃಹತ್ ಪ್ರಮಾಣದಲ್ಲಿರುತ್ತದೆ. ಹೀಗಾಗಿ ಬಿಜ್ಜಾವರದ ಕೆರೆಯು ತಗ್ಗು ಪ್ರದೇಶದಲ್ಲಿ ಇರುವುದರಿಂದ ಚೋಳೇನಹಳ್ಳಿ ಕೆರೆಯ ನೀರಿನ ಹೊರ ಹರಿವು ಬಿಜವರದ ಕೆರೆಗೆ ಹರಿದು ಅದು ತುಂಬಿ ಕೋಡಿಯಾಗುತ್ತದೆ.
- ಇನ್ನೊಂದು ನಾಣ್ಣುಡಿ '*ಚೋಳೇನಹಳ್ಳಿ ಕೆರೆ ಕೋಡಿ ಬಿದ್ದರೆ ಅಂಬು ಎಸೆಯೋ ಗುಟ್ಟೆವರೆಗೆ ಬರೋವಷ್ಟು ನೀರನ್ನು ಗುಟ್ಟೆ ಹೀರ್ಕೊಂಡು ಮುಂದಕ್ಕೆ ಬಿಡ್ತದೆ*' ಎಂಬುದು ಜನರ ಸಮುದಾಯದ ಅನುಭವದ, ಅರಿವಿನ ನೆಲೆಯಲ್ಲಿ ಮೂಡಿಬಂದಿದೆ. ಚೋಳೇನಹಳ್ಳಿ ಕೆರೆಯ ಕೆಳಗೆ ಇರುವ 'ಕುರುಬರ ದೇವರಗವಿ ಗುಟ್ಟೆ' ಯ ಪರಿಸರದ ನೆಲವು ಮರಳು ಮಿಶ್ರಿತ ಮಣ್ಣಿನಿಂದ ಕೂಡಿದೆ. ಇದರಿಂದಾಗಿ ಇಲ್ಲಿ ಅಧಿಕ ಪ್ರಮಾಣದಲ್ಲಿ ನೀರು ಹಿಂಗುತ್ತದೆ ಎಂಬ ಜನಸಮುದಾಯದ ನುಡಿಯನ್ನು, ಸ್ಥಳೀಯ ಭೂ ಸ್ವರೂಪವನ್ನು ಅರಿತು ಕಟ್ಟಿದ್ದಾರೆ. ಎಂಬ ಅಂಶವು ತಿಳಿದು ಬರುತ್ತದೆ.

**ಬಾವಿಗಳು :** ಭೂಮಿಯನ್ನು ಆಳವಾಗಿ ಗುಂಡಿಯನ್ನಾಗಿ ತೋಡುವ ಮೂಲಕ ಬಾವಿಯನ್ನು ನಿರ್ಮಿಸಲಾಗುತ್ತಿತ್ತು. ಇದು ಭಾರತದಲ್ಲಿ ಪ್ರಾಚೀನ ಕಾಲದಿಂದಲೂ ಅಸ್ತಿತ್ವದಲ್ಲಿದೆ. ಮೌಖಿಕ ಆಕರಗಳಲ್ಲಿ ಬಾವಿಗಳ ಉಲ್ಲೇಖಗಳನ್ನು ಗುರುತಿಸಲಾಗಿದೆ. ಸಾಂಸ್ಕೃತಿಕ ವೀರನಾದ ಮರೂರು ವೀರನಾಗಪ್ಪನ ಜಾತ್ರೆಯಲ್ಲಿ ಆತನು ಜಲಧಿ ಉತ್ಸವದ ಸಂದರ್ಭದಲ್ಲಿ ಸಾಗಿ ಬರುವ

ಹಾದಿಯಲ್ಲಿ ಗಜ್ಜನಬಾವಿಯ ನೀರಿನಿಂದಲೇ ಸೆಳೆವನ್ನು ನೀಡಬೇಕೆಂಬ ಮೌಖಿಕ ಸಂಪ್ರದಾಯಗಳಿವೆ.

ರಾಯ ಮರೂರು ಗಜ್ಜನ ಬಾವಿ ನೀರು
ತೋರರಂಗಳಕೆಯ ಸೆಳುಗಾಳು। ಮರೂರ
ಈರಣ್ಣನ ಸಾಗಿ ಬರಹೇಳು॥[೮]

ಏಳು ಮಟ್ಟು ಆಳವಿರುವ ಬಾವಿಯಲ್ಲಿ ಬಿದ್ದಿದ್ದ ಮೂಗುತಿಯನ್ನು ತೆಗೆದುಕೊಡುವ ಪ್ರಸಂಗವು ಈರುಗ್ಯಾತರಾಯನ ಮೌಖಿಕ ಕಾವ್ಯದಲ್ಲಿದೆ. ಈ ಕೆಳಕಂಡ ಕಾವ್ಯದಲ್ಲಿ ಕೆರೆ, ತೋಟ ಹಾಗೂ ತೋಟದಲ್ಲಿ ಹಲಸಿನ, ಗಜನಿಂಬೆಯ ಫಲವು ಇದ್ದವೆಂದು ತಿಳಿದು ಬರಿತ್ತದೆ. ನಾಗಮ್ಮ ನಿಂಬೆಹಣ್ಣಿನೊಂದಿಗೆ ತಾನು ಸತಿಸಹಗಮನ ಮಾಡುವ ಸನ್ನಿವೇಶವನ್ನು ಕಾಣಬಹುದಾಗಿದೆ.

ಕೆರೆ ಬಾವಿಯುಂಟು ಕೆಳಗೆ ತೋಟ ಉಂಟು
ಹಣ್ಣುಂಟು ಅಡಸೀನ ಫಲವುಂಟು। ನಾಗಮ್ಮಾನ
ಮುಂಚೆರಗಿನಾಗುಂಟು ಗಜನಿಂಬೆ॥[೯]

ತೆರೆದ ಮತ್ತು ಕೊಳವೆ ಬಾವಿಗಳೆಂಬ ೨ ಬಗೆಯ ಬಾವಿಗಳನ್ನು ಇಂದು ಕಾಣಬಹುದಾಗಿದೆ. ಹಿಂದೆ ತೆರೆದ ಬಾವಿಗಳು ಮಾತ್ರವೇ ಅಸ್ತಿತ್ವದಲ್ಲಿದ್ದು ಕೃಷಿಹೊಲಕ್ಕೆ ನೀರನ್ನು ಪೂರೈಸುತ್ತಿದ್ದವು. ನೀರನ್ನು ಮೇಲೆತ್ತಲು ಏತ, ರಾಟೆ ಮತ್ತು ಕಪಿಲೆ ಪದ್ಧತಿಯನ್ನು ಅಳವಡಿಸಿಕೊಳ್ಳಲಾಗಿತ್ತು.

**ಏತನೀರಾವರಿ** : ಏತನೀರಾವರಿಯು, ಬಾವಿಯಿಂದ ಹೊಲಕ್ಕೆ ನೀರೆತ್ತಲು ಬಳಸುತ್ತಿದ್ದ ಪ್ರಾಚೀನವಾದ ವ್ಯವಸ್ಥೆಯಾಗಿದೆ. ಏತನೀರಾವರಿ ಎಂದರೆ ಬಾವಿಯ ದಡದಲ್ಲಿ ಬಲವಾದ ಒಣ ಮರವೊಂದನ್ನು ನಿಲ್ಲಿಸಲಾಗುತ್ತಿತ್ತು. ಈ ಮರದ ಕೊನೆಯಲ್ಲಿ ಬಲವಾದ ಕಡ್ಡಿಯೊಂದನ್ನು ಕೊಕ್ಕರೆಯಾಕಾರದಲ್ಲಿ ಜೋಡಿಸಿ ಬಾವಿಯೆಡೆಗಿನ ಕಡ್ಡಿಯ ಕೊನೆಗೆ ಲೋಹದ ಬಾನಿಯೊಂದನ್ನು ಜೋಡಿಸಲಾಗುತ್ತಿತ್ತು. ಬಾವಿಯಲ್ಲಿ ದಡದಿಂದ ಚಾಚಿಕೊಂಡಿರುವ ಎರಡು ಬಂಡೆಗಳನ್ನು ನಿರ್ಮಿಸಲಾಗಿದ್ದು ಬಂಡೆಗಳ ಮೇಲೆ ತಲಾ ಒಂದೊಂದು ಕಾಲನ್ನು ಇಟ್ಟುಕೊಂಡು ನಿಂತಂತಹ ವ್ಯಕ್ತಿಯು ಬಾನಿಯನ್ನು ಬಾವಿಯಲ್ಲಿ ಮುಳುಗಿಸಿ ಮೇಲೆತ್ತಿ ಅದರಲ್ಲಿನ ನೀರನ್ನು ಬಾವಿಯ ದಡದಲ್ಲಿ ಮೊದಲೇ ನಿರ್ಮಿಸಿರುವ ಕಾಲುವೆಯಲ್ಲಿ ಸುರಿಯುತ್ತಾನೆ. ಈ ಕಾಲುವೆಯ ಮೂಲಕ ನೀರನ್ನು ಬೆಳೆಗೆ ಹಾಯಿಸಲಾಗುತ್ತದೆ.

**ರಾಟೆನೀರಾವರಿ** : ರಾಟೆಯು ಚಕ್ರದ ಸ್ವರೂಪದ್ದಾಗಿದ್ದು, ಆಳದ ಬಾವಿಗಳಿಂದ ನೀರನ್ನು ಮೇಲೆತ್ತಲು ಈ ಜಲಚಕ್ರವನ್ನು ಬಳಸುತ್ತಿದ್ದರು. ಬಾವಿಯ ದಂಡೆಯ ಮೇಲೆ ನಿರ್ಮಿಸಿದ ರಾಟೆಯ ಹಗ್ಗದಿಂದ ಚಿಕ್ಕ ಬಕೆಟ್ಟು ಮಾದರಿಯ ತಗಡಿನ ಡಬ್ಬಗಳನ್ನು ಜೋಡಿಸಿ, ಅವುಗಳನ್ನು ನೀರಲ್ಲಿ ಬಿಟ್ಟು ನೀರು ತುಂಬುವಂತೆ ಮರದಿಂದ ತಯಾರಿಸಿದ ಚಕ್ರವನ್ನು ತಿರುಗಿಸಲಾಗುತ್ತಿತ್ತು. ರಾಟೆಯಂತೆ ಚಕ್ರವನ್ನು ಮಾನವರ ಸಹಾಯದಿಂದ ವೃತ್ತಾಕಾರದಲ್ಲಿ ತಿರುಗಿಸಿದಾಗ ನೀರು ತುಂಬಿ ಮೇಲಕ್ಕೆ ಬರುತ್ತಿತ್ತು. ಅಂತಹ ನೀರನ್ನು ಕಾಲುವೆಗಳ ಮೂಲಕ ಮಡಿಗಳಿಗೆ ಹರಿಯ ಬಿಡಲಾಗುತ್ತಿತ್ತು.

**ಕಪಿಲೆಪದ್ಧತಿ** : ನೀರನ್ನು ತುಂಬಬಹುದಾದ 'ಬಾನಿ' ಎಂದು ಕರೆಯಲಾಗುವ ಚರ್ಮ ಅಥವಾ ಪ್ಲಾಸ್ಟಿಕ್ ಉಪಕರಣದ ಸುತ್ತಲೂ ಕಬ್ಬಿಣದ ಬಳೆಗಳನ್ನು ತೊಡಿಸಿ ಈ ಬಳೆಗಳಿಗೆ ಹಗ್ಗವನ್ನು ಪೋಣಿಸಿ ಆ ಹಗ್ಗವನ್ನು ಬಾವಿಯ ಮೇಲ್ಪದರದಲ್ಲಿ ನಿರ್ಮಿಸಲಾದ ಬಾರಿಯ ಮೇಲ್ಭಾಗದಿಂದ ಹಾದುಬರುವಂತಹ ವ್ಯವಸ್ಥೆಯನ್ನು ಮಾಡಲಾಗುತ್ತಿತ್ತು. ಇದನ್ನು ಎತ್ತುಗಳ ಸಹಾಯದಿಂದ ಎಳೆಯಲಾಗುತ್ತಿತ್ತು. ಬಾನಿಯಿಂದ ನೀರು ಕಲ್ಲಿನ ಗುಂಡಿಯಲ್ಲಿ ಚೆಲ್ಲುವಂತೆ ಮಾಡಲಾಗುತ್ತಿತ್ತು ಈ ಬಾನಿಗುಂಡಿಗೆ ಚೆಲ್ಲಿದ ನೀರನ್ನು ಕಾಲುವೆಗಳ ಮೂಲಕ ಹೊಲಕ್ಕೆ ಹಾಯಿಸಲಾಗುತ್ತಿತ್ತು. ತಂತ್ರಜ್ಞಾನದ ಪರಿಣಾಮವಾಗಿ ಅವಿಷ್ಕರಿಸಿದ ಡೀಸೆಲ್ ಇಂಜಿನ್ ಮತ್ತು ಎಲೆಕ್ಟ್ರಿಕ್ ಮೋಟರ್ ಪಂಪುಗಳ ಬಳಕೆಯಿಂದಾಗಿ ಇತ್ತೀಚೆಗೆ ಈ ತಂತ್ರಗಾರಿಕೆಯು ಕಣ್ಮರೆಯಾಗಿದೆ.

**ನದಿಗಳು** : ತುಮಕೂರಿನ ಪ್ರದೇಶದಲ್ಲಿ ಹಲವು ನದಿಗಳು ಹರಿಯುತ್ತವೆ.[೧೦] ಇವುಗಳು ಬಹುತೇಕ ಮಳೆಗಾಲದಲ್ಲಿ ಮಾತ್ರವೇ ಹರಿಯುವಂತಹವುಗಳಾಗಿವೆ. ಅವುಗಳೆಂದರೆ : ಜಯಮಂಗಲೀ, ಸುವರ್ಣಮುಖಿ, ಗರುಡಾಚಲ, ಉತ್ತರಪಿನಾಕಿನಿ ಮತ್ತು ಶಿಂಷಾ ನದಿಗಳು ಪ್ರಮುಖವಾದುವು. ಇವುಗಳಲ್ಲದೇ ಹೇಮಾವತಿ ನದಿಯ ನೀರನ್ನು ಕೃಷಿಗೆ ಮತ್ತು ಕುಡಿಯಲು ಬಳಕೆ ಮಾಡಲಾಗುತ್ತದೆ. ಗಿರಿದುರ್ಗಗಳಲ್ಲಿ ಹುಟ್ಟಿ ಹಳ್ಳ ಕೊಳ್ಳಗಳ ಮೂಲಕ ತಮ್ಮ ಹರವನ್ನು ಹೆಚ್ಚಿಸಿಕೊಳ್ಳುತ್ತಾ ಹರಿಯುವ ಇವುಗಳು ಇಲ್ಲಿನ ಪ್ರದೇಶದ ಜೀವನಾಡಿಗಳಂತಿವೆ.

**ತಲಪರಿಗೆಗಳು** : ತಲಪರಿಗೆಗಳನ್ನು 'ಚಿಲುಮೆ' ಅಥವಾ 'ಹರಿಯುವ ಬಾವಿಗಳು' ಎಂದು ಕರೆಯಲಾಗುತ್ತದೆ. ಮಧುಗಿರಿ, ಕೊರಟಗೆರೆ, ಮತ್ತು ಪಾವಗಡ ಪ್ರದೇಶಗಳಲ್ಲಿ ಇಂತಹ ಜಲಮೂಲಗಳನ್ನು ಕಾಣಬಹುದಾಗಿತ್ತು. ಹೊಸಕೆರೆ, ಬಿಜವರ, ಸಿದ್ದಾಪುರ, ಚೋಳೇನಹಳ್ಳಿ, ಅಗ್ರಹಾರ, ಹಂಪಾಪುರ, ಮಿಡಿಗೇಶಿ, ಬಡ್ಡಿಹಳ್ಳಿಗಳ ಕೆರೆಯ ಒಳಗೆ, ಕೆರೆ ಏರಿಯ ಹಿಂಭಾಗ, ಕೋಡಿ ಕಾಲುವೆಗಳ ಇಕ್ಕೆಲಗಳಲ್ಲಿ, ಕೆರೆಕಟ್ಟೆಯ ಹಿಂಭಾಗದಲ್ಲಿ ಮತ್ತು ನದಿ ಪಾತ್ರಗಳಲ್ಲಿ ನೀರು ಬರುವಂತಹ ತಲಪರಿಗೆಗಳು ಅಸ್ತಿತ್ವದಲ್ಲಿದ್ದವು.[೧೧] ಇವುಗಳು ಮಳೆಗಾಲದಲ್ಲಿ ಕೃಷಿಗೆ ನೀರನ್ನು ಪೂರೈಸುವಷ್ಟು ಸಮರ್ಥವಾಗಿದ್ದು ಅಂತಹ ತಲಪರಿಗೆಗಳಿಂದ ಹೊಲಗಳಿಗೆ ಸಾಕಷ್ಟು ನೀರನ್ನು ಒದಗಿಸಲಾಗುತ್ತಿತ್ತು. ನಾಗಮ್ಮಳು ಕುಡಿಯುವ ನೀರಿಗಾಗಿ ಹಳ್ಳದಲ್ಲಿ ಚಿಲುಮೆಯನ್ನು ತೋಡುತ್ತಾಳೆ. ಚಿಲುಮೆಯಲ್ಲಿ ನೀರಿನ ಬದಲಾಗಿ ರಕ್ತವರ್ಣವನ್ನು ಕಂಡು ಅಪಶಕುನವೆಂದು ಬಾವಿಸಿದಳು. ಇದು ತನ್ನ ಪತಿಯಾದ ನಾಗಣ್ಣನ ಹತ್ಯೆಯ ಸೂಚಕವಾಗಿತ್ತು. ಸದರಿ ವಿವರಗಳನ್ನು ಈರುನಾಗಮ್ಮನ ಕಾವ್ಯದಲ್ಲಿ ಉಲ್ಲೇಖಿಸಲಾಗಿದೆ.

### ೫.೩. ಪಶುಪಾಲನೆ

ಪಶುಪಾಲನೆ ಎಂದರೆ ಪಶುಗಳನ್ನು ಸಾಕುವ, ಮೇಯಿಸುವ, ಪೋಷಿಸುವ, ಮತ್ತು ಸಂವರ್ಧನೆ ಮಾಡುವುದಾಗಿದೆ. ಪಶುಗಳನ್ನು ದನಗಳು, ಹಸುಗಳು, ಆವುಗಳು,

ಗೋವುಗಳು, ರಾಸುಗಳು, ಜಾನುವಾರುಗಳು ಎಂದು ಹಲವು ಹೆಸರುಗಳಿಂದ ಕರೆಯಲಾಗುತ್ತದೆ. ಪಶುಪಾಲನೆಯು ಸಿಂಧು ನಾಗರೀಕತೆಯ ಕಾಲದಲ್ಲೇ ರೂಢಿಯಲ್ಲಿತ್ತು. ನಂತರದ ವೇದಗಳ ಕಾಲದಲ್ಲಿ ಪ್ರಮುಖ ವೃತ್ತಿಯಾಗಿದ್ದು, ಗೋವುಗಳನ್ನು ಸಂಪತ್ತೆಂದು ಪರಿಗಣಿಸಲಾಗಿತ್ತು. ಇವುಗಳನ್ನು ಪೂಜ್ಯ ಭಾವದಿಂದ ಕಾಣಲಾಗುತ್ತದೆ.[೧೨] ಗ್ರಾಮೀಣ ಜನಜೀವನದಲ್ಲಿ ವ್ಯವಸಾಯ ಮತ್ತು ಪಶುಪಾಲನೆಗಳು ಒಂದಕ್ಕೊಂದು ಅವಲಂಬಿತವಾಗಿದ್ದು ದೇಶದ ಆರ್ಥಿಕಾಭಿವೃದ್ಧಿಯಲ್ಲಿ ಪ್ರಮುಖವಾದ ಪಾತ್ರವನ್ನು ವಹಿಸುತ್ತವೆ. ಕೃಷಿ ಚಟುವಟಿಕೆಗಳಾದ ಉಳುಮೆ, ಭಿತ್ತನೆ, ಕಳೆ ನಿರ್ವಹಣೆ, ಕುಯ್ಲು, ಕೃಷಿ ಉತ್ಪನ್ನಗಳ ಸಾಗಾಣಿಕೆ, ಹಾಗೂ ಹೈನುಗಾರಿಕೆ ಇತ್ಯಾದಿಗಳಿಗೆ ಜಾನುವಾರುಗಳು ಅತೀ ಅವಶ್ಯಕವಾಗಿವೆ. ಎರಡು ಬಗೆಯಲ್ಲಿ ಪಶುಪಾಲನೆಯ ಸ್ವರೂಪವನ್ನು ಕಾಣಬಹುದಾಗಿದೆ. ೧) ಕಾಡುಗೊಲ್ಲ, ಕುರುಬ, ಹಳ್ಳಿಕಾರ ಮುಂತಾದ ಬುಡಕಟ್ಟು ಸಮುದಾಯಗಳು ಪಾರಂಪರಿಕವಾಗಿ ಪಶುಪಾಲನೆಯನ್ನೇ ಪ್ರಮುಖ ವೃತ್ತಿಯನ್ನಾಗಿ ಮಾಡಿಕೊಂಡಿರುವುದು. ೨) ಗೊಬ್ಬರ ಮತ್ತು ಹೈನುಗಾರಿಕೆಗಾಗಿ ಕೃಷಿಯೊಂದಿಗೆ ಉಪವೃತ್ತಿಯಾಗಿ ಪಶುಪಾಲನೆಯನ್ನು ಮಾಡುತ್ತಿರುವುದು.

ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ಹಳ್ಳಿಕಾರ್ ಸಮುದಾಯಕ್ಕೆ ಸೇರಿದ್ದ ಕುಟುಂಬಗಳು ಪಶುಪಾಲನಾ ವೃತ್ತಿಯ ಕಾರ್ಯದಲ್ಲಿ ತೊಡಗಿಸಿಕೊಂಡಿದ್ದು, ಇವರು ಸಾಕುತ್ತಿದ್ದ ದನಗಳನ್ನು ಹಳ್ಳಿಕಾರ್ ತಳಿಗಳು ಎಂದು ಗುರುತಿಸಲಾಗಿದೆ. ಈ ಕಾಲದ ಪಶುಸಂಗೋಪನಾ ಇಲಾಖೆಯನ್ನು 'ಕರುಹಟ್ಟಿ ಸಾರ್ವಜನಿಕ ಸಂಸ್ಥೆ' ಎಂದು ಕರೆಯಲಾಗುತ್ತಿತ್ತು. ರಾಜ್ಯದ ಹಲವೆಡೆ ಪ್ರತ್ಯೇಕ ಹುಲ್ಲುಗಾವಲುಗಳನ್ನು ಪಶುಪಾಲನಾ ಕೇಂದ್ರಕ್ಕೆ ಮೀಸಲಿರಿಸುವ ಮೂಲಕ ಪಶುಪಾಲನೆಗೆ ಮತ್ತು ತಳಿ ಅಭಿವೃದ್ಧಿಗೆ ಆಧ್ಯತೆಯನ್ನು ನೀಡಲಾಗಿತ್ತು. ಚಿಕ್ಕದೇವರಾಜ ಒಡೆಯರ ಆಳ್ವಿಕೆಯ ಸಂದರ್ಭದಲ್ಲಿ ಸರ್ಕಾರದ ಈ ಕೇಂದ್ರಗಳನ್ನು 'ಬೆಣ್ಣೆ ಚಾವಡಿ' ಎಂದು ಕರೆಯಲಾಯಿತು. ಹೈದರಾಲಿಯು ಎತ್ತುಗಳನ್ನು ಅವುಗಳ ಸಾಮರ್ಥ್ಯ ಮತ್ತು ವೇಗದಿಂದಾಗಿ ಯುದ್ಧ ಸಂದರ್ಭಗಳಲ್ಲಿ ಸಾಮಗ್ರಿಗಳ ಸಾಗಾಣಿಕೆಗೆ ಬಳಸಿಕೊಂಡಿದ್ದನು. ಟಿಪ್ಪುಸುಲ್ತಾನನ ಕಾಲದಲ್ಲಿ ಪಶುಸಂಗೋಪನಾ ಇಲಾಖೆಗೆ 'ಅಮೃತಮಹಲ್' ಇಲಾಖೆ ಎಂದು ನಾಮಕರಣ ಮಾಡಲಾಗಿತ್ತು. ಈ ಪಶುಸಂಗೋಪನಾ ಇಲಾಖೆಯನ್ನು ೧೯೨೩ ರಲ್ಲಿ ಕೃಷಿ ಇಲಾಖೆಯ ವ್ಯಾಪ್ತಿಗೆ ಒಳಪಡಿಸಲಾಯಿತು. ನಂತರದಲ್ಲಿ ಕೃಷಿ ಇಲಾಖೆಯ ಅಡಿಯಲ್ಲಿಯೇ 'ಸಾರ್ವಜನಿಕ ಪಶುವೈದ್ಯಕೀಯ ಇಲಾಖೆ' ಯನ್ನು ಸ್ಥಾಪಿಸಲಾಗಿದ್ದು ೧೯೪೪ ರಲ್ಲಿ ಇದನ್ನು ಸ್ವತಂತ್ರ ಗೊಳಿಸಲಾಯಿತು.[೧೩]

ತುಮಕೂರು ಪ್ರದೇಶದ ಸಾಂಸ್ಕೃತಿಕ ವೀರರಾದ ಬಂದಕುಂಟೆ ಈರುಚಿಕ್ಕಣ್ಣ, ದಿಬ್ಬದ ವೀರಬಮ್ಮಣ್ಣ, ಶೂಲದ ಈರಣ್ಣ, ಬಳ್ಳೆಕಟ್ಟೆ ಈರಣ್ಣ, ಹೊನ್ನೇಮರದ ಈರಣ್ಣ, ವೀರಸೀಗಣ್ಣ, ಪಾವಗಡದ ತಿಮ್ಮೇನಾಯಕನ ಪೇಟೆಯ ವೀರದೊಡ್ಡಣ್ಣ, ಪಾವಗಡದ ವೀರಬೋರಣ್ಣ, ಗುಂಡ್ಲಹಳ್ಳಿಯ ವೀರಕೆಂಪಣ್ಣ ಎತ್ತಪ್ಪ, ಜುಂಜಪ್ಪ ಇವರೆಲ್ಲರ ಮುಖ್ಯ ವೃತ್ತಿಯು ಪಶುಪಾಲನೆಯೇ ಆಗಿತ್ತು. ಈ ವೀರರ ಕುರಿತು ಕಟ್ಟಲಾಗಿರುವ ಮೌಖಿಕ ಕಾವ್ಯಗಳಲ್ಲಿ

ಪಶುಪಾಲನೆಗೆ ಸಂಬಂಧಿಸಿದ ಮಾಹಿತಿಯು ಲಭ್ಯವಾಗುತ್ತದೆ. ಅಂತೆಯೇ ಫ್ರಾನ್ಸಿಸ್ ಬುಕನನ್ ರವರು ಹಲವು ವಿಚಾರಗಳನ್ನು ಪ್ರಸ್ತಾಪಿಸಿದ್ದಾರೆ.[೧೪] ಅದರಂತೆಯೇ ಮಧುಗಿರಿಯ ಪರಿಸರದಲ್ಲಿನ ಕಾಡುಗೊಲ್ಲರು ದನಸಾಕಾಣಿಕೆ ಮಾಡಿತ್ತಿದ್ದ ಬಗ್ಗೆ ಹಾಗೂ ಸರ್ಕಾರದ ಬೆಣ್ಣೆ ಚಾವಡಿ ಇಲಾಖೆಯೊಂದಿಗೆ ಕಾಡಿಗೊಲ್ಲರು ಹೊಂದಿದ್ದ ಸಂಬಂಧಗಳನ್ನು ಉಲ್ಲೇಖಿಸಿದ್ದಾರೆ. ಮತ್ತು ಇಲ್ಲಿನ ಗುಡ್ಡಗಾಡಿನ ಪ್ರದೇಶಗಳಲ್ಲಿ ದನಗಳನ್ನು ಸಾಕುತ್ತಿದ್ದ ಬಗ್ಗೆ ವಿವರಿಸಲಾಗಿದೆ. ಗೊಲ್ಲರು ಅಪರಾಧ ವಿಷಯಗಳಲ್ಲಿ 'ಬೆಣ್ಣೆ ಚಾವಡಿ'ಯ ನ್ಯಾಯ ಪದ್ಧತಿಗೆ ಒಳಪಡುತ್ತಿದ್ದರು. ಬೆಣ್ಣೆ ಚಾವಡಿಗೆ ವಾರ್ಷಿಕವಾಗಿ ತೆರಿಗೆಯನ್ನು ತೆರುತ್ತಿದ್ದರು. ಬೆಣ್ಣೆಚಾವಡಿಯ ಅಧಿಕಾರಿಯು ಗೊಲ್ಲರಿರುವ ಪ್ರತಿ ಹಳ್ಳಿಗೂ ಭೇಟಿ ನೀಡಿ ಅವರು ಬಳಸುತ್ತಿದ್ದ ಸರ್ಕಾರಿ ಹುಲ್ಲುಗಾವಲುಗಳಿಗೆ ತೆರಿಗೆ ವಸೂಲಿ ಮಾಡುತ್ತಿದ್ದರು. ಊರಿನ ಎಲ್ಲಾ ಕುಟುಂಬಗಳೂ ಸಹ ತೆರಿಗೆಯನ್ನು ಕಟ್ಟುತ್ತಿದ್ದವು.

ಪಶುಪಾಲಕ ಬುಡಕಟ್ಟುಗಳಲ್ಲಿ ಪ್ರಮುಖರಾದ ಬಂಜಾರರನ್ನು 'ಲಂಬಾಣಿಗರು' ಎಂದು ಸಹ ಕರೆಯಲಾಗುತ್ತದೆ. ಇವರು ತಾವು ಸಾಕಿದ ಎತ್ತುಗಳ ಮೇಲೆ ಸರಕುಗಳ ಮೂಟೆಗಳನ್ನು ಸಾಗಿಸುತ್ತಿದ್ದರು. 'ಹಳ್ಳಿಕಾರರು' ಕೃಷಿಕರಾದ ಒಕ್ಕಲಿಗರ ಒಂದು ಉಪಪಂಗಡ. ಇವರು ಪ್ರಮುಖವಾಗಿ ತುಮಕೂರು, ಹಾಸನ, ಮಂಡ್ಯ, ಮೈಸೂರು, ಬೆಂಗಳೂರು ಗ್ರಾಮಾಂತರ, ಬೆಂಗಳೂರು ನಗರ, ಜಿಲ್ಲೆಗಳಲ್ಲಿ ಕಂಡುಬರುತ್ತಾರೆ. ಹಳ್ಳಿಕಾರರ ಸಾಂಪ್ರದಾಯಿಕ ವೃತ್ತಿಯು ವ್ಯವಸಾಯ ಮತ್ತು ಪಶುಪಾಲನೆ. ಮೂಲತಃ ಇವರೂ ಕಾಡುಗೊಲ್ಲರಂತೆ ಪಶುಪಾಲಕರಾಗಿದ್ದರು.

ಬೇಟೆಗಾರರೂ, ವೀರಯೋಧರೂ ಆದ 'ಮ್ಯಾಸಬೇಡರು' ಪಶುಪಾಲನೆ ಸಂಸ್ಕೃತಿಯನ್ನು ಹೊಂದಿರುವ ಬುಡಕಟ್ಟು ಜನಾಂಗವಾಗಿದೆ. ಬೇಡರಲ್ಲಿ ಮುಖ್ಯವಾಗಿ ಊರು ಬೇಡರು, ಪಾಳೇಗಾರರು, ಮ್ಯಾಸಬೇಡರು ಎಂಬ ಮೂರು ವರ್ಗಗಳಿವೆ.

೧) **ಊರು ಬೇಡರು** – ಇವರು ಬುಡಕಟ್ಟಿನ ಕಟ್ಟುಪಾಡುಗಳನ್ನು ಮುರಿದು ನಾಗರಿಕ ಸಮಾಜದೊಂದಿಗೆ ಸಂಪರ್ಕ ಹೊಂದಿದವರು.

೨) **ಪಾಳೆಯಗಾರರು** – ವಿಜಯನಗರದ ಅರಸರು ತಮ್ಮ ಆಳ್ವಿಕೆಯಲ್ಲಿ ನಾಯಂಕರ ಪದ್ಧತಿಯನ್ನು ಜಾರಿಗೆ ತಂದರು. ಅದರ ಪ್ರಕಾರ ಸಾಮಂತರು, ನಾಯಕರು, ಪ್ರಾಂತ್ಯಗಳನ್ನು ನೋಡಿಕೊಳ್ಳುತ್ತಿದ್ದರು. ಸ್ವಾಯತ್ತ ಅಧಿಕಾರವನ್ನು ಹೊಂದಿದ್ದ ಪಾಳೆಯಗಾರರು ವಿಜಯನಗರ ಸಾಮ್ರಾಜ್ಯದ ಪತನಾನಂತರ ಪಾಳೆಯಗಾರರಾಗಿ ಆಡಳಿತವನ್ನು ನಿರ್ವಹಿಸಿದರು.

೩) **ಮ್ಯಾಸಬೇಡರು** – ಬೇಟೆ, ಪಶುಪಾಲನೆಯೊಂದಿಗೆ ಬೆಳೆದು ಬಂದ ಬುಡಕಟ್ಟು ಜನರಾದ ಮ್ಯಾಸಬೇಡರಿಗೆ ಪಶುಗಳೇ ಸಂಪತ್ತು. ಇವರು ತಮ್ಮ ಪಶುಗಳಿಗೆ ಆಹಾರ ಮತ್ತು ನೀರಿಗಾಗಿ ಕಾಡುಮೇಡು ಆಶ್ರಯಿಸಿ ಕಾಡುಗೊಲ್ಲರಂತೆ ಪಶುಪಾಲನೆಯಲ್ಲಿ ತೊಡಗಿಸಿಕೊಂಡಿದ್ದಾರೆ. ಕಾಡುಗೊಲ್ಲರಿಂದ ಮ್ಯಾಸಬೇಡರು ಪ್ರಭಾವಿತಗೊಂಡಿರುವ ಸಾಧ್ಯತೆಯಿದೆ. ಇವರಿಬ್ಬರ ಆಚಾರ ವಿಚಾರಗಳು ಒಂದೇ ಆಗಿವೆ. ಕಾಡುಗೊಲ್ಲರ ಹಾಗೆ ಇವರೂ ಸಹ ಊರ ಹೊರವಲಯದಲ್ಲಿ

ಪ್ರತ್ಯೇಕವಾಗಿ ಹಟ್ಟಿಗಳನ್ನು ಕಟ್ಟಿಕೊಂಡು ಸಾಮಾನ್ಯವಾಗಿ ಜನದಟ್ಟಣೆಯಿಂದ ಹೊರಗೆ ವಾಸಿಸುತ್ತಾರೆ. ಬಹುತೇಕ ಕಡೆಗಳಲ್ಲಿ ಮ್ಯಾಸಬೇಡರು ಮತ್ತು ಕಾಡುಗೊಲ್ಲರ ಹಟ್ಟಿಗಳು ನೆರೆ ಹೊರೆಯಲ್ಲಿಯೇ ಕಂಡುಬರುತ್ತವೆ. ಕಾಡುಗೊಲ್ಲರು ಗುಂಪು ಗುಂಪಾಗಿ ತಮ್ಮದೇ ಆದ ಹಟ್ಟಿಗಳನ್ನು ಕಟ್ಟಿಕೊಂಡು ವಾಸಿಸುತ್ತಾರೆ. ಇವರು ತಮ್ಮದೇ ದನಗಳ ಹಿಂಡನ್ನು ಹೊಂದಿದ್ದು, ಹುಲ್ಲುಗಾವಲುಗಳು ಇರುವ ಕಡೆ ಪಶುಪಾಲನೆಯನ್ನೇ ಮುಖ್ಯ ವೃತ್ತಿಯನ್ನಾಗಿ ಮಾಡಿಕೊಂಡಿದ್ದಾರೆ. ಹಿಂದೆ ಪಶುಸಂಗೋಪನೆಯ ಉತ್ಪನ್ನಗಳಾದ ಹಾಲು, ಮೊಸರು, ತುಪ್ಪ, ಸಗಣಿ, ಗೊಬ್ಬರ ಹಾಗೂ ಎತ್ತುಗಳನ್ನು ಕೃಷಿಕರಿಗೆ ಮಾರುವ ಮೂಲಕ ಆರ್ಥಿಕ ಬದುಕನ್ನು ರೂಪಿಸಿಕೊಂಡಿದ್ದರು.

ಕಾಡುಗೊಲ್ಲರ ಸಾಂಸ್ಕೃತಿಕ ವೀರರಾದ ಎತ್ತಪ್ಪ, ಜುಂಜಪ್ಪ, ಚಿತ್ರದೇವರು ಮೂಲತಃ ಗೋಪಾಲಕರಾಗಿದ್ದರು. ಇವರು ಏಳುಗೂಡಿನ ದನಗಳನ್ನು ಸಾಕಿದವರು. ಪಶುಪಾಲನಾ ವೃತ್ತಿಯಲ್ಲಿ ವಿಶೇಷವಾಗಿ ಶ್ರಮವಹಿಸಿ ತಮ್ಮ ವಿರೋಧಿಗಳನ್ನು ಎದುರಿಸಿ ಬದುಕಿ ಬಾಳಿದವರು.

ಜುಂಜಪ್ಪನು ಕಾಡುಗೊಲ್ಲರ ಪಶುಪಾಲಕ ಬದುಕಿನ ಸಾಂಸ್ಕೃತಿಕ ವೀರನಾಗಿ ಬೆಳೆದಿದ್ದಾನೆ. ಜುಂಜಪ್ಪನ ಕಾವ್ಯವು ಈ ಭಾಗದ ಪಶುಪಾಲನೆ ಹಿನ್ನೆಲೆಯ ರಾಜಕೀಯ, ಸಾಮಾಜಿಕ, ಆರ್ಥಿಕ ಹಾಗೂ ಸಾಂಸ್ಕೃತಿಕ ಸಂಘರ್ಷವನ್ನು ಉಲ್ಲೇಖಿಸಿದೆ. ಜುಂಜಪ್ಪನ ಕಾವ್ಯದಲ್ಲಿ ಎರಡು ಅಂಶಗಳು ಮುಖ್ಯವಾಗುತ್ತವೆ. ಒಂದು ಕಡೆ ಗೊಲ್ಲರನ್ನು ಸಹಿಸದ ಬೇಟೆಗಾರ ಸಮೂಹ, ಮತ್ತೊಂದು ಕಡೆ ಹುಲ್ಲುಗಾವಲುಗಳನ್ನು ಕ್ರಮೇಣ ಬೇಸಾಯ ಭೂಮಿಯಾಗಿ ಪರಿವರ್ತಿಸುತ್ತಾ ಬಂದ ಕೃಷಿಕ ವರ್ಗಗಳು ಈ ವರ್ಗಗಳ ನಡುವೆ ತಮ್ಮ ಅಸ್ತಿತ್ವಕ್ಕಾಗಿ ಪರದಾಡುವಂತೆ ಕಂಡುಬರುವುದು ಒಂದು ಅಂಶವಾದರೆ, ತಮ್ಮ ಕುಲದ ಇತರೇ ಬೆಡಗುಗಳ ನಡುವೆ ಪಶುಸಂಪತ್ತಿನ ಸಲುವಾಗಿ ನಡೆದ ಸಂಘರ್ಷವು ಮತ್ತೊಂದು ಅಂಶವಾಗಿದೆ. ಇಲ್ಲಿ ಜುಂಜಪ್ಪನ ದನಗಳು ಬೆಳೆದು ಹೆಚ್ಚಾಗುವುದನ್ನು ಸೋದರ ಮಾವಂದಿರಾದ ಕಂಬೇರಗೊಲ್ಲರು ಸಹಿಸದಿರುವುದು, ಜುಂಜಪ್ಪನಿಗೂ ಮತ್ತು ಅವರ ಮಾವಂದಿರೊಂದಿಗೆ ಸದಾ ನಡೆಯುವ ವೃತ್ತಿ ಸಂಘರ್ಷವನ್ನು ಗುರುತಿಸಬಹುದಾಗಿದೆ. ಇವರ ಅವಿಭಕ್ತ ಕುಟುಂಬಗಳ ಜೀವನವು ಅವರ ವೃತ್ತಿ ಬದುಕಿಗೆ ಪೂರಕವಾಗಿ ನೆರವಾಗಿದೆ. ಪಶುಪಾಲನೆ ವೃತ್ತಿಯು ಹಲವು ಜನರ ಶ್ರಮವನ್ನು ಬಯಸುತ್ತದೆ. ಇಲ್ಲಿ ವೃತ್ತಿನಿಷ್ಠೆಯು ಮುಖ್ಯವಾಗುತ್ತದೆ. ಇದನ್ನು ಅವರ ಅವಿಭಕ್ತ ಪದ್ಧತಿಯು ಬೆಂಬಲಿಸುತ್ತಿತ್ತು. ಕೇವಲ ದನಕರುಗಳನ್ನೇ ನಂಬಿಕೊಂಡು ಅವುಗಳ ಸಾಕಾಣಿಕೆ ಮಾಡುವುದಕ್ಕಾಗಿ ಕಾಡುಮೇಡುಗಳನ್ನು ಅಲೆಯುವ ಅಲೆಮಾರಿ ಜನವರ್ಗವೊಂದರ ಅತಂತ್ರ ಬದುಕಿನ ಪ್ರತೀಕವಾಗಿ ಜುಂಜಪ್ಪ ಕಾಣಿಸಿಕೊಳ್ಳುತ್ತಾನೆ. ಅನೇಕ ಸಂದರ್ಭಗಳಲ್ಲಿ ಜುಂಜಪ್ಪನ ಅನಾಥ ಸ್ಥಿತಿಯು ಕಾಡುಗೊಲ್ಲರ ಬಡತನ ಮತ್ತು ಅತಂತ್ರ ಸ್ಥಿತಿಯನ್ನು ನಿವೇದಿಸುತ್ತದೆ. ಮದುವೆಯಾದರೂ ಹೆಂಡತಿ ಮಕ್ಕಳೊಡನೆ ಕೂಡಿ ಬಾಳಲಾಗದ ಜುಂಜಪ್ಪನ ತಾತನಾದ ದಯ್ಯಾಮಾರ, ಮತ್ತು ಆತನ ತಂದೆ ಕೆಂಗರು ಮಲ್ಲೇಗೌಡನ ಸ್ಥಿತಿಯು ಈ ಅಲೆಮಾರಿಗಳ ಸುಖವಿಲ್ಲದ ಬದುಕನ್ನು ಸೂಚಿಸುತ್ತದೆ.

ಜುಂಜಪ್ಪ ಮತ್ತು ಆತನ ಸಹೋದರರ ಕಾರ್ಯನಿಷ್ಠೆಯಿಂದಾಗಿ ಕೇವಲ ಏಳು ದನಗಳಿಂದ ಏಳುಗೂಡಿನ ದನಗಳನ್ನು ವೃದ್ಧಿಸಿದರು. ಇದು ಆತನ ಪಶುಪಾಲನೆಯ ಶ್ರೀಮಂತಿಕೆಯನ್ನು ತೋರಿಸುತ್ತದೆ. ಆದರೆ ಜುಂಜಪ್ಪನ ಮಾವಂದಿರಾದ ಕಂಬೇರಗೊಲ್ಲರು ಜುಂಜಪ್ಪನ ಪಶುಸಂಪತ್ತನ್ನು ಸಹಿಸದೆ ಅವುಗಳನ್ನು ನಾಶಪಡಿಸಲು ಹೂಡುವ ಕುತಂತ್ರಗಳನ್ನು ನೋಡಿದರೆ, ಜಾತಿಗಳೊಳಗೆ ಇದ್ದ ವೈಷಮ್ಯಕ್ಕಿಂತ ಸಂಪತ್ತಿನ ಒಡೆತನದ ಆರ್ಥಿಕ ಅಂಶಗಳು ಕಾರಣವಾಗಿರುವುದನ್ನು ಗುರುತಿಸಬಹುದಾಗಿದೆ. ಈ ಸಂಘರ್ಷದಲ್ಲಿ ಜುಂಜಪ್ಪನ ಗೆಲುವು ಆತನ ಪ್ರಾಮಾಣಿಕತೆಗೆ ಸಿಕ್ಕ ಗೆಲುವಾಗಿದೆ. ಜುಂಜಪ್ಪನ ಕಾವ್ಯದಲ್ಲಿ ಬರುವ ಚೇಳೂರು ರಂಗಣ್ಣನ ಪ್ರಸಂಗವು ಸ್ಥಳೀಯವಾಗಿ ಪಾಳೆಯಪಟ್ಟು ಹೊಂದಿದ್ದನ್ನು ಸೂಚಿಸುತ್ತದೆ. ಅಲ್ಲದೆ ಅಲ್ಲಿನ ಪಾಳೆಯಗಾರನು ಆ ಪ್ರದೇಶದಲ್ಲಿ ಬರುವ ಹುಲ್ಲುಗಾವಲುಗಳ ಮೇಲೆ ನಿಯಂತ್ರಣವನ್ನು ಹೊಂದಿದ್ದನು ಎಂಬ ವಿಚಾರವನ್ನು ಸ್ಪಷ್ಟಪಡಿಸುತ್ತದೆ. ಪಾಳೆಯಪಟ್ಟಿನ ಮುಖಂಡರುಗಳು ಸಹ ದನಗಳ ಹಿಂಡನ್ನು ಹೊಂದಿರುತ್ತಿದ್ದು ಅವುಗಳ ಮೇವಿಗಾಗಿ ಹುಲ್ಲುಗಾವಲುಗಳನ್ನು ಕಾಯ್ದಿರಿಸುತ್ತಿದ್ದ ಅಂಶವು ಗೊತ್ತಾಗುತ್ತದೆ.

ಮದುಗಾದ ಕಾವಲುನ
ಮನಿಕಂಡೆ ಮೇಸೋನು
ಕುಂದಿ ಲಿಪ್ಪೆ ಕಾವಲುನ
ಕುಂತೇನೆ ಮೇಸೋನು
ಬಾಣಗೇರೇ ಕಾವಲುನ
ಜೂಜುನಾಡಿ ಮೇಸೋನು
ಹೊತ್ತಾಡೀ ಕಾವಲುನ
ಚುಂಚನಗಿರಿ ಕಾವಲುನ
ಚುಂಚನಾಡೀ ಮೇಸೋನು [೧೫]

ಕಾವ್ಯದಲ್ಲಿನ ಈ ಅಂಶಗಳು ಜುಂಜಪ್ಪನು ತನ್ನ ದನಗಳನ್ನು ಮೇಯಿಸುವ ಬಗೆಯನ್ನು ವರ್ಣಿಸಿರುವಂತೆ ಕಂಡರೂ ಇಲ್ಲಿ ಉಲ್ಲೇಖಿಸಿರುವ ಈ ಕಾವಲುಗಳು ವಾಸ್ತವದಲ್ಲಿ ಅಸ್ತಿತ್ವದಲ್ಲಿವೆ. ಈ ಹುಲ್ಲುಗಾವಲುಗಳ ಉಲ್ಲೇಖಗಳನ್ನು ಗಮನಿಸಿದಾಗ ಈ ಪ್ರದೇಶದಲ್ಲಿ ವಿಪುಲವಾದ ಕಾವಲುಗಳಿದ್ದವು. ಅವುಗಳು ಕೆರೆ, ತೊರೆ, ಗಿರಿಗಳ ಪ್ರದೇಶದಲ್ಲಿದ್ದುವು. ಕಾವಲುಗಳ ಭೌಗೋಳಿಕ ಪರಿಸರವು ಹೇಗಿತ್ತು ಎಂಬುದನ್ನು ಇದರಿಂದ ತಿಳಿದುಬರುತ್ತದೆ. ಈ ಕಾವಲುಗಳು ವಿವಿಧ ರೀತಿಯ ಹುಲ್ಲುಗಳನ್ನು ಹೊಂದಿದ್ದು ಮಣ್ಣೆ, ಮದ್ದೂರು, ಚುಂಚನಗಿರಿ, ನಿಟ್ಟೂರು, ಕಡಪ, ಹಾಗಲವಾಡಿ ಕಾವಲುಗಳಲ್ಲಿ ಆರಡಿ ಎತ್ತರ ಬೆಳೆದ ಹುಲ್ಲನ್ನು ಮೇಯಿಸೋನು ಎಂಬ ಅಂಶವು ಅಲ್ಲಿನ ಹುಲ್ಲುಗಾವಲುಗಳಲ್ಲಿ ಬೆಳೆಯುತ್ತಿದ್ದ ಹುಲ್ಲಿನ ಸಮೃದ್ಧಿಯನ್ನು ತಿಳಿಸುತ್ತದೆ. ಚೇಳೂರು, ಸಿರಾ, ಮದ್ದೂರು, ಮಾರಿಕಣಿವೆ, ಎಡಕಲ್ಲುಗುಡ್ಡ, ದೊಡ್ಡಹರಿಯಬ್ಬೆ, ಬರಗೂರು, ಪಟ್ಟನಾಯ್ಕನಹಳ್ಳಿ, ಮದ್ದಕ್ಕನಹಳ್ಳಿ, ಚಿಕ್ಕಸಂದ್ರ, ಚಿಕ್ಕಸಂದ್ರಕೆರೆ, ಮರಡಿಗುಡ್ಡ, ಕಾವಲುಗಳಲ್ಲಿ ದನಗಳನ್ನು ಮೇಯಿಸುತ್ತಿದ್ದ ಬಗೆಯನ್ನು ಕಾವ್ಯವು ಉಲ್ಲೇಖಿಸುತ್ತದೆ. ಇವೆಲ್ಲ ಕಾವಲುಗಳು ಕೆರೆಪ್ರದೇಶದ ಕಾವಲುಗಳಾಗಿದ್ದು ಇಲ್ಲಿನ ವಿಸ್ತಾರವಾದ ನೆಲೆಯಲ್ಲಿ ಪಶುಪಾಲಕರು ವಲಸೆ ಕ್ರಮವನ್ನು ಅನುಸರಿಸಿ ದನಗಳನ್ನು ಸಾಕುತ್ತಿದ್ದರೆಂದು ತಿಳಿದು ಬರುತ್ತದೆ. ಈ ಮೇಲೆ

ಉಲ್ಲೇಖಗೊಂಡ ಎಲ್ಲ ಕಾವಲುಗಳು ಮುಂದೆ ಈ ಪ್ರದೇಶವನ್ನು ಗೆದ್ದ ಹೈದರಾಲಿ ಮತ್ತು ಟಿಪ್ಪುಸುಲ್ತಾನರ ಅಧೀನಕ್ಕೆ ಒಳಪಟ್ಟಿದ್ದವು.

ಈ ಕಾವ್ಯದ ಮತ್ತೊಂದು ಪ್ರಮುಖವಾದ ಅಂಶವೆಂದರೆ ಪಶುಪಾಲಕರಿಗೆ ತಮ್ಮ ದನಗಳೇ ಅವರ ಸರ್ವಸ್ವ, ಅವೇ ಅವರ ಮೂಲದೈವಗಳು ಮತ್ತು ಸಂಪತ್ತು ಸಹ ಆಗಿವೆ. ಪಶುಪಾಲನೆಯಲ್ಲಿ ನಂಬಿಕೆ ಆಚರಣೆಗಳಾದ ಗಂಜಳ ಹಾಕುವುದು, ಮಾಟಮಂತ್ರ, ಮಡಿ ಮೈಲಿಗೆಗಳು ಮೂಢನಂಬಿಕೆಗಳಂತೆ ಕಾಣುತ್ತವೆ. ಆದರೆ ಅದು ಬೇರೆಯ ಹಿಂಡಿನ ದನಗಳಿಂದ ಅಥವಾ ಬೇರೆ ಕಡೆಯ ಜನರ ಸಂಪರ್ಕದಿಂದ ಹರಡಬಹುದಾಗಿದ್ದ ಸಾಂಕ್ರಾಮಿಕ ರೋಗಗಳನ್ನು ತಡೆಯುವ ಕ್ರಮದ ಸೂಚಕವಾಗಿದೆ. ಅಂತಹ ಅಪಾಯಕಾರಿ ರೋಗಗಳನ್ನು ತಡೆಯಲು ಕಂಡುಕೊಂಡ ಆಚರಣೆಗಳೂ ಆಗಿರಬಹುದು. ನೂರಾರು ರಾಸುಗಳನ್ನು ಹಿಂಡಿನಲ್ಲಿ ಸಾಕುವ ಇವರು ಅವುಗಳನ್ನು ನೂರಾರು ಹೆಸರುಗಳಿಂದ ಗುರುತಿಸಿ ತಮ್ಮ ಗಣೆಯನ್ನು ಊದಿ ಕರೆಯುವ ಪರಿಯಂತು ಮೋಹಕವಾದದ್ದು ಜುಂಜಪ್ಪನು ತನ್ನ ಹಿಂಡಿನ ದನಗಳನ್ನು ವಿವಿಧ ಹೆಸರುಗಳಿಂದ ಕರೆಯುತ್ತಿದ್ದ ರೀತಿಯನ್ನು ಕಾವ್ಯವು ಅಭಿವ್ಯಕ್ತಿಸಿದೆ.

ಅಂಕರೆಂಬೆ, ಸಿಕಿರೆಂಬೆ, ದೇವಕ್ಕೆ ದೈಮಾರಿ, ಉಗುಸೆ ಹೂವಿನಕಟ್ಟೆ, ದ್ವಾರೆ ಹುಲ್ಲಮ್ಮ, ಗಂಗೆ ಗೌರಮ್ಮ, ಹಂಗಮಣಿ, ತುಂಗಭದ್ರಮ್ಮ, ಪಂಚಕಲ್ಯಾಣಿ, ಬಡಮೈಲ ಎಂಬುದಾಗಿ ದನಗಳನ್ನು ನಾನಾ ಹೆಸರುಗಳಿಂದ ಕರೆಯುವುದು[೧೬] ಕಾಡುಗೊಲ್ಲರ ಪಶುಸಾಕಾಣಿಕೆಯ ವಿಶಿಷ್ಟವಾದ ಅಂಶವಾಗಿದೆ. ಇದು ಒಂದು ರೀತಿಯಲ್ಲಿ ದನಗಳ ವಂಶಾವಳಿಗಳನ್ನು ಪಟ್ಟಿಮಾಡಿದಂತೆಯೂ ತೋರುತ್ತದೆ.

ಜುಂಜಪ್ಪನ ಕಾವ್ಯದ ಬಹುಭಾಗದಲ್ಲಿ ಕಂಡುಬರುವ ಆತನ ನೆಚ್ಚಿನ ಹೋರಿ ಬಡಮೈಲ ಮತ್ತು ಪಂಚಕಲ್ಯಾಣಿ ಹಸು ಕಾಡುಗೊಲ್ಲರಿಗೆ ತಮ್ಮ ದನಗಳೊಂದಿಗೆ ಇದ್ದ ನಂಬಿಕೆ ಪ್ರೀತಿ ವಿಶ್ವಾಸಕ್ಕೆ ಒಂದು ಪ್ರತೀಕವಾಗಿದೆ. ಜುಂಜಪ್ಪನ ಅನುಪಸ್ಥಿತಿಯಲ್ಲಿ ಇತರೆ ದನಗಳ ಹಿಂಡನ್ನು ನಿಯಂತ್ರಿಸಬಲ್ಲ ಈ ಬಡಮೈಲನೆಂಬ ಹೋರಿಯು ಸಮಾಜದ ಮೌಲ್ಯಗಳನ್ನು ಮೀರಿ ನಡೆಯುವವರಿಗೆ ಮತ್ತು ಕುತಂತ್ರಿಗಳಿಗೆ ಸಿಂಹಸ್ವಪ್ನದ ಸಂಕೇತವಾಗಿ ಕಂಡುಬಂದಿದೆ. ರೋಗಗ್ರಸ್ತ ಕರುವೊಂದನ್ನು ತಂದು ಅಸಾಮಾನ್ಯವಾಗಿ ಬೆಳೆಸಿ ತನ್ನ ಶತ್ರುಗಳ ಹುಟ್ಟಡಗಿಸುವ ಜುಂಜಪ್ಪನ ಛಲ, ವೃತ್ತಿನಿಷ್ಠೆ, ಪ್ರಾಮಾಣಿಕತೆ ಮತ್ತು ನಂಬಿಕೆಗಳು ಬಡಮೈಲನ ರೂಪದಲ್ಲಿ ಕಾಣುತ್ತವೆ.

ಮತ್ತೊಬ್ಬ ಸಾಂಸ್ಕೃತಿಕ ವೀರನಾದ ದಿಬ್ಬದ ವೀರಬೊಮ್ಮಣ್ಣನು ತನ್ನ ಅತ್ತಿಗೆ ನಾಗಮ್ಮ ಆಡಿದ 'ನಾವೇನು ಆವಿನ ಗೂಡಿನ ವಾರಸುದಾರರೇ' ಎಂಬ ಮಾತಿಗೆ ಪ್ರತಿಯಾಗಿ ಏಳುಗೂಡಿನ ದನಗಳ ಒಡೆಯನಾಗಲು ಬಯಸುತ್ತಾನೆ. ಅದರಂತೆ ಕುನ್ನಿಕೆರೆಯ ಕಾಟುಮಲಿಂಗ ದೇವರಿಗೆ ಪೂಜಿಸಿ ತನ್ನ ಕಾರ್ಯ ಸಾಧನೆಗೆ ಹೊರಟನು. ಪಶುಗಳ ಒಡೆಯನಾಗಬೇಕೆಂಬ ಆತನಲ್ಲಿನ ಛಲವು ಗೊಲ್ಲರ ಮನೆಯ ಜೀತದಾಳನ್ನಾಗಿಸಿತು. ಈ ಸನ್ನಿವೇಶವು ಒಂದೆಡೆ ಮಾಲೀಕ ಮತ್ತು ಜೀತ ವ್ಯವಸ್ಥೆಯ ನಡುವಿನ ಸಂಘರ್ಷವು ಅಸ್ತಿತ್ವದಲ್ಲಿದ್ದ ಬಗ್ಗೆ ತಿಳಿಯಲು ಸಹಾಯಕವಾಗಿದೆ.

ತುಮಕೂರು ಪ್ರದೇಶದಲ್ಲಿ ವ್ಯಕ್ತಿಯ ಸಾಮಾಜಿಕ, ಆರ್ಥಿಕ ಸ್ಥಾನಮಾನಗಳನ್ನು ನಿರ್ಧರಿಸುವಲ್ಲಿ ಪಶುಪಾಲನೆಯು ಪ್ರಮುಖವಾದ ಪಾತ್ರವನ್ನು ವಹಿಸುತ್ತಿತ್ತು ಎಂಬ ಅಂಶವನ್ನು ಮನಗಾಣಬಹುದಾಗಿದೆ. ಇದಕ್ಕೆ ಪೂರಕವಾಗಿ ಮೌಖಿಕ ಕಾವ್ಯಗಳಲ್ಲಿನ ಈ ಮುಂದಿನ ಉದಾಹರಣೆಗಳನ್ನು ಗಮನಿಸಬಹುದಾಗಿದೆ. ೧) ತೋಟಗಳಿಗೆ ಹಾನಿಯುಂಟು ಮಾಡುತ್ತಿದ್ದ ಕೋತಿಗಳನ್ನು ಓಡಿಸಿ ಪಶುಗಳ ಒಡೆಯನಾಗುವ ಹೊನ್ನೇಮರದ ಈರಣ್ಣನ ಛಲ, ೨) ಬಳ್ಳಕಟ್ಟೆ ಈರಣ್ಣನ ಪಶು ಸಂಪತ್ತನ್ನು ವಶಪಡಿಸಿಕೊಳ್ಳುವ ಸಲುವಾಗಿ ನಿಡಗಲ್ಲು ನಾಯಕರು ಈರಣ್ಣನನ್ನು ಹತ್ಯೆಗೈಯ್ಯುವುದು ೩) ಬಂದ್ಕುಂಟೆ ಈರುಚಿಕ್ಕಣ್ಣನೊಂದಿಗೆ ಪ್ರೇಮದ ನಾಟಕವಾಡಿ ಆತನ ಪಶು ಸಂಪತ್ತನ್ನು ತಮ್ಮದಾಗಿಸಿಕೊಳ್ಳುವ ಸಲುವಾಗಿ ಓಬವ್ವ ಮತ್ತು ಆಕೆಯ ಸಹೋದರರು ಈರುಚಿಕ್ಕಣ್ಣನನ್ನೇ ಕೊಲೆ ಮಾಡುವುದು ೪) ಜುಂಜಪ್ಪನ ಪಶುಸಂಪತ್ತನ್ನು ಕಂಡು ಅಸೂಯೆ ಪಟ್ಟಂತಹ ಆತನ ಕಂಬೇರ ಮಾವಂದಿರ ಹೆಣ್ಣುಮಕ್ಕಳು ಜುಂಜಪ್ಪನನ್ನು ಒಲಿಸಿಕೊಳ್ಳಲು ಹಲವು ಪ್ರಯತ್ನಗಳನ್ನು ಮಾಡಿ ವಿಫಲರಾಗುವರು. ಅಂತಿಮವಾಗಿ ಅನ್ನದಲ್ಲಿ ವಿಷವನ್ನು ಬೆರೆಸಿ ಆತನನ್ನು ಕೊಲೆಮಾಡುವುದು ಇತ್ಯಾದಿ. ಇವೆಲ್ಲವೂ ಪಶು ಸಂಪತ್ತಿನ ಕಾರಣವಾಗಿಯೇ ಮೂಡಿ ಬಂದಿರುವ ಸನ್ನಿವೇಶಗಳಾಗಿವೆ.

### ೫.೪ ವ್ಯಾಪಾರ

ಸರಕು ಮತ್ತು ಸೇವೆಗಳನ್ನು ಕೊಳ್ಳುವ ಇಲ್ಲವೇ ಮಾರುವಂತಹ ಪ್ರಕ್ರಿಯೆಯನ್ನು ವ್ಯಾಪಾರ ಎನ್ನಲಾಗಿದೆ. ಹಣವು ವ್ಯಾಪಾರದ ಮಾಧ್ಯಮವಾಗಿದೆ. ಹಣದ ಚಲಾವಣೆಗೆ ಮುನ್ನ ವಸ್ತುವಿನಿಮಯ ಪದ್ಧತಿಯು ಜಾರಿಯಲ್ಲಿತ್ತು. ಜನರು ತಮ್ಮ ಅಗತ್ಯದ ವಸ್ತುಗಳನ್ನು ಅನ್ಯರೊಂದಿಗೆ ವಿನಿಮಯ ಮಾಡಿಕೊಳ್ಳುತ್ತಿದ್ದರು. ಗ್ರಾಮೀಣ ವ್ಯವಸ್ಥೆಯಲ್ಲಿ ಶ್ರಮ ಆಧಾರಿತ ವಿವಿಧ ವೃತ್ತಿಗಳನ್ನು ಮಾಡುತ್ತಿದ್ದ ತೋಟಿ, ತಳವಾರ, ನೀರಗಂಟಿ, ಕ್ಷೌರಿಕ, ಅಗಸ, ಕುಂಬಾರ, ಚಮ್ಮಾರ, ಕಮ್ಮಾರ ಮೊದಲಾದವರು ತಮ್ಮ ಶ್ರಮಕ್ಕೆ ಪ್ರತಿಯಾಗಿ ದವಸ ಧಾನ್ಯ ಅಥವಾ ಇತರೆ ವಸ್ತುಗಳನ್ನು ಜನರಿಂದ ಪಡೆಯುತ್ತಿದ್ದರು. ಇದನ್ನು 'ಆಯಗಾರ ಪದ್ಧತಿ' ಎನ್ನಲಾಗಿದೆ. ಹಣವು ಚಲಾವಣೆಗೆ ಬಂದ ನಂತರ ವಸ್ತುವಿನಿಮಯ ಪದ್ಧತಿಯು ಕಣ್ಮರೆಯಾಯಿತು.

ಬಹುತೇಕ ಊರಿನ ಮುಖ್ಯರಸ್ತೆ, ಉಪಬೀದಿಗಳು, ಬಸ್ ನಿಲ್ದಾಣದ ಪ್ರದೇಶಗಳು ಸಾಮಾನ್ಯವಾಗಿ ವ್ಯಾಪಾರದ ತಾಣಗಳಾಗಿವೆ. ಗ್ರಾಮಗಳಲ್ಲಿ ಪೆಟ್ಟಿಗೆ ಅಂಗಡಿ, ಅಂಗಡಿ ಮಳಿಗೆಗಳು ಇರುವುದನ್ನು ಕಾಣಬಹುದು. ಸಾಮಾನ್ಯವಾಗಿ ಮುಸ್ಲಿಮರು ಪ್ಲಾಸ್ಟಿಕ್ ಸಾಮಗ್ರಿಗಳನ್ನು, ಅಲ್ಯೂಮಿನಿಯಂ ಪಾತ್ರೆಗಳನ್ನು, ಹಾಗೂ ಅಲೆಮಾರಿಗಳು ತಲೆಯ ಮೇಲೆ ಟ್ರಂಕುಗಳನ್ನು ಹೊತ್ತುಕೊಂಡು, ನಾಲ್ಕುಚಕ್ರಗಳ ತಳ್ಳುಗಾಡಿಗಳಲ್ಲಿ ಇತ್ತೀಚೆಗೆ ದ್ವಿಚಕ್ರವಾಹನಗಳಲ್ಲಿ ಮಕ್ಕಳ ಆಟಿಕೆ ಸಾಮಾನುಗಳು ಪಿನ್ನು, ಟೇಪು, ಹಣೆಬಟ್ಟು, ಮುಂತಾದವುಗಳನ್ನು ಮಾರಾಟ ಮಾಡುವರು. ಉತ್ತರದ ಕಡೆಯಿಂದ ವ್ಯಾಪಾರಕ್ಕಾಗಿ ವಲಸೆ

ಬಂದ ಸೇಟುಗಳು ಕಬ್ಬಿಣದ ಅಂಗಡಿ, ಲೇವಾದೇವಿ/ಗಿರಿವಿ, ಬಟ್ಟೆ, ಚಿನ್ನ, ಬೆಳ್ಳಿ, ಪ್ಯಾನ್ಸಿ ವಸ್ತುಗಳನ್ನು ವ್ಯಾಪಾರ ಮಾಡುತ್ತಾರೆ. ಹೀಗಾಗಿ ಚಾತುರ್ವರ್ಣ ಪ್ರಾತಿನಿಧ್ಯದಲ್ಲಿ ವ್ಯಾಪಾರವು ವೈಶ್ಯರಿಗೆ ಮಾತ್ರವೇ ಸೀಮಿತವಾಗಿರಲಿಲ್ಲ.

**ಸಂತೆಗಳು** : ಗ್ರಾಮೀಣ ಜೀವನದಲ್ಲಿ ಸಂತೆಗಳ ಪಾತ್ರವು ಪ್ರಮುಖವಾದುದು. ಸಂತೆಗಳು ವಾರದ ಬೇರೆ ಬೇರೆ ದಿನಗಳಲ್ಲಿ ನಡೆಯುವುದರಿಂದ ವ್ಯಾಪಾರಸ್ಥರಿಗೆ ಅನುಕೂಲವಾಗುತ್ತದೆ. ಸಾಮಾನ್ಯವಾಗಿ ಮುಖ್ಯರಸ್ತೆ ಬದಿಯಲ್ಲಿ, ಉಪಬೀದಿಗಳ ಬದಿಯಲ್ಲಿ, ಬಸ್ ನಿಲ್ದಾಣದ ಪ್ರದೇಶಗಳಲ್ಲಿ ಕೆಲವೊಮ್ಮೆ ಸಂತೆ ನಡೆಸಲೆಂದೇ ಮೀಸಲಿಟ್ಟಿರುವ ಪ್ರದೇಶದಲ್ಲಿ ಸಂತೆಗಳು ನಡೆಯುತ್ತವೆ. ತುಮಕೂರು ಜಿಲ್ಲೆಯಲ್ಲಿ ನಡೆಯುವ ಸಂತೆಗಳನ್ನು ಎರಡು ರೀತಿಯಲ್ಲಿ ವರ್ಗೀಕರಿಸಿಕೊಳ್ಳಬಹುದು.

೧) ತಾಲೂಕು ಕೇಂದ್ರಗಳನ್ನು ಒಳಗೊಂಡಂತೆ ಪ್ರಮುಖ ಗ್ರಾಮಗಳಲ್ಲಿ ವಾರದ ವಿವಿಧ ದಿನಗಳಂದು ಸಂತೆಗಳನ್ನು ನಡೆಸಲಾಗುತ್ತದೆ. ಸಂತೆಗಳಲ್ಲಿ ತರಕಾರಿ, ದಿನಸಿ, ದವಸ, ಧಾನ್ಯ, ಒಣಗಿದ ಮೀನು, ಹಗ್ಗ, ಕಂಬಳಿ, ಕಮ್ಮಾರರು ಮಾಡಿದ ವಿವಿಧ ಸಲಕರಣೆಗಳು ಹಾಗೂ ಇನ್ನಿತರೇ ಗೃಹಬಳಕೆಯ ಸಾಮಗ್ರಿಗಳ ವ್ಯಾಪಾರ ವಹಿವಾಟು ನಡೆಯುತ್ತದೆ.

೨) ಕುರಿ, ಕೋಳಿ, ಮೇಕೆ ಇತ್ಯಾದಿಗಳ ವಹಿವಾಟು ನಡೆಯುವ ಸಂತೆ.ತುಮಕೂರಿನ ಕ್ಯಾತಸಂದ್ರ, ಕೊರಟಗೆರೆಯ ಅಕ್ಕಿರಾಂಪುರ ಚಿಕ್ಕನಾಯಕನಹಳ್ಳಿಯ ಶೆಟ್ಟಿಕೆರೆಗಳಲ್ಲಿ ನಡೆಯುವ ಸಂತೆಗಳಲ್ಲಿ ಕುರಿ, ಕೋಳಿ, ಮೇಕೆ ಇತ್ಯಾದಿಗಳ ವಹಿವಾಟು ನಡೆಯುತ್ತವೆ. ಪ್ರತಿವಾರ ಕುರಿ–ಕೋಳಿಗಳು ದೂರದ ಪಟ್ಟಣಗಳಿಗೆ ರವಾನೆಯಾಗುತ್ತವೆ.

ಇಪ್ಪೆ ಊರು ಮ್ಯಾಲ ಒಪ್ಪಾಗಿ ಸುತ್ತಾರೆ
ಹೊಕ್ಕೇರಿ ಪೇಟೆ ಒಳಗೆಲ್ಲ। ಹೊರಗೆಲ್ಲ
ಶುಕ್ರಾರದ ಸಂತೆ ನೆರೆಸ್ಯಾರೆ॥[೧೭]

ಮೌಖಿಕ ಕಾವ್ಯಗಳಲ್ಲಿ ಸಂತೆಗಳ ಬಗ್ಗೆಯೂ ಉಲ್ಲೇಖಗಳಿವೆ. ಈರುನಾಗಮ್ಮನ ವಿವಾಹ ಮಹೋತ್ಸವಕ್ಕೆ ಬೇಕಾದ ಸರಕು ಸಾಮಗ್ರಿಗಳನ್ನು ಕೇರಿ, ಪೇಟೆ, ಸಂತೆಯಿಂದ ತರಲಾಯಿತು ಎಂಬ ವಿವರಗಳಿವೆ. ಶುಕ್ರವಾರದ ದಿನದಂದು ಸಂತೆಯು ನಡೆಯುತ್ತಿತ್ತು. ಎಂಬುದಾಗಿ ತಿಳಿದು ಬರುತ್ತದೆ. ಸಂತೆಗಳಲ್ಲಿ ವ್ಯಾಪಾರಸ್ಥರಿಂದ ಸುಂಕವನ್ನು ವಸೂಲಿ ಮಾಡಲಾಗುತ್ತದೆ. ಸಂತೆ ನಡೆಯುವ ಭೌಗೋಳಿಕ ವ್ಯಾಪ್ತಿಯಲ್ಲಿನ ಸ್ಥಳೀಯ ಸಂಸ್ಥೆಗಳ ಅಧಿಕಾರಿಗಳು ಅಥವಾ ಗುತ್ತಿಗೆದಾರರು ಸುಂಕವನ್ನು ವಸೂಲಿ ಮಾಡುವ ಅಧಿಕಾರವನ್ನು ಹೊಂದಿರುತ್ತಾರೆ. ಗುತ್ತಿಗೆದಾರರು ಸ್ಥಳೀಯ ಸಂಸ್ಥೆಗಳಿಂದ ನಿರ್ದಿಷ್ಟ ಅವಧಿಗೆ ಸೀಮಿತವಾಗಿ ಬಹಿರಂಗ ಹರಾಜಿನಲ್ಲಿ ಶುಲ್ಕ ವಸೂಲಾತಿ ಮಾಡುವ ಅಧಿಕಾರವನ್ನು ಪಡೆದುಕೊಂಡಿರುತ್ತಾರೆ. ಈ ಹರಾಜಿನ ಹಣವು ಸ್ಥಳೀಯ ಸಂಸ್ಥೆಗಳಿಗೆ ಸಂದಾಯವಾಗುತ್ತದೆ.

ಹತ್ತು ವರಾಹ ಕೊಟ್ಟು ಪಟ್ಟೆ ಮಂಚವ ಕೊಂಡೆ
ರೆಟ್ಟೆ ಒತ್ತುತ್ತಾವೆಂದು ಮಲಗಾನು। ಕೋರ್ಯೆದ
ಇಟ್ಟಗಲ್ಲಾಂಗ ವೀರ ಸುಖ ನಿದ್ರೆ॥[೧೮]

ಮೌಖಿಕ ಕಾವ್ಯದಲ್ಲಿ 'ವರಾಹ' ಎಂಬ ನಾಣ್ಯವು ವ್ಯಾಪಾರದ ಮಾಧ್ಯಮವಾಗಿತ್ತು. ಪಟ್ಟೆ ಮಂಚವನ್ನು ಕೊಳ್ಳಲು ಹತ್ತು ವರಾಹಗಳನ್ನು ನೀಡುವಂತಹ ಉಲ್ಲೇಖವಿರುವುದನ್ನು ಈ ಕೆಳಗಿನ ಕಾವ್ಯದಿಂದ ತಿಳಿಯಬಹುದಾಗಿದೆ. ಕೋರ್ಯೇದ ಗ್ರಾಮದಲ್ಲಿ ಸುಖ ನಿದ್ರೆಗೆ ಜಾರಿರುವಂತೆ ವೀರಸೀಗಣ್ಣನನ್ನು ಚಿತ್ರಿಸಲಾಗಿದೆ.

**ತೆರಿಗೆಪದ್ಧತಿ** : ತೆರಿಗೆಗಳು ರಾಷ್ಟ್ರದ ಮೂಲ ಆದಾಯವಾಗಿದ್ದು ಆಡಳಿತ ನಿರ್ವಹಣೆಗೆ ತೆರಿಗೆಗಳ ಸಂಗ್ರಹಣೆಯು ಅಗತ್ಯವಾಗಿತ್ತು. ರಾಜನು ತನ್ನ ಪ್ರಜೆಗಳನ್ನು ರಕ್ಷಿಸುವ ಹೊಣೆಯನ್ನು ಹೊತ್ತಿದ್ದನು. ಇದಕ್ಕೆ ಪ್ರತಿಯಾಗಿ ಜನರು ತೆರಿಗೆಯನ್ನು ನೀಡುವುದು ರೂಢಿಯಲ್ಲಿತ್ತು. ಉದಾಹರಣೆಗೆ ವೇದಗಳ ಕಾಲದಲ್ಲಿ ಬಾಗ, ಬಲಿ ಎಂಬ ತೆರಿಗೆಯನ್ನು, ಕದಂಬರ ಕಾಲದಲ್ಲಿ ಪೇರ್ಜುಂಕ, ಬಿಳ್ಗೊಡೆ, ಎಂಬ ತೆರಿಗೆಗಳನ್ನು, ಮರಾಠರ ಕಾಲದಲ್ಲಿ ಚೌತ್ ಮತ್ತು ಸರ್ದೇಶ್‌ಮುಖಿಗಳನ್ನು, ದೆಹಲಿ ಸುಲ್ತಾನರು ಮತ್ತು ಮೊಗಲರ ಕಾಲದಲ್ಲಿ ಗರೀ, ಚರಾಹಿ, ಜೆಸಿಯಾ, ಖರಾಜ್, ಜಕಾತ್ ತೆರಿಗೆಗಳನ್ನು, ವಿಜಯನಗರ ಕಾಲದಲ್ಲಿ ಶಿಸ್ತು ಎಂಬ ಭೂಕಂದಾಯ, ಸ್ಥಳಾದಾಯವೆಂಬ ಆಮದು ಸುಂಕ, ಹುಲ್ಲುಗಾವಲು ತೆರಿಗೆ, ಮದುವೆ ಸುಂಕ, ಬ್ರಿಟೀಷರ ಕಾಲದಲ್ಲಿ ಕೃಷಿ ಉತ್ಪನ್ನದ ನಿಗಧಿತ ಪ್ರಮಾಣವನ್ನು ಕಂದಾಯವಾಗಿ ಸಂಗ್ರಹಿಸುತ್ತಿದ್ದರು. ತುಮಕೂರು ಜಿಲ್ಲೆಯಲ್ಲಿ ಅಸ್ತಿತ್ವದಲ್ಲಿದ್ದ ಹಲವು ಶಾಸನೋಕ್ತ ತೆರಿಗೆಗಳನ್ನು ಉಲ್ಲೇಖಿಸಲಾಗಿದೆ.[೧೯] ಪ್ರಸ್ತುತವೂ ವೃತ್ತಿತೆರಿಗೆ, ಮಾರಾಟತೆರಿಗೆ, ಸೇವಾತೆರಿಗೆ, ಆದಾಯತೆರಿಗೆ, ಸರಕುಗಳ ಮೇಲಿನ ಸುಂಕ, ಇತ್ತೀಚೆಗೆ ಜಿಎಸ್‌ಟಿಗಳನ್ನು ಸಂಗ್ರಹಿಸಲಾಗುತ್ತಿದೆ. ಅಂತೆಯೇ ಜನಪದ ಕಾವ್ಯಗಳು, ಲಾವಣಿಗಳಂತಹ ಮೌಖಿಕ ಕಾವ್ಯಗಳಲ್ಲಿ ಸಹ ತೆರಿಗೆ ಪದ್ಧತಿಯ ಬಗ್ಗೆ ಉಲ್ಲೇಖಗಳಿವೆ. ವರದಕ್ಷಿಣೆ, ವರೋಪಚಾರ, ಕನ್ಯಾಶುಲ್ಕಗಳನ್ನು ನೀಡುವುದು ಜನಸಾಮಾನ್ಯರಲ್ಲಿ ರೂಢಿಯಲ್ಲಿದ್ದ ಬಗ್ಗೆ ಈ ಕಾವ್ಯದಿಂದ ಗೊತ್ತಾಗುತ್ತದೆ.

ಬಟ್ಟಲ್ಲಿ ಬೆಣ್ಣೆ ಇಟ್ಟಮಂಗೆ
ವಳ್ಳೇಲಿ ಹಾಲ ಹೊಯ್ದಮಂಗೆ
ಕಟ್ಟಯ್ಯ ಹದಿನಾರು ತೆರೆಗಳ [೨೦]

ಕೆರೆಯ ಹಿಂದೆ ಉಯ್ಯಾಲೆ ಆಡುತ್ತಾ ನಲಿಯುತ್ತಿದ್ದ ಗಂಗೆಯನ್ನು ಕಂಡ ಶಿವನು ಅವಳನ್ನು ಮೆಚ್ಚಿ ತನ್ನ ಹಿಂದೆ ಬರುವಂತೆ ಪುಸಲಾಯಿಸಿದಾಗ ಗಂಗೆಯು ಮೇಲ್ಕಂಡಂತೆ ಹೇಳುತ್ತಾಳೆ. ಆಗ ಶಿವ ತಾನು ತಿಂದುಣ್ಣುವ ಬಡವನು ತೆರಿಗೆ ನೀಡಲಾಗದು ಎನ್ನುತ್ತಾನೆ. ಇಲ್ಲಿ ಶಿವನು ಜನಸಾಮಾನ್ಯರ ಪ್ರತಿನಿಧಿಯಂತೆ ಕಂಡುಬಂದಿದ್ದಾನೆ. ಈ ಕಾವ್ಯದಿಂದ ವರನ ಕಡೆಯವರ ಬಡತನ ಮತ್ತು ತೆರೆ ನೀಡಲಾಗದ ಸ್ಥಿತಿಯನ್ನು ತಿಳಿಯಬಹುದಾಗಿದೆ.

ಚಿಕ್ಕನಾಯಕನಹಳ್ಳಿ, ತಿಪಟೂರು ಭಾಗಗಳಲ್ಲಿ ಉತ್ತರದೇವಿಯ ಲಾವಣಿಗಳು ಪ್ರಚಲಿತದಲ್ಲಿವೆ. ಈ ಲಾವಣಿಗಳು ಈ ಪ್ರದೇಶದಲ್ಲಿನ ತೆರಿಗೆ ಪದ್ಧತಿಗಳನ್ನು ಸಾಂದರ್ಭಿಕವಾಗಿ ವ್ಯಕ್ತಪಡಿಸುತ್ತವೆ. ಅದರಂತೆ ಅತ್ತೆಯು ಸವಾಲೊಡ್ಡಿದ ಎಲ್ಲ ಪರೀಕ್ಷೆಗಳಲ್ಲೂ

ಸೊಸೆಯು ಗೆಲ್ಲುತ್ತಾಳೆ ಆದರೂ ಅದನ್ನು ಒಪ್ಪಿಕೊಳ್ಳದ ಅತ್ತೆಯು ಬಿತ್ತನೆ ಮಾಡಿ ಬಂದ ಮಗನಿಗೆ ಊಟವನ್ನು ಬಡಿಸಿ ತವರು ಮನೆಗೆ ಆಕೆಯನ್ನು ಬಿಟ್ಟು ಬರುವಂತೆ ಹೇಳಿದಾಗ ಮಗನು '*ಒಂದೂರ ಮುಟ್ಟಿ ತೆರಮುಟ್ಟಿ ತಂದವಳ*' ಹೇಗೆ ಬಿಡಲಿ ಎಂದು ಕೊರಗುತ್ತಾನೆ. ಸೊಸೆಯು ವಿವಾಹ ಸಂದರ್ಭದಲ್ಲಿ ತವರಿನಿಂದ ತಂದಿದ್ದ ಬಳುವಳಿಯೊಂದಿಗೆ ತವರಿಗೆ ಹೊರಡುತ್ತಾಳೆ. ಆಗ ಈ ಕೆಳಕಂಡಂತೆ ಹಾಡಲಾಗಿದೆ.

ಶೆಟ್ಟಿ ಶಾನುಬಾವ ಏನಂದೀ ತಡದಾನೇ
ಎತ್ತಿಗೂ ಸುಂಕ ಕೊಡಬೇಕು ಸುವ್ವೇ[೨೧]

ಈ ಸಾಲುಗಳಲ್ಲಿ ಎತ್ತಿಗೂ ಸುಂಕವನ್ನು ನೀಡಬೇಕು ಎಂದು ನುಡಿದಿರುವುದರಿಂದ ಜಾನುವಾರುಗಳನ್ನು ಮೇಯಿಸಲು ಹಾಗೂ ಸಾಗಾಟ ಮಾಡಲು ಸುಂಕವನ್ನು ನೀಡಬೇಕಾಗಿದ್ದ ವಾಸ್ತವ ಸನ್ನಿವೇಶವಿತ್ತು ಎಂಬುದನ್ನು ತಿಳಿಯಬಹುದಾಗಿದೆ. ಕ್ರಿ. ಶ. ೧೫೩೫ರ ಕಂದಿಕೆರೆಯ ಶಾಸನವು ಉಲ್ಲೇಖಿಸಿರುವಂತೆ ವಿಜಯನಗರ ಸಾಮ್ರಾಜ್ಯವನ್ನು ಈ ಕಾಲದಲ್ಲಿ ಆಳುತ್ತಿದ್ದ ತುಳುವ ವಂಶದ ದೊರೆ ಅಚ್ಯುತರಾಯನು ಕ್ರಿ. ಶ. ೧೫೨೯-೧೫೪೨ ಸಾಮ್ರಾಟನ ಆಜ್ಞೆಯಂತೆ ಹದಿನೆಂಟು ಜಾತಿಯವರಿಗೆ ಮದುವೆಯ ಮೇಲಿನ ತೆರಿಗೆಯನ್ನು ಮನ್ನಾ ಮಾಡಿದ್ದನು. ಅಚ್ಯುತದೇವರಾಯನ ಅರಮನೆಯ ಕೋಶಾಧಿಕಾರಿ ಬಯಕಾರ ರಾಮಪ್ಪನು ಕಂದಿಕೆರೆ ಸೀಮೆಯಲ್ಲಿ ಪಾಲಿಸಿದ ಮದುವೆಯ ಸುಂಕಮಾನ್ಯದ ಜೊತೆಗೆ ಗೌಡ, ತಳವಾರ, ಅಕ್ಕಸಾಲೆ, ಕೆರೆ, ಎತ್ತಿಬಂಡಿ ಸಂಬಂಧದ ಆದಾಯ ಸುಂಕವನ್ನು ಶಿವರಾತ್ರಿಯಂದು ೧೮ ಫಣಕಟ್ಟುಗಳ ಪರವಾಗಿ ತುಂಗಭದ್ರಾತೀರದಲ್ಲಿ ವಿರೂಪಾಕ್ಷ ಸನ್ನಿಧಿಯಲ್ಲಿ ರಾಯನ ಯಶೋಭಿವೃದ್ಧಿಗಾಗಿ ದಾನ ಕೊಟ್ಟನು.[೨೨] ಕ್ರಿ.ಶ. ೧೫೭೩ರ ಬೂದಿಹಾಳು ಶಾಸನವು ಉಲ್ಲೇಖಿಸುವಂತೆ ಅಕ್ಕಸಾಲೆ, ಕಮ್ಮಾರ, ಬಡಗಿ, ಮುಂತಾದವರು ಕೊಡಬೇಕಿದ್ದ 'ಕುಟ್ಟುವ ಬಡಿಕಲ್ಲು ಸುಂಕ' (ಅಡೆವಣ)ವನ್ನು ಮಹಾಮಂಡಲೇಶ್ವರ, ಶ್ರೀಪತಿರಾಜ ವಲ್ಲಭರಾಜಯ್ಯ ದೇವನ ಅಮರನಾಯಕತನಕ್ಕೆ ಸಲ್ಲುವ ಬೂದಿಹಾಳು ಸೀಮೆಯಿಂದ ಪಡೆಯಲಾಗುತ್ತಿತ್ತು. ವಲ್ಲಭರಾಜಯ್ಯನ ತಂದೆಯಾದ ರಂಗರಾಜಯ್ಯನವರಿಗೆ ಪುಣ್ಯವಾಗಲೆಂದು ಅದನ್ನು ಮನ್ನಾ ಮಾಡಲಾಯಿತು.

### ೫.೫ ಕೋಟೆಗಳು

ಕೋಟೆಗಳನ್ನು ಆರ್ಥಿಕ, ಆಡಳಿತಾತ್ಮಕ, ಸಾಮಾಜಿಕ, ಸಾಂಸ್ಕೃತಿಕ, ವಾಸ್ತುಶೈಲಿ ಹೀಗೆ ಬಹುಮುಖಿ ದೃಷ್ಟಿಕೋನದಲ್ಲಿ ಅಧ್ಯಯನ ಮಾಡಬಹುದಾಗಿದೆ. ಕೋಟೆಗಳು ಸಂಪತ್ತನ್ನು ರಕ್ಷಿಸಿಕೊಳ್ಳಲು ರಾಜ್ಯಗಳಿಗೆ ಅತೀ ಅವಶ್ಯಕವಾಗಿದ್ದವು. ಜನರು, ಸೈನಿಕರು, ಹಣ, ಆಸ್ತಿ, ಗೋವುಗಳು, ಧಾನ್ಯ ಎಲ್ಲವನ್ನೂ ಒಟ್ಟಾರೆಯಾಗಿ 'ಸಂಪತ್ತು' ಎಂದು ಪರಿಗಣಿಸಬಹುದಾಗಿದೆ. ಸಂಪತ್ತಿನ ಸಲುವಾಗಿಯೇ ಬಹುತೇಕ ಧಾಳಿಗಳು ನಡೆದಿವೆ.

**ಕೋಟೆಗಳ ನಿರ್ಮಾಣ** : ರಾಜ್ಯಗಳು ಉದಯವಾಗುವುದಕ್ಕೆ ಮುಂಚೆ ಜನರು ಗ್ರಾಮಗಳಲ್ಲಿ ಸ್ಥಿರ ಜೀವನವನ್ನು ನಡೆಸುತ್ತಿದ್ದರು. ಸಂಪತ್ತನ್ನು ಕಳ್ಳ-ಕಾಕರು ಮತ್ತು ಆಕ್ರಮಣಕಾರರಿಂದ

ರಕ್ಷಿಸಿಕೊಳ್ಳಲು ಊರಿನ ಸುತ್ತಲೂ ಎತ್ತರವಾದ ಗೋಡೆಯನ್ನು ಕಟ್ಟುತ್ತಿದ್ದರು. ಕಾಡುಮೃಗಗಳಿಂದ ಆಗಬಹುದಾದ ಹಾನಿಯನ್ನು ತಡೆಯುವ ಉದ್ದೇಶದಿಂದ ಹಿಂದೆ ಕೋಟೆಗಳನ್ನು ನಿರ್ಮಾಣ ಮಾಡಲಾಗುತ್ತಿತ್ತು. ಇವುಗಳು ಶತ್ರುಗಳ ಆಕ್ರಮಣವನ್ನು ತಡೆಯುವ ರಕ್ಷಣಾ ಗೋಡೆಗಳಾಗಿದ್ದವು. ಇದನ್ನು 'ಸುತ್ತುಗೋಡೆ' ಅಥವಾ 'ಕಾವಲುಗೋಡೆ' ಎಂದು ಕರೆಯಲಾಗಿದೆ. ಆಕ್ರಮಣಕಾರರಿಂದ ರಕ್ಷಿಸಿಕೊಳ್ಳುವ ಸಲುವಾಗಿ ರಾಜ್ಯದ ಸುತ್ತಲೂ ನಿರ್ಮಿಸಲಾಗುತ್ತಿದ್ದ ಅಭೇಧ್ಯವಾದ ಗೋಡೆಯನ್ನು 'ಕೋಟೆ' ಎಂದು ಅರ್ಥೈಸಿಕೊಳ್ಳಲಾಗಿದೆ. ಗೋಡೆ, ಕಂದಕಗಳಿಂದ ರಾಜ್ಯವು ಆವರಿಸಲ್ಪಟ್ಟು ರಕ್ಷಿತವಾಗಿರುತ್ತಿತ್ತು. ವೈರಿಗಳ ಆಕ್ರಮಣದಿಂದ ರಾಜ್ಯವನ್ನು ರಕ್ಷಿಸಲು ಕೋಟೆಯು ಪ್ರಮುಖ ಪಾತ್ರವನ್ನು ವಹಿಸುತ್ತಿತ್ತು. ಆರಂಭದಲ್ಲಿ ಕೋಟೆಗಳನ್ನು ಮಣ್ಣು, ಇಟ್ಟಿಗೆಗಳನ್ನು ಬಳಸಿ ನಿರ್ಮಿಸಲಾಗುತ್ತಿತ್ತು. ಆದರೆ ನಂತರದಲ್ಲಿ ಯುದ್ಧದಲ್ಲಿ ಬಳಸುತ್ತಿದ್ದ ಆಯುಧಗಳು ಬದಲಾದಂತೆ ಕೋಟೆಗಳ ರಚನಾ ವಿನ್ಯಾಸವು ಸುಧಾರಿತಗೊಂಡು ಮಣ್ಣು, ಇಟ್ಟಿಗೆಗೆ ಬದಲಾಗಿ ಬೃಹದಾಕಾರದ ಕಲ್ಲು ಮತ್ತು ಗಾರೆಯನ್ನು ಬಳಸಿ ಅಭೇಧ್ಯವಾದ ಬೃಹತ್ ಕೋಟೆಗಳನ್ನು ನಿರ್ಮಿಸಲಾಯಿತು.[೨೩] ಕೋಟೆಯು ದುರ್ಗಾಧ್ಯಕ್ಷ ಅಥವಾ ದುರ್ಗಪಾಲಕನ ಅಧೀನದಲ್ಲಿರುತ್ತಿತ್ತು. ಕೋಟೆಗೆ ಸಂಬಂಧಿಸಿದ ಎಲ್ಲ ರಕ್ಷಣಾ ಕಾರ್ಯಗಳು ಈತನ ಅಧೀನದಲ್ಲಿಯೇ ನಡೆಯುತ್ತಿದ್ದವು.

**ಕೋಟೆಗಳ ಬಗೆಗಳು** : ಕೋಟೆಗಳಲ್ಲಿ ಹಲವು ಬಗೆಗಳಿವೆ.[೨೪] ಅವುಗಳೆಂದರೆ, ರಾಜಧಾನಿದುರ್ಗ, ದ್ರೋಣದುರ್ಗ (ಪ್ರಾಂತ್ಯದ ಕಾವಲುಗೋಡೆ), ನಗರದುರ್ಗ (ಪುರಪಟ್ಟಣಗಳಲ್ಲಿ), ಖೇಟದುರ್ಗ, ಗಿರಿದುರ್ಗ (ವಾಣಿಜ್ಯಕೇಂದ್ರಗಳಲ್ಲಿ), ವನದುರ್ಗ, ಜಲದುರ್ಗ ಮುಂತಾದುವು. ಉತ್ತರದ ನಿಡಗಲ್‌ನಿಂದ ದಕ್ಷಿಣದ ಹುಲಿಯೂರುದುರ್ಗದವರೆಗೂ ಸಾಧಾರಣ ಎತ್ತರದ ಗುಡ್ಡಗಳು ಇರುವುದರಿಂದ ತುಮಕೂರು ಜಿಲ್ಲೆಯಾದ್ಯಂತ ಗಿರಿದುರ್ಗಗಳನ್ನು ನಿರ್ಮಾಣ ಮಾಡಿರುವುದನ್ನು ಕಾಣಬಹುದಾಗಿದೆ. ಅವುಗಳೆಂದರೆ ನಿಡಗಲ್ಲು, ಮಿಡಿಗೇಶಿ, ಚನ್ನರಾಯನದುರ್ಗ, ಮಧುಗಿರಿ, ಕೊರಟಗೆರೆ, ದೇವರಾಯನದುರ್ಗ, ಹುತ್ರಿದುರ್ಗ, ಹುಲಿಯೂರುದುರ್ಗ, ಭಸ್ಮಾಂಗಿಕೋಟೆ, ಗುಟ್ಟೆ, ಬೇಡತ್ತೂರು ಇವೆಲ್ಲ ಗಿರಿದುರ್ಗಗಳಾದರೆ, ಸಿರಾ, ಹಾಗಲವಾಡಿ, ಸಿದ್ದಾಪುರ, ಕೋಡಗದಾಲ ಇವುಗಳು ನೆಲದುರ್ಗಗಳಾಗಿವೆ.

**ಕೋಟೆಗೆ ಸಂಬಂಧಿಸಿದ ಮೌಖಿಕ ಕಾವ್ಯಗಳು, ಹುಟ್ಟು** : ಆರಂಭದಲ್ಲಿ ಆರ್ಥಿಕ ಉದ್ದೇಶಗಳಿಗಾಗಿಯೇ ಕೋಟೆಗಳನ್ನು ನಿರ್ಮಾಣ ಮಾಡಲಾಯಿತು. ಆದರೂ ನಿರಂತರವಾಗಿ ನಡೆಯುತ್ತಿದ್ದ ಯುದ್ಧಗಳಿಂದಾಗಿ ಜನಪದ ಸಮೂಹವು ಕೋಟೆಗಳನ್ನು ತಮ್ಮ ಬದುಕಿನ ಭಾಗವಾಗಿಯೇ ಪರಿಗಣಿಸಿದ್ದರು. ಒಂದು ವೇಳೆ ಆಕ್ರಮಣಕಾರರ ಧಾಳಿಗೆ ತುತ್ತಾಗಿ ಕೋಟೆಯು ನಾಶವಾದರೆ ಆಕ್ರಮಣಕಾರರಿಂದ ಉಂಟಾಗುತ್ತಿದ್ದ ದರೋಡೆ, ದೌರ್ಜನ್ಯ, ಅತ್ಯಾಚಾರಗಳಿಂದಾಗಿ ತಮ್ಮ ಬದುಕು ಸಹ ದಿವಾಳಿಯಾಗುತ್ತದೆಂಬ ಅನುಭವದ ನೆಲೆಯಲ್ಲಿ

ಕೋಟೆಯನ್ನು ಭಾವನಾತ್ಮಕವಾಗಿ ಮತ್ತು ಅತಿಮಾನುಷತೆಯ ರೂಪದಲ್ಲಿ ಕಾಣಲಾಗುತ್ತಿತ್ತು. ಈ ಹಿನ್ನೆಲೆಯಲ್ಲಿಯೇ ಸ್ಥಳೀಯ ಮಾಂಡಲೀಕರು, ಪಾಳೇಗಾರರು, ಸಾಮಂತರು, ಅಮರನಾಯಕರು ನಿರ್ಮಿಸಿದ ಕೋಟೆಗಳಿಗೆ ಸಂಬಂಧಿಸಿದಂತೆ ಮೌಖಿಕ ಕಾವ್ಯಗಳನ್ನು ಕಟ್ಟಲಾಗಿದೆ. ಹೀಗಾಗಿ ಕೋಟೆಗಳು ಜನಸಾಮಾನ್ಯರಲ್ಲಿ ಆರ್ಥಿಕ ಹಿನ್ನೆಲೆಯಲ್ಲಿ ಭಾವನಾತ್ಮಕತೆಯನ್ನು ಮೂಡಿಸಲು ಕಾರಣವಾದುವು.

ವಿಜಯನಗರಕಾಲ ಮತ್ತು ನಂತರದ ಕಾಲದಲ್ಲಿ ತುಮಕೂರು ಪ್ರದೇಶದಲ್ಲಿ ಅಸ್ತಿತ್ವಕ್ಕೆ ಬಂದ ಸ್ಥಳೀಯ ಅರಸರು ಕೋಟೆಗಳನ್ನು ನಿರ್ಮಿಸಿದರು. ತಾಳೀಕೋಟೆಯ ಕದನಾನಂತರ ವಿಜಯನಗರದ ರಾಜಕೀಯ ಹಿಡಿತವು ಸಡಿಲವಾಯಿತು. ಮಧುಗಿರಿ, ಹಾಗಲವಾಡಿ, ನಿಡಗಲ್ಲು, ಕೊರಟಗೆರೆ, ಸಿರಾದಂತಹ ಇತರ ಸ್ಥಳೀಯ ಅರಸರು ಸ್ವತಂತ್ರರಾದರು.ತಮ್ಮ ಅಸ್ತಿತ್ವಕ್ಕಾಗಿ ತಮ್ಮೊಳಗೆ ಸ್ಪರ್ಧೆಗಳು ಏರ್ಪಟ್ಟಿದ್ದರಿಂದಾಗಿ ಪರಸ್ಪರ ಹೋರಾಟಗಳು ಸಾಮಾನ್ಯವಾಗಿದ್ದವು. ಈ ಸನ್ನಿವೇಶದಲ್ಲಿ ತಮ್ಮ ಮಾನ, ಪ್ರಾಣ, ಆಸ್ತಿಯನ್ನು ರಕ್ಷಿಸಿಕೊಳ್ಳುವ ಅನಿವಾರ್ಯತೆಯು ಕೋಟೆಗಳ ನಿರ್ಮಾಣಕ್ಕೆ ಕಾರಣವಾಯಿತು. ಯುದ್ಧದಿಂದ ರಾಜ್ಯ ಮತ್ತು ಸಮುದಾಯಗಳ ಮೇಲೆ ಆಗುತ್ತಿದ್ದ ಹಾನಿಯನ್ನು ತಡೆದು ಅವುಗಳನ್ನು ಸಂರಕ್ಷಿಸುವಲ್ಲಿ ಕೋಟೆಗಳು ಪ್ರಮುಖ ಪಾತ್ರವಹಿಸುತ್ತಿದ್ದವು. ಇದರಿಂದಾಗಿ ಜನಪದರು ಕೋಟೆಗಳನ್ನು ತಮ್ಮ ಬದುಕಿನ ಭಾಗವೆಂದೇ ಭಾವಿಸಿದರು. ಈ ಹಿನ್ನೆಲೆಯಲ್ಲಿ ಕೋಟೆಗಳ ನಿರ್ಮಾಣದ ಬಗೆಗೆ ಕಥೆ, ಐತಿಹ್ಯ, ನಂಬಿಕೆ, ಆಚರಣೆಗಳು ಹುಟ್ಟಿಕೊಂಡವು. ಕೋಟೆಯನ್ನು ನಿರ್ಮಿಸುವುದಕ್ಕಿಂತ ಮೊದಲು ಈ ಪ್ರದೇಶದ/ನೆಲದ ಹಿರಿಮೆಯನ್ನು ಹೆಚ್ಚಿಸುವುದಕ್ಕಾಗಿ ಕೆಲವು ಐತಿಹ್ಯಗಳು ಹುಟ್ಟಿಕೊಂಡಿರುವುದನ್ನು ಗುರುತಿಸಬಹುದು.

೧) ಹುತ್ತದ ಮೇಲೆ ಹಸುವು ಹಾಲನ್ನು ಕರೆಯುವುದು

೨) ಮೊಲವು ನಾಯಿಯನ್ನು ಓಡಿಸಿಕೊಂಡು ಹೋಗುವುದು

೩) ತಂದೆ ಮಗ ಇಬ್ಬರು ಮಾತ್ರ ಕೋಟೆಯನ್ನು ನಿರ್ಮಿಸುವುದು ಇತ್ಯಾದಿ.

ಈ ನಂಬಿಕೆಗಳು ಭೂಮಿಯನ್ನು ಪವಿತ್ರೀಕರಿಸಿ ನೆಲದ ಸ್ವರೂಪವನ್ನು ವೀರತ್ವದ ನೆಲೆಯಲ್ಲಿ ಪರಿಗಣಿಸುವಂತೆ ಮಾಡಿದ್ದವು.ಆ ಮೂಲಕ ಜನ ಸಮುದಾಯದಲ್ಲಿ ಆತ್ಮಸ್ಥೈರ್ಯವನ್ನು ಮೂಡಿಸಿ ಬದುಕುವ ಚೈತನ್ಯವನ್ನು ವೃದ್ಧಿಸುವ ತಂತ್ರಗಾರಿಕೆಯು ಇಂತಹ ನಂಬಿಕೆಗಳ ಸೃಷ್ಟಿಯ ಮೂಲ ಉದ್ದೇಶವಾಗಿತ್ತು.

ಕೋಟೆಯ ನಿರ್ಮಾಣದಲ್ಲಿ ಭಾಗವಹಿಸಿದ್ದ ವಿವಿಧ ಸಮುದಾಯಗಳ ಜನಾಂಗಗಳನ್ನು ಕುರಿತು ಈ ಕೆಳಕಂಡ ಮೌಖಿಕಕಾವ್ಯದಲ್ಲಿ ಪ್ರಸ್ತಾಪಿಸಿರುವಂತೆ ಮೌಖಿಕ ಪರಂಪರೆಯಲ್ಲಿ ಬರುವ ವಡ್ಡರು ಫಿರಂಗಿಯನ್ನು ಜೋಡಿಸುವುದರಲ್ಲಿ ನಿಪುಣರಾಗಿದ್ದರು. ಹಾಗೆಯೇ ಕೊಮಟಿಗರು ಕಾಲುವೆಯನ್ನು ತೆಗೆಯುವಂತಹ ಶ್ರಮದಾಯಕ ಕೆಲಸವನ್ನು ನಿರ್ವಹಿಸುತ್ತಿದ್ದರು. ಇದು ಆರ್ಥಿಕ ನೆಲೆಯ ಶ್ರಮ ವಿಭಜನೆಯ ತತ್ವವನ್ನು ಪಾಲಿಸಿದಂತೆ ಕಂಡುಬರುತ್ತದೆ.

ಒಡ್ಡರನು ಕರೆಸಿದ ದಿಬ್ಬವ ಅಗೆಸಿದ
ದೊಡ್ಡಪಿರಂಗಿ ನಿಲಿಸೀದ। ಮದಕೇರಿ
ದಿಬ್ಬಕೆ ಟೇಪ ಟೇಪನೆ ನಡೆಸೀದ॥
ಕೋಮಟಿಗರ ಕರೆಸೀದ ಕಾಲುವೆ ತೆಗೆಸೀದ
ಜೋಡ ಫಿರಂಗಿ ನಿಲಿಸೀದ। ಮದಕೇರಿ
ದುರುಗಾಕೆ ಟೇಪ ಟೇಪನೆ ನಡೆಸೀದ॥[೨೫]

ಈ ಪ್ರದೇಶದಲ್ಲಿ ನಿರ್ಮಾಣಗೊಂಡಿರುವ ಕೋಟೆಗಳಲ್ಲಿ ಶತ್ರುಗಳ ಧಾಳಿಗೆ ಸುಲಭವಾಗಿ ತುತ್ತಾಗದಂತೆ ತಂತ್ರಗಾರಿಕೆಯನ್ನು ಬಳಸಲಾಗಿತ್ತು.

ಕೋಟೆಯ ಒಳಗೆ ಹೋಗಲು ರಹಸ್ಯ ದಾರಿಗಳನ್ನು ನಿರ್ಮಾಣ ಮಾಡಲಾಗಿತ್ತು. ಈ ರಹಸ್ಯ ಮಾರ್ಗಗಳು ರಾಜನಿಗೆ ಮತ್ತು ಆತನ ಕೆಲವು ಆಪ್ತರಿಗೆ ಮಾತ್ರ ತಿಳಿದಿರುತ್ತಿತ್ತು. ತುರುಕರು ಸಿರಾದ ಕೋಟೆಯನ್ನು ವಶಪಡಿಸಿಕೊಳ್ಳುವ ಮೂಲಕ ಇಲ್ಲಿನ ಜನಸ್ಮರಣೆಯಲ್ಲಿ ಉಳಿದುಕೊಂಡಿದ್ದಾರೆ. ಇದು ಈ ಕುರಿತ ಮೌಖಿಕ ಕಾವ್ಯಗಳ ರಚನೆಗೆ ಪೂರಕವಾಗಿದೆ. ರಂಗಪ್ಪನಾಯಕನ ಸಂಬಂಧಿಕನಾದ ಪೂವಲ ಕೆಂಗಯ್ಯನು ಸಿರಾದ ಮೇಲೆ ಆಕ್ರಮಣ ಮಾಡುವಂತೆ ತುರುಕರನ್ನು ಕರೆತರುವ ಪ್ರಸಂಗವು ಮಧ್ಯಕಾಲೀನ ಭಾರತದ ರಾಜಕೀಯ ಚಿತ್ರಣದ ಪ್ರತೀಕದಂತೆ ಕಂಡುಬಂದಿದೆ. ಅಲ್ಲದೇ ಈ ಆಕರಗಳು ರಂಗಪ್ಪನಾಯಕನ ಅಂತ್ಯವನ್ನು ಕುರಿತು ಮಾಹಿತಿಯನ್ನು ಒದಗಿಸಿವೆ.

ಬಿಜಾಪುರಕೋಗಿ ಅರಮನೆಯ ಬಾಗಿಲಲಿ
ನಿಂತವನೊ ಪೂವಲ ಕೆಂಗಯ್ಯ
ದಂಡ ತಕ್ಕೊಂಡು ನೀವಿನ್ನು ಬಂದಾರೆ॥
ಕೋಟೆಗೆ ದಾರೀಯ ತೋರ್ಸೇನು ರಂಗನ
ಅರಮನೆಯ ಲೂಟಿ ಹೊಡಿಶೇನು ರನ್ನದ
ಶೀರೇದ ರಂಗನ ಸೊಕ್ಕ ಮುರಿಯೇ ರನ್ನದ॥ [೨೬]
ನಿಂತಂತ ಕೆಂಗಯ್ನ ಮುಖ ನೋಡಿ ಪಾಚಾನು
ಪಾಚ್ಚಾನು ಈ ಮಾತ ಕೇಳಿನ್ನು ತಲೆದೂಗಿ
ಹೊರಟನು ದಂಡ ಕಟ್ಕೊಂಡು ರನ್ನದ॥
ಹೊರಟನು ದಂಡ ಕಟ್ಕೊಂಡು ಸೀರ್‍ಯೇದ
ಕೋಟೆಗೆ ಮುತ್ತಗೆ ಹಾಕಾಕೆ ರನ್ನದ
ಆನೆಯ ಐನೂರು ಕುದುರೆಯ ಸಾವಿರ
ಕಾಲಾಳು ಐವತ್ತು ಸಾವಿರ ರನ್ನದ॥ [೨೭]

ರಂಗಪ್ಪನಾಯಕ ಮತ್ತು ಆತನ ತಂಗಿಯು ತನಗೆ ಮಾಡಿದ ಅವಮಾನಕ್ಕೆ ಪ್ರತಿಯಾಗಿ ರಂಗಪ್ಪನಾಯಕನ ಸಂಬಂಧಿಯೂ ಆಗಿದ್ದ ಪೂವಲಕೆಂಗಯ್ಯನು ಸಿರಾದ ಕೋಟೆಯ ರಹಸ್ಯ ದಾರಿಗಳನ್ನು ತುರುಕರಿಗೆ ತಿಳಿಸುವುದಾಗಿಯೂ, ಆ ಮೂಲಕ ಸಿರಾದ ಕೋಟೆ ಮತ್ತು ಅರಮನೆಯನ್ನು ಲೂಟಿ ಮಾಡಿಸುವ ಬೆದರಿಕೆಯನ್ನು ಹಾಕುವುದನ್ನು ಕಾಣಬಹುದು. ಆಳುವ ವರ್ಗಗಳು ತಮ್ಮ ವೈಯಕ್ತಿಕ ಸೇಡನ್ನು ತೀರಿಸಿಕೊಳ್ಳುವ ಸಲುವಾಗಿ ರಾಜ್ಯ ಮತ್ತು ಜನಸಮುದಾಯವನ್ನು ಬಲಿಕೊಡುವಂತಹ ಅಪಾಯವನ್ನು ತಂದೊಡ್ಡಲು ತುದಿಗಾಲಲ್ಲಿ ನಿಂತಿರುವಂತೆ ಕೆಂಗಯ್ಯನನ್ನು ಗುರುತಿಸಲಾಗಿದೆ. ವೈಯಕ್ತಿಕ ಸೇಡನ್ನು ತೀರಿಸಿಕೊಳ್ಳುವುದು

ಪ್ರತಿಷ್ಠೆಯ ವಿಷಯವಾಗಿ ಕಂಡು ಬಂದಿದೆ. ಪೂವಲ ಕೆಂಗಯ್ಯನು ನೀಡಿದ ಸುಳಿವಿನ ಮೇರೆಗೆ ಅರಸ (ಪಾಚ್ಚಾನು) ತನ್ನ ಗಜದಳ, ಅಶ್ವದಳ, ಕಾಲ್ದಳಗಳ ಸೈನಿಕ ದಂಡಿನೊಂದಿಗೆ ಸಿರಾದ ಮೇಲೆ ಧಾಳಿ ಮಾಡಿದನು. ಈ ಲಾವಣಿಯಲ್ಲಿನ ಉಲ್ಲೇಖಗಳು ಅಂದಿನ ಸೈನ್ಯದ ಸ್ವರೂಪ ಮತ್ತು ಬೃಹತ್ ಪ್ರಮಾಣದ ಸೈನ್ಯವಿದ್ದ ಬಗ್ಗೆ ತಿಳಿಸಿವೆ. ಕೇವಲ ವೈಯಕ್ತಿಕ ದ್ವೇಷದ ಕಾರಣದಿಂದಾಗಿ ದೊಡ್ಡಪ್ರಮಾಣದ ಸೈನ್ಯವು ಸಿರಾಕೋಟೆಗೆ ಮುತ್ತಿಗೆಯನ್ನು ಹಾಕಿ ರಂಗಪ್ಪನಾಯಕನನ್ನು ಕೊಂದು ಸಿರಾವನ್ನು ವಶಪಡಿಸಿಕೊಂಡಿತು ಎಂಬ ವಿಚಾರವನ್ನು ಮೇಲ್ಕಂಡ ಮೌಖಿಕ ಕಾವ್ಯದಿಂದ ತಿಳಿದು ಬರುತ್ತದೆ.

ಈ ಕಾಲದಲ್ಲಿ ನಿರ್ಮಿಸುತ್ತಿದ್ದ ಕೋಟೆಗಳು ಎಷ್ಟು ಬಲಿಷ್ಠ ಮತ್ತು ರಕ್ಷಣಾತ್ಮಕವಾಗಿದ್ದವು ಎನ್ನುವುದನ್ನು ಹಾಗೂ ಮಧ್ಯಕಾಲೀನ ಕೋಟೆಗಳ ವೈಶಿಷ್ಟ್ಯಗಳನ್ನು ಈ ಜನಪದ ಕಾವ್ಯದಿಂದ ತಿಳಿಯಬಹುದಾಗಿದೆ.

> ಹಕ್ಕಿಹಾರದ ಕೋಟೆ ಪಕ್ಷಿ ತೂರದ ಕೋಟೆ
> ರಾಕ್ಕಸರ ಕೋಟೆ ರಣ ಕೋಟೆ
> ಠಿಕಾಣಿ ಹಾಕಿದವರಿಲ್ಲ ಕೋಟೆ ಏರಿದವರಿಲ್ಲ
> ಕಂದಕ ಈಜಿದವರಿಲ್ಲ, ಬಾಗಿಲು ತೆಗೆದವರಿಲ್ಲ
> ಚೋರಗಿಂಡಿ, ನೀರುಗಿಂಡಿ, ಅಂಬು ಗಿಂಡಿ, ಇಪ್ಪತ್ತು ಸಾವಿರ
> ಗುಂಟೆ ಗೋವಿಗಳು ಎಪ್ಪತ್ತು ಸಾವಿರ
> ಕಾಳಿನಾ ಕಣಜ, ಮದ್ದಿನಾ ಕಣಜ, ತುಪ್ಪದಾ ಕಣಜ
> ಎಣಿಸಲಗದಾ ಲೆಕ್ಕ, ಇಂತು ನೀಲಾವತಿಗೆ
> ಸಮಾನಿಕರು ಆರುಂಟು ಧರೆಯೊಳಗೆ
> ಕಾಳಾಂಜನಾ ದುರ್ಗದಲಿ ಅರಮನೆಯ ಸಾಲು ಸಾಲು
> ಕಾಳೇಶ್ವರನ ಕೋಟೇಲಿ ರಾಣಿಯರ ಕೊಳ ಸಾಲು
> ಬೈರವನ ಕೋಟೇಲಿ ಗುಡಿ ಗುಂಡಾರಗಳ ಸಾಲು
> ಬೆಸ್ತರಾ ಕೋಟೆಯಲಿ ಆಳೆತ್ತರದ ಮೀನು ಶತಕೋಟಿ
> ಅರೆ ಕೋಟೆಯಲಿ ಎದೆ ಬಿರಿವ ಕೊತ್ತಲಗಳು ಮೂವತ್ತು [೨೮]

ನೀಲಾವತಿ, ಕಾಳಾಂಜನಾದುರ್ಗ ಎನ್ನುವುದು ನಿಡಗಲ್ಲಿನ ಪ್ರಾಚೀನ ಹೆಸರಾಗಿತ್ತು.ಇಲ್ಲಿನ ಕೋಟೆಯು ಎತ್ತರವಾಗಿದ್ದು ಅಬೇಧ್ಯವಾಗಿತ್ತು. ಕೋಟೆಯ ಒಳಗೆ ಹಕ್ಕಿ ಪಕ್ಷಿಗಳೂ ಕೂಡ ಪ್ರವೇಶಿಸಲು ಸಾಧ್ಯವಾಗುತ್ತಿರಲಿಲ್ಲ. ಇದಕ್ಕೆ ಪೂರಕವಾಗಿಯೇ ಕೋಟೆಯ ಅವಶೇಷಗಳು ಇಂದಿಗೂ ಉಳಿದಿವೆ. ಈ ಕೋಟೆಯನ್ನು ಏರುವುದು ಸುಲಭದಲ್ಲಿ ಸಾಧ್ಯವಿರಲಿಲ್ಲವೆಂದೂ, ಈ ಕೋಟೆಯಲ್ಲಿನ ಬಾಗಿಲು ಭದ್ರವಾಗಿದ್ದು ಆಕ್ರಮಣಕಾರರಿಗೆ ಸುಲಭದಲ್ಲಿ ತುತ್ತಾಗುತ್ತಿರಲಿಲ್ಲ. ರಹಸ್ಯ ಕಿಂಡಿಗಳು, ನೀರಿನ ಕಿಂಡಿಗಳು, ಬಿಲ್ಲು ಬಾಣಗಳನ್ನು ಅಡಗಿಸುವಂತಹ ವ್ಯವಸ್ಥೆಯೂ ಇಲ್ಲಿದ್ದು ಕೋಟೆಯಲ್ಲಿದ್ದ ಕಿಂಡಿಗಳ ಹಾಗೂ ಕೋವಿಗಳ ಸಂಖ್ಯೆಯನ್ನು ಕಾವ್ಯದಲ್ಲಿ ವ್ಯಕ್ತಪಡಿಸಲಾಗಿದೆ. ಅಲ್ಲದೇ ಕೋಟೆಯಲ್ಲಿ ಕಾಳಿನ ಕಣಜ, ಮದ್ದಿನ ಕಣಜ, ತುಪ್ಪದ ಕಣಜಗಳು ನಿರ್ಮಿಸಲಾಗಿದ್ದು, ನಿಡಗಲ್ಲು ಕೋಟೆಯ ಬೈರವನ ಕೋಟೆ ಭಾಗದಲ್ಲಿ ಗುಡಿ ಗುಂಡಾರಗಳ ಸಾಲು, ರಾಣಿಯರ ಕೊಳ ಮುಂತಾದ ಸೌಲಭ್ಯಗಳನ್ನು ನಿರ್ಮಿಸಲಾಗಿತ್ತು ಎಂಬ ಅಂಶಗಳನ್ನು ಈ ಕಾವ್ಯದಿಂದ ತಿಳಿದು ಬರುತ್ತವೆ.

ಎಪಿಗ್ರಾಫಿಯಾ ಕರ್ನಾಟಿಕ ಸಂಪುಟ ೧೨ ಪಾವಗಡ ೧೪೮೭ರ ಶಾಸನದಲ್ಲಿ ಉಲ್ಲೇಖಿಸಿರುವಂತೆ[೨೯] *'ದುರ್ಘಟವೀ ಕರ್ನಾಟಕ ದುರ್ಗಂಗಳಿಗದಿಕವೆನಿಪ ನಿಡುಗಲ್ಲೆಂಬೀ ದುರ್ಗ'* ಎಂಬ ಉಲ್ಲೇಖಕ್ಕೆ ಪೂರಕವಾದ ವಿವರಗಳನ್ನು ಮೇಲಿನ ನಿಡಗಲ್ಲು ದುರ್ಗದ ಕೋಟೆಯ ಕುರಿತು ಇರುವ ಮೌಖಿಕ ಕಾವ್ಯವು ವ್ಯಕ್ತಪಡಿಸಿದೆ.

**ಕೋಟೆಗಳ ನಾಶ** : ಕೋಟೆಗಳು ಬಹಳಷ್ಟು ಸಂದರ್ಭದಲ್ಲಿ ಆಕ್ರಮಣಕ್ಕೆ ತುತ್ತಾಗುತ್ತಿದ್ದುವು. ಈ ಸನ್ನಿವೇಶದಲ್ಲಿ ಕೋಟೆಗಳು ಒಂದು ಆಡಳಿತ ವರ್ಗದಿಂದ ಇನ್ನೊಂದು ಆಡಳಿತ ವರ್ಗಕ್ಕೆ ವರ್ಗಾಯಿಸಲ್ಪಡುತ್ತಿದ್ದುವು. ಚಿತ್ರದುರ್ಗ ಮತ್ತು ನಿಡಗಲ್ಲು ದುರ್ಗಗಳ ನಾಶದ ಕುರಿತಂತೆ ಮೌಖಿಕ ಕಾವ್ಯಗಳು ಈ ಕೆಳಕಂಡಂತೆ ಪ್ರಸ್ತಾಪಿಸಿವೆ.

ಹುಟ್ಟಿತು ಹುಟ್ಟಿತು ಕೋಟೆ ಜಗ್ಗನ್ನೇ ಜರುಗಿತು ಕೋಟೆ
ಹುಟ್ಟಿತು ಕೋಟೆ ರಣಕೋಟೆ। ತಿಮ್ಮಾಜಮ್ಮನ
ಒಪ್ಪದ ಮಗನ ಬಸುರಾಲಿ॥
ಆರುಸುತ್ತಿನ ಕೋಟೆ ಹಾಗೇ ಹಾಳಾಗೋಯ್ತು
ಏಳು ಸುತ್ತಿನ ಕಲ್ಲಿನ ಕೋಟೆ ಜರುಕು ಬಿದ್ದೇ ಹೋಯ್ತು
ಇನ್ನು ಕೆಟ್ಟೀತು ನನ್ನ ಬಗತಾನ
ಎಂಟು ಸುತ್ತಿನ ಕೋಟೆಯು
ಎಂಟು ದಿನಕ್ಕೆ ಲಯವಾಯ್ತು॥ [೩೦]

ಸಮುದಾಯವು ಕೋಟೆಯೊಂದಿಗೆ ಅವಿನಾಭಾವ ಸಂಬಂಧವನ್ನು ಹೊಂದಿತ್ತು. ಕೋಟೆಯು ಜನಪದ ಸಮಾಜದ ಸ್ವಾಸ್ಥ್ಯವನ್ನು ಕಾಪಾಡಿತ್ತು. ಇಂತಹ ಕೋಟೆಗಳ ಅಸ್ತಿತ್ವಕ್ಕೆ ಧಕ್ಕೆ ಬಂದಾಗ ಜನಪದರ ಬದುಕಿನಲ್ಲಿ ವ್ಯತ್ಯಯಗಳು ಉಂಟಾಗುತ್ತಿದ್ದವು ಎಂಬ ಅಂಶವನ್ನು 'ಇನ್ನು ಕೆಟ್ಟೀತು ನನ್ನ ಬಗತಾನ' ಎಂಬ ಮಾತಿನಿಂದ ತಿಳಿಯಬಹುದಾಗಿದೆ.

**ಕೊತ್ತಲುಗಳು** : ಕೋಟೆ ಮತ್ತು ಕೊತ್ತಲು ಎಂಬ ಎರಡೂ ಪದಗಳನ್ನು ಸಾಮಾನ್ಯವಾಗಿ ಒಂದೇ ಅರ್ಥದಲ್ಲಿ ಬಳಸಲಾಗುತ್ತದೆ. ಆದರೂ ಕೊತ್ತಲವು ಕೋಟೆಯ ಸಂರಕ್ಷಣೆಯಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತದೆ. ಕೊತ್ತಲಗಳು ಕೋಟೆಯ ಗೋಡೆಗೆ ಹೊಂದಿಕೊಂಡಂತೆ ನಿರ್ಮಿಸಲಾಗಿರುವ ಕಟ್ಟಡಗಳಾಗಿವೆ. ಇವುಗಳು ಸೈನಿಕರ ಆಶ್ರಯ ತಾಣಗಳಾಗಿವೆ. ಇವುಗಳನ್ನು ಬುರುಜು, ಕಾವಲುಗೋಪುರ ಗಳೆಂದು ಸಹ ಕರೆಯಲಾಗುತ್ತದೆ. ಇವುಗಳು ವೃತ್ತಾಕಾರ, ಚೌಕಾಕಾರ ಅಥವಾ ಅರ್ಧವೃತ್ತಾಕಾರದಲ್ಲಿ ಇರುತ್ತವೆ. ಇವು ಮುಂದಕ್ಕೆ ಚಾಚಿಕೊಂಡಂತಿರುವ ಕಿಟಕಿಗಳನ್ನು, ರಂಧ್ರಗಳನ್ನು ಹೊಂದಿದ್ದು ಇವುಗಳ ಮೂಲಕ ತೋಪುಗಳಿಂದ ಶತ್ರುಪಡೆಯ ಮೇಲೆ ಫಿರಂಗಿಗಳನ್ನು ಹಾರಿಸಲಾಗುತ್ತಿತ್ತು. ಕೊತ್ತಲಗಳ ಮೇಲಕ್ಕೆ ತೋಪುಗಳನ್ನು ಸಾಗಿಸಲು ಅನುಕೂಲಕರವಾಗುವಂತೆ ಮೆಟ್ಟಿಲುಗಳನ್ನು ನಿರ್ಮಿಸಲಾಗುತ್ತಿತ್ತು. ಅಥವಾ ಕೆಲವೊಮ್ಮೆ ಕಟ್ಟಡವನ್ನು ಇಳಿಜಾರಾಗಿ ರಚಿಸಲಾಗುತ್ತಿತ್ತು.

**ಆಯುಧಗಳು :** ವಿಜಯನಗರ ಸಾಮ್ರಾಜ್ಯದ ಪತನಾನಂತರದಲ್ಲಿ ತುಮಕೂರಿನ ಪ್ರದೇಶದ ಸಂಸ್ಥಾನಗಳ ಮೇಲೆ ಆಕ್ರಮಣಗಳು ವ್ಯಾಪಕವಾಗಿ ನಡೆದುವು. ಯುದ್ಧಕಲೆ ಮತ್ತು ತಾಂತ್ರಿಕತೆಯು ಸುಧಾರಣೆಯಾದಂತೆ ಯೋಧರು ಧರಿಸುತ್ತಿದ್ದ ಶಿರಸ್ತ್ರಾಣ, ದೇಹಕವಚ, ಕತ್ತಿ ಗುರಾಣಿಗಳಿಗೆ ಪರ್ಯಾಯವಾಗಿ ದೂರದಿಂದಲೇ ಶತೃಗಳನ್ನು ಎದುರಿಸಲು ಸಮರ್ಥವಾದ ಅಸ್ತ್ರಗಳಾದ ಫಿರಂಗಿಗಳು, ತೋಪುಗಳು ಬಳಕೆಗೆ ಬಂದವು. ಕೋಟೆಗಳನ್ನು ಒಡೆಯಲು ಚಲಿಸುವ ಗನ್‌ಗಳನ್ನು ಹಾಗೂ ಬುರುಜುಗಳ ಮೇಲೆ ಹೂಡಿದ ತಿರುಗುವ ಉದ್ದನೆಯ ಫಿರಂಗಿಗಳನ್ನು ಬಳಸಲಾಯಿತು. ಹಾಗಾಗಿ ಮಣ್ಣಿನ ಗೋಡೆಗಳು ಸುಲಭವಾಗಿ ಫಿರಂಗಿಯ ಏಟಿಗೆ ತುತ್ತಾಗಬಹುದಾದ ಸಾಧ್ಯತೆಯಿತ್ತು. ಇದು ಕಲ್ಲಿನ ಕೋಟೆಗಳ ನಿರ್ಮಾಣಕ್ಕೆ ಕಾರಣವಾಯಿತು. ಇದಕ್ಕೆ ಬೆಟ್ಟಗುಡ್ಡಗಳಿಂದ ಕೂಡಿದ ತುಮಕೂರಿನ ಭೌಗೋಳಿಕ ಸನ್ನಿವೇಶವು ಪೂರಕವಾಗಿದ್ದು ಕಲ್ಲಿನ ಕೋಟೆಗಳ ನಿರ್ಮಾಣ ಮಾಡಿರುವುದನ್ನು ಕಾಣಬಹುದು.

ಒಟ್ಟಾರೆಯಾಗಿ ತುಮಕೂರು ಪರಿಸರದ ಕೋಟೆಗಳ ವಿಶೇಷತೆಗಳು ಈ ಕೆಳಕಂಡಂತೆ ತಿಳಿದು ಬರುತ್ತವೆ.

- ಕೋಟೆಗಳು ಸಂಪತ್ತನ್ನು ಸಂರಕ್ಷಿಸುವ ರಕ್ಷಣಾ ಕವಚಗಳಂತಿದ್ದುವು. ಇವುಗಳು ರಾಜ್ಯದ ಜನತೆ, ಸೈನಿಕರು ಮತ್ತು ಸಂಪತ್ತನ್ನು ಕಾಪಾಡುತ್ತಿದ್ದವು.
- ಸಾಮಾನ್ಯವಾಗಿ ಆರಂಭದಲ್ಲಿ ಆರ್ಥಿಕ ಕಾರಣಗಳಿಗಾಗಿಯೇ ಕೋಟೆಗಳನ್ನು ನಿರ್ಮಿಸಲಾಯಿತು. ಆದರೂ ನಂತರದ ಕಾಲದಲ್ಲಿ ಸಮುದಾಯವು ತಮ್ಮ ಮಾನ, ಪ್ರಾಣ, ಆಸ್ತಿಯನ್ನು ರಕ್ಷಿಸಿಕೊಳ್ಳುವ ಅನಿವಾರ್ಯತೆಯು ಕೋಟೆಗಳ ನಿರ್ಮಾಣಕ್ಕೆ ಕಾರಣವಾಯಿತು. ಯುದ್ಧದಿಂದ ರಾಜ್ಯ ಮತ್ತು ಸಮುದಾಯಗಳ ಮೇಲೆ ಆಗುತ್ತಿದ್ದ ಹಾನಿಯನ್ನು ತಡೆದು ಅವುಗಳನ್ನು ಸಂರಕ್ಷಿಸುವಲ್ಲಿ ಕೋಟೆಗಳು ಪ್ರಮುಖ ಪಾತ್ರ ವಹಿಸುತ್ತಿದ್ದವು. ಇದರಿಂದಾಗಿ ಜನಪದರು ಕೋಟೆಗಳನ್ನು ತಮ್ಮ ಬದುಕಿನ ಭಾಗವೆಂದೇ ಭಾವಿಸಿದರು. ಈ ಹಿನ್ನೆಲೆಯಲ್ಲಿ ಕೋಟೆಗಳ ನಿರ್ಮಾಣದ ಬಗೆಗೆ ಕಥೆ, ಐತಿಹ್ಯ, ನಂಬಿಕೆ, ಆಚರಣೆಗಳು ಹುಟ್ಟಿಕೊಂಡವು.
- ಬೆಟ್ಟಗುಡ್ಡಗಳಿಂದ ಕೂಡಿದ ಮೈದಾನ ಪ್ರದೇಶವಾಗಿರುವ ತುಮಕೂರು ಜಿಲ್ಲೆಯು ಗಡುಸಾದ ಗ್ರಾನೈಟ್ ಶಿಲೆಯನ್ನು ಹೊಂದಿದ್ದು ಅಬೇಧ್ಯವಾದ ಕೋಟೆಗಳ ನಿರ್ಮಾಣಕ್ಕೆ ಸೂಕ್ತವಾದಂತಹ ಪ್ರಾಕೃತಿಕ ಸ್ವರೂಪಗಳನ್ನು ಹೊಂದಿತ್ತು.
- ಕೋಟೆ ಗೋಡೆಗಳ ಒಳಭಾಗದಲ್ಲಿ ಹಲವು ಸುತ್ತುಗಳ ಗೋಡೆಗಳ ನಿರ್ಮಾಣವನ್ನು ಮಾಡಲಾಗಿದೆ.
- ಕೋಟೆಗಳು ಶತೃಗಳಿಗೆ ಸುಲಭವಾಗಿ ತುತ್ತಾಗಲಾರದ ಬಾಗಿಲುಗಳು ಹಾಗೂ ರಹಸ್ಯ ದಾರಿಗಳನ್ನು ಹೊಂದಿವೆ.

- ಕೋಟೆಗಳ ಒಳಗೆ ಧಾನ್ಯಗಳ ಕಣಜ, ತುಪ್ಪದ ಕಣಜ, ಉಪ್ಪಿನ ಕಣಜ, ಶಸ್ತ್ರಾಸ್ತ್ರಗಳ ಸಂಗ್ರಹಣಾ ತಾಣ, ಅರಸನ ಕುಟುಂಬದ ವಾಸಕ್ಕೆ ಸಾಲು ಸಾಲು ಕಟ್ಟಡಗಳು, ಸಮರ್ಥವಾದ ಕೊತ್ತಲಗಳು, ನೀರಿನ ದೊಣೆಗಳು, ಧಾರ್ಮಿಕ ಕೇಂದ್ರಗಳು ಹೀಗೆ ಹಲವು ಸೌಲಭ್ಯಗಳನ್ನು ಒಳಗೊಂಡಿದ್ದುವು.

## ಟಿಪ್ಪಣಿಗಳು

೧. ಕಟ್ಟೇಯಾ ಹಿಂದೆ ಕೆಟ್ಟ ಜೋಳೋದೊಲವೇ
ಪುತ್ರಾಗೆ ನೀನು ಮರೆಯಾದೆ। ಕಾರಣದಿಂದ
ಜುಟ್ಟೇಗೆ ಗೆದ್ದು ಬಡಿಯಾಲಿ॥
ಸಣ್ಣನಾಗಪ್ಪ (ಸಂ) ೨೦೧೪ ***"ವೀರಸೀಗಣ್ಣನ ಜನಪದಕಾವ್ಯ"*** ಬೆಂಗಳೂರು, ಗಣೆ ಪ್ರಕಾಶನ, ಪುಟ–೪೭
ಆರು ಮಾನಾದ ಗೋಧಿ ಯಾರ್‍ಯಾರಿಗೆ ಆದಾವು
ರಾಯಾರು ನಾವು ಧನಿಕಾರು। ಮದಿವೀಗೆ
ದೂರಾದ ಬಳಗ ಬರುತಾವೆ॥
ವೈಜಯಂತಿಮಾಲ ೧೯೮೧ ***"ವಡ್ಡಗೆರೆ ನಾಗಮ್ಮ ಕಾವ್ಯ"*** ಬೆಂಗಳೂರು ಕಸಾಪ, ಪುಟ–೩೪
ಅಟ್ಟೀಗಳೊ ಕಲ್ಲೀಗೆ ಬುಟ್ಟು ಗಂಧನಿಕ್ಕಿ
ಬುಟ್ಟು ಬಾಳೆಹಣ್ಣು ಗುಲಿದಿಟ್ಟು। ಆಚೆಕೆರೆ
ಅಕ್ಕ ಮುತ್ತೈದೆರ್‍ನ ಕರೆಸಣ್ಣ॥
ವೈಜಯಂತಿಮಾಲ, ೧೯೮೧, ***"ಪೂರ್ವೋಕ್ತ"*** ಪುಟ–೩೭

೧ಎ. ಜಿ. ಎಸ್. ದೀಕ್ಷಿತ್ (ಕನ್ನಡಕ್ಕೆ ಅನುವಾದ ನೀಲತ್ತಹಳ್ಳಿ ಕಸ್ತೂರಿ) ೨೦೦೦ **"ಕರ್ನಾಟಕದಲ್ಲಿ ಕೆರೆ ನೀರಾವರಿ"** ಹಂಪಿ, ಕ.ವಿ.ವಿ, ಪ್ರಸಾರಾಂಗ, ಪುಟ–೭

೧ಬಿ. **ಅದೇ,** ಪುಟ–೮

೨. ಗೋಪಾಲ್ ಆರ್. ೨೦೦೯, ***"ತುಮಕೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ"*** ಪುಟ–೩೩೦

೩. ಅಶ್ವಿನಿ, ಭರಣಿ, ಕೃತ್ತಿಕ, ರೋಹಿಣಿ, ಮೃಗಶಿರ, ಆರಿದ್ರಾ, ಪುನರ್ವಸು, ಪುಷ್ಯ, ಆಶ್ಲೇಷಾ, ಮಾಘ, ಪೂರ್ವಫಾಲ್ಗುಣ, ಉತ್ತರಫಾಲ್ಗುಣ, ಹಸ್ತ, ಚಿತ್ತ, ಸ್ವಾತಿ, ವಿಶಾಖ, ಅನುರಾಧ, ಜ್ಯೇಷ್ಠ, ಮೂಲಾ, ಪೂರ್ವಾಷಾಢ, ಉತ್ತರಾಷಾಢ, ಶ್ರಾವಣ, ಧನಿಷ್ಠ, ಶತತಾರ, ಪೂರ್ವಭಾದ್ರ, ಉತ್ತರಭಾದ್ರ, ರೇವತಿ.

೪. ಕ್ರಿ.ಶ ೧೭೯೯ರ ಮೆಕೆಂಜಿಯ ದಾಖಲೆಗಳ ಪ್ರಕಾರ ತುಮಕೂರು ಜಿಲ್ಲೆಯಲ್ಲಿ ಸುಮಾರು ೨೧೧೩ ಕೆರೆಗಳು ಅಸ್ತಿತ್ವದಲ್ಲಿದ್ದವು. ಅವುಗಳೆಂದರೆ ಕಡಬ ೧೯೭, ಕುಣಿಗಲ್ ೪೩೨, ಕೊರಟಗೆರೆ ೧೮೬, ಚಿಕ್ಕನಾಯಕನಹಳ್ಳಿ ೫೮, ಚಿತ್ರದುರ್ಗ ೧೬೦, ತುಮಕೂರು ೧೩೧, ತುರುವೇಕೆರೆ ೧೦೯, ದೇವರಾಯನದುರ್ಗ ೩೫೨, ನಿಡಗಲ್ಲು ೧೭೭, ಮಧುಗಿರಿ ೮೪, ಹಾಗಲವಾಡಿ ೧೫೪, ಹುಲಿಯೂರುದುರ್ಗ ೯೯.

೫. ವೈಜಯಂತಿಮಾಲ, ೧೯೮೧, ***"ಪೂರ್ವೋಕ್ತ"*** ಪುಟ–೯೯

೬. ವೈಜಯಂತಿಮಾಲ, ***ಅದೇ,*** ಪುಟ–೯೯

೭. ವಕ್ತೃ ನಾಗರಾಜು.ಟಿ ಸು ೪೫ ವ. ಶಿಕ್ಷಕರು, ಬಿಜವರ ೧೩/೦೫/೨೦೧೩

೮. ಮುದ್ದುವೀರಪ್ಪ ಜಂಗಮರಹಳ್ಳಿ ೨೦೦೨ ***"ವೀರನಾಗಪ್ಪನಪದ"*** ಬೆಂಗಳೂರು, ಆರ್. ಡಿ. ಡಿಜಿಟಲ್ ಮೀಡಿಯಾ, ಪುಟ–೫೦

೯. ಮುದ್ದುವೀರಪ್ಪ ಜಂಗಮರಹಳ್ಳಿ, ೨೦೦೨, ***ಅದೇ,*** ಪುಟ–೬೪

೧೦. ಅಧ್ಯಾಯ ೩ ರಲ್ಲಿ ತುಮಕೂರು ಜಿಲ್ಲೆಯಲ್ಲಿ ಹುಟ್ಟಿ ಹರಿಯುವ ನದಿಗಳನ್ನು ಕುರಿತು ವಿವರಿಸಲಾಗಿದೆ.

೧೧. ಗೆಜೆಟಿಯರ್ ಇಲಾಖೆ. ***"ತುಮಕೂರು ಜಿಲ್ಲಾ ಗೆಜೆಟಿಯರ್"*** ೨೦೧೭ ಬೆಂಗಳೂರು. ಪುಟ ೨೦೮

೧೨. ಪಶುಗಳನ್ನು ಗೋ ಮಾತೆ ಎಂಬ ಪೂಜ್ಯ, ಭಾವನಾತ್ಮಕ ನೆಲೆಯಲ್ಲಿ ಗುರುತಿಸಲಾಗುತ್ತದೆ. ಪಶುಗಳಿಂದ ಹಲವಾರು ಪ್ರಯೋಜನಗಳಿವೆ. ಪಶುಗಳು ಬದುಕಿದ್ದರೂ, ಸತ್ತರೂ ಮಾನವನು ಅವುಗಳಿಂದ ಪ್ರಯೋಜನವನ್ನು ಪಡೆಯುತ್ತಾನೆ ಎಂಬುದು ಸರ್ವವಿಧಿತವಾದ ಸತ್ಯವಾಗಿದೆ. ದನಗಳ ಸಗಣಿ ಮತ್ತು

ಗಂಜಲವು ರೋಗನಿರೋಧಕ ಅಂಶವನ್ನು ಹೊಂದಿದ್ದು ಜನಸಾಮಾನ್ಯರು ಇಂದಿಗೂ ನಿತ್ಯಜೀವನದಲ್ಲಿ, ಧಾರ್ಮಿಕ ಸಮಾರಂಭಗಳಲ್ಲಿ ಗೋವು, ಸಗಣಿ, ಗಂಜಲ, ಹಾಲು ಮತ್ತು ಹಾಲಿನ ಉತ್ಪನ್ನಗಳನ್ನು ಪೂಜ್ಯ, ಪವಿತ್ರ, ಭಾವದಿಂದಲೇ ಬಳಸಲಾಗುತ್ತದೆ.

೧೩. ***"ತುಮಕೂರು ಜಿಲ್ಲಾ ಗೆಜೆಟಿಯರ್"*** ೨೦೧೭ ಪುಟ-೨೩೫

೧೪. ಪ್ರಾನ್ಸಿಸ್ ಬುಕನಾನ್ ೨೦೧೦ ***"ಎ ಜರ್ನಿ ಪ್ರಂ ಮದ್ರಾಸ್ ಥ್ರೂ ದಿ ಕಂಟ್ರೀಸ್ ಆಫ್ ಮೈಸೂರ್ ಕೆನರಾ ಅಂಡ್ ಮಲಬಾರ್"*** ಪುಟ ೭-೧೫

೧೫. ಚಲುವರಾಜು (ಸಂ) ೧೯೯೭, ***"ಜುಂಜಪ್ಪ"*** ಬುಡಕಟ್ಟು ಮಹಾಕಾವ್ಯಮಾಲೆ. ಹಂಪಿ, ಕವಿವಿ. ಪುಟ-೨೭೭

೧೬. ಚಲುವರಾಜು (ಸಂ) ೧೯೯೭, ***ಅದೇ,*** ಪುಟ-೩೩೨

೧೭. ವೈಜಯಂತಿಮಾಲ, ೧೯೮೧, ***"ಪೂರ್ವೋಕ್ತ"*** ಪುಟ-೯

೧೮. ಸಣ್ಣನಾಗಪ್ಪ (ಸಂ) ೨೦೧೪, ***"ವೀರಸೀಗಣ್ಣನ ಜನಪದ ಕಾವ್ಯ"*** ಪುಟ-೪೭

೧೯. ಶಾಸನಗಳಲ್ಲಿ ಉಲ್ಲೇಖಿಸಲಾಗಿರುವ ತೆರಿಗೆಗಳು –ಕಬ್ಬುನದ ಸುಂಕ, ಧಾನ್ಯಾದಾಯ, ಆನೆಯಸೇಸೆ, ಕುದುರೆಯಸೇಸೆ, ಕುರಿದೆರಿಗೆ, ಗುಳಿಯ ಸುಂಕ, ತಳವಾರಿಕೆ ಹಣ, ತಿಪ್ಪೆಸುಂಕ, ಹೊಗೆದೆರೆ, ಬಾಸಿಗದೆರೆ, –ಎ. ಕ. ಸಂ ೨೪ (೨೦೦೯) ಚಿಕ್ಕನಾಯಕನಹಳ್ಳಿ ೬೦ ಬೆಳುಗುಲಿ. ಇತ್ಯಾದಿ.

೨೦. ಕಾವಲ್ಲಮ್ಮ ಆರ್. ***"ಮಧುಗಿರಿ ಮಹಾನಾಡ ಪ್ರಭುಗಳು"*** ಪುಟ-೧೬೫.

೨೧. ರಾಜಪ್ಪ ಟಿ. ಎಸ್. (ಸಂ) ೧೯೭೪ ***"ಕೆರೆಹೊನ್ನಮ್ಮ ಮತ್ತು ಇತರ ಲಾವಣಿಗಳು"*** ಮೈಸೂರು ವಿ.ವಿ.

೨೨. ***ಎ. ಕ. ೧೬ ಚಿನಾಹಳ್ಳಿ ೩೯***

೨೩. ಬ್ಯಾಬಿಲೋನಿಯಾ ನಾಗರೀಕತೆಯಲ್ಲಿ ಕ್ರಿ. ಪೂ. ೨೦೦ ಕ್ಕೂ ಹಿಂದಿನದು ಎಂದು ಗುರುತಿಸಲಾಗಿರುವ ರಕ್ಷಣಾ ಗೋಡೆಗಳ ಅವಶೇಷಗಳ ಬಗ್ಗೆ ಉಲ್ಲೇಖಗಳಿವೆ. ಇಲ್ಲಿನ ನಿನೇವಾದ ಕೋಟೆ ಗೋಡೆಯ ಮೇಲೆ ರಕ್ಷಣಾ ತಾಣಗಳಿದ್ದವೆಂದು ತಿಳಿಯಲಾಗಿದೆ. ಚೀನಾದ ಉದ್ದವಾದ ಮಹಾಗೋಡೆಯನ್ನು ಮಂಗೋಲರ ಧಾಳಿಯನ್ನು ತಡೆಯುವ ಸಲುವಾಗಿ ನಿರ್ಮಿಸಲಾಗಿದ್ದ ರಕ್ಷಣಾ ಕೋಟೆಯಂತಿತ್ತು. ಗ್ರೀಕ್ ನಾಗರೀಕತೆಯಲ್ಲಿನ ಪುರದುರ್ಗಗಳು ಕೋಟೆಯನ್ನು ಒಳಗೊಂಡಿದ್ದವು. ರೋಮನ್ ಸಾಮ್ರಾಜ್ಯದಲ್ಲಿ ಕೋಟೆಗಳನ್ನು ವಾಸ್ತುಶಾಸ್ತ್ರದ ಪ್ರಕಾರ ನಿರ್ಮಿಸಲಾಗಿತ್ತು. ಕೋಟೆಯ ಸುತ್ತಲೂ ಕಂದಕ, ಪಹರೆದುರ್ಗ, ಕೊತ್ತಲ, ಕೋಟೆಕಿಂಡಿಗಳನ್ನು ರಚಿಸಲಾಗುತ್ತಿತ್ತು. ಕೌಟಿಲ್ಯನ ರಾಜನೀತಿ ಕುರಿತ ಅರ್ಥಶಾಸ್ತ್ರ ಕೃತಿಯಲ್ಲಿ ರಾಜ್ಯವೊಂದರ ಅಸ್ತಿತ್ವಕ್ಕೆ ಸಪ್ತಾಂಗಗಳು ಅತೀ ಅವಶ್ಯಕವಾದುವೆಂದು ತಿಳಿಸಲಾಗಿದೆ. ಅವುಗಳೆಂದರೆ ರಾಜ, ಮಂತ್ರಿ, ರಾಜ್ಯ, ಕೋಟೆ, ಖಜಾನೆ, ಸೈನ್ಯ ಮತ್ತು ಮಿತ್ರರಾಜ್ಯ. ಇವುಗಳಲ್ಲಿ ಕೋಟೆಯು ಅತೀ ಪ್ರಮುಖವಾದುದು ಎಂದು ಪರಿಗಣಿಸಲಾಗಿತ್ತು.

೨೪. ಯೋಗೀಶ್ವರಪ್ಪ ಡಿ. ಎನ್. ೧೯೯೯, ***"ಹಾಗಲವಾಡಿ ನಾಯಕರು"*** ಕವಿವಿ, ಹಂಪಿ, ಪುಟ-೫೪

೨೫. ಮುದ್ದುವೀರಪ್ಪ ಕೆ. ವಿ. ೨೦೧೨, ***"ತುಮಕೂರು ಜಿಲ್ಲೆಯ ಕೋಟೆಗಳ ಸಾಂಸ್ಕೃತಿಕ ಒಳನೋಟಗಳು"*** ಪುಟ-೩೫

೨೬. ನಂಜುಂಡಸ್ವಾಮಿ ಬಿ. (ಸಂ) ೨೦೦೨, ***"ಕಲ್ಪಸಿರಿ"*** ಅಖಿಲ ಭಾರತ ೬೯ನೆಯ ಕನ್ನಡ ಸಾಹಿತ್ಯ ಸಮ್ಮೇಳನ ತುಮಕೂರು-೨೦೦೨, ಸಂಸ್ಮರಣೆ ಸಂಪುಟ. ಪುಟ-೪೨೭

೨೭. ನಂಜುಂಡಸ್ವಾಮಿ ಬಿ. ***ಅದೇ,*** ಪುಟ-೪೨೭

೨೮. ಚಿತ್ತಯ್ಯ ಪೂಜಾರ್ ೨೦೧೧, ***"ಬಿಸಿಲಬೇವು"*** ಬೆಂಗಳೂರು, ಸಿವಿಜಿ ಇಂಡಿಯಾ. ಪುಟ ೧೪೬-೧೪೭

೨೯. ದುರ್ಘಟವೀ ಕರ್ನಾಟಕ
ದುರ್ಗಂಗಳಿಗದಿಕವೆನಿಪ ನಿಡುಗಲ್ಲೆಂಬೀ
ದರ್ಗವನೊಲಿದಾಳುತ ಬಹು
ದುರ್ಗಕಥಪನೆಂಬಾಬಾಳ ಚಿಕ್ಕ ತಿಪ್ಪನೃಪಂ
ಕಾದಿಪ್ಪರಷ್ಟದುರ್ಗಿಯ
ರಾದೆಸೆಗಳೊಳಷ್ಪ ಭೈರವರ್ಗಣಪತಿಗಳು
ಮಾದೇವರೆನಲು ನಿಡುಗಲ್
ಸಾದಿಸಲಳವಲ್ಲವಶ್ವಪತಿಗಜಪತಿಗಂ

೩೦. ಮುದ್ದುವೀರಪ್ಪ ಕೆ. ವಿ. ೨೦೧೨, ***"ಪೂರ್ವೋಕ್ತ"*** ಪುಟ ೩೮-೩೯

-೦೦೦-

# ಅಧ್ಯಾಯ : ೬

# ಮೌಖಿಕ ಆಕರಗಳಲ್ಲಿ ಸಾಮಾಜಿಕ ವ್ಯವಸ್ಥೆ

೬.೧ ಸ್ತ್ರೀಯರ ಸ್ಥಾನಮಾನ

೬.೨ ಜನಾಂಗೀಯ ಸಂಘರ್ಷ

೬.೩ ಜನಾಂಗೀಯ ಸಾಮರಸ್ಯ

೬.೪ ಆಚರಣೆಗಳು

- ೬.೪.೧ ಹಬ್ಬಗಳು
- ೬.೪.೨ ಕೃಷಿ ಮತ್ತು ಮಳೆ ಸಂಬಂಧಿ ಆಚರಣೆಗಳು
- ೬.೪.೩ ಜಾತ್ರೆಗಳು
- ೬.೪.೪ ಜೋಗತಿ ಸಂಪ್ರದಾಯ
- ೬.೪.೫ ಸಾವು ಮತ್ತು ಶವಸಂಸ್ಕಾರ ಪದ್ಧತಿ

೬.೫ ನಂಬಿಕೆಗಳು

# ಅಧ್ಯಾಯ : ೬

# ಮೌಖಿಕ ಆಕರಗಳಲ್ಲಿ ಸಾಮಾಜಿಕ ವ್ಯವಸ್ಥೆ

ಹಲವು ಕೇರಿಗಳು ಸೇರಿ ಒಂದು ಊರು ರಚನೆಯಾಗಿರುತ್ತದೆ. ಕೇರಿಗಳು ಹಲವು ವೈವಿಧ್ಯತೆಗಳಿಂದ ಕೂಡಿರುತ್ತವೆ. ಊರಿನ ಚರಿತ್ರೆಯಲ್ಲಿ ಕೇರಿಯ ವೈಶಿಷ್ಟ್ಯತೆಯನ್ನು ದಾಖಲಿಸುವುದು ಮೌಖಿಕ ಚರಿತ್ರೆಯ ಮೂಲ ಉದ್ದೇಶವಾಗಿದೆ. ಇದಕ್ಕೆ ಕೇರಿಗಳಲ್ಲಿ ಹುಟ್ಟುವ ಮೌಖಿಕತೆಯೇ ಆಕರವಾಗಿರುತ್ತದೆ. 'ಬಡವ ನೀ ಮಡಗಿದಂಗಿರು', 'ಬಡವನ ಕೋಪ ದವಡೆಗೆ ಮೂಲ' ಎಂಬ ಈ ಗಾದೆಗಳಲ್ಲಿ ಬಡವನೆಂದರೆ ಶ್ರೀಸಾಮಾನ್ಯ ಎಂದು ಅರ್ಥೈಸಿಕೊಳ್ಳಲಾಗಿದೆ. ಈ ಗಾದೆಗಳು ನಮ್ಮ ಸಮಾಜದ ಅಸಮಾನತೆಯನ್ನು ಸೂಚಿಸುತ್ತವೆ. ಇಂತಹ ಬಹುತೇಕ ಮೌಖಿಕ ಆಕರಗಳು ಕೇರಿಗಳಲ್ಲಿ ಸೃಷ್ಟಿಯಾಗುತ್ತವೆ. ಹೀಗಾಗಿಯೇ ಊರುಗಳು ಕೇರಿಯಾಗಲು ಸಾಧ್ಯವೇ? ಎಂಬ ಪ್ರಶ್ನೆಗಳಿವೆ. ಊರನ್ನೇ ಕೇರಿಯೆಂದು ದಾಖಲಿಸುವ, ಹೊರ ಜಗತ್ತಿಗೆ ತೋರಿಸುವ ಆತುರದಲ್ಲಿ ರಚಿತವಾಗಿರುವ ಚರಿತ್ರೆಗೆ ಮೌಖಿಕ ಚರಿತ್ರೆಯು ಪರ್ಯಾಯವಾಗಿದೆ. ಈ ನೆಲೆಯಲ್ಲಿಯೇ ಕೇರಿಗಳಲ್ಲಿ ಬಾಳಿ ಬದುಕಿದವರ ಬದುಕನ್ನು ಪ್ರತಿನಿಧಿಸುವ ಜನಪದ ಕಾವ್ಯಗಳು ಮೂಡಿಬಂದಿವೆ. ಇವುಗಳು ಆಯಾ ಪ್ರದೇಶಗಳ ಜನಸಾಮಾನ್ಯರ ಸಾಂಸ್ಕೃತಿಕ ಬದುಕನ್ನು ಅಭಿವ್ಯಕ್ತಿಸುತ್ತವೆ. ತುಮಕೂರು ಪ್ರದೇಶದಲ್ಲಿ ಅಂತಹ ಹಲವು ಕಾವ್ಯಗಳು ಪ್ರಚಲಿತದಲ್ಲಿವೆ. ಅವುಗಳೆಂದರೆ ವೀರನಾಗಮ್ಮನ ಕಾವ್ಯ, ಬಂದಕುಂಟೆ ಈರುಚಿಕ್ಕಣ್ಣನ ಕಾವ್ಯ, ದಿಬ್ಬದ ವೀರಬೊಮ್ಮಣ್ಣನ ಕಾವ್ಯ, ಮರೂರು ವೀರನಾಗಪ್ಪನ ಕಾವ್ಯ, ಮದ್ದೇದ ಸ್ವಾರಮ್ಮನ ಪದಗಳು, ಜುಂಜಪ್ಪನ ಕಾವ್ಯ, ಕೆಂಚಮ್ಮನ ಕಾವ್ಯ, ಉತ್ತರದೇವಿಯ ಲಾವಣಿಗಳು ಇತ್ಯಾದಿ.

## ೬.೧ ಸ್ತ್ರೀಯರ ಸ್ಥಾನಮಾನ

ಮೌಖಿಕ ಕಾವ್ಯಗಳಲ್ಲಿ ಮಹಿಳೆಯ ಪಾತ್ರಗಳು ವಿಭಿನ್ನವಾಗಿ ಮೂಡಿ ಬಂದಿರುವುದನ್ನು ಗುರುತಿಸಬಹುದು.ಈ ಪಾತ್ರಗಳ ಮುಖೇನ ಅಂದಿನ ಸ್ತ್ರೀ ಸ್ಥಾನಮಾನವನ್ನು ಕುರಿತು ಅಧ್ಯಯನವನ್ನು ಮಾಡಲಾಗಿದೆ.

ಬಾಲ್ಯವಿವಾಹ, ಬಹುಪತ್ನಿತ್ವ, ಮೈನೆರೆಯುವುದು, ವಿವಾಹ, ಸತಿಸಹಗಮನ ಪದ್ಧತಿ, ಕೆರೆಗೆಹಾರದಂತಹ ಸಂವೇದನಾಶೀಲ ಆಚರಣೆಗಳು ಸಮಾಜದಲ್ಲಿ ಅಸ್ತಿತ್ವದಲ್ಲಿದ್ದುದನ್ನು ಗ್ರಹಿಸಲಾಗಿದೆ. ಮಹಿಳೆಯ ವಿಭಿನ್ನ ಮುಖಗಳಾದ ಸ್ತ್ರೀ ಹತ್ಯೆ, ಶಿಶುಹತ್ಯೆ, ಪತಿಹತ್ಯೆ ಮಾಡುವಂತಹ ಸ್ವಾರಮ್ಮಳನ್ನು, ಶ್ರಮ ಸಂಸ್ಕೃತಿಯ ಪ್ರತೀಕವಾಗಿ ದಿಬ್ಬದ ವೀರಬೊಮ್ಮಣ್ಣನ ಕಾವ್ಯದಲ್ಲಿ ನಾಗಮ್ಮಳ ಪಾತ್ರವನ್ನು, ಸ್ತ್ರೀ ಯಾಜಮಾನ್ಯದ ಪ್ರತೀಕವಾಗಿ ಜಲಧಿಬೊಪ್ಪರಾಯನ ತಂಗಿ ಮದ್ದೆಮ್ಮಳನ್ನು, ಉಗ್ರಸ್ವರೂಪಿಯಾಗಿ ಸ್ವಾರಮ್ಮ, ಈರುನಾಗಮ್ಮ, ತಾಳೇದುರ್ಗಿಯರನ್ನು ಕಾವ್ಯಗಳಲ್ಲಿ ಚಿತ್ರಿಸಲಾಗಿದೆ. ಹಾಗೂ ಈರುನಾಗಮ್ಮಳನ್ನು ಶಿಷ್ಟರ ಪರಿಪಾಲಕಿಯಾಗಿ ಗುರುತಿಸಲಾಗಿದೆ. ಸಾಮಾಜಿಕವಾಗಿ ಸ್ತ್ರೀ ತನ್ನ ದೈಹಿಕ ರಚನೆಯ ಸಲುವಾಗಿ ಕುರಂಗರಾಯನ ಪತ್ನಿ ಮತ್ತು ಸೂಳೆಯನ್ನು ಅಬಲೆಯರೆಂದೇ ತಿಳಿಯಲಾಗಿದೆ. ಸ್ತ್ರೀಯನ್ನು ಮಾತೆಯಾಗಿಯೂ, ತಾಯಿಯಾಗಿಯೂ ಗುರುತಿಸಲಾಗಿದೆ. ಅಂತೆಯೇ ವ್ಯಾಮೋಹ ಹಾಗೂ ಅನೈತಿಕ ಸಂಬಂಧಗಳ ನೆಲೆಯಲ್ಲಿ ಈರುಗ್ಯಾತರಾಯ–ಮದ್ದೆಮ್ಮ, ಶಂಕರಲಿಂಗ–ಚಿತ್ತಕ್ಕ, ಕುರಂಗರಾಜ–ಆತನ ಸೂಳೆ, ಬಂದ್ಕುಂಟೆ ಈರುಚಿಕ್ಕಣ್ಣ–ಓಬಕ್ಕ, ಬಳ್ಳಕಟ್ಟೆ ಈರಣ್ಣ–ನಿಡಗಲ್ಲು ಮಾಳಮ್ಮರ ಕಥನ, ಕಾವ್ಯಗಳನ್ನುಹಾಡಲಾಗಿದೆ. ಜುಂಜಪ್ಪನು ತನ್ನ ತಾಯಿ ಚಿನ್ನಮ್ಮಳಲ್ಲಿ, ತನ್ನ ಹುಟ್ಟಿನ ಬಗ್ಗೆ, ಆಕೆಯ ನೈತಿಕತೆಯನ್ನು ಪರೀಕ್ಷಿಸುವ ಸನ್ನಿವೇಶಗಳು ಮೌಖಿಕ ಕಾವ್ಯಗಳಲ್ಲಿ ವ್ಯಕ್ತಗೊಂಡಿವೆ.

ಕೊರಟಗೆರೆ ತಾಲೂಕಿನ ವಡ್ಡಗೆರೆಯ ವೀರನಾಗಮ್ಮ ತನ್ನ ಪತಿ ನಾಗಣ್ಣನ ಮರಣಾನಂತರ ಸತಿಸಹಗಮನ ಮಾಡಿ ಮಹಾಸತಿಯಾಗಿದ್ದಾಳೆ. ಸಂಪ್ರದಾಯದ ಕಪಿಮುಷ್ಟಿಗೆ ಸಿಲುಕಿ ತನ್ನ ಜೀವನವನ್ನೇ ಬಲಿ ನೀಡಿರುವುದನ್ನು ಸಮಾಜವು ತ್ಯಾಗದ ಪ್ರತೀಕವೆಂದು ಬಿಂಬಿಸುತ್ತದೆ. ಈರುನಾಗಮ್ಮಳು ಸಮಾಜದಲ್ಲಿರುವ ಇಂತಹ ಸ್ತ್ರೀ ಸಮುದಾಯದ ಪ್ರತಿನಿಧಿಯಾಗಿ ಕಂಡು ಬರುತ್ತಾಳೆ.

ಈರುನಾಗಮ್ಮನ ಕಾವ್ಯದಲ್ಲಿ ಈರುಗ್ಯಾತರಾಯನ ತಾಯಿ ಪದುಮಲದೇವಿ, ಆತನ ಪತ್ನಿ ಮಲ್ಲದೇವಿ, ಸೊಸೆ ಈರುನಾಗಮ್ಮ, ಆತನ ಪ್ರೇಯಸಿ ಗೊಲ್ಲರ ಮದ್ದೆಮ್ಮ ಹಾಗೂ ವಡ್ಡರ ಜನಾಂಗದ ಹೆಣ್ಣುಮಗಳಂತಹ ಪಾತ್ರಗಳಿವೆ, ಈ ಎಲ್ಲಾ ಪಾತ್ರಗಳೂ ಸಹ ಮಹಿಳಾ ಪ್ರಾತಿನಿಧ್ಯದ ರೀತಿಯಲ್ಲಿಯೇ ಕಂಡುಬರುತ್ತವೆ. ಈ ಎಲ್ಲ ಪಾತ್ರಗಳು ಸಮಾಜದ ಸ್ಥಾಪಿತ ಸಂಪ್ರದಾಯಕ್ಕೆ ಅನುಗುಣವಾಗಿಯೇ ನಡೆದುಕೊಳ್ಳುತ್ತಾರೆ. ಆದರೆ ಈರುನಾಗಮ್ಮಳು ತನ್ನ ತವರನ್ನು ನಿಂದಿಸುವ ಸನ್ನಿವೇಶವು ಮಾತ್ರ ಸ್ಥಾಪಿತ ಪ್ರಭುತ್ವದ ವಿರುದ್ಧವಾಗಿ ಮೂಡಿ ಬಂದಿದೆ. ಹೀಗಾಗಿಯೇ ಆಕೆಯನ್ನು ಕಾವ್ಯದಲ್ಲಿ ನಾಯಕಿಯ ಸ್ಥಾನಮಾನಕ್ಕೇರಿಸಲಾಗಿದೆ. ಸಮಾಜದ ಸಂಪ್ರದಾಯದಂತೆ ಬಾಲ್ಯವಿವಾಹವಾಗಿದ್ದ ನಾಗಮ್ಮ ಗಂಡನ ತಲೆಯ ಸಹಿತ ಅಗ್ನಿಕೊಂಡಕ್ಕೆ ನಡೆದು ಸತಿ ಸಹಗಮನ ಪದ್ಧತಿಯನ್ನು ಪಾಲಿಸುವಳು. ಸತಿಸಹಗಮನ ಪದ್ಧತಿಗೆ ಬಲಿಯಾಗಿ ಚಿಕ್ಕವಯಸ್ಸಿನಲ್ಲಿಯೇ ವಿಧವೆಯಾಗಿ ದುಃಖಿತಳಾಗುತ್ತಾಳೆ. ಆದರೆ ತನ್ನ

ಭವಿಷ್ಯವನ್ನು ಸಮಾಜದ ಸಂಪ್ರದಾಯಕ್ಕೆ ಬಲಿಕೊಟ್ಟ ನಾಗಮ್ಮಳನ್ನು ತ್ಯಾಗಮಯಿಯೆಂದು ಬಿಂಬಿಸಲಾಗಿದೆ. ಇಂತಹ ಚಿತ್ರಣಗಳು ಅಂದಿನ ಮಹಿಳೆಯ ಸ್ಥಿತಿಗತಿಯೂ ಆಗಿದೆ.

ಸಾಮಾನ್ಯವಾಗಿ ಗರತಿಯರು ತಮ್ಮ ತವರಿನ ಬಗ್ಗೆ ಯಾವಾಗಲೂ ಒಳ್ಳೆಯದನ್ನೇ ಬಯಸುವ ತ್ಯಾಗಮೂರ್ತಿಗಳಂತೆ ಕಂಡುಬಂದರೂ ತನ್ನ ವೈಯಕ್ತಿಕ ಜೀವನಕ್ಕೆ ಮಹತ್ವ ನೀಡುವ ಮೂಲಕ ತನ್ನ ತವರನ್ನೇ ಶಪಿಸುವ ವಿಭಿನ್ನ ನೆಲೆಯ ಮಹಿಳೆಯ ವ್ಯಕ್ತಿತ್ವವನ್ನು ಮೌಖಿಕ ಆಕರಗಳು ನಿರೂಪಿಸಿವೆ. ಇದಕ್ಕೆ ಪೂರಕವಾಗಿಯೇ ಈರುನಾಗಮ್ಮಳ ವ್ಯಕ್ತಿತ್ವದಲ್ಲಿ ಎರಡು ವಿಭಿನ್ನ ಮುಖಗಳನ್ನು ಗುರುತಿಸಲಾಗಿದೆ. ಒಂದು, ಸತಿಸಹಗಮನ ಸಂಪ್ರದಾಯವನ್ನು ಪಾಲಿಸುವುದು. ಎರಡನೆಯದು, ತವರನ್ನು ಶಪಿಸುವುದು. 'ಖಡ್ಗಕ್ಕೆ ಧಾರೆ ಎರೆದಾರು' ಎಂದು ಹೇಳುವ ನಾಗಮ್ಮ ಅಂದಿನ ವೈವಾಹಿಕ ಪದ್ಧತಿಯನ್ನು ಖಂಡಿಸುತ್ತಾಳೆ. ಈ ನೆಲೆಯಲ್ಲಿ ಸ್ತ್ರೀ ಸಹನಾಶೀಲಳೂ ಆಗಿದ್ದುದು ಕಂಡುಬರುತ್ತದೆ. ಹಾಗೂ "ಒಲಿದರೆ ನಾರಿ ಮುನಿದರೆ ಮಾರಿ" ಎಂಬಂತಹ ಗಾದೆಯ ಹುಟ್ಟಿಗೆ ಕೂಡ ಇಂತಹ ವ್ಯಕ್ತಿತ್ವಗಳು ಕಾರಣವಾಗಿವೆ. ತವರನ್ನೇ ಶಪಿಸುವ ಮಹಿಳೆಯು, ಬಾಲ್ಯವಿವಾಹ ಮತ್ತು ಸತಿ ಸಹಗಮನದಂತಹ ಸ್ಥಾಪಿತ ವ್ಯವಸ್ಥೆಯ ವಿರುದ್ಧ ಹೋರಾಡುವ ಪ್ರತಿನಿಧಿಯಂತೆ ಕಂಡು ಬರುತ್ತಾಳೆ. ಆದರೂ ಅಂತಿಮವಾಗಿ ಸಹಗಮನ ಪದ್ದತಿಯ ನೆಪದಲ್ಲಿ ಆಕೆಯ ಸಂಪ್ರದಾಯ ವಿರೋಧಿ ಪ್ರತಿಭಟನೆಯನ್ನೂ ಅಂತ್ಯಗೊಳಿಸುವ ತಂತ್ರವನ್ನು ಇಲ್ಲಿ ಗುರುತಿಸಲಾಗಿದೆ.

ನಾಗಮ್ಮಳ ಸಂಪ್ರದಾಯ ವಿರೋಧಿ ಪ್ರತಿಭಟನೆಯೇ ಆಕೆಯನ್ನು ದೈವವೆಂದು ಪರಿಗಣಿಸಲು ಕಾರಣವಾಗಿದೆ. ಇದನ್ನು ಸ್ಥಳೀಯ ಸಮುದಾಯಗಳು ಕಾವ್ಯದ ರೂಪದಲ್ಲಿ ವ್ಯಕ್ತಪಡಿಸಿವೆ. ಹಾಗೂ ಈಕೆಯನ್ನು ಅಸಾಮಾನ್ಯಳೆಂದು ಭಾವಿಸಿ ಭಯ ಭಕ್ತಿಯಿಂದ ಆಕೆಗೆ ವಡ್ಡಗೆರೆ ಮತ್ತು ತಾಡಿ ಗ್ರಾಮಗಳಲ್ಲಿ ಗುಡಿ ಗೋಪುರಗಳನ್ನು ನಿರ್ಮಿಸಿ ಪೂಜಿಸಲಾಗುತ್ತಿದೆ. ಈ ಹಿನ್ನೆಲೆಯಲ್ಲಿಯೇ ಈ ಕೆಳಗಿನ ಕಾವ್ಯಗಳು ಮೂಡಿಬಂದಿವೆ.

> ವಡ್ಡಗೆರೆಯಮ್ಮ ರುದ್ರ ತಾಳೋಳಲ್ಲ
> ಕಬ್ಬಿನ ಕೋಲು ಮುರಿದಂಗೆ। ಮುರಿದಾಳು
> ಕೊಬ್ಬಿ ನಡೆಯೋರ ಮನೆಗಾಳ॥ [೧]

ಸಮುದಾಯವು ನ್ಯಾಯ, ನೀತಿಗಳನ್ನು ಮೀರಿ ಸೊಕ್ಕಿ ನಡೆದರೆ ಜೋಳದ ಸಪ್ಪೆಯ ದಂಟು ಮುರಿದಂತೆಯೂ, ಕೊಬ್ಬಿ ನಡೆದರೆ ಕಬ್ಬಿನ ಕೋಲು ಮುರಿದಂತೆಯೂ, ಶಿಕ್ಷಿಸುವಳೆಂಬ ಮಾತುಗಳಲ್ಲಿ ಈರುನಾಗಮ್ಮ 'ದುಷ್ಟ ಶಿಕ್ಷಕಳೂ ಶಿಷ್ಟ ರಕ್ಷಕ' ಳೂ ಆಗಿದ್ದಾಳೆಂದು ನಂಬಲಾಗಿದೆ. ಜನಸಮುದಾಯವು ಶಿಷ್ಟ ಮಾರ್ಗದಲ್ಲಿ ಜೀವನ ಸಾಗಿಸುವ ಮೂಲಕ ಸಮಾಜದ ಸ್ವಾಸ್ಥ್ಯವನ್ನು ಕಾಪಾಡುವುದು ಈ ನಂಬಿಕೆಯ ಸೃಷ್ಟಿಗೆ ಕಾರಣವಾಗಿದೆ.

ಈ ಕಾವ್ಯದಲ್ಲಿನ ಪದುಮವ್ವ ಮತ್ತು ಮದ್ದೆಮ್ಮನ ಪಾತ್ರಗಳು ಸ್ಥಾಪಿತ ವ್ಯವಸ್ಥೆಗೆ ಸ್ಪಂದಿಸುವಂತೆ ಹಾಗೂ ಅದಕ್ಕೆ ಪೂರಕವಾಗಿ ಜೀವನವನ್ನು ರೂಪಿಸಿಕೊಂಡಿದ್ದಂತೆ ಕಂಡು ಬರುತ್ತದೆ. ಆದರೆ ತಮ್ಮ ಸ್ವಂತಿಕೆಯ ವ್ಯಕ್ತಿತ್ವವನ್ನು ಮರೆಮಾಚಿರುವುದನ್ನು ಗುರುತಿಸಬಹುದು.

ಉತ್ತರದೇವಿ ಜನಪದ ಕಾವ್ಯವು ನಾಡಿನ ನಾನಾ ಭಾಗಗಳಲ್ಲಿ ಪ್ರಚಲಿತವಿರುವ ಮೌಖಿಕ ಕಾವ್ಯವಾಗಿದೆ. ತುಮಕೂರು ಜಿಲ್ಲೆಯ ಚಿಕ್ಕನಾಯಕಹಳ್ಳಿಯ ಪ್ರದೇಶಗಳಲ್ಲಿ ಪ್ರಚಲಿತದಲ್ಲಿರುವ ಉತ್ತರದೇವಿಯ[೨] ಲಾವಣಿಗಳಲ್ಲಿ ಇಲ್ಲಿನ ಸಾಮಾಜಿಕ ವ್ಯವಸ್ಥೆ ಮತ್ತು ಸ್ತ್ರೀಯರ ಸ್ಥಾನಮಾನಗಳನ್ನು ವ್ಯಕ್ತಪಡಿಸಲಾಗಿದೆ. ಬಹುಕಾಲದಿಂದಲೂ ಮಹಿಳೆಯು ಪುರುಷ ಪ್ರಧಾನ ಸಮಾಜದಲ್ಲಿ ಶೋಷಿತಳಾಗಿದ್ದಾಳೆ. ಆದರೆ ಈ ಕಾವ್ಯದಲ್ಲಿ ಅತ್ತೆಯ ಮನೆಯಲ್ಲಿ ಸೊಸೆಯ ಅಸಹಾಯಕತೆ, ಗಂಡನ ಒಲವು, ಅಜ್ಜಿಯ ಅನುಕಂಪ, ತವರಿನ ನಿರಾಕರಣೆಗಳಂತಹ ಭಾವನೆಗಳನ್ನು ಉಲ್ಲೇಖಿಸಲಾಗಿದೆ. ಕೊನೆಯಲ್ಲಿ ಆಕೆಯು ತನ್ನ ಅಜ್ಜಿಯ ಸಲಹೆಯಂತೆ ಮಳೆಯಾಗಿ ಅವತರಿಸುವುದು ಈ ಲಾವಣಿಯಲ್ಲಿನ ಕಥಾವಸ್ತುವಾಗಿದೆ. ಆದರೆ ಇದೊಂದು ಹೆಣ್ಣಿನ ಅಸಹಾಯಕತೆಯನ್ನು ಪ್ರತಿನಿಧಿಸುವ ಬದಲಾಗಿ ಸ್ತ್ರೀ ಪ್ರಾತಿನಿಧಿಕ ಕಾವ್ಯವಾಗಿದೆ. ಜನಪದರು ಅತ್ತೆ ಸೊಸೆಯರ ನಡುವಿನ ಕಲಹವನ್ನು ಎಷ್ಟು ನವಿರಾಗಿ ಬಣ್ಣಿಸಿದ್ದರೆನ್ನುವುದನ್ನು ಈ ಕೆಳಗಿನ ಲಾವಣಿಯಿಂದ ತಿಳಿದುಕೊಳ್ಳಬಹುದಾಗಿದೆ.

> ಅರಗಿ ಬಂದ ಮಗನೀಗೆ ಹಾಲನ್ನ ಇಕ್ಕ್ಯೇವಳೇ<br>
> ಬೇಡತಿ ಎಂಬ ಸೊಸಿಬ್ಯಾಡ । ಕಂದಯ್ಯ<br>
> ಬಿಟ್ಟು ಬಿಡವಳ ತವರೀಗೆ ॥[೩]

ಸೊಸೆಯನ್ನು ಆಕೆಯ ತವರಿಗೆ ಕಳಿಸುವ ಅತ್ತೆಯ ಹುನ್ನಾರವನ್ನು, ಹಾಗೂ ಆಕೆಗೆ ನೀಡಿದ ಪರೀಕ್ಷೆಗಳಲ್ಲಿ ಹಿಂಸೆಯ ತೀವ್ರತೆಯನ್ನು ಅರಿಯಬಹುದಾಗಿದೆ. ಎಲ್ಲ ಪರೀಕ್ಷೆಗಳಲ್ಲಿಯೂ ಸೊಸೆಯು ಗೆದ್ದರೂ ಒಪ್ಪಿಕೊಳ್ಳದ ಅತ್ತೆಯು ಬಿತ್ತನೆ ಮಾಡಿ ಬಂದ ಮಗನಿಗೆ ಉಣಬಡಿಸಿ ತವರು ಮನೆಗೆ ಆಕೆಯನ್ನು ಬಿಟ್ಟು ಬರುವಂತೆ ಹೇಳಿದಾಗ ಪತಿಯು ಹೆಂಡತಿಯನ್ನು ತವರಿಗೆ ಹೇಗೆ ಬಿಡಲಿ ಎಂದು ಕೊರಗುತ್ತಾನೆ. ಅಂತಿಮವಾಗಿ ತವರು ಮನೆಗೆ ಬಂದ ಹೆಣ್ಣು ಮಗಳಿಗೆ ತವರಲ್ಲಿಯೂ ಜಾಗವಿಲ್ಲವೆಂಬುದನ್ನು ಇಲ್ಲಿ ಮಾರ್ಮಿಕವಾಗಿ ಹೇಳಲಾಗಿದೆ. ಆಕೆಯನ್ನು ಸಂತೈಸಿದ ಅಜ್ಜಿಯ ಮಾತುಗಳಲ್ಲಿ ನೋವಿನ ನುಡಿಯಿದೆ. ಉತ್ತರೆ ಮಳೆಯ ಹುಟ್ಟು ಹೀಗೆ ಹೆಣ್ಣಿನ ಕಣ್ಣೀರಾಗಿದೆ ಎಂಬ ಐತಿಹ್ಯಗಳಿವೆ. ಜನಪದ ಸ್ತ್ರೀಯರು ತಮ್ಮ ನೋವು ಮತ್ತು ದುಃಖದ ಸಂಕೇತವಾಗಿ ಉತ್ತರದೇವಿಯ ಕಥೆಯನ್ನು ಹಾಡುವುದರೊಂದಿಗೆ ತಮ್ಮ ನೋವುಗಳನ್ನು ನುಂಗಿಕೊಳ್ಳುವರು. ಸೊಸೆಯನ್ನು ಒಲ್ಲದ ಅತ್ತೆಯು ಆಕೆಗೆ ಹಲವು ಪರೀಕ್ಷೆಗಳನ್ನು ಒಡ್ಡುತ್ತಾಳೆ.[೪] ಎಲ್ಲ ಪರೀಕ್ಷೆಗಳಲ್ಲೂ ಗೆದ್ದಂತಹ ಸೊಸೆಯನ್ನು ಒಪ್ಪಿಕೊಳ್ಳದ ಅತ್ತೆಯು ಆಕೆಯನ್ನು ತವರಿಗೆ ಕಳಿಸುವ ಸಂಚನ್ನು ಮಾಡುತ್ತಾಳೆ. ಅದರಂತೆ ಕಂಕುಳಲ್ಲಿ ಒಂದು ಮಗುವನ್ನು ಎತ್ತಿಕೊಂಡು ಮತ್ತೊಂದು ಮಗುವನ್ನು ಕೈಯಲ್ಲಿ ಹಿಡಿದುಕೊಂಡು ಉತ್ತರದೇವಿಯು ತವರು ಮನೆಗೆ ಹೋಗುತ್ತಾಳೆ. ಅಲ್ಲಿಯೂ ಅವಳಿಗೆ ತಾವಿಲ್ಲವೆಂಬುದನ್ನು ಮಾರ್ಮಿಕವಾಗಿ ಹೇಳಲಾಗಿದೆ. 'ಅಮ್ಮ ಕದ ತೆಗೆಯೇ ನಮ್ಮಮ್ಮ ಕದತೆಗೆಯೇ' ಎಂದು ರಾತ್ರಿ ವೇಳೆಯಲ್ಲಿ ಬಂದು ತಾಯಿಯನ್ನು ಕೇಳಿಕೊಂಡಾಗ, ಅಮ್ಮ ಈ ಮುಂದಿನಂತೆ ಉತ್ತರಿಸುವಳು.

ಬಾಗೀಲಾ ನಾ ಹೆಂಗೆ ತೆಗೆಯಾಲಿ
ನಿಮ್ಮಪ್ಪ ತೋಳಲಿ ವರಗವರೆ। ಉತ್ತರದೇವಿ
ಹೋಗೆ ಅಣ್ಣಯ್ಯನರಮನೆಗೆ॥[೫]
ಹಿಂದಾಲ ಕಾಲದಲ್ಲಿ ನನಗೂ ಈ ಸಾಗಿತ್ತು
ನಿಮ್ಮಪ್ಪ ನನ್ನ ಉರಿಸಿದಾರು। ಉತ್ತರದೇವಿ

ತಂದೆಯ ಮನೆಯಲ್ಲಿ ಹೀಗಾದಾಗ ಮುಂದೆ ಅಣ್ಣನ ಮನೆ, ಚಿಕ್ಕಪ್ಪನ ಮನೆಯಲ್ಲಿಯೂ ಅವಳಿಗೆ ಪ್ರವೇಶವಿಲ್ಲ. ಕೊನೆಗೆ ಅಜ್ಜಿಯು ಮೊಮ್ಮಗಳಿಗೆ ಮುಂದಿನ ದಾರಿಯನ್ನು ತೋರುವಳು.

ನನ್ನ ಸಾಗು ನಿನಗೇ ಒದಗೀತು। ಉತ್ತರದೇವಿ
ಹೋಗವ್ವ ಹಂಪೆ ಹೊಳೆಗಾಗಿ ॥[೬]

ತನ್ನ ಮಗಳಿಗೂ ಕಷ್ಟದ ಪರಂಪರೆಯಿತ್ತು ನಿನಗೂ ಹಾಗೇ ಆಗಿದೆ, ಮೊಮ್ಮೊಗಳೇ 'ಉತ್ತರೆ ಮಳೆಯಾಗಿ ಹೋಗು' ಎಂಬ ಅಜ್ಜಿಯ ಮಾತುಗಳಲ್ಲಿ ನೋವು ಮಡುಗಟ್ಟಿದೆ. ಇದಕ್ಕೆ ಪೂರಕವಾಗಿಯೇ 'ಉತ್ತರೆ ಮಳೆ ಬಂದ್ರೆ ಅತ್ತಂಗೆ' ಎಂಬ ನಾಣ್ಣುಡಿ ರೂಢಿಯಲ್ಲಿದೆ. ಹೀಗೆ ಉತ್ತರೆ ಮಳೆಯ ಹುಟ್ಟು ಹೆಣ್ಣಿನ ಕಣ್ಣೀರಿನ ಪ್ರತೀಕವಾಗಿದೆ. ಪ್ರಸ್ತುತ ಸನ್ನಿವೇಶದಲ್ಲಿ ಸ್ತ್ರೀ-ಪುರುಷ ಸಮಾನತೆಯ ಏನೇ ಕಾನೂನುಗಳನ್ನು ಜಾರಿಗೊಳಿಸಿದಾಗ್ಯೂ ಪುರುಷನ ದಬ್ಬಾಳಿಕೆಯನ್ನು ಸಹಿಸುತ್ತಾ ತಮ್ಮ ಬದುಕನ್ನು ಸವೆಸಿದಂತಹ ಮಹಿಳೆಯರನ್ನು ಇಂದಿಗೂ ಇಲ್ಲಿನ ಪರಿಸರದಲ್ಲಿ ಕಾಣಬಹುದಾಗಿದೆ. ಹೀಗಾಗಿಯೇ 'ಅತ್ತೆಗೊಂದು ಕಾಲ, ಸೊಸೆಗೊಂದು ಕಾಲ', 'ಕೊಟ್ಟ ಹೆಣ್ಣು ಕುಲಕ್ಕೆ ಹೊರಗು' ಎಂಬಂತಹ ನಾಣ್ಣುಡಿಗಳು ಸಾಮಾನ್ಯವಾಗಿವೆ. ಅಂದರೆ ಉತ್ತರದೇವಿಯ ಲಾವಣಿಗಳಲ್ಲಿ ವ್ಯಕ್ತಪಡಿಸಿರುವ ಭಾವನೆಗಳು ಗ್ರಾಮೀಣ ಮಹಿಳೆಯ ವಾಸ್ತವ ಬದುಕಿನ ಭಾವನೆಗಳಾಗಿಯೇ ಕಂಡುಬರುತ್ತವೆ.

ಪುರುಷ ಪ್ರಾಧಾನ್ಯತೆಯ ಸಮಾಜದಲ್ಲಿ ಮಹಿಳೆಯ ಬದುಕನ್ನು ಪ್ರತಿನಿಧಿಸುವ ಹುಳಿಯಾರು ಕೆಂಚಮ್ಮನ ಕಾವ್ಯವು ಸತಿಸಹಗಮನ ವ್ಯವಸ್ಥೆಯ ನೆಲೆಯಲ್ಲಿಯೇ ಸ್ತ್ರೀ ಬದುಕನ್ನು ನಿರೂಪಿಸುತ್ತದೆ. ಕೆಂಚಮ್ಮಳು ಕೆರೆಗೆ ಹಾರವಾಗುವುದರ ಮೂಲಕ ತನ್ನ ತಾಯಿಯು ಮಾಡಿಕೊಂಡಿದ್ದ ಹರಕೆಯನ್ನು ಮಗಳಾಗಿ ತೀರಿಸುವುದೇ ಈ ಕಾವ್ಯದ ತಿರುಳು. ಹುಳಿಯಾರಿನ ಮಾರಪ್ಪಗೌಡ ಮತ್ತು ಬೊಮ್ಮವ್ವ ದಂಪತಿಗಳ ಮಗನಾದ ಗಿರಿಯಣ್ಣಗೌಡನಿಗೆ ಜಾನಕಲ್ಲಿನ ಕೆಂಚಮ್ಮಳನ್ನು ವಿವಾಹ ಮಾಡಿಕೊಳ್ಳಲು ನಿರ್ಧರಿಸಿ ಬೊಮ್ಮವ್ವ ಹೆಣ್ಣು ಕೇಳಲು ಜಾನಕಲ್ಲಿಗೆ ಬರುತ್ತಾಳೆ. ಹೆಣ್ಣು ಗಂಡಿಗೆ ತಾರಾಬಲ ಹೊಂದಿಕೆಯಾಗುತ್ತದೆ, ಎಂಬ ಶಂಭುಜೋಯಿಸರ ಮಾತು ಬೊಮ್ಮವ್ವನಿಗೆ ಹಿಗ್ಗು ತರುತ್ತದೆ. ಕೆಂಚವ್ವನ ಕಾವ್ಯದಲ್ಲಿ ಕೆಂಚಮ್ಮ ಮತ್ತು ಗಿರಿಯಣ್ಣರ ಮದುವೆ, ಒಸಗೆ, ಪ್ರಸ್ಥದಶಾಸ್ತ್ರಗಳ ವಿವರಣೆಗಳು ಬರುವುದರಿಂದ ಆ ಕಾಲದ ಮದುವೆ ಶಾಸ್ತ್ರದ ವಿಚಾರಗಳನ್ನು ತಿಳಿಯಬಹುದಾಗಿದೆ. ಶಾಸ್ತ್ರ ಸಂಪ್ರದಾಯಗಳನ್ನು ವಿವಾಹದ ಸಂದರ್ಭದಲ್ಲಿ ನಡೆಸಲಾಗುತ್ತದೆ.ಮದುವೆಯಾದ ಕೆಲವು ದಿನಗಳಲ್ಲಿ ಕೆಂಚಮ್ಮ ಮೈನೆರೆಯುತ್ತಾಳೆ. ಫಲ ಕೇಳಲು ಬೊಮ್ಮವ್ವ ಜೋಯಿಸರ ಬಳಿಬಂದಾಗ ಕಾವ್ಯವು ಮುಂದಿನಂತೆ ಮೂಡಿ ಬಂದಿದೆ.

ಶುಕ್ರವಾರ ಸಿ ಸ್ತ್ರೀ ಮೈ ನೆರೆದವಳೆ
ತಂದೋರ ಮನೆಗೆ ಜಯಜಯ
ಒಂದೇ ಕಂದಯ್ಯನ ಫಲವೈತೆ ಒಡಪಿಗೆ
ಹೋಗುತಾಳೆ ವಿಧಿಬರದವಳೇ ಹಣೆಯಾಗೆ [೭]

ಎಂದು ಜೋಯಿಸರು ಸೊಸೆಯ ಭವಿಷ್ಯವನ್ನು ನುಡಿಯುತ್ತಾರೆ. ಇದರಿಂದ ಕೋಪಗೊಂಡ ಬೊಮ್ಮವ್ವ ಜೋಯಿಸರಿಗೆ ಮುಂದಿನಂತೆ ನುಡಿಯುವ ಮೂಲಕ ಪರಂಪರಾನುಗತವಾಗಿ ಅನುಸರಿಸಿಕೊಂಡು ಬಂದಿರುವ ಶಾಸ್ತ್ರದ ವಿರುದ್ದ ಸಿಟ್ಟಿಗೇಳುವಳು.

ನನ್ನ ಬಾಳ ಹೆಣ್ಣಿಗೆ ಏನು ಕುಂದ ನುಡಿದಯ್ಯಾ?
ನಿಮ್ಮ ಪುಸ್ತಕವ ಬೆಂಕಿಗೆ ಹಾಕಿ ಚೆಂದ ಚಂದಕೆ ಉರುವಯ್ಯ
ಜೋಯಿಸರೇ ಮುಂದೆ ಬರುದಾ ಒಬ್ಬರು ಅರಿಯಾರು। [೮]

ಕೇಡನ್ನು ನುಡಿವ ಆ ಶಾಸ್ತ್ರದ ಕೃತಿಗಳನ್ನು ಸುಟ್ಟು ಹಾಕುವಷ್ಟು ಕೋಪವನ್ನು ಮಾಡಿಕೊಂಡ ಕೆಂಚಮ್ಮನ ಅತ್ತೆಗೆ ಮತ್ತೊಬ್ಬ ಜೋಯಿಸನೂ ಹಾಗೆಯೇ ನುಡಿಯುತ್ತಾನೆ. ಆಗ ಅತ್ತೆಯು ಶಾಸ್ತ್ರವನ್ನೂ ನಂಬುವುದಿಲ್ಲ. ಇಲ್ಲಿ ಮಹಿಳೆಯ ಆಶಯ ಮತ್ತು ನಂಬಿಕೆಗಳ ನಡುವಿನ ಸಂಘರ್ಷವನ್ನು ಗುರುತಿಸಬಹುದಾಗಿದೆ. ಈ ಸಂಘರ್ಷದಲ್ಲಿ ಹೆಣ್ಣಿನ ಆಶಯವೇ ಮುಖ್ಯವಾಗಿದೆ. ಮೈನೆರೆದ ವಿಧಿಗಳನ್ನು ಮುಗಿಸಿ ಹದಿನಾರನೆಯ ದಿನ ಪ್ರಸ್ಥ ಮಾಡಿಸುವಳು. ಗರ್ಭವತಿಯಾದ ಕೆಂಚಮ್ಮನಿಗೆ ಬಯಕೆಗಳು ಉಂಟಾಗುತ್ತವೆ. ಕೆರೆ ಏರಿಯಮಣ್ಣು, ಹುಣಸೇಹಣ್ಣು, ಕಿತ್ತಲೆಹಣ್ಣು, ಮಾವಿನಹಣ್ಣು, ದ್ರಾಕ್ಷಿಹಣ್ಣು, ದಾಳಿಂಬೆಹಣ್ಣು, ಏಲಕ್ಕಿ ಮುಂತಾದುವುಗಳನ್ನು ಕ್ರಮವಾಗಿ ತಿಂಗಳಿಗೊಂದರಂತೆ ಆಕೆಯ ಬಯಕೆಗಾಗಿ ಮಾವ ಮಾರಪ್ಪಗೌಡ ತರಿಸಿಕೊಡುತ್ತಾನೆ. ಒಂಭತ್ತು ತಿಂಗಳಿಗೆ ಕೆಂಚಮ್ಮಳಿಗೆ ಹೆರಿಗೆ ನೋವು ಉಂಟಾದಾಗ ಅತ್ತೆ ಬೊಮ್ಮವ್ವ ಸೂಲಗಿತ್ತಿಯನ್ನು ಕರೆತಂದು ಹೆರಿಗೆ ಮಾಡಿಸುವಳು. ಗಂಡು ಮಗು ಹುಟ್ಟಿದ್ದರಿಂದ ಮನೆಯಲ್ಲಿ ಸಂಭ್ರಮವು ಕಂಡು ಬರುತ್ತದೆ. ಕಾವ್ಯದಲ್ಲಿ ಗರ್ಭಿಣಿ ಸ್ತ್ರೀಯರ ಬದುಕನ್ನು ಚಿತ್ರಿಸಲಾಗಿದೆ. ಐದು ತಿಂಗಳಾದ ಮೇಲೆ ಕೆಂಚಮ್ಮ ಗಂಗಾ ಪೂಜೆ ಮಾಡಲು ಹುಳಿಯಾರಿನ ಕೆರೆಗೆ ಬರುತ್ತಾಳೆ. ಕೆಂಚಮ್ಮ ಗಂಗಾಪೂಜೆ ಮಾಡಿ ಹಿಂತಿರುಗಿದಾಗ

ದೇವಗನ್ನೆಯರು ಸೆರಗು ಹಿಡಿದಾರು
ಅಕ್ಕಯ್ಯ ನೀನು ನಮ್ಮೊಡನೆ ಬರಬೇಕು. [೯]

ಎಂದಾಗ ಬರುವೆನೆಂದು ಭಾಷೆಕೊಟ್ಟು ಏಳು ಬಂಡಿಗಳೊಂದಿಗೆ ಅರಮನೆಗೆ ಬರುವಳು.ಮನೆಗೆ ಬಂದು ಚಿಂತೆಯಲ್ಲಿದ್ದ ಸೊಸೆಯನ್ನು ಕಾರಣ ಕೇಳಲಾಗಿ ಕೆರೆಗೆ ಹಾರವಾಗಿ ಬಲಿ ಹೋಗಲು ಸೊಸೆಯು ನಿರ್ಧರಿಸುತ್ತಾಳೆ. ಇದನ್ನು ಕೇಳಿ ಆತಂಕಗೊಂಡ ಅತ್ತೆ ಮತ್ತು ಮಾವ ಕೆಂಚಮ್ಮಳ ತವರಿಗೆ ಓಲೆಯನ್ನು ಕಳಿಸುವರು. ಪತ್ರವನ್ನು ಓದಿದ ತಾಯಿ ಚೆನ್ನವ್ವ, ತಂದೆ ಶಂಕರಗೌಡ, ಏಳು ಜನ ಅಣ್ಣಂದಿರು ಗೋಳಾಡಿಕೊಂಡು ದುಃಖಿಸುವರು. ಅತ್ತೆ ಮಾವರ ಹಿಂಸೆಯಿಂದಾಗಿ ಕೆಂಚವ್ವ ಈ ರೀತಿಯಾಗಿ ತೀರ್ಮಾನಿಸಿರಬೇಕೆಂದು ಕೋಪಗೊಂಡು ದಂಡಿನೊಂದಿಗೆ ಮುತ್ತಿಗೆ ಹಾಕಲು ಬರುವರು. ಆಗ ಕೆಂಚಮ್ಮ ತಂದೆ ತಾಯಿಗಳನ್ನು ಸಮಾಧಾನ ಪಡಿಸುತ್ತಾಳೆ. ನಂತರ ಕೆರೆಗೆ ಹೋಗಲು ಸಿದ್ಧಳಾದಾಗ, ಪ್ರೀತಿಯ ಪತಿ ಗಿರಿಯಣ್ಣನ ಬಳಿ ಬಂದು ತಾನು ಕೆರೆಗೆ ಹಾರವಾದ ಬಳಿಕ ತನ್ನ ಚಿಕ್ಕಪ್ಪನ ಮಗಳು

ಕಿರುಕೆಂಚಿ ಇರುವಳು, ಮತ್ತೆ ಹೋಗಿ ಅವಳನ್ನೇ ಮದುವೆಯಾಗುವಂತೆ ಸಲಹೆಯನ್ನು ನೀಡುವಳು. ಆಗ ಗಿರಿಯಣ್ಣನು

ಮಲ್ಲಿಗೆ ಹೂವು ಮುಡಿದ ಮಂಡೆಯ ಮೇಲೆ
ಗರಗದ ಹೂವು ಎಂಗೆ ಮುಡಿಯಲೇ [೧೦]

ಎಂದು ಅವಳನ್ನು ಬಿಟ್ಟಿರಲಾರದ ಸಂಕಟವನ್ನು ತೋಡಿಕೊಳ್ಳುತ್ತಾನೆ. ಆದರೂ ಕೆಂಚಮ್ಮ ತನ್ನ ನಿರ್ಧಾರವನ್ನು ಬದಲಿಸುವುದಿಲ್ಲ. ತೊಟ್ಟಿಲೊಡನೆ ಕೆರೆಯ ಬಳಿ ಬಂದು ನಾಲ್ಕು ಹುಣಸೇ ಕಡ್ಡಿಗಳನ್ನು ನೆಟ್ಟು ಅದಕ್ಕೆ ತೊಟ್ಟಿಲನ್ನು ಕಟ್ಟಿ ಕೆರೆಗೆ ಹಾರವಾಗುತ್ತಾಳೆ. ಮುಂದೆ ಮಗು ಬೆಳೆದು ದೊಡ್ಡವನಾಗುತ್ತಾನೆಂದೂ  ಅವನೇ ಶ್ರೀಭೈರವನಾದನೆಂದು ಜನರು ನಂಬುತ್ತಾರೆ.

ಸಂಪ್ರದಾಯ ಮತ್ತು ನಂಬಿಕೆಗಳಂತೆ ಕೆರೆಗೆಹಾರವಾದ ಕೆಂಚವ್ವನ ಕಾವ್ಯವು ಕೊಟ್ಟಮಾತನ್ನು ತಪ್ಪಿ ನಡೆಯಬಾರದು ಎಂಬುದನ್ನು ಪ್ರತಿಪಾದಿಸುತ್ತದೆ. ಅಲ್ಲದೆ ಮಾನವೀಯ ವ್ಯಕ್ತಿತ್ವಗಳ ನೈಜ ಜೀವನವನ್ನು ನಮಗೆ ದರ್ಶಿಸುತ್ತದೆ. ಕೆಂಚವ್ವನ ಅತ್ತೆಯಾಗಿ ಬೊಮ್ಮವ್ವ ಇಲ್ಲಿ ತನ್ನ ಸದ್ವರ್ತನೆಗಳಿಂದ ಎಲ್ಲರ ಹೃದಯವನ್ನು ಗೆಲ್ಲುತ್ತಾಳೆ. ತನ್ನ ಸೊಸೆ ಗಂಗೆಯ ಪಾಲಾಗುವುದು ಅವಳ ಪಾಲಿಗೆ ದುಃಖದ ವಿಷಯ. ಅದನ್ನು ತಡೆಯಲು ಸಾಕಷ್ಟು ಪ್ರಯತ್ನ ಮಾಡುತ್ತಾಳೆ. ಇಂತಹ ಮಾನವೀಯ ಸನ್ನಿವೇಶಗಳು ಸಮಾಜದಲ್ಲಿನ ವಾಸ್ತವಿಕ ಅಂಶಗಳಾಗಿವೆ. ಕೆರೆಗೆಹಾರವಾಗುವ ಹೆಂಡತಿ ಕೆಂಚಮ್ಮಳ ತೀರ್ಮಾನವನ್ನು ಕೇಳಿ ಬೆಚ್ಚಿಬಿದ್ದ ಗಂಡನನ್ನು ಕುರಿತು ಹೇಳಿದ ನುಡಿಗಳು ಹೆಣ್ಣಿನ ತ್ಯಾಗದ ಮನೋಭಾವವನ್ನು ಸೂಚಿಸುತ್ತವೆ. ಆದರೂ ಈ ಸನ್ನಿವೇಶವು ಅಮಾನವೀಯ ಸಾಂಪ್ರದಾಯಿಕ ವ್ಯವಸ್ಥೆಯನ್ನು ಅಣಕಿಸುವಂತೆ ವ್ಯಕ್ತಗೊಂಡಿದೆ.

ಜಲಧಿಬೊಪ್ಪರಾಯನ ಬಗ್ಗೆ ಇರುವ ಮೌಖಿಕ ಕಥೆಯಲ್ಲಿ ಮಾತ್ರ ಪ್ರಧಾನವಾದ ಸಂಕಥನವನ್ನು ಗುರುತಿಸಬಹುದಾಗಿದೆ. ಉಂಡೇತ್ರಾಯನ ಏಳು ಮಂದಿ ಹೆಣ್ಣು ಮಕ್ಕಳು ದ್ವಾರಕಾ ಪಟ್ಟಣದಲ್ಲಿ ತುಪ್ಪವನ್ನು ಮಾರುವ ಕಾಯಕದಲ್ಲಿ ತೊಡಗಿದ್ದರು. ಪುರುಷರು ಮುಸಲ್ಮಾನ ಸುಲ್ತಾನನೊಂದಿಗೆ ಪಗಡೆಯಾಟದಲ್ಲಿ ತಲ್ಲೀನರಾಗಿದ್ದಾಗಲೂ ಕೂಡ ಸ್ತ್ರೀಯರು ದುಡಿಯುವ ಮನಸ್ಥಿತಿಯನ್ನು ಉಳ್ಳವರಾಗಿದ್ದರು ಎಂಬುದನ್ನು ಈ ಕಥನದಿಂದ ತಿಳಿಯಬಹುದಾಗಿದೆ. ಅವರ ಸೌಂದರ್ಯಕ್ಕೆ ಮಾರು ಹೋಗಿ ವಿವಾಹವಾಗುವಂತೆ ದೆಹಲಿಯ ಸುಲ್ತಾನನು ಪೀಡಿಸಿದ್ದರಿಂದ ಇಂದಿನ ಕುಂಚಿಟಿಗರು ದಕ್ಷಿಣಕ್ಕೆ ವಲಸೆ ಬಂದರು ಎಂಬ ನಂಬಿಕೆಯಿದೆ. ಇದಕ್ಕೆ ಪೂರಕವಾಗಿ ಮೈಸೂರು ಸಂಸ್ಥಾನದ ಮೂಲಪುರುಷರಾದ ಗೋವಳಿ ಸಮುದಾಯದ ಯದುರಾಯ ಮತ್ತು ಕೃಷ್ಣರಾಯರು ಉತ್ತರದ ದ್ವಾರಕೆಯಿಂದ ಬಂದವರೆಂದು ಇತಿಹಾಸದ ಪುಟಗಳಿಂದ ತಿಳಿದು ಬರುತ್ತದೆ.

ಬೊಪ್ಪರಾಯನ ತಂಗಿಯಾದ ಮದ್ದಮ್ಮ ನದಿಗೆ ಅಡ್ಡಲಾಗಿ ಅಣೆಕಟ್ಟೆಯಂತೆ ಮಲಗುವ ಮೂಲಕ ಕುಂಚಿಟಿಗರ ೪೮ ಕುಲಗಳು ನದಿಯನ್ನು ದಾಟಿ ದಕ್ಷಿಣದೆಡೆಗೆ ಬರಲು ಅನುವು ಮಾಡಿಕೊಟ್ಟಿದ್ದಳು. ಇದು ಸ್ತ್ರೀ ಯಾಜಮಾನ್ಯದ ಪ್ರತೀಕವಾಗಿದೆ. ಈ ಸನ್ನಿವೇಶವು ಪುರುಷ

ಪ್ರಾಧಾನ್ಯತೆಯ ಸಮಾಜವು ಅಸ್ತಿತ್ವವನ್ನು ಸಾಧಿಸಲು ಈಗಾಗಲೇ ಪ್ರಭುತ್ವವನ್ನು ಸಾಧಿಸಿರುವ ಸ್ತ್ರೀ ಪ್ರಭುತ್ವದ ಸಹಾಯವನ್ನು ಯಾಚಿಸಿದಂತೆ ಕಂಡುಬರುತ್ತದೆ.

ಸ್ತ್ರೀಯನ್ನು ಬಲಿ ನೀಡುವುದು ಕಥೆಗಳಲ್ಲಿ ಬರುವಂತಹ ಸಾಮಾನ್ಯ ಸಂಗತಿಯಾಗಿದ್ದರೂ ಗಂಗೆಯು ದಾರಿಬಿಡುವ ಸಲುವಾಗಿ ಪುರುಷ ಪ್ರತೀಕವಾದ ಜಲಧಿಬೊಪ್ಪರಾಯನನ್ನು ಆಹುತಿ ಪಡೆಯುವುದು. ಗಂಗೆಯು ಗೋ ಪಾದದಷ್ಟು ದಾರಿಯನ್ನು ಬಿಟ್ಟುಕೊಟ್ಟಾಗ ಗೋವಳಿ ಬುಡಗಟ್ಟಿನ ಜನಸಮುದಾಯವೊಂದು ತಮ್ಮ ಸ್ವಾಭಿಮಾನ ಮತ್ತು ಕುಲದ ಶ್ರೇಷ್ಠತೆಯನ್ನು ಕಾಪಾಡಿಕೊಳ್ಳುವ ಸಲುವಾಗಿ ಮಾರ್ಗ ಮಧ್ಯದ ನದಿಗಳನ್ನು ದಾಟಿ ತುಂಗಭದ್ರಾ ನದಿ ತೀರದ ಆನೆಗೊಂದಿಗೆ ಬಂದು ನೆಲೆ ನಿಂತರು.

ಈ ನೆಲೆಯಲ್ಲಿಯೇ ವಿಜಯನಗರದ ಪರಿಸರದಲ್ಲಿ ಹೈನುಗಾರಿಕೆ, ಕೃಷಿ ಉತ್ಪನ್ನಗಳನ್ನು ವ್ಯಾಪಾರ ಮಾಡುತ್ತಿದ್ದು, ವಿಜಯನಗರ ಸಾಮ್ರಾಜ್ಯದ ಪತನಾನಂತರ ಉಂಟಾದ ಸ್ಥಿತ್ಯಂತರಗಳಲ್ಲಿ ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳಲು ಮಾಡಿದ ಹೋರಾಟಗಳು ಹಾಗೂ ಅನ್ಯ ಸಮುದಾಯದೊಂದಿಗೆ ಸಂಘರ್ಷಕ್ಕೆ ಇಳಿದ ಬಗೆಯನ್ನು ಕುರಿತು ಹಲವು ಮೌಖಿಕ ಕಾವ್ಯಗಳು ಸೃಷ್ಟಿಯಾಗಿರುವುದನ್ನು ಕಾಣಬಹುದು.

ಜುಂಜಪ್ಪನಕಾವ್ಯದಲ್ಲಿ ಗೌರಸಂದ್ರದ ಮಾರಮ್ಮ, ಜಾನಕಲ್ಲು ದೊಡ್ಡಕ್ಕ, ಚಿನ್ನಮ್ಮ, ತಾಳೇದುರ್ಗಿ, ಮತ್ತು ಕಂಬೇರ ಹೆಣ್ಣುಮಕ್ಕಳ ಸ್ತ್ರೀ ಪಾತ್ರಗಳು ಮೂಡಿಬಂದಿವೆ. ಗೌರಸಂದ್ರದ ಮಾರಮ್ಮಳು ಕಾವ್ಯದಲ್ಲಿ ಕಣಿ ಹೇಳುವ ಕೊರವಂಜಿಯಾಗಿ, ಜುಂಜಪ್ಪನ ಕುಲದೇವತೆಯಾಗಿ, ಸೂತ್ರಧಾರಳಾಗಿ ಪಾತ್ರವನ್ನು ನಿರ್ವಹಿಸುತ್ತಾಳೆ. ತಾನೂ ದೇವತೆಯಾಗಿದ್ದರೂ ಪುರುಷ ಪ್ರಧಾನ ಸಮಾಜದಲ್ಲಿ ಗಂಡಿನ ದರ್ಪ ಮತ್ತು ದೌರ್ಜನ್ಯವನ್ನು ಈ ಕೆಳಗಿನ ಸಾಲುಗಳಿಂದ ವ್ಯಕ್ತಪಡಿಸುತ್ತಾಳೆ.

ನನ್ನ ಗಂಡ ಕೊರುಮನಮ್ಮ
ನನ್ನ ಆರುಜನ ವಾರುಗಿತ್ತೀರು
ಮುಂದುಗಡೆ ಹೋದರು ತಾಯಿ
ಹಿಂದುಲಿಂದ ನಾನೋದರೆ
ಇಷ್ಟೋತ್ತಾದರೂ ಬರಲಿಲ್ಲ
ನೀನು ಏನು ಮಾಡುತ್ತಿದ್ದೆ ಅಂದು
ಆರುಜನ ವಾರುಗಿತ್ತೀರು ತಾವಮ್ಮ
ಕತ್ತೆ ಕಟ್ಟುವಂತ ಗೂಟಕು ಕಟ್ಟಿ
ನನ್ನ ಹೊಡೆಸಿ ಬಿಡುತ್ತಾರೆ ನಿನ್ನಿಗು
ಕಣಿ ಹೇಳಿಕಂಡು ಕೂತ್ಕಂಡರೆ॥ [೧೧]

ಗೌರಸಂದ್ರದ ಮಾರಕ್ಕಳ ಈ ನುಡಿಗಳಿಂದ ತಾನೊಬ್ಬ ಆದಿಶಕ್ತಿಯಾಗಿದ್ದರೂ ತನಗೂ ಕಷ್ಟವು ತಪ್ಪಲಿಲ್ಲ ಎಂದು ತಿಳಿದುಬರುತ್ತದೆ. ಪುರುಷರಿಗೆ ಈ ವಿಷಯಗಳನ್ನು ಹೇಳಲಾಗದ ಅಸಹಾಯಕತೆ ಮತ್ತು ಪರುಷ ಅಧಿಪತ್ಯದಲ್ಲಿ ಮಹಿಳೆಯ ಮೇಲೆ ವಿಧಿಸುವ ಕಟ್ಟುಪಾಡುಗಳ ನೆಲೆಯುಲ್ಲಿ ಆಕೆಯ ಜಾಗೃತ ಪ್ರಜ್ಞೆಯನ್ನು ಇಲ್ಲಿ ಗಮನಿಸಲಾಗಿದೆ. ಜುಂಜಪ್ಪನ ಹುಟ್ಟಿನ ಭವಿಷ್ಯವನ್ನು ನುಡಿಯುವ ಈಕೆಯು ಆತನನ್ನು ಪೂಜಿಸುವಂತೆ ಹೇಳುವ ಮೂಲಕ

ಸಮುದಾಯದ ದೈವವನ್ನಾಗಿಸುವಲ್ಲಿ ಈಕೆಯ ಪಾತ್ರವು ಹಿರಿದು. ಕಳುವರಹಳ್ಳಿಯ ಗೌಡ ಮತ್ತು ಪೂಜಾರಿಗೆ ಕಣಿ ಹೇಳುವ ಸಂದರ್ಭದಲ್ಲಿ ಈಕೆಗೆ ಹೊನ್ನು ಕಾಣಿಕೆ ನೀಡಲು ಮುಂದಾಗುತ್ತಾರೆ. ಆಗ ಈಕೆಯು ಈ ಕೆಳಕಂಡಂತೆ ಹೇಳುತ್ತಾಳೆ

ಏ ದಗಡಿ ಮಕ್ಕಳ್ರ
ನಿಮ್ಮ ಹೊನ್ನು
ನನ್ನ ಅರಮನೆ ಓಳುಗೆ
ತಗ್ಗುಲುಳ್ಳಿ ಮುಗ್ಗುಲು ರಾಗಿಯಾಗಿ ಬಿದ್ದೈತೆ
ಬಂಗಾರದೊನ್ನು ನನಗೇನೋ ಬೇಕು॥
ಹೋಗ್ರಲಾ
ತಾಮ್ರುದವು ಮೂರು
ತೂತ್ ಬಟ್ಟಾ ತಂದು
ಕಣಿ ಕೇಳದಿಲಾಕಿಕ್ಕಿದರೆ
ಹೇಳ್‌ತೀನಿ ಕಣೀಯ॥ ೧೨

ಸಕಲ ಸ್ತ್ರೀ ಕುಲದ ಪ್ರತಿನಿಧಿಯಂತೆ ಗೋಚರಿಸುವ ಮಾರಕ್ಕ ಇಡೀ ವ್ಯವಸ್ಥೆಯ ಧ್ವನಿಯಾಗಿ ಕಂಡುಬರುತ್ತಾಳೆ. ಸ್ತ್ರೀ ಕಾಯಕಕ್ಕೆ ಬೆಲೆ ಕಟ್ಟುವುದನ್ನು ವಿರೋಧಿಸುವ ಮೂಲಕ ಪ್ರಭುತ್ವವನ್ನು ಧಿಕ್ಕರಿಸುವ ಆತ್ಮಾಭಿಮಾನಿಯಾಗಿ ಇಲ್ಲಿ ಸ್ತ್ರೀಯನ್ನು ಚಿತ್ರಿಸಲಾಗಿದೆ. ಮನುಕುಲದ ಆರ್ಥಿಕ ವ್ಯವಸ್ಥೆಯ ಮೊದಲ ಹಂತದಲ್ಲಿ ಸ್ತ್ರೀ ಪ್ರಮುಖ ಪಾತ್ರವನ್ನು ವಹಿಸಿರುವುದನ್ನು ಗುರುತಿಸಲಾಗಿದೆ. ತಳವರ್ಗದ ಆರ್ಥಿಕ ವ್ಯವಸ್ಥೆಗೆ ಅನುಗುಣವಾಗಿ ತನಗೆ ಬೇಕಾಗಿರುವುದು ಚಲಾವಣೆಯಲ್ಲಿರುವ ತೂತು ಬಟ್ಟುಗಳೇ (ನಾಣ್ಯಗಳು) ಹೊರೆತು ಬಚ್ಚಿಟ್ಟಿರುವ ಮುಗ್ಗುಲು ಬಿದ್ದಿರುವ ರಾಶಿ ರಾಶಿ ಹೊನ್ನಲ್ಲ ಎಂದು ಹೇಳುತ್ತಾಳೆ.

ಈ ಕಾವ್ಯದ ಇನ್ನೊಂದು ಸ್ತ್ರೀ ಪಾತ್ರ ತಾಳೇದುರ್ಗಿ. ಈಕೆಯು ಆರು ತಿಂಗಳು ಮಲಗಿದ್ದರೆ ಆರು ತಿಂಗಳು ಎದ್ದಿರುತ್ತಾಳೆ. ಶಕ್ತಿಶಾಲಿಯಾದ ಈಕೆಯನ್ನು ಕ್ಷುದ್ರದೇವತೆಯಂತೆ ಚಿತ್ರಿಸಿದ್ದು ಆಕೆಯ ಕೈಯಲ್ಲಿ ಸಾಯುವುದಕ್ಕಿಂತ ಬೇರೆಯವರ ಕೈಯಲ್ಲಿ ಸಾಯುವುದೇ ಲೇಸು ಎಂದು ಪ್ರಾರ್ಥಿಸಿಕೊಳ್ಳುವುದನ್ನು ಗಮನಿಸಿದಾಗ ಆಕೆಯ ವ್ಯಕ್ತಿತ್ವವನ್ನು ಅರಿಯಬಹುದಾಗಿದೆ. ಆಕೆಯ ಅನುಮತಿಯಿಲ್ಲದೇ ಆಕೆಯ ಹುಲ್ಲುಗಾವಲಿನಲ್ಲಿ ಮೇಯುತ್ತಿದ್ದ ಜುಂಜಪ್ಪನ ದನಗಳನ್ನು ಸೆರೆ ಹಿಡಿದಿದ್ದಳು.ಆಗ ಆಕೆಯನ್ನು ಸೋಲಿಸಲು ಜುಂಜಪ್ಪನು ಹೆಣಗಾಡುವನು.

ನಿನ್ನ ಮುನ್ನೂರು ಅರವತ್ತು ಕೋಟಿ ಲಿಂಗ
ಅವುರವುರ ಗುಡಿಯೊಳಗೆ
ಎತ್ತೆತ್ತ ಮಕನಾಗಿ ಕುಂತವುರೊ
ಅತ್ತು ಮಕನಾಗಿ ನನ್ನ ಪಾದಕೆ ಅಡ್ಡಬೀಳುತವುರೆ
ಯಾಕವರ ಪಾದಗಳ ನೆನುಸ್ತೀಯೋ ಕಾಡುಗೊಲ್ಲ
ನೆನ್ಸೋ ನನ್ನ ಪಾದ ಮೂರು ಗಳಿಗೆ
ಬಿಡ್ತೀನಿ ನಿನ್ನ ಪ್ರಾಣಾನ॥ ೧೩

ಜುಂಜಪ್ಪನು ಆಕೆಯನ್ನು ಸೋಲಿಸಲು ಅರವತ್ತು ಕೋಟಿ ಲಿಂಗಗಳು, ಮಾರಿ, ದುರ್ಗಿ, ಒಂಬತ್ತು ಜನ ರಂಗಪ್ಪರನ್ನು, ಭೂತಪ್ಪನನ್ನು ಸ್ಮರಿಸಿಕೊಂಡು ಯುದ್ಧಕ್ಕೆ ಸಜ್ಜಾಗುತ್ತಾನೆ. ಆದರೆ ತಾಳೇದುರ್ಗಿಯ ಶಕ್ತಿಗೆ ಅಂಜಿ ಜುಂಜಪ್ಪನು ಓಡಿ ಹೋಗಿ ಮರದ ಮೇಲೆ

ಕುಳಿತುಕೊಳ್ಳುತ್ತಾನೆ. ಈ ಪ್ರಸಂಗವನ್ನು ನೋಡಿದಾಗ ಪುರುಷ ಪ್ರಾಧಾನ್ಯ ವ್ಯವಸ್ಥೆಯು ತನ್ನ ಅಸ್ತಿತ್ವವನ್ನು ಸಾಧಿಸುವ ಪಾಥಮಿಕ ಹಂತದಲ್ಲಿ ಈಗಾಗಲೇ ಪ್ರಭುತ್ವವನ್ನು ಸಾಧಿಸಿದ್ದ ಸ್ತ್ರೀ ಪ್ರಧಾನ ವ್ಯವಸ್ಥೆಯಿಂದ ಅನುಭವಿಸಿದ ಸೋಲಾಗಿ ಕಂಡುಬರುತ್ತದೆ. ಪ್ರಬಲಳಾದ ತಾಳೇದುರ್ಗಿಯನ್ನು ನೇರವಾಗಿ ಕೊಲ್ಲುವ ಮೂಲಕ ಸ್ತ್ರೀ ಹತ್ಯೆಯಂತಹ ಪಾಪ ಕರ್ಮದ ಫಲವಾಗಿ ತನಗೆ ಮುಂದೆ ಏಳಿಗೆಯಾಗುವುದಿಲ್ಲ ಎಂದು ಭಾವಿಸಿ ಜುಂಜಪ್ಪನು ಪುರ್ಲೆಹಳ್ಳಿ ಭೂತಪ್ಪನಿಂದ ಆಕೆಯನ್ನು ಹತ್ಯೆಗೈಯ್ಯುವಂತೆ ಮಾಡುತ್ತಾನೆ.[೧೪] ಇಲ್ಲಿ ಜುಂಜಪ್ಪನ ಸ್ವಾರ್ಥಪರ ಬದುಕು ಮತ್ತು ಅಧಿಕಾರ ದಾಹವನ್ನು ಗುರುತಿಸಲಾಗಿದೆ. ಪುರುಷ ಪ್ರಾಧಾನ್ಯತೆಯ ಪ್ರತೀಕವಾಗಿ ಆಕೆಯ ಅವಶೇಷಗಳೂ ಇಲ್ಲದಂತೆ ಮಾಡಲಾಗುತ್ತದೆ.

ಆ ತಾಳೇದುರುಗಿ ಒಬ್ಬಳು ಈ ನರಲೋಕದಲ್ಲಿ ಇದ್ರೆ
ನಮ್ಮ ದೇವುತ್ರು ಬಾಲ ಏನೂ ನಡಿತಿರಲಿಲ್ಲ
ನಮ್ಮನ್ನೆಲ್ಲ ಮುಚ್ಚಾಕಿಬಿಟ್ಟು ಅವ್ಳು ಎದ್ದು ಕೂಕಂಬಳು
ಪೂಜೆಯೆಲ್ಲಾ ಅವ್ಳುಗಾಗುತ್ತಿತ್ತು ಹೊರತು ನಮಗಾಗುತ್ತಿರ್ನಿಲ್ಲ
ಅವುಳ್ನ ಮಹಾನುಬಾವ ಪುರ್ಲಳ್ಳಿ ಭೂತ ಹೊಡೆದ
ಅವ್ನಿಂದ ನಾವೆಲ್ಲ ಪೂಜೆ ತಕಂಬಕೆ ಅವುಕಾಶವಾಯ್ತು[೧೫]

ಸ್ತ್ರೀ ಪ್ರಧಾನ ಸಂಸ್ಕೃತಿಯು ಪುರುಷ ಪ್ರಧಾನ ಸಮಾಜವಾಗಿ ಸಾಗಿದ ಪರಿವರ್ತನೆಯ ಹಾದಿಯ ಅಂತಿಮ ಘಟ್ಟದಲ್ಲಿ ತಾಳೇದುರ್ಗಿಯು ಕಂಡುಬರುತ್ತಾಳೆ. ಹಾಗೂ ಪುರುಷ ಪ್ರಧಾನ ಸಮಾಜದ ಅನುಕೂಲವಾದಿ ತಂತ್ರಗಳಿಗೆ ಈಕೆಯನ್ನು ಬಲಿಯಾಗಿಸಲಾಗುತ್ತದೆ.

## ೬.೨ ಜನಾಂಗೀಯ ಸಂಘರ್ಷ

ಜಾತಿಯ ಸಂಕೋಲೆಗಳಿಂದ ತುಂಬಿದ ಭಾರತೀಯ ಸಾಮಾಜಿಕ ವ್ಯವಸ್ಥೆಯಲ್ಲಿ ಜಾತಿ, ಧರ್ಮಗಳು ಪ್ರಮುಖ ಪಾತ್ರವನ್ನು ವಹಿಸುತ್ತವೆ. ಇಲ್ಲಿ ಜಾತಿಪದ್ಧತಿಯು ಯಾವಾಗ ಅಸ್ತಿತ್ವಕ್ಕೆ ಬಂದಿತು ಎಂಬುದಾಗಿ ಖಚಿತವಾಗಿ ಗುರುತಿಸುವುದು ಕಷ್ಟಸಾಧ್ಯ. ಆರಂಭದಲ್ಲಿ ಕಸುಬು ಆಧಾರಿತ ಜಾತಿಗಳು ಅಸ್ತಿತ್ವಕ್ಕೆ ಬಂದವು. ಒಂದೊಂದು ಜಾತಿಯೂ ಒಂದೊಂದು ವೃತ್ತಿಯ ಹಿನ್ನೆಲೆಯಲ್ಲಿ ಅಸ್ತಿತ್ವವನ್ನು ಪಡೆದಿರುವುದನ್ನು ಗಮನಿಸಬಹುದು. ಭಾರತೀಯ ಸಮಾಜದಲ್ಲಿ ಶ್ರಮ ವಿಭಜನೆಯ ನೆಲೆಯಲ್ಲಿ ಜಾತಿಗಳು ರೂಪುಗೊಂಡಿವೆ. ತಾವು ಮಾಡುವ ವೃತ್ತಿಯನ್ನು ಅವಲಂಬಿಸಿದ್ದರಿಂದ ವೃತ್ತಿಗೆ ಅನುಗುಣವಾಗಿ ಜಾತಿಗಳ ಹೆಸರುಗಳು ಮೂಡಿಬಂದಿವೆ. ಉದಾಹರಣೆಗೆ : ಮಡಿಕೆ ಮಾಡುವವನು ಕುಂಬಾರ, ಬಟ್ಟೆ ನೇಯುವವನು ನೇಕಾರ, ಮರದ ಕೆಲಸ ಮಾಡುವವನು ಬಡಗಿ, ಚರ್ಮದ ಕೆಲಸ ಮಾಡುವವನು ಚಮ್ಮಾರ ಇತ್ಯಾದಿ. ಇಂದು ಜಾತಿಗಳೇ ಸಮಾಜದ ಅಡಿಗಲ್ಲುಗಳಂತಿವೆ. ಅಂದು ವೃತ್ತಿಗಳು ಜಾತಿಯನ್ನು ನಿರ್ಧರಿಸಿದ್ದರೆ ಇಂದು ಹುಟ್ಟು ಜಾತಿಯನ್ನು ನಿರ್ಧರಿಸುತ್ತದೆ. ಜಾತಿಯು ಸಮಾಜದ ಅನಿವಾರ್ಯ ಮತ್ತು ವಿಭಜಿಸಲು ಅಸಾಧ್ಯವಾದ ವ್ಯವಸ್ಥೆಯಾಗಿದೆ. ಜನಪದರ ಜೀವನ, ಸಂಪ್ರದಾಯ, ಆಚರಣೆಗಳು ಜಾತಿಯಿಂದ ನಿರ್ಧರಿತವಾಗಿವೆ. ಭಾರತೀಯ ಸಮಾಜದಲ್ಲಿ

ಜಾತಿಪದ್ಧತಿಯು ಸಾಂಸ್ಕೃತಿಕವಾಗಿ ಹಲವು ಅಂಶಗಳನ್ನು ನಿಯಂತ್ರಿಸುವ, ನಿರ್ಮಿಸುವ ಬಲಿಷ್ಠವಾದ ವ್ಯವಸ್ಥೆಯಾಗಿದೆ. ಆಯಾ ಜಾತಿಗಳಲ್ಲಿರುವ ಸಂಪ್ರದಾಯ, ಆಚರಣೆ, ನಂಬಿಕೆ, ಐತಿಹ್ಯ, ಪುರಾಣಗಳೂ ವಿಭಿನ್ನವಾಗಿವೆ.

ಜಾತಿಗಳ ನಡುವೆ ಇರುವ ಸಂಬಂಧಗಳ ಅಂತರದ ಆಧಾರದಲ್ಲಿ ಜಾತಿ ತಾರತಮ್ಯವನ್ನು ತಿಳಿಯಬಹುದು. ಜಾತಿ–ಜಾತಿಗಳ ನಡುವೆ ವಿಭಿನ್ನ ಸಂಪ್ರದಾಯ, ಆಚರಣೆಗಳು ಊಟ, ವೈವಾಹಿಕ ಸಂಬಂಧಗಳು, ನಿಷಿದ್ಧವಾಗಿರುವುದರಿಂದ ಸಮಾನತೆ ಸಾಧ್ಯವಾಗಿಲ್ಲ. ಇಂದಿನ ರಾಜಕೀಯವು ಜಾತಿ ಪದ್ಧತಿಯನ್ನು ಹೊಸ ಹೊಸ ನಡೆಗಳ ಮೂಲಕ ಗಟ್ಟಿಗೊಳಿಸುತ್ತಿದೆ. ಮೇಲ್ಜಾತಿ ಮತ್ತು ಮಧ್ಯಮ ಜಾತಿಗಳಿಗೆ ಜಾತಿಯೊಂದು ಹೆಮ್ಮೆಯ ಸಂಗತಿಯಾದರೆ, ಕೆಳಜಾತಿಗಳಿಗೆ ಜಾತಿಯೆಂಬುದು ಹಿಂಜರಿಕೆಯನ್ನುಂಟು ಮಾಡುವ ವ್ಯವಸ್ಥೆಯಾಗಿದೆ. ತುಮಕೂರು ಜಿಲ್ಲೆಯಲ್ಲಿನ ಒಟ್ಟಾರೆ ಜನಾಂಗವನ್ನು ಜಾತಿರಹಿತವಾಗಿ ಅವರ ಜೀವನಶೈಲಿಯನ್ನು ಆಧರಿಸಿ ಈ ಕೆಳಕಂಡಂತೆ ವರ್ಗೀಕರಿಸಿಕೊಳ್ಳಲಾಗಿದೆ.

೧. ಬುಡಕಟ್ಟು ಸ್ವರೂಪದಲ್ಲಿಯೇ ಬದುಕಿರುವ ಹಿಂದುಳಿದ ಜನಾಂಗ. ಈ ಜನಸಮುದಾಯಯವು ಶಿಷ್ಟವೆಂದು ಹೇಳಲಾದ ಧರ್ಮಗಳಿಗೆ ಒಗ್ಗಿಕೊಳ್ಳದೇ ತಮ್ಮದೇ ಆದ ಮೂಲ ನಂಬಿಕೆಗಳಿಗೆ ಅನುಸಾರವಾಗಿ ಬದುಕುತ್ತಿದೆ. ಇವರು ಪ್ರಕೃತಿಯನ್ನು ಹಾಗೂ ತಲವರ್ಗದ ದೇವತೆಗಳನ್ನು ಆರಾಧಿಸುತ್ತಾರೆ. ಈ ಜನಾಂಗವು ಬಹುತೇಕ ರಾಜಕೀಯ, ಆರ್ಥಿಕ, ಶೈಕ್ಷಣಿಕ ಕ್ಷೇತ್ರಗಳಲ್ಲಿ ಮುಂಚೂಣಿಯಲ್ಲಿ ಕಂಡು ಬರುವುದಿಲ್ಲ.

೨. ಆಧುನಿಕತೆಗೆ ಹೊಂದಿಕೊಳ್ಳುತ್ತಿರುವ ಜನಾಂಗ. ಸ್ಥಿರ ಜೀವನವನ್ನು ನಡೆಸುತ್ತಿರುವ ಇವರು ಮಧ್ಯಮ ವರ್ಗವಾಗಿದ್ದು, ಬಹುತೇಕ ರಾಜಕೀಯ, ಸಾಮಾಜಿಕ, ಆರ್ಥಿಕ, ಶೈಕ್ಷಣಿಕವಾಗಿ ತಕ್ಕಮಟ್ಟಿಗೆ ಸುಧಾರಣೆಗೆ ಒಳಗಾಗಿದ್ದಾರೆ. ಸಮಾಜದಲ್ಲಿ ಇವರ ಸಂಖ್ಯೆಯೇ ಅಧಿಕವಾಗಿದ್ದು ಉನ್ನತ ಮಟ್ಟದ ಜೀವನ ಪದ್ದತಿಯನ್ನು, ಪೂಜಾ ವಿಧಿ ವಿಧಾನಗಳನ್ನು ಅಳವಡಿಸಿಕೊಳ್ಳಲು ಪ್ರಯತ್ನಿಸುತ್ತಿರುವ ವರ್ಗ ಇದಾಗಿದೆ.

೩. ಮುಂದುವರೆದಿರುವ ಜನಾಂಗ. ಇದು ರಾಜಕೀಯ, ಆರ್ಥಿಕ, ಶೈಕ್ಷಣಿಕವಾಗಿ ಉನ್ನತ ಅಂತಸ್ತನ್ನು ಹಾಗೂ ಹಲವು ಭೌತಿಕ ಸವಲತ್ತುಗಳನ್ನು ಹೊಂದಿರುವ ಸಮುದಾಯವಾಗಿದೆ.

ಕಾಡುಗೊಲ್ಲರ ಮೌಖಿಕ ಕಾವ್ಯವಾದ ಜುಂಜಪ್ಪನ ಕಾವ್ಯದಲ್ಲಿ ಮಣೆಗಾರರು, ಮ್ಯಾಸಬೇಡರು, ಕುಂಚಿಟಿಗರು, ಹಾಲುಕುರುಬರು ಮತ್ತು ಕಾಡುಗೊಲ್ಲರ ವ್ಯವಹಾರಿಕ ಸಂಬಂಧಗಳ ಪ್ರಸ್ತಾಪವಿದೆ. ಕಾಡುಗೊಲ್ಲರು ತಮ್ಮ ಪಶುಪಾಲನಾ ವೃತ್ತಿ ನೆಲೆಯಲ್ಲಿ ಈ ವರ್ಗಗಳೊಂದಿಗೆ ವ್ಯವಹಾರಿಕ ಸಂಬಂಧವನ್ನು ಸಾಧಿಸಿ ತಮ್ಮ ಪಶುಪಾಲಕ ವೃತ್ತಿಯನ್ನು ಆರ್ಥಿಕ ಲಾಭದಾಯಕವನ್ನಾಗಿ ಮಾಡಿಕೊಂಡಿದ್ದರು. ಅಂತೆಯೇ ಬಂದ್ಕುಂಟೆ ಈರುಚಿಕ್ಕಣ್ಣನ ಕಾವ್ಯ, ವೀರಸೀಗಣ್ಣನಕಾವ್ಯ, ಶೂಲದ ಈರಣ್ಣನಕಾವ್ಯ, ಬಳ್ಳಕಟ್ಟೆಈರಣ್ಣನ ಕಾವ್ಯಗಳಲ್ಲಿ ಬೇಡರು, ಗೊಲ್ಲರ ಪ್ರಸ್ತಾಪಗಳು ಬಂದರೆ, ಈರುಗ್ಯಾತರಾಯನ ಕಾವ್ಯದಲ್ಲಿ ಕುಂಚಿಟಿಗರು ಮತ್ತು ಬೇಡರ

ಹಾಗೂ ಗೊಲ್ಲರ ಮದ್ದೆಮ್ಮ ಮತ್ತು ಈರುಗ್ಯಾತರಾಯನ ಪ್ರೇಮ ಸಲ್ಲಾಪಗಳು, ಸ್ವಾರಮ್ಮನ ಪದಗಳಲ್ಲಿ ಗೊಲ್ಲರ ಚಿತ್ತಮ್ಮ ಮತ್ತು ಶಂಕರಲಿಂಗನ ಪ್ರೇಮ ಸಲ್ಲಾಪಗಳ ಉಲ್ಲೇಖಗಳಿವೆ. ಮರೂರು ನಾಗಪ್ಪನ ಕಾವ್ಯದಲ್ಲಿ ಕುಂಚಿಟಿಗರ ಒಳಪಂಗಡಗಳಲ್ಲಿ ದ್ವೇಷ, ವಿರಸಗಳು ಅಭಿವ್ಯಕ್ತಗೊಂಡಿವೆ.

ತುಮಕೂರು ಜಿಲ್ಲೆಯಲ್ಲಿ ಅಸ್ತಿತ್ವದಲ್ಲಿರುವ ಜನಾಂಗಗಳನ್ನು ಅಧ್ಯಯನ ಮಾಡುವ ಅಗತ್ಯವಿರುವುದರಿಂದ ಸಾಂದರ್ಭಿಕವಾಗಿ ಅವುಗಳ ಸಂಕ್ಷಿಪ್ತ ಪರಿಚಯವನ್ನು ಮಾಡಿಕೊಳ್ಳುವ ಪ್ರಯತ್ನವನ್ನು ಮಾಡಲಾಗಿದೆ.[೧೬] ಇಲ್ಲಿ ಸನಾತನ, ಜೈನ, ಇಸ್ಲಾಂ, ಬೌದ್ಧ, ಕ್ರೈಸ್ತ ಇತ್ಯಾದಿ **ಧರ್ಮ**ಗಳಿಗೆ ಸೇರಿದ ಜನರು ವಾಸವಾಗಿದ್ದಾರೆ.ಇಲ್ಲಿ ನೆಲೆಸಿರುವ **ಬುಡಕಟ್ಟು** ಜನಾಂಗಗಳಾದ ಗೊಲ್ಲರು, ಲಂಬಾಣಿ, **ಅಲೆಮಾರಿ** ಸಮುದಾಯಗಳಾದ ದಕ್ಕಲಿಗರು, ದೊಂಬಿದಾಸರು, ಹಂದಿಜೋಗಿ, ಬುಡಬುಡಕೆ, ಶಿಳ್ಳೇಕ್ಯಾತ, ಹಕ್ಕಿಪಿಕ್ಕಿ, ಹೆಳವರು, ಮೊಂಡರು, ದೊಂಬರು ಪ್ರಮುಖರಾಗಿದ್ದಾರೆ. ಸಮಾಜದ ಶ್ರೇಣೀಕೃತ ವ್ಯವಸ್ಥೆಯಲ್ಲಿರುವ ಹಲವು **ಜಾತಿ**ಗಳಾದ ಅಗಸರು, ಅಗ್ನಿವಂಶ ಕ್ಷತ್ರಿಯರು, ಆದಿದ್ರಾವಿಡ, ಆದಿಕರ್ನಾಟಕ, ಈಡಿಗರು, ಉಪ್ಪಾರರು, ಒಕ್ಕಲಿಗರು, ಕುರುಹಿನಶಟ್ಟಿ, ದೇವಾಂಗ, ಪದ್ಮಸಾಲಿ, ಕುಂಬಾರರು, ಕುರುಬರು, ಕೊರಮರು, ಕೊರಚರು, ಗಾಣಿಗರು, ತಿಗಳರು, ದರ್ಜಿ, ದೇವಾಂಗ, ನಾಯಕರು, ನಾಯಿಚಿದ, (ಭಜಂತ್ರಿ), ಬ್ರಾಹ್ಮಣರು, ಬಣಜಿಗರು, ಬೆಸ್ತರು, ಬೇಡರು, ಬೋವಿಜನಾಂಗ, ಮೊದಲಿಯಾರ್, ಮೇಧರು, ಲಿಂಗಾಯಿತರು, ವಡ್ಡರು, ವಿಶ್ವಕರ್ಮ, ವೀರಶೈವರು, ವೈಶ್ಯರು, ಸಾದರು, ಮುಂತಾದವರು ಪ್ರಮುಖರಾಗಿದ್ದಾರೆ.

**ಬುಡಕಟ್ಟು ಜಾತಿಗಳು**

ಬುಡಕಟ್ಟು ಜನಾಂಗಗಳಲ್ಲಿನ ಗೊಲ್ಲರು, ಲಂಬಾಣಿ ಸಮುದಾಯದವರು ಅನೇಕ ವರ್ಷಗಳ ಹಿಂದೆಯೇ ನೆಲೆ ನಿಂತು ನಾಡಿನ ಜನರಿಗೆ ಚಿರಪರಿಚಿತರಾಗಿದ್ದಾರೆ.

**ಕಾಡುಗೊಲ್ಲರು** : ಬುಡಕಟ್ಟು ವರ್ಗಕ್ಕೆ ಸೇರುವ ಕಾಡುಗೊಲ್ಲರು ಕರ್ನಾಟಕದ ತುಮಕೂರು, ಚಿತ್ರದುರ್ಗ, ಬಳ್ಳಾರಿ ಜಿಲ್ಲೆಗಳಲ್ಲಿ ಮತ್ತು ಬೆಂಗಳೂರು ಜಿಲ್ಲೆಯ ಮಾಗಡಿ, ಕನಕಪುರ, ದೊಡ್ಡಬಳ್ಳಾಪುರ ತಾಲ್ಲೂಕುಗಳಲ್ಲಿ ಕಂಡು ಬರುತ್ತಾರೆ. ಆದರೆ ಚಿತ್ರದುರ್ಗ ಮತ್ತು ತುಮಕೂರು ಜಿಲ್ಲೆಗಳಲ್ಲಿ ಕಾಡುಗೊಲ್ಲರು ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ.[೧೭] ಇವರಲ್ಲಿ ಕರಡಿ ಗೊಲ್ಲರು, ಮಾರನೋರ ಗೊಲ್ಲರು, ಕಂಬೇರ ಗೊಲ್ಲರು ಮುಂತಾದ ಬೆಡಗುಗಳಿವೆ. ಊರ ಹೊರಗೆ ಹಟ್ಟಿಗಳನ್ನು ಕಟ್ಟಿಕೊಂಡು ವಾಸ ಮಾಡುವ ಇವರ ಆವಾಸ ಸ್ಥಳಗಳನ್ನು ಗೊಲ್ಲರ ಹಟ್ಟಿಗಳೆಂದು ಕರೆಯಲಾಗುತ್ತದೆ. ಹತ್ತಿರದ ಊರಿನ ಹೆಸರಿನೊಂದಿಗೆ ಇವರ ಹಟ್ಟಿಗಳನ್ನು ಗುರುತಿಸಲಾಗುತ್ತದೆ. ಸಾಮಾನ್ಯವಾಗಿ ಊರಿನಿಂದ ಸ್ವಲ್ಪ ದೂರದಲ್ಲಿ ಇವರು ಸೋಗೆಗರಿ, ಬಾದೆಹುಲ್ಲು, ಹಂಚೀ ಹುಲ್ಲನ್ನು ಬಳಸಿ ಗುಡಿಸಲು ನಿರ್ಮಿಸುವರು. ಹಾಗೆ ನಿರ್ಮಿಸಿದ

ಗುಡಿಸಿಲಿನಲ್ಲಿ ವಾಸಿಸುವ ಇವರು ಗುಡಿಸಲಿನ ಸುತ್ತ ಕಾಡು ಪ್ರಾಣಿಗಳಿಂದ ರಕ್ಷಿಸಿಕೊಳ್ಳಲು ಕಾರೇಮುಳ್ಳು, ಜಾಲಿಮುಳ್ಳು ಮುಂತಾದ ಮುಳ್ಳುಗಳಿಂದ ಕಳಲೆಯನ್ನು ನಿರ್ಮಿಸಿಕೊಳ್ಳುವರು. ಇವರು ಸಾಂಸ್ಕೃತಿಕ ವೀರರಾದ ಎತ್ತಪ್ಪ, ಜುಂಜಪ್ಪ, ಕಾಟಮ ದೇವರು, ಚಿತ್ರದೇವರು, ಪಾತೇದೇವರು, ಕೇತೇದೇವರುಗಳನ್ನು ಇವರು ಆರಾಧಿಸುವರು. ಸೋಗೆಗರಿ, ಬಾದೆಹುಲ್ಲು, ಹಂಚೀಹುಲ್ಲು, ಬಾಳೆನಾರನ್ನು ಬಳಸಿ ದೇವಾಲಯಗಳನ್ನು ನಿರ್ಮಿಸುತ್ತಿದ್ದ ಇವರು ಇತ್ತೀಚೆಗೆ ಕಲ್ಲು ಇಟ್ಟಿಗೆ ಬಳಸಿ ಕಟ್ಟಡದ ದೇವಾಲಯವನ್ನು ನಿರ್ಮಿಸುತ್ತಾರೆ. ಕಾಡುಗೊಲ್ಲರ ಮೂಲ ವೃತ್ತಿ ಪಶುಪಾಲನೆಯಾಗಿದ್ದು, ಇವರ ಸಾಂಸ್ಕೃತಿಕ ವೀರರಾದ ಎತ್ತಪ್ಪ ಮತ್ತು ಜುಂಜಪ್ಪ ಏಳುಗೂಡಿನ ಪಶುಗಳನ್ನು ಸಾಕಿದ್ದು, ಇವರು ಪಶುಪಾಲನೆಯಲ್ಲಿ ವಿಶೇಷವಾಗಿ ಖ್ಯಾತಿವೆತ್ತವರು. ಜುಂಜಪ್ಪನು ತನ್ನ ಕಂಬೇರ ಸೋದರ ಮಾವಂದಿರು ಮಾಡಿಸಿದ ಮಾಟ ಮಂತ್ರಗಳನ್ನು ಮೆಟ್ಟಿ ಅವರನ್ನೇ ನಿರ್ನಾಮ ಮಾಡಿದ್ದನು. ಪಶುಗಳಂತೆ ಕುರಿಗಳ ಪ್ರಮಾಣಕ್ಕೆ ಅನುಸಾರವಾಗಿ ಶ್ರೀಮಂತಿಕೆಯನ್ನು ನಿರ್ಧರಿಸಲಾಗುತ್ತಿತ್ತು. ಸಾಮಾಜಿಕವಾಗಿ, ಸಾಂಪ್ರದಾಯಿಕವಾಗಿ ಇಂದಿಗೂ ಗೊಲ್ಲರ ಬದುಕಿನಲ್ಲಿ ಕಟ್ಟು ನಿಟ್ಟಿನ ವಿಧಿವಿಧಾನಗಳ ಆಚರಣೆಗಳಿವೆ. ಇವರು ಹುಟ್ಟು, ಮುಟ್ಟು, ಸಾವನ್ನು ಮೈಲಿಗೆ ಎಂದು ಭಾವಿಸುವರು.

ಪಶುಪಾಲನಾ ವೃತ್ತಿ ಬದುಕಿನ ಕಾರಣ ಕಾಡುಗೊಲ್ಲರು ಊರುಗಳಲ್ಲಿ ವಾಸಮಾಡದೇ ತಮ್ಮ ಪಶುಗಳೊಡನೆ ಕಾಡುಗಳಲ್ಲಿ ಅಥವಾ ಊರಿನ ಹೊರಭಾಗದಲ್ಲಿ ವಾಸಮಾಡುತ್ತಾರೆ. ಇದರಿಂದಾಗಿ ಇವರನ್ನು ಕಾಡುಗೊಲ್ಲ ಅಥವಾ ಹಟ್ಟಿಗೊಲ್ಲ ಎಂದು ಕರೆಯುತ್ತಾರೆ. ಇವರು ರೈತರಿಗೆ ಬೇಕಾದ ಎತ್ತುಗಳು, ಗೊಬ್ಬರ, ಹಾಲು, ತುಪ್ಪ ಮೊದಲಾದ ವಸ್ತುಗಳನ್ನು ಮಾರಾಟ ಮಾಡುವ ಮೂಲಕ ವರಮಾನ ಗಳಿಸುತ್ತಿದ್ದರು. ಪಶುಪಾಲಕರು ಊರ ಹೊರಗಿದ್ದರೂ ಊರೊಳಗಿನ ಕೃಷಿಕರೊಂದಿಗೆ ತಮ್ಮ ಕೊಡುಕೊಳ್ಳುವಿಕೆ ಸಂಬಂಧವನ್ನು ಹೊಂದಿದ್ದರು. ಕಾಡುಗೊಲ್ಲರು ಬೇಡರು, ಕುರುಬರು, ಕುಂಚಿಟಿಗರೊಂದಿಗೆ ಸಂಬಂಧವನ್ನು ಹೊಂದಿದ್ದಾರೆ. ಇವರು ಕಾಡಿನಲ್ಲಿ ಬೇಡರ ಶಿಕಾರಿಗೆ ಸಹಾಯಕರಾಗುತ್ತಿದ್ದರು. ಹಾಗೆಯೇ ಕುರುಬರಿಗೆ ಕಂಬಳಿ ನೇಯ್ಗೆಗೆ ನೆರವಾಗುತ್ತಿದ್ದರು. ತಾವು ಸಾಕುತ್ತಿದ್ದ ಉತ್ತಮ ಜಾತಿಯ ಹಸು, ಹೋರಿ ಮತ್ತು ಎತ್ತುಗಳನ್ನು ವ್ಯವಸಾಯಕ್ಕೆ ಪೂರಕವಾಗಿ ಕೃಷಿಕರಿಗೆ ಒದಗಿಸುತ್ತಿದ್ದರು. ಇಂತಹವುಗಳ ಅನಿವಾರ್ಯತೆಯಿಂದ ಇತರೇ ವೃತ್ತಿಯ ಸಮುದಾಯಗಳೊಂದಿಗೆ ವ್ಯಾವಹಾರಿಕ ಸಂಪರ್ಕವನ್ನು ಹೊಂದಿದ್ದರು.

**ಲಂಬಾಣಿಗರು** : ಬುಡಕಟ್ಟು ವರ್ಗದಲ್ಲಿ ಪ್ರಮುಖರಾಗಿರುವ ಲಂಬಾಣಿ ಜನಾಂಗದವರು ತುಮಕೂರು ಜಿಲ್ಲೆಯ ಅಲ್ಲಲ್ಲಿ ನೆಲೆಸಿದ್ದಾರೆ. ಮೊದಲು ಅಲೆಮಾರಿಗಳಾಗಿದ್ದ ಇವರು ಊರಾಚೆಯ ದೂರದ ಪ್ರದೇಶದಲ್ಲಿ ನೆಲೆಗೊಂಡಿರುತ್ತಿದ್ದರು. ಇವರನ್ನು ಗೋರಮಾಟ, ಗೋರವಟ, ಗೋರ, ಗೋರಬಂಜಾರ ಎಂದೂ ಕರೆಯಲಾಗುತ್ತದೆ.[೧೮] ಇವರು ವಾಸಿಸುವ ಸ್ಥಳಗಳನ್ನು 'ತಾಂಡ'ಗಳೆಂದು ಕರೆಯುವರು. ಹತ್ತಿರದ ಊರಿನ ಹೆಸರಿನೊಂದಿಗೆ ಇವರ

ತಾಂಡಗಳನ್ನು ಗುರುತಿಸಲಾಗುತ್ತದೆ. ಲಂಬಾಣಿಗರು ಮುಖ್ಯವಾಗಿ ದೀಪಾವಳಿ, ಹೋಳಿಹಬ್ಬ, ಗೌರಿಹಬ್ಬ, ದಸರಾ ಇತರೆ ಹಬ್ಬಗಳನ್ನು ವಿಭಿನ್ನ ರೀತಿಯಲ್ಲಿ ಆಚರಿಸುತ್ತಾರೆ. ಹೋಳಿ ಹಬ್ಬವನ್ನು ಕಾಮನ ಸಂಕೇತವಾಗಿ ಆಚರಿಸುವರು. ಗೌರಿಹಬ್ಬವನ್ನು ಶ್ರೀಕೃಷ್ಣನ ಆರಾಧನೆಯ ಹಿನ್ನೆಲೆಯಲ್ಲಿ ಆಚರಿಸಿದರೆ, ದಸರಾ ಹಬ್ಬವನ್ನು ದುರ್ಗಾದೇವಿಗೆ ಪೂಜೆಸಲ್ಲಿಸುವ ಮೂಲಕ ಆಚರಿಸುತ್ತಾರೆ. ಇವರು ಶಕ್ತಿದೇವತೆಗಳ ಉಪಾಸಕರಾಗಿದ್ದು ಮರಿಯಮ್ಮ, ಕರಿಯಮ್ಮ, ದುರ್ಗಮ್ಮ, ಚಾಮುಂಡಿ, ಸೇವಾಭಾಯಿ, ತಿರುಪತಿ ತಿಮ್ಮಪ್ಪ ಮುಂತಾದ ದೇವರನ್ನು ಆರಾಧಿಸುತ್ತಾರೆ. ಈ ದೇವತೆಗಳ ಜೊತೆಗೆ ಶಿವ, ವಿಷ್ಣು, ಕೃಷ್ಣ ಮುಂತಾದ ಹಿಂದೂ ದೇವತೆಗಳನ್ನು ಪೂಜಿಸುತ್ತಾರೆ. ತುಳಜಾ ಭವಾನಿ, ಶೀತಲಾ ಭವಾನಿ, ಸಾತ್ ಭವಾನಿ, ಹೂನಾಸತ್ತಿ, ಕೇಶಿರಾಣಿ, ಸಪ್ತ ಮಾತೃಕೆಯರು ಹಾಗೂ ಸೀತಾಸತ್ತಿಯರೆಂಬ ಸಾತ್ವಿ ಸತಿಯರನ್ನು ಆರಾಧಿಸುತ್ತಾರೆ. ಇವರು ಸತಿ ಸಹಗಮನ ಮಾಡಿದ ಏಳು ಮಂದಿ ಮುತ್ತೈದೆಯರು ಎಂಬ ನಂಬಿಕೆಯಿದೆ.[೧೯]

ಚಿಕ್ಕನಾಯಕನಹಳ್ಳಿ ತಾಲೂಕಿನ ದೊಡ್ಡೆಣ್ಣೆಗೆರೆ ಬಳಿಯ ಭೀಮಾಸತಿ ಮತ್ತು ತೀಥಾರಾಜನ ದೇವಾಲಯವು ರಾಜ್ಯದಲ್ಲೇ ಹೆಸರಾಂತ ದೇವಾಲಯವಾಗಿದ್ದು ಲಂಬಾಣಿಗರ ಪವಿತ್ರ ಕ್ಷೇತ್ರವಾಗಿದೆ. ಪ್ರತಿ ವರ್ಷವೂ ಜಾತ್ರೆ ಉತ್ಸವಗಳು ಜರುಗುತ್ತವೆ. ದೂರದ ಊರುಗಳಿಂದ ಬಂದ ಜನರು ದೇವರ ಆರಾಧನೆ ಮಾಡಿ ಮಾಂಸದ ಅಡುಗೆ ಮಾಡಿ ಬಂಧು ಬಾಂಧವರೆಲ್ಲ ಬಯಲಿನಲ್ಲಿ ಸಹಭೋಜನ ಮಾಡುವರು. ಸಾಲಕಟ್ಟೆ ತಾಂಡ್ಯದಲ್ಲಿ ಸೇವಾಲಾಲ್ ಕರಿಯಮ್ಮ ದೇವಾಲಯವಿದ್ದು ಪ್ರತಿ ವರ್ಷ ಹಬ್ಬದ ವೇಳೆ ಉತ್ಸವ ಮಾಡುವರು. ಇಲ್ಲಿ ಭಜನಾ ತಂಡವಿದ್ದು, ದೇವರನ್ನು ಕುರಿತಂತೆ ಭಜನೆ ಮಾಡುವರು. ನಾಮಕರಣ, ಋತುಮತಿ, ವಿವಾಹ ಮುಂತಾದ ಆಚರಣೆಗಳು ವಿಶಿಷ್ಟತೆಯಿಂದ ಕೂಡಿವೆ. ಲಂಬಾಣಿಗರು ಕಟ್ಟು ನಿಟ್ಟಾದ ನ್ಯಾಯ ವ್ಯವಸ್ಥೆಯನ್ನು ಹೊಂದಿರುವರು. ಅದಕ್ಕೆ ಅವರು 'ಗೋರಪಂಚಾಯತ್' ಎಂದು ಕರೆಯುವರು.

**ಅಲೆಮಾರಿ ಸಮುದಾಯಗಳು**

**ದಕ್ಕಲಿಗರು** : ದಕ್ಕಲಿಗರ ವೃತ್ತಿಯು ಭಿಕ್ಷೆ ಬೇಡುವುದು. ಇವರು ಮೂಲತಃ ಉತ್ತರ ಕರ್ನಾಟಕದವರಾಗಿದ್ದು ದಕ್ಷಿಣದೆಡೆಗೆ ವಲಸೆ ಬಂದವರೆಂದು ಹೇಳಲಾಗುತ್ತದೆ. 'ಮಾದಿಗರ ಆಳ ಮಕ್ಕಳು' ಆಳ–ಎಂದರೆ ಸಾಮೀಪ್ಯ ಯೋಗ್ಯವಾಗಿರುವಿಕೆ, ಎಂಬ ಅರ್ಥಗಳಿವೆ. ಊರಿನ ಎಲ್ಲ ಮನೆಗಳಿಗೂ ಹೋಗಿ ಭಿಕ್ಷೆ ಬೇಡುತ್ತಿರಲಿಲ್ಲ. ಮಾದಿಗರ ಕೇರಿಯಲ್ಲಿ ನಿಂತು 'ಗೌಡರೆ ನಾವು ಆಳ ಮಕ್ಕಳು ಬಂದೀವಿ' ಎಂದು ಕೂಗುವ ಮೂಲಕ ನೀರು, ಊಟವನ್ನು ಪಡೆಯುತ್ತಿದ್ದರು. ಸುಗ್ಗಿಯ ಕಾಲದಲ್ಲಿ ದವಸ ಧಾನ್ಯಗಳನ್ನು ಅವರಿಂದ ಭಿಕ್ಷೆಯ ರೂಪದಲ್ಲಿ ಪಡೆಯುತ್ತಿದ್ದರು.[೨೦]

**ಸುಡುಗಾಡು ಸಿದ್ಧರು :** ಒಂದು ಊರಿನಿಂದ ಮತ್ತೊಂದು ಊರಿಗೆ ಸಾಗುತ್ತ ಅಲೆಮಾರಿಗಳಾಗಿ ಬದುಕುತ್ತಿದ್ದ ಸುಡುಗಾಡು ಸಿದ್ಧರು ಕೆಲವು ದಶಕಗಳಿಂದ ಅಲ್ಲಲ್ಲಿ ನೆಲೆ ನಿಂತು ಸ್ಥಿರ ಜೀವನವನ್ನು ನಡೆಸುತ್ತಿದ್ದಾರೆ. ಇವರ ತಾಯ್ನುಡಿಯು ತೆಲುಗು ಭಾಷೆಯಾಗಿದ್ದು, ವ್ಯವಹಾರಕ್ಕೆ ಕನ್ನಡವನ್ನು ಬಳಸುವರು. ಊರಿಂದ ಊರಿಗೆ ಸಾಗುವಾಗ ತಾತ್ಕಾಲಿಕವಾಗಿ ನೆಲೆನಿಂತು ಊರಲ್ಲಿನ ಪಾಳು ದೇಗುಲ, ಚಾವಡಿ, ಮರಗಳ ಕೆಳಗೆ, ವಾಸ ಮಾಡುತ್ತಿದ್ದರು. ಸರುಕು ಸಾಗಿಸಲು ಕುದುರೆಗಳನ್ನು ಸಾಕುತ್ತಿದ್ದರು. ಜೊತೆಗೆ ಹಸುಗಳನ್ನು, ಬೇಟೆಗಾಗಿ ಮತ್ತು ರಕ್ಷಣೆಗಾಗಿ ನಾಯಿಯನ್ನು ಸಾಕುತ್ತಿದ್ದರು. ಹಂದಿ, ಕತ್ತೆಗಳನ್ನು ಇವರು ಸಾಕುವುದಿಲ್ಲ. ಮಂಗಸನೋಳು, ಸೂಲುಮೋಳು, ಪತ್ತೋಳು, ಕರ್ನೋಳು, ಚೋಲಿಮಡಿಗೋಳು, ಪುಂಡಮುರುತೋಳು, ಪತ್ನೇಳು, ಮಶೋಳು, ಕಿರೀಟ ಮೋಳು, ತಿರುಪ್‌ತೋಳು, ಕಂದಕೂಕೋಳು, ಸುಲಮೋಳು, ಮೋಡಿಮೋಳು, ಗಂಬೋಳು, ಶಿವಲಿಂಗಮೋಳು, ವಿಭೂತೋಳು, ಮುಂತಾದ ಬೆಡಗುಗಳನ್ನು ಇವರಲ್ಲಿ ಕಾಣಬಹುದು.[೨೧] ಸುಡುಗಾಡು ಸಿದ್ಧರು ಮಸಣದ ದಿಕ್ಕಾದ ದಕ್ಷಿಣ ದಿಕ್ಕಿಗೆ ಸಂಚಾರಿ ಗುಡಿಸಲನ್ನು ನಿರ್ಮಿಸುವರು. ಸ್ಮಶಾನದಲ್ಲಿ ತಡೆ ಒಡೆಯುವುದು ಮುಂತಾದ ಮಾಟಮಂತ್ರಗಳನ್ನು ಮಾಡುವರು. ಭಿಕ್ಷಾಟನೆಯನ್ನು ಪ್ರಧಾನ ವೃತ್ತಿಯನ್ನಾಗಿ ಮಾಡಿಕೊಂಡಿರುವ ಇವರು ಭಿಕ್ಷೆಯಿಂದ ತಂದ ದವಸ ಧಾನ್ಯಗಳನ್ನು ಆಹಾರವಾಗಿ ಬಳಸುವರು. ಮುಂಗಸಿ, ಮೀನು, ಉಡ, ಕಾಡುಬೆಕ್ಕು, ಮೊಲ, ಕೋಳಿ, ಕುರಿ ಕೊಕ್ಕರೆ, ಗಿಣಿ, ಪಾರಿವಾಳ, ಹಿರೇಹಕ್ಕಿ ಮುಂತಾದ ಪ್ರಾಣಿ ಮತ್ತು ಪಕ್ಷಿಗಳನ್ನು ಬೇಟೆಯಾಡುತ್ತಿದ್ದರು. ಇತರರಂತೆ ಉಡುಪುಗಳನ್ನು ತೊಡುವ ಇವರಲ್ಲಿ ಗಂಡಸರು ಭಿಕ್ಷೆಗೆ ಹೊರಟಾಗ ಕೆಲವರು ಕಾವಿಬಟ್ಟೆ, ಬಿಳಿ ಪಂಚೆಉಟ್ಟು, ತಲೆಗೆ ಕೆಂಪು ವಸ್ತ್ರವನ್ನು ಪೇಟವಾಗಿ ಧರಿಸುವರು. ಅಲ್ಲದೆ ಹೆಗಲಲ್ಲಿ ಜೋಳಿಗೆ, ಕೈಯಲ್ಲಿ ಓಲೆಗರಿ ಕಟ್ಟುಗಳನ್ನು ಹಿಡಿದಿರುತ್ತಾರೆ. ಇನ್ನು ಕೆಲವರು ಗೊರವಯ್ಯನ ವೇಷ ಧರಿಸುವರು. ಅಂದರೆ ಒಂದು ಕೈಯಲ್ಲಿ ಡಮರುಗ, ಇನ್ನೊಂದು ಕೈಯಲ್ಲಿ ಕೊಳಲು ಹಿಡಿದು, ಬಿಳಿಯ ಕಚ್ಚೆ ಪಂಚೆ, ಅಂಗಿಯ ಮೇಲೆ ಕವಡೆಗಳನ್ನು ಹೊಲೆದ ಕೌದಿಯನ್ನು ಮೊಳ ಕಾಲವರೆಗೆ ಇಳಿ ಬೀಳುವವರೆಗೆ ಧರಿಸುವರು. ಭಿಕ್ಷೆಗೆ ಹೋಗುವಾಗ ಈ ಬಗೆಯ ವೇಷ ಭೂಷಣಗಳನ್ನು ಹಾಗೂ ಹಣೆಗೆ ವಿಭೂತಿಯನ್ನು ಕಡ್ಡಾಯವಾಗಿ ಧರಿಸುವರು. ಭಿಕ್ಷೆಯನ್ನು ತಮ್ಮ ವೃತ್ತಿಯನ್ನಾಗಿ ಮಾಡಿಕೊಂಡಿದ್ದಾರೆ. ಇದರ ಜೊತೆಗೆ ಶಾಸ್ತ್ರ ಹೇಳುವುದು, ದೆವ್ವ ಬಿಡಿಸುವುದು, ತಡೆ ಒಡೆಯುವುದು, ಮಾಟ ಮಂತ್ರದ ಕಾರ್ಯಗಳನ್ನು ಮಾಡುತ್ತಾರೆ. ಇವೆಲ್ಲವೂ ಅವರ ಜೀವನೋಪಾಯಕ್ಕೆ ಕಂಡುಕೊಂಡ ಕಾಯಕಗಳಾಗಿವೆ. ಇತ್ತೀಚೆಗೆ ಕೂಲಿ ಮಾಡುವುದು, ಆಡು ಕುರಿಗಳನ್ನು ಸಾಕುವುದು, ಮುಂತಾದ ಕಸುಬುಗಳನ್ನು ಮಾಡುತ್ತಾರೆ.[೨೨]

**ದೊಂಬಿದಾಸರು** : ತುಮಕೂರು ಜಿಲ್ಲೆಯಾದ್ಯಂತ ಅಲ್ಲಲ್ಲಿ ವಾಸಿಸುತ್ತಿರುವ ದೊಂಬಿದಾಸರ ಮನೆ ಮಾತು ತೆಲಗು, ವ್ಯಾವಹಾರಿಕ ಭಾಷೆ ಕನ್ನಡ. ಬಹುತೇಕ ಸ್ವಂತ ಮನೆ ಹೊಂದಿರದೆ ಪುಟ್ಟ ಗುಡಿಸಲಿನಲ್ಲಿ ಜೀವನ ಸಾಗಿಸುತ್ತಾರೆ. ಇವರ ಮೂಲ ವೃತ್ತಿ ಭಿಕ್ಷೆ, ಉಪ ವೃತ್ತಿಯಾಗಿ ನಾಟಕ ಆಡುವುದರ ಜೊತೆಗೆ ಊರೂರು ಸುತ್ತಿ ನಾಟಕವಾಡುವುದು, ಕೋಲೆಬಸವನ ಆಟ ಆಡಿಸುವರು. ಜನರಿಂದ ದಿನಸಿ, ಬಟ್ಟೆಗಳು, ನಗದು, ಇತ್ಯಾದಿಗಳನ್ನು ಪಡೆಯುವರು. ಊರುಗಳ ಹೊರ ವಲಯದಲ್ಲಿ ಬೀಡು ಬಿಟ್ಟು ಅನೇಕ ವರ್ಷಗಳಿಂದ ನೆಲೆನಿಂತಿದ್ದಾರೆ. ಊರ ಜನರೊಂದಿಗೆ ವ್ಯವಹಾರದಲ್ಲಿ ಬೆರೆತು ಇತ್ತೀಚೆಗೆ ಕೂಲಿ ಮಾಡುವುದು, ಪಿನ್ನ, ಟೇಪು, ಪೌಡರ್‌ಡಬ್ಬ, ಅರಿಶಿಣ ಕುಂಕುಮ, ಕರಿಮಣಿ, ಉಡುದಾರ, ಕೃತಕ ವಾಲೆ, ಮೂಗುತಿ, ಮುಂತಾದ ಹಲವು ಬಗೆಯ ಮಾರಾಟದ ವಸ್ತುಗಳನ್ನು ಟ್ರಂಕಿನಲ್ಲಿಟ್ಟು ತಲೆಯ ಮೇಲೆ ಹೊತ್ತು ಊರೂರು ಸುತ್ತಿ ವ್ಯಾಪಾರ ಮಾಡುವುದನ್ನು ಕಾಣಬಹುದು.

ಶೂಲದ ಈರಣ್ಣನ ಮೌಖಿಕ ಕಾವ್ಯದಲ್ಲಿ ಬೇಡರು, ವಕ್ಕಲಿಗರು, ಮಾದಿಗರು ಮತ್ತು ಶೆಟ್ಟರು, ಜುಂಜಪ್ಪನ ಕಾವ್ಯದಲ್ಲಿ ಗೊಲ್ಲರು, ಕುಂಚಿಟಿಗರ ಅಳುವನೋರು, ಗೊಲ್ಲರು ಮತ್ತು ಮಾದಿಗರು, ಸ್ವಾರಮ್ಮನ ಕಾವ್ಯದಲ್ಲಿ ಲಿಂಗ ಆರಾಧಕರಾಗಿ ಸ್ವಾರಮ್ಮ, ಮತ್ತು ಆಕೆಯ ಪತಿ ಶಂಕರಲಿಂಗ, ಕುಂಚಿಟಿಗರು, ಬಡಗಿಗಳು, ಅಕ್ಕಸಾಲಿಗರು, ಈರುಗ್ಯಾತರಾಯನ ಕಾವ್ಯದಲ್ಲಿ ಕುಂಚಿಟಿಗರ ಬಸಲೇನೋರು, ನಾಯಕರು, ವಡ್ಡರು, ದಿಬ್ಬದ ವೀರಬೊಮ್ಮಣ್ಣನ ಕಾವ್ಯದಲ್ಲಿ ಗೊಲ್ಲರು, ವಕ್ಕಲಿಗರು, ಜಲಧಿಬೊಪ್ಪರಾಯನ ಕಾವ್ಯದಲ್ಲಿ ಕುರುಬರು ಮತ್ತು ಕುಂಚಿಟಿಗರ ಜಾತಿಗಳನ್ನು ಉಲ್ಲೇಖಿಸಲಾಗಿದೆ.

**ಜನಾಂಗೀಯ ಸಂಘರ್ಷ :**

ತುಮಕೂರು ಜಿಲ್ಲೆಯ ಬಹುತೇಕ ಜನಪದ ಮೌಖಿಕ ಕಾವ್ಯಗಳನ್ನು ಅವುಗಳ ಹುಟ್ಟಿನ ಸನ್ನಿವೇಶ, ಸ್ವರೂಪದ ಹಿನ್ನೆಲೆಯಲ್ಲಿ ಅವಲೋಕಿಸಿದಾಗ ಅವುಗಳಲ್ಲಿ ಸ್ಥಳೀಯ ಸಾಮಾಜಿಕ, ಆರ್ಥಿಕ, ರಾಜಕೀಯ, ಸಾಂಸ್ಕೃತಿಕ ವಿವರಗಳನ್ನು ಗುರುತಿಸಬಹುದು. ತುಮಕೂರು ಜಿಲ್ಲೆಯಲ್ಲಿ ಸುಮಾರು ೧೨ ರಿಂದ ೧೮ ನೇ ಶತಮಾನದಲ್ಲಿ ಆಳ್ವಿಕೆ ಮಾಡಿದ ಬಹುತೇಕ ಸ್ಥಳೀಯ ಪಾಳೆಯಗಾರರು ಕೆಲವೇ ಜಾತಿಗಳನ್ನು ಪ್ರತಿನಿಧಿಸಿದ್ದರು. ಈ ಕಾಲದ ಬಹುತೇಕ ಜನಪದ ಕಾವ್ಯಗಳು ಕುಂಚಿಟಿಗ, ಕಾಡುಗೊಲ್ಲ, ಕುರುಬ, ಬೇಡ ಸಮುದಾಯಗಳನ್ನು ಕೇಂದ್ರೀಕರಿಸಿಕೊಂಡು ಕಥೆ, ಕಾವ್ಯಗಳನ್ನು ಸೃಷ್ಟಿಸಿಕೊಂಡಿದ್ದರೂ ಸಹ ಸಾಂದರ್ಭಿಕವಾಗಿ ಇಲ್ಲಿ ಅಸ್ತಿತ್ವದಲ್ಲಿದ್ದ ಹಲವಾರು ಜಾತಿಗಳನ್ನು ಉಲ್ಲೇಖಿಸಿವೆ.

ಜುಂಜಪ್ಪನ ಕಾವ್ಯವು ಕಾಡುಗೊಲ್ಲರು, ಕುಂಚಿಟಿಗರು, ಒಕ್ಕಲಿಗರು, ಮ್ಯಾಸಬೇಡರು ಮತ್ತು ಕುರುಬರ ನಡುವಿನ ವೃತ್ತಿ ಸಂಘರ್ಷಗಳು, ಅಂದಿನ ಸಾಮಾಜಿಕ ವ್ಯವಸ್ಥೆಯಲ್ಲಿ ಜಾತಿಗಳ ನಡುವೆ ಇದ್ದ ಸಂಬಂಧಗಳನ್ನು ತಿಳಿಯಪಡಿಸುತ್ತದೆ. ಕಾವ್ಯದಲ್ಲಿ ಬರುವ ಕಳುವಾರಹಳ್ಳಿಯ ಹೊಸ್ನಟ್ಟಿ ಆಲೇಗೌಡನು ಕೃಷಿಕ ವರ್ಗದವನಾಗಿದ್ದು ಊರಿನ ಜಮೀನ್ದಾರನಾಗಿ ಸಮಾಜದಲ್ಲಿ

ಮನ್ನಣೆಯನ್ನು ಪಡೆದಿದ್ದಂತೆ ತೋರುತ್ತದೆ. ಹಾಗೆಯೇ ಕಾಡುಗೊಲ್ಲರು, ಕುರುಬ, ಮ್ಯಾಸ ಬೇಡರೊಂದಿಗೆ ಹೊಂದಿದ್ದ ಸಂಬಂಧಗಳಲ್ಲಿ ವೃತ್ತಿಬದುಕಿನ ಸಂಘರ್ಷವನ್ನು ಗುರುತಿಸಬಹುದಾಗಿದೆ. ಒಕ್ಕಲಿಗರು ಸಹ ದನಗಳನ್ನು ಸಾಕಿಕೊಂಡಿದ್ದರು. ಇವರು ಕೃಷಿ ಕಸುಬಿಗೆ ಗೊಬ್ಬರ ಮತ್ತು ಉತ್ತಮ ತಳಿಯ ಎತ್ತುಗಳಿಗಾಗಿ ಕಾಡುಗೊಲ್ಲರನ್ನು ಅವಲಂಬಿಸಿದ್ದರು. ಇವರ ನಡುವೆ ವೃತ್ತಿಯ ಸಲುವಾಗಿ ಹೊಂದಿದ್ದ ಕೊಡುಕೊಳ್ಳುವಿಕೆ ಸಂಬಂಧವನ್ನು ಕಾಣಬಹುದು. ಅಂತೆಯೇ ಬಂದ್ಕುಂಟೆ ಈರುಚಿಕ್ಕಣ್ಣನ ಕಾವ್ಯ, ವೀರಸೀಗಣ್ಣನ ಕಾವ್ಯ, ಶೂಲದ ಈರಣ್ಣನ ಕಾವ್ಯ, ಬಳ್ಳಕಟ್ಟೆ ಈರಣ್ಣನ ಕಾವ್ಯಗಳಲ್ಲಿ ಬೇಡರು ಮತ್ತು ಗೊಲ್ಲರ ನಡುವೆ ದ್ವೇಷ, ಕೊಲೆಗಳಂತಹ ಸನ್ನಿವೇಶಗಳನ್ನು ಕುರಿತು ಉಲ್ಲೇಖಿಸಿದ್ದರೆ, ಈರುಗ್ಯಾತರಾಯನ ಕಾವ್ಯದಲ್ಲಿ ಕುಂಚಿಟಿಗರು ಮತ್ತು ಬೇಡರ ಉಲ್ಲೇಖಗಳಿವೆ. ಹಾಗೂ ಗೊಲ್ಲರ ಮದ್ದೆಮ್ಮ ಮತ್ತು ಈರುಗ್ಯಾತರಾಯನ ಪ್ರೇಮ ಸಲ್ಲಾಪಗಳು ಹಾಗೂ ಸ್ವಾರಮ್ಮನ ಪದಗಳಲ್ಲಿ ಗೊಲ್ಲರ ಚಿತ್ತಮ್ಮ ಮತ್ತು ಶಂಕರಲಿಂಗನ ಪ್ರೇಮ ಸಲ್ಲಾಪಗಳು ಅಭಿವ್ಯಕ್ತಗೊಂಡಿವೆ.

ವಡ್ಡಗೆರೆಯ ವಡ್ಡರಜಾತಿಯ ಹೆಣ್ಣುಮಗಳ ಮೂಗುತಿಯು ಬಾವಿಯಲ್ಲಿ ಬಿದ್ದಿದ್ದು ಅದನ್ನು ಆಕೆಯ ಏಳು ಜನ ಸಹೋದರರು ತೆಗೆದು ಕೊಡಲು ವಿಫಲರಾದಾಗ ವೀರಕ್ಯಾತರಾಯನು ಅದನ್ನು ತೆಗೆದು ಕೊಟ್ಟಿದ್ದರಿಂದ ಮೊದಲೇ ಆಕೆಯು ನೀಡಿದ್ದ ಪ್ರಮಾಣದಂತೆ ವಡ್ಡರ ಹೆಣ್ಣುಮಗಳಿಂದ ವಡ್ಡಗೆರೆಯನ್ನು ಕೊಡುಗೆಯಾಗಿ ಪಡೆದು ಅಲ್ಲಿಯೇ ನೆಲೆಸಿದನು. ಇಂದಿಗೂ ಈ ಊರಿನಲ್ಲಿ ವಡ್ಡರಜಾತಿಯವರ ಒಂದು ಮನೆಯೂ ಇಲ್ಲದಿರುವುದನ್ನು ಗಮನಿಸಿದಾಗ ಮೂಲನಿವಾಸಿ ವಡ್ಡರು ಮತ್ತು ವಲಸೆಗಾರ ಕುಂಚಿಟಿಗರ ನಡುವೆ ನಡೆದಿರಬಹುದಾದ ಸಂಘರ್ಷವನ್ನು ತಿಳಿಯಲು ಸಾಧ್ಯವಾಗುತ್ತದೆ.

ಒಕ್ಕಲಿಗರ ಕುಂಚಿಟಿಗ ಜಾತಿಯಲ್ಲಿ ಪರಸ್ಪರ ವೈವಾಹಿಕ, ಇತರೆ ಸಂಬಂಧಗಳನ್ನು ಏರ್ಪಡಿಸಿಕೊಳ್ಳುವಲ್ಲಿ ಬೆಡಗುಗಳ ನಡುವೆ (ಪ್ರಮುಖವಾಗಿ ಜಾನಕಲ್ಲೋರು ಮತ್ತು ಜಲಧೇನೋರು) ನಿಷೇಧವನ್ನು ವಿಧಿಸಿಕೊಳ್ಳಲಾಗಿದೆ. ಈ ಹಿನ್ನೆಲೆಯಲ್ಲಿ ಮರೂರು ವೀರನಾಗಪ್ಪನ ಕಾವ್ಯವು ಜಾತಿ ಸಂಘರ್ಷದ ಚಾರಿತ್ರಿಕ ಸೂಕ್ಷ್ಮ ಎಳೆಗಳನ್ನು ಪರಿಚಯಿಸುತ್ತದೆ. ಕುಂಚಿಟಿಗರ ಬೆಡಗು ಜಾನಕಲ್ಲೋರ ಜನಾಂಗದವರೊಂದಿಗೆ ಕುಂಚಿಟಿಗರ ಇತರ ಬೆಡಗುಗಳ ಜನರು ವಿವಾಹ ಮತ್ತು ಇತರೆ ಸಂಬಂಧಗಳನ್ನು ಮಾಡುವುದಿಲ್ಲ. ಇದನ್ನು ಇಂದಿಗೂ ಕಟ್ಟುನಿಟ್ಟಾಗಿ ಪಾಲಿಸಲಾಗುತ್ತದೆ. ಆಧುನಿಕರಣದ ಪ್ರಭಾವ ಹಾಗೂ ವೈಚಾರಿಕತೆಯಿಂದ ಈ ಕಟ್ಟುಪಾಡುಗಳು ಸ್ವಲ್ಪಮಟ್ಟಿಗೆ ಸಡಿಲವಾಗಿದೆಯಾದರೂ, ಇಂದಿಗೂ ವಿಚಾರವಂತರೂ ಕೂಡ ಸಂಪ್ರದಾಯದ ಮೊರೆ ಹೋಗಿರುವುದನ್ನು ಗುರುತಿಸಬಹುದಾಗಿದೆ.

ಪಾವಗಡ ತಾಲೂಕಿನ ಮರೂರು ವೀರನಾಗಪ್ಪನು ಕುಂಚಿಟಿಗರ ಜಲಧೇನವರ ಪಂಗಡಕ್ಕೆ ಸೇರಿದ ಆರಾಧ್ಯ ದೈವನಾಗಿದ್ದಾನೆ. ಈತನು ತನ್ನ ಸಹೋದರಿಯರಿಬ್ಬರನ್ನು ತನ್ನ ಸೋದರ ಮಾವಂದಿರಿಗೆ ವಿವಾಹ ಮಾಡಿಕೊಡಲಿಲ್ಲ ಎಂಬ ಕಾರಣಕ್ಕೆ ಜಾನಕಲ್ಲೋರ ಮಾವಂದಿರಿಂದಲೇ ಕೊಲೆಗೀಡಾದನು.

ಮಡಿದಾನಮ್ಮ ಈರಣ್ಣ ಮಡಿದಾನಮ್ಮ ಸೂರಣ್ಣ
ಮಡಿದಾನು ಜಲಧೇನರ ಮಗನೀರು। ನಾಗಣ್ಣ
ಮಡಿದು ಕೀರುತಿಯ ಪಡೆದಾನು॥ [೨೩]

ವೀರನಾಗಪ್ಪನ ಮರಣದ ವಿಷಯವನ್ನರಿತ ಆತನ ಸಹೋದರಿಯರು ಆತ್ಮಹತ್ಯೆ ಮಾಡಿಕೊಂಡರು. ಈ ವಿಷಯವನ್ನರಿತ ಈತನು ತನ್ನ ದಿವ್ಯಶಕ್ತಿಯಿಂದ ತನ್ನ ಮಾವಂದಿರನ್ನು ಕೊಲ್ಲುವಂತೆ ತನ್ನ ತಾಯಿಯ ಅನುಮತಿಯನ್ನು ಬೇಡುತ್ತಾನೆ.

ಕತ್ತಿಕೊಡೆಂದಾರೆ ಕದವ ಸೆಂದಾಕೆ ಹೋದಾಳು
ಹುಚ್ಚ ಜಾನಕಲ್ಲೋರ ಮಗಳಯ್ಯ। ಗೊಡವೆ
ನನಗ್ಯಾಕೆ ಕತ್ತಿಗಪ್ಪಣೆ ಕೊಡು ತಾಯಿ॥ [೨೪]

ಆದರೆ ತನ್ನ ಸಹೋದರರನ್ನು ಕೊಲ್ಲಲು ಅನುಮತಿಯನ್ನು ನೀಡದ ಮದ್ದಮ್ಮಳನ್ನು ನಿರಾಕರಿಸಿ ಜಾನಕಲ್ಲೋರ ಕುಲವೆಲ್ಲವನ್ನು ನಾಶಗೈಯ್ಯುತ್ತಾನೆ. ಇಂದಿಗೂ ವೀರನಾಗಪ್ಪನ ತಾಯಿ ಮದ್ದಮ್ಮಳನ್ನು ಪಾವಗಡದ ಅರಸೀಕೆರೆಯಲ್ಲಿ ಪೂಜಿಸಲಾಗುತ್ತದೆ.

ಎತ್ತೂನೆ ಸೆರೆ ತಂದ ಎಮ್ಮೆಗಳ ಸೆರೆತಂದ
ಹುಟ್ಟುಮಕ್ಕಳ ಸೆರೆತಂದ। ಜಾನಕಲ್ಲೋರ
ಸುಟ್ಟೆಲ್ಲ ಊರು ಹೋಗೀನಂದ॥ [೨೫]
ಪಟ್ವಾ ಪಟ್ಟಣಕೆ ಇಕ್ಕಾನು ಬೆಂಕೀಯ
ಪಟ್ಟಣದಾಗೊಬ್ಬ ದಳಪತಿ। ಮದ್ದಮ್ಮಾನ
ಮಗ ಮಾಡ್ಯಾನು ಮಹಿಮಾವು॥

ಈ ಸಂದರ್ಭದಲ್ಲಿ ತನ್ನ ಜಾನಕಲ್ಲೋರ ಕರುಳ ಕುಡಿಯನ್ನು ಕೊಲ್ಲದಂತೆ ಜಾನಕಲ್ಲೋರ ಗರ್ಭಿಣಿಯೊಬ್ಬಳು ಮಾಡಿದ ಮನವಿಗೆ ಮನ್ನಿಸಿದ ವೀರನಾಗಪ್ಪನು ಆಕೆಯನ್ನು ಕೊಲ್ಲುವುದಿಲ್ಲ. ಮುಂದೆ ಆಕೆಯಲ್ಲಿ ಬೆಳೆದವರೇ ಇಂದು ಇರುವ ಜಾನಕಲ್ಲೋರು ಎಂಬ ನಂಬಿಕೆಯಿದೆ. ವೀರನಾಗಪ್ಪನ ಕಾವ್ಯದಲ್ಲಿ ಹೇಳಿರುವಂತೆ ನಾಗಪ್ಪನು ಜಾನಕಲ್ಲೋರ ಕುಲವೆಲ್ಲವನ್ನೂ ನಾಶಗೈಯ್ಯಲು ವಾಸ್ತವದಲ್ಲಿ ಸಾಧ್ಯವಿಲ್ಲ. ಕೇವಲ ತನ್ನ ಮಾವಂದಿರನ್ನು ಕೊಲ್ಲುವುದರ ಜೊತೆಗೆ ಇಡೀ ಜಾನಕಲ್ಲೋರ ಕುಲದವರನ್ನೆಲ್ಲಾ ಕೊಲ್ಲುವಂತಹ ಭ್ರಮೆಯಲ್ಲಿ ಈ ಘಟನೆಯನ್ನು ಸಾರ್ವತ್ರೀಕರಿಸಲಾಗಿದೆ. ಕಾವ್ಯವೊಂದು ಮೂಲ ಆಶಯದೊಂದಿಗೆ ಅತಿಮಾನುಷತೆಯನ್ನು ಒಳಗೊಂಡು ರಚನೆಯಾಗಿರುತ್ತದೆ. ಆದರೆ ತಮ್ಮ ಸಾಂಸ್ಕೃತಿಕ ನಾಯಕನನ್ನು ದೈವತ್ವಕ್ಕೇರಿಸುವ ಉದ್ದೇಶ ಜನಪದ ಸಮುದಾಯದ್ದಾಗಿರುತ್ತದೆ. ತಮ್ಮ ನಾಯಕನಿಗೆ ಅಸಹಜವಾದ ಶಕ್ತಿಯಿತ್ತೆಂದು ಪ್ರತಿಪಾದಿಸುವ ಪ್ರಯತ್ನವು ಸಾಮಾನ್ಯವಾಗಿ ಕಂಡು ಬರುತ್ತದೆ. ತನ್ನ ಸಹೋದರಿಯರ ಸಾವಿಗೆ ಕಾರಣರಾದ ಮಾವಂದಿರನ್ನು ಕೊಲ್ಲಲು ತನ್ನ ತಾಯಿ ಜಾನಕಲ್ಲೋರ ಮಗಳಾದ ಮದ್ದಮ್ಮಳು ನಿರಾಕರಿಸಿದುದರಲ್ಲಿ ಸಹಜವಾಗಿ ತವರಿನ ಪ್ರೀತಿ ಕಂಡು ಬಂದಿದೆ. ಒಂದು ಕುಟುಂಬದ ನಾಶವನ್ನೇ ಕುಲದ ನಾಶವೆಂಬಂತೆ ಭ್ರಮೆಗೊಳಗಾಗಿರುವ ಮಾನಸಿಕ ಸ್ಥಿತಿಯನ್ನು ಇಲ್ಲಿ ಗುರುತಿಸಬಹುದು. ಇದು ಮೌಖಿಕ ಕಾವ್ಯದ ಸ್ವರೂಪವೂ ಆಗಿರುತ್ತದೆ. ಇಂದಿನ ಜಾನಕಲ್ಲೋರ ಸಂಬಂಧದ ಬಗ್ಗೆ ಕುಂಚಿಟಿಗರ

ಇತರ ಬೆಡಗುಗಳಲ್ಲಿ ಅಸ್ತಿತ್ವದಲ್ಲಿರುವ ಮೌಖಿಕ ಸಂಪ್ರದಾಯಕ್ಕೆ ಕಾರಣವಾಗಿ ಕಾವ್ಯದಲ್ಲಿನ ಜಾತಿ ಸಂಘರ್ಷದ ಚಾರಿತ್ರಿಕ ಸೂಕ್ಷ್ಮಅಂಶಗಳು ಉತ್ತರವಾಗಿ ಕಂಡುಬರುತ್ತವೆ.

ಆ ದಂಡು ಆತ್ಕಡ್ದ ಈ ದಂಡು ಇತ್ಕಡ್ದ
ಮುಕ್ಕಾಡಿ ಕಾಮನ ದಂಡು ಮುರಿ ಕಡ್ದ। ಬರುವಾಗ
ಅದ್ನ ಬ್ಯಾಡಲ್ಲಿ ಅಡಗಿದ್ದ। ಸೀಗಣ್ಣನ
ಹಾಲೊಳ್ಗೆ ಬೀಳಂಗೆ ತಿವ್ದಾನು॥ [೨೬]

ಗೊಲ್ಲರಿಗೂ, ಬೇಡರಿಗೂ ನಡೆದ ಕಾಳಗದ ಭೀಕರತೆಯನ್ನು ವೀರಸೀಗಣ್ಣನ ಮೌಖಿಕ ಕಾವ್ಯವು ಸೂಚಿಸಿದೆ. ಬೇಟೆ ವೃತ್ತಿಯ ಬೇಡರು ಮತ್ತು ಪಶುಪಾಲನೆ ವೃತ್ತಿಯ ಗೊಲ್ಲರ ನಡುವೆ ವೃತ್ತಿ ವೈಷಮ್ಯವನ್ನು ಹಾಗೂ ಜಾತಿ ಸಂಘರ್ಷವನ್ನು ಇಲ್ಲಿ ಗುರುತಿಸಲಾಗಿದೆ. ಇದೇ ರೀತಿಯಾಗಿ ಸಿರಾ ತಾಲೂಕಿನ ಗೊಲ್ಲರ ಬಂದ್ಕುಂಟೆ ಈರುಚಿಕ್ಕಣ್ಣನು ಸಹ ಪಶುಪಾಲಕನಾಗಿದ್ದನು. ಪಶುಸಂಪತ್ತು ಅಂದಿನ ಶ್ರೀಮಂತಿಕೆಯ ಮಾನವಾಗಿತ್ತು. ಬೇಡರ ಓಬವ್ವಳ ಪ್ರೇಮಪಾಶಕ್ಕೆ ಸಿಕ್ಕಿದ ಈರುಚಿಕ್ಕಣ್ಣನು ಆಕೆಯ ಸಹೋದರರಿಂದ ಹತ್ಯೆಯಾದನು.

ಸೀರ್ಯಾ ಹಿಂದ್ಾಕ್ತು ಓಜಕುಂಟೆ ಮುಂದ್ಾಕ್ತು
ಹೋದ್ನು ಮುಷ್ಟಳ್ಳಿ ಬಂದ್ಕುಂಟೊ। ಕೆರೆಯಾಗೆ
ನಿಂತ ಚಿಕ್ಕಣ್ಣ ಬೆಳಗೀಲಿ॥
ಮಾಯ್ಕಾರು ಬೇಡಾರು ಮರಳು ಮಟ್ವೇ ಕಟ್ಟಿ
ಹೊರೆಸು ಬಾರೆಂದು ಕರೆದಾರು। ಈರಣ್ಣಾನ
ಬಗ್ಗೂಸಿ ತಲೆಯ ಹೊಡೆದಾರು॥
ಶ್ರಾವಣಾ ಸೋಮಾರ ಸೂರ್ಯುಟ್ಟೋ ಹೊತ್ತೀಗೆ
ಅದ್ಯು ಥಳ್ಥಳನೆ ಹೊಳುದಾವು। ಓಬವ್ನ
ಹಿರಿಯಣ್ಣ ತಲೆಯ ಹೊಡುದಾನು॥ [೨೭]

ಸಮಾಜದಲ್ಲಿ ನೈತಿಕತೆಯು ಮೌಲ್ಯಯುತವಾದುದು. ಅದನ್ನು ತಪ್ಪಿ ನಡೆದಾಗ ಅನಾಹುತಗಳು ಸಂಭವಿಸುತ್ತವೆ. ತಂದೆ, ತಾಯಿ, ತಂಗಿ, ಮಾತನ್ನು ಕೇಳದೆ ಹೊಲ, ಮನೆ, ಬಂಧು, ಬಳಗವನ್ನು ಬಿಟ್ಟು ಬೇಡತಿ ಓಬವ್ವನೊಂದಿಗೆ ಅನೈತಿಕ ಸಂಬಂಧವನ್ನು ಮಾಡಿದ ಈರುಚಿಕ್ಕಣ್ಣನಿಗೆ ಒದಗಿದ ಗತಿಯನ್ನು ಸಮಾಜಕ್ಕೆ ಪಾಠವಾಗಿ ಹೇಳಲಾಗಿದೆ. ಜಾತಿಗಳ ನಡುವಿನ ಸಂಘರ್ಷಕ್ಕೆ ಜಾತಿಗಳ ನಡುವಿನ ಅಸಹಿಷ್ಣುತೆಯು ಕಾರಣವಾಗಿದ್ದಂತೆ ಆಸ್ತಿ, ಪ್ರೀತಿ, ಪ್ರೇಮಗಳೂ ಸಹ ಕಾರಣವಾಗುತ್ತಿದ್ದವು ಎಂಬುದನ್ನು ಇಲ್ಲಿ ಗುರುತಿಸಲಾಗಿದೆ.

## ೬.೪ ಜನಾಂಗೀಯ ಸಾಮರಸ್ಯ

ಸಮುದಾಯಗಳ ಧಾರ್ಮಿಕ ಕ್ರಿಯೆ ಮತ್ತು ಆಚರಣೆಗಳನ್ನು ಹಿಂದೂ, ಇಸ್ಲಾಂ, ಕ್ರೈಸ್ತ, ಜೈನ ಮುಂತಾದವುಗಳ ಚೌಕಟ್ಟುಗಳಿಗೆ ಸಮೀಕರಿಸಿ ನೋಡುವ ಒಂದು ಪರಿಪಾಠವಿದೆ. ಆದರೆ ಅಂತರ್ ಸಾಮುದಾಯಿಕ ನೆಲೆಯ ಧಾರ್ಮಿಕ ಮತ್ತು ಸಾಂಸ್ಕೃತಿಕ ಆಚರಣೆಗಳನ್ನು ಧರ್ಮಗಳ ಬಂದನದಲ್ಲಿಟ್ಟು ವ್ಯಾಖ್ಯಾನಿಸುವುದು ಕಷ್ಟಸಾಧ್ಯವಾದುದು. ವೈವಿಧ್ಯತೆಯಿಂದ ಕೂಡಿದ ಭಾರತೀಯ ಸಾಮಾಜಿಕ ವ್ಯವಸ್ಥೆಯಲ್ಲಿ ಇತ್ತೀಚಿನ

ದಿನಮಾನಗಳಲ್ಲಿ ಜಾತಿ, ಧರ್ಮಗಳು ಪ್ರಮುಖ ಪಾತ್ರವನ್ನು ವಹಿಸುತ್ತಿವೆ. ಹೀಗಿದ್ದರೂ ಸಹ ಜನಪದರ ಬದುಕಿನಲ್ಲಿ ಹಾಗೂ ಮೌಖಿಕ ಸಂಪ್ರದಾಯಗಳಲ್ಲಿ ಸಾಮರಸ್ಯತೆಯನ್ನು ಗುರುತಿಸಬಹುದಾಗಿದೆ. ಇಂತಹ ಅಂತರ್ ಸಮುದಾಯಗಳ ಅನ್ಯೋನ್ಯ ಪಾಲ್ಗೊಳ್ಳುವಿಕೆಯು ಜನಾಂಗೀಯ ಸ್ವಾಸ್ಥ್ಯವನ್ನು ಕಾಪಾಡುತ್ತದೆ.

ದ್ವಾರಕಾನಗರದ ಉಂಡೆತ್ರಾಯನನ್ನು ಕುಂಚಿಟಿಗರ ಮೂಲಪುರುಷನೆಂದು, ಈತನು ತನ್ನ ಪರಿವಾರ ಸಮೇತನಾಗಿ ದಕ್ಷಿಣದೆಡೆಗೆ ಬಂದವನೆಂದೂ ನಂಬಲಾಗಿದೆ. ಕುಂಚಿಟಿಗರ ಮೂಲ ನೆಲೆಯನ್ನು ಕುರಿತು ಇರುವ ಮೌಖಿಕ ಕಥನದಂತೆ ದ್ವಾರಕಾ ಪಟ್ಟಣದಿಂದ ದಕ್ಷಿಣದ ಕಡೆಗೆ ಬರುವ ಮಾರ್ಗ ಮಧ್ಯದಲ್ಲಿ ಅಡ್ಡಲಾಗಿ ಹರಿಯುತ್ತಿದ್ದ ನದಿಯನ್ನು ದಾಟುವ ಉಲ್ಲೇಖವಿದೆ. ಈ ನದಿಯನ್ನು ದಾಟಲು ಹಂಡೇ ಕುರುಬರ ಜಲಧಿ ಬೊಪ್ಪರಾಯನು ಗಂಗೆಗೆ ತನ್ನ ಶಿರವನ್ನು ಬಲಿ ನೀಡಿ ಗಂಗೆಯನ್ನು ಪ್ರಾರ್ಥಿಸುವ ಮೂಲಕ ಉಂಡೆತ್ರಾಯನ ಪರಿವಾರವನ್ನು ನದಿ ದಾಟಿಸುವಲ್ಲಿ ಸಹಾಯವನ್ನು ಮಾಡುತ್ತಾನೆ. ಪ್ರತಿಯಾಗಿ ಕುಂಚಿಟಿಗರ ಕನ್ಯೆಯನ್ನು ಜಲಧಿಬೊಪ್ಪರಾಯನಿಗೆ ವಿವಾಹ ಮಾಡಿಕೊಟ್ಟರೆಂಬ ನಂಬಿಕೆಯಿದೆ. ಇಂದಿಗೂ ಜಲಧಿ ಬೊಪ್ಪರಾಯನು ಕುಂಚಿಟಿಗರ ಜಲಧೇನವರ ಬೆಡಗಿನ ಮೂಲಪುರುಷನೆಂದು ಭಾವಿಸಲಾಗುತ್ತದೆ. ಈ ಹಿನ್ನೆಲೆಯಲ್ಲಿ 'ಕುರುಬ ಕೂಡಿ ಕೆಟ್ಟ, ವಕ್ಕಲಿಗ ಅಗಲಿ ಕೆಟ್ಟ', 'ಕುರುಬ ಕೆಟ್ಟು ಕುಂಚಿಟಿಗನಾದ' ಎಂಬ ಮಾತುಗಳು ಪ್ರಚಲಿತದಲ್ಲಿವೆ. ಕುಂಚಿಟಿಗ ಮತ್ತು ಕುರುಬರು ಪಶುಪಾಲನಾ ವೃತ್ತಿ ನೆಲೆಯ ಸಮುದಾಯಗಳಾಗಿದ್ದು ತಮ್ಮ ಬುಡಕಟ್ಟುಗಳಲ್ಲಿ ನಡೆದಿರಬಹುದಾದ ಕೊಳು ಕೊಡುವ ಸಂಬಂಧಗಳ ಸಲುವಾಗಿ ಇಂತಹ ಕಥನಗಳು ಮತ್ತು ಮೌಖಿಕ ಸಂಪ್ರದಾಯಗಳು ಅಸ್ತಿತ್ವದಲ್ಲಿರಬೇಕು ಎಂಬ ಚಾರಿತ್ರಿಕ ಸೂಕ್ಷ್ಮತೆಗಳನ್ನು ಕಂಡುಕೊಳ್ಳಲಾಗಿದೆ.

**ಇಸ್ಲಾಂ ಸಮುದಾಯ :**

ವಿಜಯನಗರ ಸಾಮ್ರಾಜ್ಯದ ಪತನಾನಂತರ ತುಮಕೂರು ಪ್ರದೇಶವು ನೇರವಾಗಿ ಬಹಮನಿಯ ಶಾಹೀ ಅರಸರು, ಹೈದರ್, ಟಿಪ್ಪೂವಿನ ಆಳ್ವಿಕೆಗೆ ಒಳಗಾಗಿತ್ತು. ತುಮಕೂರು ಜಿಲ್ಲೆಯ ಸಿರಾ ಪ್ರದೇಶವು ಬಿಜಾಪುರದ ಸುಲ್ತಾನರ ಆಡಳಿತಕ್ಕೆ ಒಳಪಟ್ಟು ಸುಬೇದಾರರ ಆಳ್ವಿಕೆಯ ಕೇಂದ್ರವಾಗಿತ್ತು. ನಂತರ ಔರಂಜೇಬನ ಆಡಳಿತದಲ್ಲಿ ಸಿರಾವು ಪರಗಣದ ಆಡಳಿತ ಕೇಂದ್ರವಾಗಿತ್ತು. ಮುಂದೆ ಕ್ರಿ. ಶ. ೧೬೨೬ ರಿಂದ ೧೬೫೬ ರವರೆಗೆ ಬಿಜಾಪುರವನ್ನು ಆಳಿದ ಮಹ್ಮದ್ ಆದಿಲ್‌ಷಾನ ದಂಡನಾಯಕ ರಣದುಲ್ಲಾಖಾನ್, ಶಿವಾಜಿಯ ತಂದೆ ಷಹಜಿಬೋಂಸ್ಲೆ ಮತ್ತು ಕೆಂಗಣ್ಣನಾಯಕ ಈ ಮೂವರು ಸೇರಿ ಇಲ್ಲಿನ ರಂಗಪ್ಪನಾಯಕನನ್ನು ಸೋಲಿಸಿದರು. ನಂತರ ಬಿಜಾಪುರದ ಸುಲ್ತಾನನು ಮಲ್ಲಿಕ್‌ರೆಹಾನ್ (ಹುಸೇನ್) ಎಂಬುವನನ್ನು ಇಲ್ಲಿ ಸುಬೇದಾರನನ್ನಾಗಿ ನೇಮಿಸಿದನು. ಮೊಘಲರ ಪತನದವರೆಗೂ ಸಿರಾ, ಮುಸ್ಲಿಂ ಆಡಳಿತ ಕೇಂದ್ರವಾಗಿ ಮುಂದುವರೆಯಿತು. ಇವರ ಆಳ್ವಿಕೆಯ ಪ್ರಭಾವವು

ತುಮಕೂರಿನ ಇತರೆ ಪ್ರದೇಶಗಳಿಗೂ ಪಸರಿಸಿ ಹಲವು ಇಸ್ಲಾಂ ಸ್ಮಾರಕಗಳ ನಿರ್ಮಾಣಕ್ಕೆ ಸಹಕಾರಿಯಾಯಿತು. ತುಮಕೂರು ಜಿಲ್ಲೆಯಾದ್ಯಂತ ೩೪೬ ಮಸೀದಿಗಳು, ಗೋರಿಗಳು, ೫೮ ದರ್ಗಾಗಳು, ೭೦ ಈದ್ಗಾಗಳು, ೨೨೧ ಖಬರಸ್ಥಾನಗಳು, ೮೪ ಅಶೂರ್ಖಾನಗಳು, ೧೭ ಅರೇಬಿ ಮದರಸಗಳಿವೆ. ಇವುಗಳಲ್ಲಿ ಇಸ್ಲಾಮೀ ಸಾಂಸ್ಕೃತಿಕ ನೆಲೆಗಳನ್ನು ಗುರುತಿಸಬಹುದಾಗಿದೆ.[೨೮]

**ಗೋರಿಗಳು** : ಇವು ಇಸ್ಲಾಂ ಸಮುದಾಯದ ಮೃತರಿಗಾಗಿ ನಿರ್ಮಿಸಿದ (ಖಬರಸ್ತಾನ್) ಸ್ಮಾರಕಗಳು. ಸಿರಾದ ಜುಮ್ಮಾ ಮಸೀದಿಯ ಒಳ ಆವರಣದಲ್ಲಿ ಈ ಮಸೀದಿಯನ್ನು ನಿರ್ಮಿಸಿದರೆಂದು ಹೇಳಲಾಗುವ ಷೇಕ್ ಫರೀಧ್ ಸಾಹೇಬ್‌ರ ಗೋರಿ, ಅದರ ಪಕ್ಕದಲ್ಲಿಯೇ ಷೇಕ್ ಫರೀಧ್ ಸಾಹೇಬ್‌ರ ಸಹೋದರನಾದ ಷೇಕ್ ಕಬೀರ್ ಸಾಹೇಬರ ಹಾಗೂ ಇವರ ಸಹೋದರಿ ಷೇಹರ್‌ಬಾನು ಎಂಬಾಕೆಯ ಗೋರಿಗಳಿವೆ. ಪ್ರವೇಶ ದ್ವಾರದ ಬಲಭಾಗದಲ್ಲಿ ಗೋರಿಗಳಿವೆ. ಪಾರಸೀ ಲಿಪಿಯ ಶಾಸನವು ಇಲ್ಲಿನ ಗೋರಿಯ ಮೇಲೆ ರಚಿಸಲ್ಪಟ್ಟಿದ್ದು, ಇದರಲ್ಲಿ ಅಲ್ಲಾ ಮತ್ತು ಮಹ್ಮದ್ ಎಂಬ ಬರಹವಿದೆ ಎಂದೂ, ಇದರಂತೆ ಸಿರಾದ ಮಲ್ಲಿಕ್‌ರಿಹಾನ್ ದರ್ಗಾದ ಆವರಣದಲ್ಲಿನ ದಿಡ್ಡಿಬಾನ್‌ಖಾನ್ ಎಂದು ಕರೆಯಲಾಗುವ ಕಟ್ಟಡದ ಪಕ್ಕದಲ್ಲಿ ಇರುವ ಗೋರಿಯು ಔರಂಗಜೇಬ್‌ನ ಚಿಕ್ಕ ಮಗಳು ಗೌಹರ್‌ತಾಜ್ ಎಂಬುವವರದ್ದಾಗಿದೆ.[೨೯] ಬರಾಕಿ ಮಸೀದಿಯ ಹತ್ತಿರದಲ್ಲಿರುವ ಗೋರಿಯ ಗೋಪುರ ಮತ್ತು ಗುಮ್ಮಟದ ಕಳಸಗಳು ಚಿನ್ನದಿಂದ ಮಾಡಲ್ಪಟ್ಟಿದ್ದವೆಂಬ ಕಾರಣಕ್ಕಾಗಿ ಇದನ್ನು ಚಿನ್ನದ ಗೋರಿ ಎಂದು ಕರೆಯಲಾಗುತ್ತದೆ. ಇಲ್ಲಿ ಬಿಜಾಪುರದಿಂದ ಸಿರಾಕ್ಕೆ ಬಂದು ಇಲ್ಲಿ ಧ್ಯಾನವನ್ನು ಮಾಡುತ್ತಿದ್ದ ಫರೀದ್ ಉಲ್ಲಾ ಷಾ, ಮಸೂಮ್ ಷಾ ಹಾಗೂ ಈತನ ಶಿಷ್ಯರ ಗೋರಿಗಳ ಅವಶೇಷಗಳಿವೆ. ಓಜಗುಂಟೆಯ ಹಜರತ್ ಷಾ ಮಹಮದ್ ಷಾಕಾದ್ರಿ ಗೋರಿಯೂ ಪ್ರಮುಖವಾಗಿ ಕಂಡುಬರುತ್ತದೆ.

**ದರ್ಗಾಗಳು** : ಇವು ಸಮಾಜೋಮುಖಿ ತತ್ವ, ಆದರ್ಶಗಳಂತೆ ಬದುಕಿದ ಇಸ್ಲಾಮೀ ಸಂತರ ನೆಲೆಗಳು, ಸ್ಮಾರಕಗಳು. ಇಲ್ಲಿ ಹಿಂದೂ ಮುಸ್ಲಿಂ ಭಾವೈಕ್ಯತೆಯ ಸಂಕೇತವಾಗಿ ಉರುಸ್ ನಡೆಸಲಾಗುತ್ತದೆ. ಮಲ್ಲಿಕ್ ರಿಹಾನ್‌ನು ಕ್ರಿ. ಶ. ೧೬೩೭ ರಿಂದ ೧೬೫೧ ರ ಅವಧಿಯಲ್ಲಿ ಸಿರಾದ ಸುಬೇದಾರನಾಗಿದ್ದನು. ಈತನು ತಾನು ಮರಣ ಹೊಂದುವ ಮುನ್ನವೇ ಸಿರಾದಲ್ಲಿ ಮಲ್ಲಿಕ್ ರಿಹಾನ್ ದರ್ಗಾವನ್ನು ನಿರ್ಮಿಸಿದನು. ದರ್ಗಾದ ಒಳಗಿನ ಮಧ್ಯಭಾಗದಲ್ಲಿ ಮಲ್ಲಿಕ್ ರಿಹಾನ್‌ರ ಗೋರಿಯಿದೆ. ಮಲ್ಲಿಕ್ ರಿಹಾನ್ ದರ್ಗಾವು ಚೌಕಾಕಾರದ ಕಟ್ಟಡವಾಗಿದೆ. ಸ್ಮಾರಕದ ಮೇಲ್ಭಾಗದಲ್ಲಿ ಬೃಹತ್ ಗುಮ್ಮಟವಿದೆ. ದರ್ಗಾದ ಗೋಡೆಗಳು ಗಟ್ಟಿಯಾದ ಕಲ್ಲುಗಳಿಂದ ನಿರ್ಮಿಸಲಾಗಿದೆ. ಗೋಡೆಗಳು ಚಿತ್ರಗಳಿಂದ ಅಲಂಕೃತವಾಗಿವೆ. ದರ್ಗಾದ ನಾಲ್ಕು ಮೂಲೆಗಳಲ್ಲೂ ಸ್ಥಂಭ ಗೋಪುರಗಳಿವೆ. ತುಮಕೂರು ಪರಿಸರದಲ್ಲಿರುವ ಪ್ರಮುಖ ದರ್ಗಾಗಳೆಂದರೆ, ಜಂಗ್ಲಿ ದಿವಾನ್ ಮತ್ತು ಮೂಷಾ ದರ್ವೇಸ್ ದರ್ಗಾ, ಸಿದ್ದಾಪುರದ

ದಾದಾ ಮಹ್ಮದ್ ಪೀರ್ ದರ್ಗಾ, ಚಿಕ್ಕನಾಯಕನಹಳ್ಳಿಯ ತಾತಯ್ಯನ ಗೋರಿ, ಅಕ್ಕಿರಾಂಪುರದ ಹುಸೇನ್ ಶಾವಲಿ ದರ್ಗಾ ಮುಂತಾದುವು.

**ಮಸೀದಿಗಳು** : ಮಸೀದಿಗಳು ಇಸ್ಲಾಂ ಸಮುದಾಯದ ಪ್ರಾರ್ಥನಾ ಮಂದಿರಗಳು. ಸಿರಾದ ಜುಮ್ಮಾ ಮಸೀದಿಯನ್ನು ಸಿರಾ ಗ್ರಾಮದಲ್ಲಿ ಷೇಕ್ ಫರೀಧ್ ಸಾಹೇಬ್ ಎಂಬ ಸಾಧು ನಿರ್ಮಿಸಿದನೆಂದು ತಿಳಿದು ಬರುತ್ತದೆ. ಪೂರ್ವಕ್ಕೆ ಮುಖ್ಯ ಪ್ರವೇಶ ದ್ವಾರವನ್ನು ಹೊಂದಿರುವ ಈ ಮಸೀದಿಯ ಮಧ್ಯದಲ್ಲಿ ಕೊಳ ಮತ್ತು ಪ್ರವೇಶ ದ್ವಾರದ ಬಲಭಾಗದಲ್ಲಿ ಗೋರಿಗಳಿವೆ. ಪಾರಸೀ ಲಿಪಿಯ ಶಾಸನವು ಈ ಮಸೀದಿಯ ಕಾಲವನ್ನು ೧೬ ನೇ ಶತಮಾನವೆಂದು, ಅಲ್ಲಾನು ಮಹ್ಮದ್ ಅಬೂಬಕರ್, ಉಮರ್, ಉಸ್ಮಾನ್ ಮತ್ತು ಹೈದರ್‌ಅಲಿಯವರಿಗೆ ಒಳ್ಳೆಯದನ್ನು ಮಾಡುವಂತೆ ಹಾರೈಸಿ ಇದರಲ್ಲಿ ಉಲ್ಲೇಖಿಸಿದೆ.[೩೦] ಈ ಮಸೀದಿಯ ಮಲ್ಲಿಕ್ ರಿಹಾನ್ ದರ್ಗಾದ ಹಿಂಬಾಗದಲ್ಲಿ ಮಕಾನ್ ಮಸೀದಿಯಿದೆ. ಈ ಮಸೀದಿಯಲ್ಲಿ ಮಲ್ಲಿಕ್ ರಿಹಾನ್‌ನು ಒಂಟಿಯಾಗಿ ನಮಾಜ್ ಮಾಡುತ್ತಿದ್ದನೆಂದು ತಿಳಿದು ಬರುತ್ತದೆ. ಈ ಮಸೀದಿಯ ಪಕ್ಕದಲ್ಲಿಯೇ ದಿಡ್ಡಿಬಾನ್‌ಖಾನ್ ಎಂದು ಕರೆಯಲಾಗುವ ಕಟ್ಟಡವಿದೆ. ಈ ಕಟ್ಟಡದಲ್ಲಿ ಮಲ್ಲಿಕ್ ರಿಹಾನ್‌ನು ಧರ್ಮಗ್ರಂಥವನ್ನು ಪಠಿಸುತ್ತಿದ್ದನೆಂದು ಹೇಳಲಾಗುತ್ತದೆ. ಟರ್ಕಿಯಿಂದ ಆಗಮಿಸಿದ್ದ ಬರಾಕಿ ಎಂಬ ಮನೆತನದವರು ಸಿರಾದಲ್ಲಿ ಮಸೀದಿಯನ್ನು ನಿರ್ಮಿಸಿದ್ದಾರೆ. ಹಾಗಾಗಿ ಈ ಮಸೀದಿಯನ್ನು ಬರಾಕಿ ಮಸೀದಿ ಎಂದು ಕರೆಯಲಾಗುತ್ತದೆ. ಈ ಮಸೀದಿಯನ್ನು ಹೆಣ್ಣು ಮಕ್ಕಳು ನಮಾಜ್ ಮಾಡಲು ಮೀಸಲಿಡಲಾಗಿತ್ತು.[೩೧] ಪರ್ಶಿಯನ್ ಲಿಪಿಯ ಶಾಸನದಂತೆ ಸಿರಾದ ಶಿರಾನಿ ಮೊಹಲ್ಲಾದಲ್ಲಿರುವ ಅಲೆ ಅದೀನ್ (ಚಿಕ್ಕ) ಮಸೀದಿಯನ್ನು ನಜೀಬ್ ಖಾನ್ ಹರ್ಹಾರಿ ಎಂಬುವವನು ಕಟ್ಟಿದನು. ಈ ಮಸೀದಿಯನ್ನು ನಮಾಜ್ ಮಾಡಲು ಮಹಿಳೆಯರಿಗೆ ಮೀಸಲಿರಿಸಲಾಗಿತ್ತು. ಈ ಮಸೀದಿಯ ಕಾಲಮಾನ ಕ್ರಿ. ಶ. ೧೬೧೪ ಎಂದು ಉಲ್ಲೇಖಿಸಿದೆ. ಷೇಕ್ ನಿಜಾಮುದ್ದೀನ್ ಮಸೀದಿ, ಮಸ್ಜಿದ್ ಎ ಎರಾಸ್ (ನಜೀಂಬಾಗ್ ಎರಾಸ್), ಕೆಸರುಮಡುವಿನ ಹಜರತ್ ಖಿಬ್ಲಾ ಷಾ ಮಹದ್ ಸೈಯದ್ ಮೊಮಿನ್ ಬಾದಷಹ ಮಸೀದಿ, ಸಿರಾಗೇಟ್ ಮಧುಗಿರಿಯ ಏತೇಬಾರ್ ಶಾವಲಿ ಅಲ್ಲಾ ಮಸೀದಿ, ಮಧುಗಿರಿ ಬಸ್ಸ್ಟ್ಯಾಂಡ್ ಹತ್ತಿರದ ರಖೀಫ್ ಶಾವಲಿ ಅಲ್ಲಾ ಮಸೀದಿ, ಪಾವಗಡದ ಮೌವತಾಶಾ ವಲಿ ಅಲ್ಲಾ ಮುಂತಾದುವು ಇಲ್ಲಿನ ಇತರೆ ಮಸೀದಿಗಳು.

ಮುಸ್ಲಿಂ ಸಮುದಾಯದಲ್ಲಿ ಸೈಯದ್, ಶೇಕ್, ಪಠಾಣ, ಮೊಗಲ್, ಪಿಂಜಾರ ಎಂಬ ಒಳಪಂಗಡಗಳಿವೆ. ಪಿಂಜಾರರು ಆಚರಣೆಯಲ್ಲಿ ಮುಸ್ಲಿಮರಂತೆ ಕಂಡು ಬಂದರೂ ಸಹ ಸ್ಥಳೀಯ ಸಂಪ್ರದಾಯಗಳಿಂದ ಪ್ರಭಾವಿತರಾಗಿದ್ದಾರೆ. ಕನ್ನಡ ಅಭಿವೃದ್ಧಿ ಪ್ರಾಧಿಕಾರದ ನಿಘಂಟು '*ಕನ್ನಡ ರತ್ನಕೋಶ*' ದಲ್ಲಿ ಪಿಂಜಾರ ಎಂಬ ಪದವನ್ನು ಹತ್ತಿಯನ್ನು ಹಿಂಜುವವನು ಎಂಬುದಾಗಿ ಅರ್ಥೈಸಿದೆ. ವಾಸ್ತವ ಬದುಕಿನಲ್ಲಿಯೂ ಇವರು ಹತ್ತಿಯನ್ನು ಹಿಂಜುವ ವೃತ್ತಿಯನ್ನು ಮಾಡುವರು. ಇವರು ಇಸ್ಲಾ ಧರ್ಮದ ಕಟ್ಟಾ ಆಚರಣೆಗಳಿಂದ

ಮುಕ್ತರಾಗಿರುವುದನ್ನು ಗುರುತಿಸಬಹುದು. ಮುಸ್ಲಿಂರು ಮತ್ತು ಪಿಂಜಾರರ ನಡುವೆ ವೈವಾಹಿಕ ಸಂಬಂಧ ವಿರಳವಾಗಿದೆ. ಸಾಮಾನ್ಯವಾಗಿ ಪಿಂಜಾರರ ಸ್ತ್ರೀಯರು ಬುರ್ಕಾವನ್ನು ಧರಿಸುವುದಿಲ್ಲ. ಪಿಂಜಾರರ ಸಾಮಾಜಿಕ ಸ್ಥಾನಮಾನಗಳನ್ನು ಅರಿಯುವ ನಿಟ್ಟಿನಲ್ಲಿ ಜನಪದರಲ್ಲಿ ರೂಢಿಯಲ್ಲಿರುವ 'ಸಾವಿರ ಕುದುರೆ ಸರದಾರ ಮನೆಯ ಹೆಂಡತಿಗೆ ಪಿಂಜಾರ' ಎಂಬ ಗಾದೆಯನ್ನು ಅವಲೋಕಿಸಬಹುದಾಗಿದೆ. ಈ ಗಾದೆಯಲ್ಲಿ ಪಿಂಜಾರರು ನಿಕೃಷ್ಟ ಜೀವನವನ್ನು ನಡೆಸುತ್ತಿದ್ದರೆಂದು ಅರಿಯಬಹುದಾಗಿದೆ. '*ಇದ್ದಾಗ ನವಾಬ ಸಾಬ, ಇಲ್ಲದಾಗ ಫಕೀರ್ ಸಾಬ*' ನವಾಬರು ಮತ್ತು ಫಕೀರರ ಸಾಮಾಜಿಕ, ಆರ್ಥಿಕ ಸ್ಥಿತಿಗತಿಗಳನ್ನು ಈ ಮೇಲ್ಕಂಡ ಗಾದೆಯಿಂದ ತಿಳಿಯಬಹುದಾಗಿದೆ.

ತುಮಕೂರು ಪರಿಸರದಲ್ಲಿರುವ ಅಕ್ಕಿರಾಂಪುರ, ಅಲ್ಲೀಪುರ, ಪಾವಗಡ, ಚಿಕ್ಕನಾಯಕನಹಳ್ಳಿ ಅಲ್ಲದೆ ಇತರೆಡೆಗಳಲ್ಲಿ ಉರುಸ್, ಬಾಬಯ್ಯನ ಹಬ್ಬಗಳಂತಹ ಸಂಪ್ರದಾಯಗಳನ್ನು ಸಾಮುದಾಯಿಕ ಸಾಮರಸ್ಯದ ನೆಲೆಯಲ್ಲಿ ಅಧ್ಯಯನ ಮಾಡಬಹುದಾಗಿದೆ. ಅಂತೆಯೇ ಸಿರಾ ತಾಲೂಕಿನ ಗಂಡಿಹಳ್ಳಿಯ ಬಾಬಯ್ಯನ ದತ್ತಪೀಠವು ಸಹ ವೈಶಿಷ್ಟ್ಯವಾದ ಸಂಪ್ರದಾಯ ಮತ್ತು ಆಚರಣೆಗಳನ್ನು ಇಂದಿಗೂ ಮುಂದುವರೆಸಿಕೊಂಡು ಬಂದಿದೆ.

**ಬಾಬಯ್ಯನ ಹಬ್ಬ** : ಇದು ಧರ್ಮಾತೀತವಾಗಿ ಸಮುದಾಯಗಳು ಭಾಗವಹಿಸಿ ಆಚರಿಸುವ ಊರಹಬ್ಬ, ಜಾತ್ರೆಯಾಗಿದೆ. ಇದು ಸಾಮರಸ್ಯದ ಪ್ರತೀಕವೂ ಆಗಿದೆ. ಪೀರಲು ಹಬ್ಬ, ಅಲಾವಿ ಹಬ್ಬ, ಮೊಹರಂ ಮುಂತಾದ ಹೆಸರುಗಳಿಂದ ಇದನ್ನು ಕರೆಯಲಾಗುತ್ತದೆ. ಇದು ೭ ನೇ ಶತಮಾನದಲ್ಲಿ ಅರಬನ ಕರ್ಬಲಾ ಎಂಬ ಯುದ್ಧವೊಂದರಲ್ಲಿ ಮಡಿದವರ ಸ್ಮರಣಾರ್ಥ ಆಚರಿಸುವ ಶೋಕಾಚರಣೆಯೆಂದು ತಿಳಿದು ಬರುತ್ತದೆ.[೩] ಆದರೆ ನಂತರದಲ್ಲಿ ನಾಡಿನಾದ್ಯಂತ ಹಲವು ಮಾರ್ಪಾಡುಗಳೊಂದಿಗೆ ಆಚರಿಸಲ್ಪಡುತ್ತಿದೆ. ಈ ಸಂದರ್ಭದಲ್ಲಿ ಹಾಡಲಾಗುವ ಮೌಖಿಕ ಕಾವ್ಯಗಳೂ, ಪರಂಪರೆಯು ವಿಶಿಷ್ಟವಾಗಿದೆ. ಇವುಗಳನ್ನು ರಿವಾಯತ್, ಕರ್ಬಲಾಪದ, ಅಲಾವಿಪದ, ಜಂಗಿನಪದ, ಹೆಜ್ಜೆಪದ, ಮೊಹರಂ ಹಾಡು, ಬಾಬಯ್ಯನಪದ ಮುಂತಾಗಿ ಕರೆಯಲಾಗುತ್ತದೆ. ಇವುಗಳನ್ನು ಹಾಡುವವರನ್ನು ಶಾಹಿರರು ಎನ್ನಲಾಗುತ್ತದೆ. ಬಾಬಯ್ಯನ ಪದಗಳು ಫಾರಸಿ, ಕನ್ನಡ, ಉರ್ದು, ತೆಲುಗು, ಮರಾಠಿ ಇತ್ಯಾದಿ ಭಾಷೆಗಳ ಪ್ರಭಾವದಿಂದ ಕೂಡಿವೆ. ಇವುಗಳು ಸಮುದಾಯಗಳ ಭಾವನೆ, ಬದುಕು, ವಿಚಾರಗಳನ್ನು ಅಭಿವ್ಯಕ್ತಿಗೊಳಿಸುತ್ತವೆ.

ತುಮಕೂರಿನ ಗಂಡಿಹಳ್ಳಿ, ಪಾವಗಡ (ಪೆನುಗೊಂಡೆಸ್ವಾಮಿ), ಚಿಕ್ಕನಾಯಕನಹಳ್ಳಿ, ಅಕ್ಕಿರಾಂಪುರ, ಹೊಳವನಹಳ್ಳಿ, ಅಲ್ಲೀಪುರ (ಹೊಳವನಹಳ್ಳಿ, ಅಲ್ಲೀಪುರಗಳನ್ನು ಕರ್ನಾಟಕದ ಷಿಯಾ ಗ್ರಾಮಗಳೆಂದು ಕರೆಯುವರು), ಮಧುಗಿರಿ, ಕೊಡಿಗೇನಹಳ್ಳಿ, ತುಮಕೂರು, ಕುಣಿಗಲ್ ಮುಂತಾಗಿ ಹಲವೆಡೆ ಅಲ್ಲದೆ ಮುಸ್ಲಿಮರಿಲ್ಲದ ಕೆಲವು ಊರುಗಳಲ್ಲಿಯೂ

ಬಾಬಯ್ಯನ ಹಬ್ಬಗಳನ್ನು ಆಚರಿಸಲಾಗುತ್ತದೆ. ಉದಾಹರಣೆಗೆ, ಒಂದೆ ತುಂಬಾಡಿ, ಅಗ್ರಹಾರಗಳಲ್ಲಿ ಅಕ್ಕಿರಾಂಪುದಿಂದ ಮುಸ್ಲಿಂ ಪೂಜಾರಿಯನ್ನು ಆಹ್ವಾನಿಸಿ ಆಚರಿಸಲಾಗುತ್ತಿತ್ತು. ಬಾಬಯ್ಯನ ಹಬ್ಬದ ಆಚರಣೆಯಲ್ಲಿ ದೇವರನ್ನು ಕೂರಿಸುವ, ಗುದ್ದಲಿ ಹಾಕುವ, ಫಕೀರರಾಗುವ, ಹರಿಕೆ ಸಲ್ಲಿಸುವ, ಕೊಂಡ ಹಾಯುವ, ಅಲಬಿದಾ ಹಾಡುವ, ಹಾಗೂ ದಫನ್ ಮಾಡುವ ಆಚರಣೆಗಳು ಪ್ರಮುಖವಾಗಿವೆ.

ಪೀರಲು ದೇವರನ್ನು ಅಲಾಪಿ ದೇವರು, ಬಾಬಯ್ಯ ದೇವರು ಎಂದೆಲ್ಲ ಕರೆಯಲಾಗುತ್ತದೆ. ಈ ದೇವರ ಮೂರ್ತಿಯು ಸಾಮಾನ್ಯವಾಗಿ ಹಸ್ತ, ಅರ್ಧಚಂದ್ರ, ಕತ್ತಿ, ಆಕಾರದಲ್ಲಿರುತ್ತದೆ. ಕ್ರಮವಾಗಿ ಇವುಗಳನ್ನು ಕೈ ದೇವರು, ಚಂದ್ರ ದೇವರು, ಕತ್ತಿ ದೇವರು ಎಂದು ಕರೆಯಲಾಗುತ್ತದೆ. ಗಂಡಿಹಳ್ಳಿಯಲ್ಲಿ ಕತ್ತಿ ದೇವರಿದೆ. ದೇವರನ್ನು ಮಸೂತಿಯಲ್ಲಿ ಕೂರಿಸಿ ಪೂಜಿಸಲಾಗುತ್ತದೆ. ಮಸೂತಿಯನ್ನು ಪೀರಲ ದರ್ಗಾ, ಪೀರಲ ಮಸೂತಿ, ಪೀರಲ ಗದ್ದಿ, ಪೀರಲ ಚಾವಡಿ ಎಂದೂ ಸಹ ಕರೆಯಲಾಗುತ್ತದೆ. ಊರ ಯಜಮಾನರ ಸಮ್ಮುಖದಲ್ಲಿ ಚಂದ್ರನನ್ನು ನೋಡಿದ ಬಳಿಕ ಅಗ್ನಿಕೊಂಡಕ್ಕಾಗಿ ಗುಂಡಿಯನ್ನು ತಗೆಯಲು ಅಣಿಗೊಳಿಸಲಾಗುತ್ತದೆ. ಈ ಸಂದರ್ಭದಲ್ಲಿ ಅಲಾವಿ ಪದಗಳನ್ನು ಹಾಡಲಾಗುತ್ತದೆ. ಈ ಸನ್ನಿವೇಶವನ್ನು ಮುಂದಿನ ಹಾಡುಗಳು ಅಭಿವ್ಯಕ್ತಿಸಿವೆ.

ಹತ್ತು ಮಂದಿ ತುರುಕಾರು ಕೂಡಿ ಹೊತ್ತಿಲೆ ಚಂದಪ್ಪನ ನೋಡಿ
ಗುದ್ದಲಿ ಹಾಕೋದು ಸಡಗಾರ। [೩೩]

ಗುದ್ದಲಿ ಹಾಕಿದ ನಂತರ ಊರಲ್ಲಿ ಹಲವು ಕಟ್ಟಳೆಗಳನ್ನು ಪಾಲಿಸಬೇಕಾಗುತ್ತದೆ. ೯ನೇ ದಿನದ ರಾತ್ರಿಯನ್ನು ಖತಲ್‌ರಾತ್ರಿ ಎನ್ನಲಾಗುತ್ತದೆ. ಅಂದು ಶಾಹಿರರು ಹಾಡುಗಳನ್ನು ಹಾಡುವರು. ನೇಮದಿಂದ ಬೆಂಕಿಯನ್ನು ಹಾಯುವರು. ವಿಶೇಷವಾಗಿ ತುಮಕೂರು ಪ್ರದೇಶದಲ್ಲಿ ಅಲಾವಿ ಕೊಂಡಗಳಿಗೆ ತೆಂಗಿನಕಾಯಿ, ಕೊಬ್ಬರಿ, ಮಂಡಕ್ಕಿಮುರಿ, ಹರಳು, ಉಪ್ಪು ಇತ್ಯಾದಿಗಳನ್ನು ಸಮರ್ಪಿಸಲಾಗುತ್ತದೆ. ಖತಲ್ ರಾತ್ರಿಯ ಮಾರನೇ ಬೆಳಗಿನ ಜಾವ ಪೀರಲು ದೇವರನ್ನು ಮೆರವಣಿಗೆ ಮಾಡಲಾಗುವುದು ಇದನ್ನು 'ಸರಗಸ್ತಿ' ಎಂದು ಕರೆಯಲಾಗುತ್ತದೆ. ಈ ಸಂದರ್ಭದಲ್ಲಿ ಕಡಲೇಮುರಿ, ಬಾಳೆಹಣ್ಣು, ಉತ್ತುತ್ತಿಹಣ್ಣನ್ನು ದೇವರ ಮೇಲೆ (ಸೂರೆ ಮಾಡುವರು) ಎಸೆಯುವರು.

ಅಲಾಯ ಆಡುವಾಗ ಡೋಲೆದ್ದು ಬರುವಾಗ
ಉತ್ತುತ್ತಿ ನನ್ನ ಉಡಿಯಾಗ । ಹುಸೇನಫೀರ
ಸುತ್ತಿ ಬರುವಾಗ ಸುರಿದೇನ ॥ [೩೪]

ಸರಗಸ್ತಿನಲ್ಲಿ ಕೊರಟಗೆರೆ ತಾಲೂಕಿನ ಅಕ್ಕಿರಾಂಪುರದಲ್ಲಿ ಹಲಗೆಯನ್ನು ಬಡಿಯುವರು. ದೇವರನ್ನು ಮೆರವಣಿಗೆಯ ಮೂಲಕ ಗ್ರಾಮದಲ್ಲಿನ ಮನೆ ಮನೆಗೆ ಕರೆದೊಯ್ಯುವುದು ವಾಡಿಕೆ.ಮೆರವಣಿಗೆಯಲ್ಲಿ ಕರಡಿವೇಷ, ಸ್ತ್ರೀ ವೇಷ, ಇತ್ಯಾದಿಗಳೊಂದಿಗೆ ಹೊರಡುವುದು. ಖತಲ್ ರಾತ್ರಿಯ ನಂತರದ ಮುಸ್ಸಂಜೆ ಪೀರಲು ದೇವರನ್ನು ಹತ್ತಿರದ ಕೆರೆಯ ನೀರಿನಲ್ಲಿ ವಿಸರ್ಜಿಸಲಾಗುತ್ತದೆ. ಈ ಕುರಿತು ಅಲಬಿದಾ (ದೇವರ ಸಾವು) ಎಂದು ಹಾಡಲಾಗುತ್ತದೆ.

**ಗಂಡಿಹಳ್ಳಿ ಮಠ (ದತ್ತ ಬಾಬಾ ಅಖಂಡ ಪೀಠ)** : ಬಾಬಾ ಅಖಂಡ ಪೀಠವು ಸಿರಾ ಅಮರಾಪುರಂ ರಸ್ತೆಯಲ್ಲಿರುವ ದೇವಾಲಯ ಮತ್ತು ದರ್ಗಾದ ಸಂಯುಕ್ತ ಪೀಠವಾಗಿದೆ. ಇಲ್ಲಿನ ದತ್ತ ಬಾಬಾ ಬುಡೇನ್ ದೇವರಿಗೆ ಮಸೀದಿಯ ಸ್ವರೂಪದ ದೇಗುಲವಿದೆ. ಕಾಡುಗೊಲ್ಲರು ತಲೆ–ತಲಾಂತರಗಳಿಂದಲೂ ಇಲ್ಲಿನ ಪೂಜಾರಿಕೆಯನ್ನು ಮಾಡುತ್ತಿದ್ದಾರೆ. ಪ್ರತೀತಿಯಂತೆ : ಗಂಡಿಹಳ್ಳಿ ಪರಿಸರದ ನಿಡಗಟ್ಟೆ ಗ್ರಾಮದ ಗಾಳಿಪೂಜಪ್ಪ ಎಂಬ ಕುರಿಗಾಹಿಯು ಮೇವಿಗಾಗಿ ಮಲೆನಾಡು ಪ್ರದೇಶಕ್ಕೆ ವಲಸೆ ಹೋಗಿದ್ದರು. ಕುರಿಗಳ ಬೆನ್ನತ್ತಿ ಬಂದಿದ್ದ ತೋಳಗಳನ್ನು ಕುರಿಗಳ ಕಾವಲಿಗೆ ನೇಮಿಸಿ ಬಾಬಾಬುಡನ್‌ಗಿರಿಯ ದತ್ತಪೀಠಕ್ಕೆ ದೇವರ ದರ್ಶನಕ್ಕೆಂದು ಹೋದರು.ಅಲ್ಲಿ ಸಿಕ್ಕಿದ ಹಸ್ತಚಿತ್ತಗಳೊಂದಿಗೆ ಗಾಳಿಪೂಜಪ್ಪನವರು ತನ್ನ ಹುಟ್ಟೂರಿಗೆ ಬಂದರು. ಇಲ್ಲಿನ ಕಾರೇಗಿಡದ ಹುತ್ತದಲ್ಲಿ ಹಸ್ತಚಿತ್ತಗಳನ್ನು ಪ್ರತಿಷ್ಠಾಪಿಸಿದರು. ಆದರೆ ಗಾಳಿ ಪೂಜಪ್ಪನ ಪವಾಡಗಳನ್ನು ಮೆರೆದನು.[೩೫] ಈ ಪ್ರದೇಶದ ಮೂಲಕ ಹಿಂದೆ ಯುದ್ಧಕ್ಕೆ ಹೊರಟಿದ್ದ ರಾಜನೊಬ್ಬನು ಯುದ್ಧದಲ್ಲಿ ವಿಜಯಿಯಾಗಿದ್ದರಿಂದ ಯುದ್ಧದಲ್ಲಿ ಬಳಸಿದ್ದ ಕತ್ತಿ, ಕೊಡಲಿ, ಕಠಾರಿ, ಗುರಾಣಿ, ಮಚ್ಚು ಇತ್ಯಾದಿಗಳನ್ನು ಈ ದೇವರಿಗೆ ನೀಡಿದ್ದನು. ಇವುಗಳನ್ನು ಇಂದು ಇಲ್ಲಿ ಕಾಣಬಹುದು. ಮುಂದೆ ಈ ನೆಲೆಯ ಮಹಿಮೆಯ ಪ್ರಖ್ಯಾತಿಯಾಯಿತು. ಒಮ್ಮೆ ದೇವಸ್ಥಾನದ ಪೂಜಾರಿಕೆ ವಿಚಾರದಲ್ಲಿ ಗೊಲ್ಲರಿಗೂ ಮುಸ್ಲಿಂರಿಗೂ ಸಂಘರ್ಷ ಏರ್ಪಟ್ಟಿತ್ತು. ನಂತರದಲ್ಲಿ ವ್ಯಾಜ್ಯವನ್ನು ಪರಿಹರಿಸಿಕೊಂಡು ಮುಸ್ಲಿಂ ಆಚರಣೆಗಳನ್ನು ಪಾಲಿಸುತ್ತಿದ್ದಾರೆಂದು ಹೇಳಲಾಗುತ್ತದೆ.[೩೬]

ಮೊಹರಂ ಹಬ್ಬದ ದಿನ ಗಂಡೀಹಳ್ಳಿ ಬುಡೇನ್ ದೇವರ ಜಾತ್ರೆಯು ನಡೆಯುತ್ತದೆ. ಮೊಹರಂ ಅಮಾವಾಸ್ಯೆಯ ದಿನದಂದು ಚಂದ್ರನನ್ನು ನೋಡಿ ದೇವಾಲಯದ ಮುಂಬಾಗದಲ್ಲಿ ಅಗ್ನಿಕೊಂಡದ ಗುಂಡಿಯನ್ನು ತೋಡಲಾಗುತ್ತದೆ. ಇದನ್ನು ಮೊದಲು ಮಾಡುವ ಕಾರ್ಯಕ್ಕೆ 'ಗುದ್ದಲಿ ಹಾಕುವುದು' ಎನ್ನಲಾಗುತ್ತದೆ. ಇಲ್ಲಿನ ಎರಡು ಬಾವುಟಗಳಲ್ಲಿ ಒಂದನ್ನು ದರ್ಗಾಕ್ಕೂ, ಮತ್ತೊಂದನ್ನು ದತ್ತಾತ್ರೇಯ ಎಂದು ಕರೆಯಲಾಗುವ ದರ್ಗಾದ ಹೊರಗಿನ ಎತ್ತರವಾದ ಸ್ತಂಭಕ್ಕೂ ಕಟ್ಟಲಾಗುತ್ತದೆ. ಮಠದಲ್ಲಿನ ಪಟ್ಟದ ಕುದುರೆಯನ್ನು ಅಲಂಕರಿಸಲಾಗುತ್ತದೆ. ಹಾಗೂ ದೇವರನ್ನು ಮೆರವಣಿಗೆಯ ಮೂಲಕ ಗ್ರಾಮದಲ್ಲಿನ ಮನೆ ಮನೆಗೆ ಕರೆದೊಯ್ಯುವುದು ವಾಡಿಕೆ. ಇದಕ್ಕೆ 'ಊರಾಡುವುದು' ಎನ್ನಲಾಗುತ್ತದೆ. ಹಿಂದೂ ಸಂಪ್ರದಾಯದಂತೆ ಪೂಜಾ ಕಾರ್ಯಕ್ರಮಗಳು, ಹಾಗೂ ಮುಸ್ಲಿಂ ಸಂಪ್ರದಾಯದಂತೆ ಹಲಾಲ್ ಮಾದರಿಯಲ್ಲಿ ಬಲಿ, ಪಾನಕಸೇವೆ, ಓದುವ ಶಾಸ್ತ್ರ, ಪಂಜಿನ ಸೇವೆ, ಕೆಂಡತುಂಬುವುದು, ಕೆಂಚರಾಯನಿಗೆ ಬಲಿಕೊಡುವುದು ಇತ್ಯಾದಿ ಮೌಖಿಕ ಸಂಪ್ರದಾಯಗಳನ್ನು ನಡೆಸಲಾಗುತ್ತದೆ.[೩೭]

**ಕ್ರೈಸ್ತ ಸಮುದಾಯ :**

ಸದರಿ ಸಂಶೋಧನಾ ವಿಷಯದ ವ್ಯಾಪ್ತಿಯು ಕ್ರಿ. ಶ. ೧೨ ರಿಂದ ೧೮ ನೇ ಶತಮಾನದವರೆಗೆ ಮಿತಿಗೊಳಿಸಿಕೊಳ್ಳಲಾಗಿದೆ. ಆದರೆ ಕ್ರಿ. ಶ. ೧೮೩೦ರ ನಂತರ ತುಮಕೂರು ಪ್ರದೇಶಕ್ಕೆ ಕ್ರೈಸ್ತರು ಆಗಮಿಸಿದರು.ಈ ಹಿನ್ನೆಲೆಯಲ್ಲಿ ಕ್ರೈಸ್ತ ಸಮುದಾಯದ ಮಾಹಿತಿಯನ್ನಷ್ಟೇ ಇಲ್ಲಿ ದಾಖಲಿಸಲಾಗಿದೆ.

ವಿಜಯನಗರ ಸಾಮ್ರಾಜ್ಯದ ಕಾಲಾವಧಿಯಲ್ಲಿ ಪೋರ್ಚುಗೀಸರೊಂದಿಗೆ ಕ್ರೈಸ್ತರು ಕರ್ನಾಟಕಕ್ಕೆ ಆಗಮಿಸಿದರು. ಸುಮಾರು ಕ್ರಿ. ಶ. ೧೮೩೪ ರ ವೇಳೆಗೆ ಬಾಸೆಲ್ ಮಿಷನ್ ಮಂಗಳೂರಿನಲ್ಲಿ ತನ್ನ ಕಾರ್ಯ ಚಟುವಟಿಕೆಗಳನ್ನು ಆರಂಭಿಸಿದರು. ಸುಮಾರು ಕ್ರಿ.ಶ. ೧೮೨೧ ರ ವೇಳೆಗೆ ಲಂಡನ್ ಮಿಷನ್‌ರವರು ಬಳ್ಳಾರಿ ಮತ್ತು ಬೆಂಗಳೂರುಗಳಲ್ಲಿ ತಮ್ಮ ಶಾಖೆಗಳನ್ನು ಆರಂಭಿಸಿದರು. ತುಮಕೂರು ಜಿಲ್ಲೆಯ ಗುಬ್ಬಿ ತಾಲೂಕು ಕೇಂದ್ರದಲ್ಲಿ ಪ್ರಾಟೆಸ್ಟಂಟರ ವೆಸ್ಲಿಯನ್ ಕ್ರೈಸ್ತ ಮಿಷನ್‌ರವರು ಮೊದಲಬಾರಿಗೆ ತಮ್ಮ ಕಾರ್ಯ ಚಟುವಟಿಕೆಗಳನ್ನು ಆರಂಭಿಸಿದರು. ಹಾಗೂ ಪ್ರಾರ್ಥನಾಲಯವನ್ನೂ ನಿರ್ಮಿಸಿದರು. ೧೮೩೦ರ ವೇಳೆಗೆ ಗುಬ್ಬಿಯ ಸಿಂಗೋನಹಳ್ಳಿ ಗ್ರಾಮದ ಚಿಕ್ಕ ಎಂಬ ಯುವಕ ಕ್ರೈಸ್ತ ಧರ್ಮಕ್ಕೆ ಮತಾಂತರ ಹೊಂದಿ ತಮ್ಮ ಹೆಸರನ್ನು ಡ್ಯಾನಿಯಲ್ ಎಂದು ಬದಲಾಯಿಸಿಕೊಂಡನು.[೩೮] ೧೮೯೦ರ ವೇಳೆಗೆ ಕಲ್ಕತ್ತಾದಿಂದ ಇಲ್ಲಿಗೆ ಆಗಮಿಸಿದ ಥಾಮಸ್ ಹಡ್ಸನ್‌ರವರು ಗುಬ್ಬಿಯಲ್ಲಿ ಶಾಶ್ವತ ಮಿಷನರಿ ಕೇಂದ್ರವನ್ನು ಸ್ಥಾಪಿಸಿದರು. ಆ ನಂತರ ಕುಣಿಗಲ್‌ನ್ನು ತಮ್ಮ ಕಾರ್ಯಕ್ಷೇತ್ರವನ್ನಾಗಿ ಮಾಡಿಕೊಂಡರು. ನಂತರ ತುಮಕೂರಿನಲ್ಲಿ ಜಾನ್ ಸಿ.ಡಬ್ಲ್ಯೂ. ಗೋಸ್ಟಿಕ್ ಹಾಗೂ ಸಾಡೇ ಕ್ರೈಸ್ತ ಧರ್ಮ ಗುರುಗಳು ತುಮಕೂರಿನ ಸಾಡೇಪುರ, ದೇವನೂರು, ಬೇತಲೂರುಗಳಲ್ಲಿ ಶಿಕ್ಷಣವನ್ನು ನೀಡುತ್ತಾ ಆಯಾ ಸ್ಥಳಗಳಲ್ಲಿ ಕ್ರೈಸ್ತಾಲಯಗಳನ್ನು ನಿರ್ಮಿಸಿದರು. ತುಮಕೂರಿನಲ್ಲಿ ಪಾದ್ರಿಯಾಗಿದ್ದ ಜಾನ್ ಸಿ.ಡಬ್ಲ್ಯೂ ಗೋಸ್ಟಿಕ್‌ರವರ ನೇತೃತ್ವದಲ್ಲಿ ೧೮೭೬ರ ಅಕ್ಟೋಬರ್ ೨೨ ರಂದು ಮಧುಗಿರಿ ತಾಲೂಕಿನ ಬಡಚೌಡನಹಳ್ಳಿಯಲ್ಲಿ ಅಶುಭವೆಂದು ಪರಿಗಣಿಸಿದ್ದ ದಿನದಂದೇ ಸಭೆಯನ್ನು ಮಾಡಿದ್ದರು. ದೇವದಾಸಪ್ಪ, ದೇವದತ್ತಪ್ಪ, ಸತ್ಯವೀರಯ್ಯ, ಜ್ಞಾನಮಿತ್ರಯ್ಯ, ಗುರುಸಿದ್ದಪ್ಪ ಎಂಬುವವರಿಗೆ ಕ್ರೈಸ್ತಧರ್ಮದ ದೀಕ್ಷೆಯನ್ನು ನೀಡಿದ್ದರು.[೩೯] ೧೮೮೧ರಲ್ಲಿ ತುಮಕೂರು ಪಟ್ಟಣದಲ್ಲಿರುವ ಸಿ.ಎಸ್. ಐ ವೆಸ್ಲಿಯನ್ ಚರ್ಚನ್ನು, ೧೯೩೨ರಲ್ಲಿ ಟಾಮ್ಲಿನ್‌ಸನ್ ಪಾದ್ರಿಗಳು ಸಾಡೇಪುರದ ಯೂನಿಯನ್ ಕ್ರಿಸ್ಟಿಯನ್ ಕಾಲೇಜನ್ನು ನಿರ್ಮಿಸಿದರು.[೪೦] ಆ ಮೂಲಕ ಈ ಪ್ರದೇಶದ ಮಕ್ಕಳಿಗೆ ವಿದ್ಯಾಧಾನವನ್ನು ಮಾಡಲಾಗುತ್ತಿದೆ. ಇಂದು ಜಿಲ್ಲೆಯಾದ್ಯಂತ ಅಲ್ಲಲ್ಲಿ ಕ್ರೈಸ್ತ ಚರ್ಚ್‌ಗಳಿವೆ. ಇಲ್ಲಿನ ಕ್ರೈಸ್ತರು ಅನ್ಯ ಧರ್ಮೀಯರೊಂದಿಗೆ ಸಹಬಾಳ್ವೆಯ ಜೀವನವನ್ನು ನಡೆಸುತ್ತಿದ್ದಾರೆ. ತುಮಕೂರು ಜಿಲ್ಲೆಯಲ್ಲಿರುವ ಪ್ರಮುಖ ಚರ್ಚ್‌ಗಳೆಂದರೆ :

**ಪ್ರೊಟೆಸ್ಟಂಟ್ ಚರ್ಚ್‌ಗಳು** : ಸಿ. ಎಸ್. ಐ ವೆಸ್ಲಿಯನ್ ಚರ್ಚ್, ಟಾಮ್ಲಿನ್‌ಸನ್ ಚರ್ಚ್ ಸಿರಾಗೇಟ್ ತುಮಕೂರು, ವಿಲಿಯಂ ಸೇಂಟ್ ಆರ್ಥರ್ ಚರ್ಚ್ ಗುಬ್ಬಿ, ಬಿಲೀವರ್ ಚರ್ಚ್

ಆಫ್ ಇಂಡಿಯಾ ರಂಗನಾಥನಗರ, ಸಿರಾ, ಸಾಡೇ ಮೆಮೋರಿಯಲ್ ಚರ್ಚ್ ದೇವನೂರು, ಬೇತಲೂರು ಚರ್ಚ್, ಗಿಲ್ ಚರ್ಚ್ ಸಿ.ಎಸ್.ಐ. ಲೇಔಟ್ ತುಮಕೂರು, ಶಾಂತಿ ಚರ್ಚ್ ಶಾಂತಿನಗರ, ಸ್ಟೀನ್ ಮೆಮೋರಿಯಲ್ ಚರ್ಚ್ ಕುರಿಪಾಳ್ಯ, ತುಮಕೂರು ಮುಂತಾದುವು.

**ಕ್ಯಾಥೋಲಿಕ್ ಚರ್ಚ್‌ಗಳು** : ಸಿರಾದ ಚೆಂಗಾವರ ರಸ್ತೆಯಲ್ಲಿ ಸೇಂಟ್ ಜೋಸೆಫ್ ಚರ್ಚ್‌ನ್ನು ೧೯೭೨ ರಲ್ಲಿ ನಿರ್ಮಿಸಲಾಗಿದೆ. ಲೂರ್ದುಮಾತಾ ಕ್ರಿಸ್ತಾಲಯ ಹೊರಪೇಟೆ ತುಮಕೂರು, ಅವರ್ ಲೇಡಿ ಆಫ್ ಲಾರ್ಡ್ಸ್ ಚರ್ಚ್ ತುಮಕೂರು, ಸೇಂಟ್ ರೀಟಾಸ್ ಚರ್ಚ್ ಕುಣಿಗಲ್, ಸೇಕ್ರೆಡ್ ಹಾರ್ಟ್ ಚರ್ಚ್ ತಿಪಟೂರು ಮುಂತಾದುವು.

**ಜೈನ ಸಮುದಾಯ :**

ತುಮಕೂರು ಪ್ರದೇಶದಲ್ಲಿ ಜೈನಧರ್ಮವು ಇಂದು ಪ್ರಬಲವಾಗಿ ಉಳಿದು ಕೊಂಡಿಲ್ಲವೆಂದೇ ಹೇಳಬಹುದಾಗಿದೆ. ಆದರೂ ಈ ನೆಲದಲ್ಲಿ ಜೈನಧರ್ಮದ ಏಳಿಗೆಗೆ ವಿರೋಧಗಳು ಕಂಡುಬಂದಿಲ್ಲ ಎಂಬುದನ್ನೂ ಗುರುತಿಸಬಹುದು. ಇಲ್ಲಿ ಆಳ್ವಿಕೆ ನಡೆಸಿರುವ ಗಂಗರು ಜೈನಧರ್ಮೀಯರಾಗಿದ್ದರೂ ಸಹ ಅವರ ಕಾಲದಲ್ಲಿನ ಜೈನ ಸ್ಮಾರಕಗಳು ಇಲ್ಲಿ ಕಂಡು ಬರುವುದಿಲ್ಲ. ಗಂಗರ ಪತನಾನಂತರ ತುಮಕೂರಿನ ಬಹುಭಾಗವು ಹೊಯ್ಸಳರ ಆಳ್ವಿಕೆಗೆ ಒಳಪಟ್ಟಿತ್ತು. ಅವರು ಈ ಪ್ರಾಂತ್ಯದ ಆಳ್ವಿಕೆಯನ್ನು ಸಾಮಂತರು, ದಂಡನಾಯಕರ ಮೂಲಕ ನಡೆಸಿದರು. ಅವರಲ್ಲಿ ಪ್ರಮುಖವಾಗಿ ಕೈದಾಳದ ಭೀಮವ್ವ, ಗೋವಿದೇವ, ಎರೆಯ ಮಂಗಯ್ಯ, ಗಂಗೇಯ ಮಾರಯ್ಯ, ಹೆಗ್ಗಡೆ ಚಿಕ್ಕಣ್ಣ, ಮುಂತಾದವರು ಜೈನಧರ್ಮೀಯರಾಗಿದ್ದರು.[೪೧] ಹೀಗಾಗಿ ಈ ಕಾಲದಲ್ಲಿ ಹಲವು ಜೈನ ಸ್ಮಾರಕಗಳನ್ನು ನಿರ್ಮಿಸಲಾಯಿತು. ಇಲ್ಲಿನ ಪ್ರಮುಖವಾದ ಜೈನ ಕ್ಷೇತ್ರಗಳೆಂದರೆ : ಅಕ್ಕಿರಾಂಪುರ, ಕುಣಿಗಲ್ (ಪಾರ್ಶ್ವನಾಥ ದೇವರ ಜಿನಾಲಯ), ಗುಬ್ಬಿ, ತುಮಕೂರು, ತೋವಿನಕೆರೆ, ನಿಟ್ಟೂರು, ನಿಡಗಲ್ಲು, ಬಿದರೆ, ಬೆಳಗುಲಿ, ಮಂದರಗಿರಿ, ಮಧುಗಿರಿ, ಮಾಯಸಂದ್ರ, ಮಿಡಿಗೇಶಿ, ಶೀತಕಲ್ಲು (ಇಲ್ಲಿನ ಜಿನಾಲಯದಲ್ಲಿ ಪಾರ್ಶ್ವನಾಥ, ಪದ್ಮಾವತಿಯರನ್ನು ಪೂಜಿಸಲಾಗುತ್ತದೆ), ಹಟ್ನ (ಪಾರ್ಶ್ವನಾಥರ ಜಿನಾಲಯ) ಇತ್ಯಾದಿ.

ಕೊರಟಗೆರೆ ತಾಲೂಕಿನ **ಅಕ್ಕಿರಾಂಪುರ**ದಲ್ಲಿ ಪ್ರಾಚೀನ ಅನಂತನಾಥ ಸ್ವಾಮಿಯ ಮಂದಿರವಿದೆ. ಇತ್ತೀಚೆಗೆ ಜೀರ್ಣೋದ್ಧಾರಗೊಂಡಿದೆ. ಇಲ್ಲಿನ ಮಾನಸ್ತಂಭದ ಮೇಲೆ ಬ್ರಹ್ಮದೇವರ ವಿಗ್ರಹವಿದೆ. **ಗುಬ್ಬಿ**ಯ ಜಿನ ಬಸದಿಯಲ್ಲಿರುವ ಆದಿನಾಥ ತೀರ್ಥಂಕರರ ಮೂರ್ತಿಯು ಮೂಲದ್ದಾಗಿದೆ. ಬಸದಿಯ ಬಲಭಾಗದಲ್ಲಿ ಬ್ರಹ್ಮದೇವರ ಮಂದಿರವಿದೆ. ಬಸದಿಯ ಮುಂಭಾಗದಲ್ಲಿ ಮಾನಸ್ತಂಭವಿದೆ. ಈ ಬಸದಿಯ ಮೂಲವಿಗ್ರಹವನ್ನು ಸುಮಾರು ಕ್ರಿ. ಶ. ೧೯೩೦ ರಲ್ಲಿ ಇಲ್ಲಿಗೆ ಸಮೀಪದ ಸಂಪಿಗೆ ಗ್ರಾಮದಿಂದ ಸ್ಥಳಾಂತರಿಸಿ ತಂದು ಪ್ರತಿಷ್ಠಾಪಿಸಲಾಗಿದೆ.[೪೨] ಇಪ್ಪತ್ತಮೂರನೇ ತೀರ್ಥಂಕರರಾದ ಪಾರ್ಶ್ವನಾಥಸ್ವಾಮಿಯ ಮೂಲ ವಿಗ್ರಹವನ್ನು ಇಲ್ಲಿನ **ತುಮಕೂರಿನ ಚಿಕ್ಕಪೇಟೆ**ಯ ಬಸದಿಯಲ್ಲಿ ನೆಲೆಗೊಳಿಸಲಾಗಿದೆ.

ವೀರಶೈವರಾಗಿದ್ದ ಕರಿಮಣಿ ಸಿದ್ದಲಿಂಗಪ್ಪನವರು ಇಲ್ಲಿನ ಪಂಚಲೋಹದ ವಿಗ್ರಹವನ್ನು ದಾನವಾಗಿ ನೀಡಿದ್ದರೆಂದು ತಿಳಿದು ಬರುತ್ತದೆ. ಕ್ರಿ. ಶ. ೧೯೨೦ರ ನಂತರದಲ್ಲಿ ಈ ಬಸದಿಯನ್ನು ಜೀರ್ಣೋದ್ಧಾರ ಮಾಡಿದ್ದಾರೆ. ತುಮಕೂರಿನ ಜೈನ ಮಂಡಳಿಯ ಸಹಕಾರದ ಮೇರೆಗೆ ಇಲ್ಲಿನ ಪೂಜಾ ಆಚರಣೆಗಳು ಇಂದಿಗೂ ನಡೆಯುತ್ತವೆ.[೪೩] ಕೊರಟಗೆರೆ ತಾಲೂಕಿನ **ತೋವಿನಕೆರೆ** ಗ್ರಾಮದಲ್ಲಿ ಶ್ರೀ ಚಂದ್ರನಾಥ ಸ್ವಾಮಿಯ ಬಸದಿಯಿದೆ. ಇಲ್ಲಿ ಇಂದಿಗೂ ಜೈನ ಶ್ರಾವಕರು ವಾಸವಿದ್ದಾರೆ. ಜೈನ ಕವಿ ಚಂದ್ರಸಾಗರವರ್ಣಿಯು ಇಲ್ಲಿ ನೆಲೆಸಿದ್ದು ಹಲವು ಕೃತಿಗಳನ್ನು ರಚಿಸಿದ್ದಾರೆ. **ನಿಟ್ಟೂರು** ಗುಬ್ಬಿ ತಾಲೂಕಿನ ಹೋಬಳಿ ಕೇಂದ್ರವಾಗಿದೆ. ಇದನ್ನು ದಕ್ಷಿಣದ ಐಯ್ಯಾಹೊಳೆ ಐನೂರು ಎಂದು ಕರೆಯಲಾಗುತ್ತದೆ. ಇಲ್ಲಿ ಪ್ರಾಚೀನವಾದ ಶಾಂತೀಶ್ವರ ಬಸದಿಯಿದೆ. ಈ ಬಸದಿಯಲ್ಲಿ ಪದ್ಮಾವತಿ ಮತ್ತು ಬ್ರಹ್ಮದೇವರ ಮಂದಿರವಿದೆ. ಇಲ್ಲಿ ಒಂಬತ್ತು ಅಂಕಣಗಳ ನವರಂಗವು ಅಲಂಕೃತ ಕಂಬಗಳಿಂದ ನಿರ್ಮಿಸಲಾಗಿದೆ. ದ್ವಾರದ ಮೇಲೆ ಜಿನವಿಗ್ರಹ ಮತ್ತು ಕನ್ನಡ ಭಾಷೆಯ ಬರಹವಿದೆ. ಬಸದಿಯನ್ನು ಇತ್ತೀಚೆಗೆ ಜೀರ್ಣೋದ್ಧಾರಗೊಳಿಸಲಾಗಿದೆ. ಜ್ವಾಲಮಾಲಿನಿಯ ಪೂಜೆಯನ್ನು ಇಲ್ಲಿ ವೀಶೇಷವಾಗಿ ನೆರವೇರಿಸಲಾಗುತ್ತದೆ. ಇಲ್ಲಿ ಆದೀಶ್ವರ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿತ್ತು.[೪೪] ಈ ಬಸದಿಯಲ್ಲಿ ನಿಷಿಧಿಗಳ ಅವಶೇಷಗಳಿವೆ. ಇವುಗಳು ಮಾಳವ್ವೆ, ಚೌಡಿಯಕ್ಕ, ಬೂಚವ್ವೆ ಎಂಬುವವರ ನಿಷಧಿಗಳೆಂದು ತಿಳಿದು ಬರುತ್ತದೆ.[೪೫] ಜೈನಾಂಬಿಕೆ ಎನಿಸಿದ ಮಾಳವ್ವೆ, ಶೆಟ್ಟಿಕಬ್ಬೆಯರ ಮಗನಾದ ಮಲ್ಲಶೆಟ್ಟಿ ಎಂಬುವವರು ಈ ಬಸದಿಯ ಭಿತ್ತಿಯ ಸುತ್ತಲೂ ಪ್ರತಿಮೆಗಳನ್ನು ನಿರ್ಮಿಸಿದ್ದನೆಂದು ತಿಳಿದುಬರುತ್ತದೆ.[೪೬] ಪಾವಗಡ ತಾಲೂಕಿನ **ನಿಡಗಲ್ಲು** ಸ್ಥಳೀಯ ಚೋಳರು ಮತ್ತು ನಿಡಗಲ್ಲು ನಾಯಕರ ರಾಜಧಾನಿಯಾಗಿತ್ತು. ಇಲ್ಲಿನ ಅಬೇಧ್ಯವಾದ ಕೋಟೆಯ ಅವಶೇಷದಿಂದಾಗಿ ಈ ನೆಲೆಯು ಚಾರಿತ್ರಿಕ ಮಹತ್ವವನ್ನು ಪಡೆದಿದೆ.ಇಲ್ಲಿ ಶಿಥಿಲಾವಸ್ಥೆಯಲ್ಲಿರುವ ಬಸದಿಯಿದೆ. ಇದರಲ್ಲಿ ೨೩ ನೇ ತೀರ್ಥಂಕರ ಪಾರ್ಶ್ವನಾಥರ ವಿಗ್ರಹವಿದೆ. ಅಲ್ಲದೇ ಬಸದಿಗಳ ಅವಶೇಷಗಳಿವೆ. ಗುಬ್ಬಿ ತಾಲೂಕಿನ **ಬಿದರೆ** ಗ್ರಾಮದಲ್ಲಿ ಪಾರ್ಶ್ವನಾಥರ ಬಸದಿಯಿದೆ. ಶಿಥಿಲಾವಸ್ಥೆಯಲ್ಲಿದ್ದ ಇದನ್ನು ಇತ್ತೀಚೆಗೆ ಜೀರ್ಣೋದ್ಧಾರ ಮಾಡಲಾಗಿದೆ. ಇದಕ್ಕೆ ಹತ್ತಿರದಲ್ಲಿ 'ಜೈನರಹಳ್ಳಿ' ಎಂಬ ಗ್ರಾಮವಿದೆ. ಚಿಕ್ಕನಾಯಕನಹಳ್ಳಿ ತಾಲೂಕು ಕೇಂದ್ರದಿಂದ ಸುಮಾರು ೨೪ ಕಿ.ಮೀ. ದೂರದಲ್ಲಿರುವ **ಬೆಳಗುಲಿ**ಯು ಪ್ರಮುಖವಾದ ಜೈನ ಕೇಂದ್ರವಾಗಿದೆ. ಇಲ್ಲಿ ಪಾರ್ಶ್ವನಾಥ, ಶಾಂತಿನಾಥ ಸ್ವಾಮಿಯ ಬಸದಿಯಿದೆ.ಬೆಳಗಾವಿಯಿಂದ ಆಗಮಿಸಿದ್ದ ದಿಗಂಬರ ಜೈನಮುನಿ ಧರ್ಮ ಭೂಷಣ ಮಹಾರಾಜ ಮುನಿಗಳು ಇಲ್ಲಿ ೨೩ ನೇ ತೀರ್ಥಂಕರರನ್ನು ಆರಾಧಿಸುತ್ತಿದ್ದರು. ಇಲ್ಲಿನ ಬಸದಿಯ ಎದುರಿನಲ್ಲಿ ಮಾನಸ್ತಂಭವಿದೆ. ಮಾನಸ್ಥಂಭದ ತುದಿಯಲ್ಲಿ ಶಾಂತಿನಾಥ ತೀರ್ಥಂಕರರ ನಾಲ್ಕು ಮೂರ್ತಿಗಳನ್ನು ಚತುರ್ಮುಖ ದಿಕ್ಕಿನಲ್ಲಿಯೂ ಸ್ಥಾಪಿಸಲಾಗಿದೆ. **ಮಂದರಗಿರಿ**ಯು ತುಮಕೂರಿನ ಹಿರೇಹಳ್ಳಿಯ ಹತ್ತಿರ ರಾಷ್ಟ್ರೀಯ ಹೆದ್ದಾರಿಗೆ ಹೊಂದಿಕೊಂಡಂತೆ ಇದೆ. ಸದರಿ ಮಂದರಗಿರಿಯ ಮೇಲ್ಭಾಗದಲ್ಲಿ ಜೈನ ಸ್ಮಾರಕಗಳಿವೆ.

ಮಂದರಗಿರಿಯ ಏಕಶಿಲಾಗುಡ್ಡದ ಮೇಲೆ ಇರುವ ವಿಶಾಲವಾದ ಪ್ರಾಕಾರದ ಒಳಭಾಗದಲ್ಲಿ ನಾಲ್ಕು ಜಿನಮಂದಿರಗಳಿವೆ. ಬೆಟ್ಟವನ್ನು ಹತ್ತುವ ಬಲಭಾಗದಲ್ಲಿ ಬ್ರಹ್ಮದೇವರ ಮಂದಿರವಿದೆ. ತುಮಕೂರಿನ ಜೈನ ಶ್ರಾವಕರ ಒಕ್ಕೂಟವಾದ ಜೈನ ಮಂಡಳಿಯ ವತಿಯಿಂದ ಇಲ್ಲಿ ವರ್ಷಕ್ಕೊಮ್ಮೆ ಪೂಜಾ ಮಹೋತ್ಸವವು ನಡೆಯುತ್ತದೆ. ಹೊಯ್ಸಳದೊರೆ ನರಸಿಂಹನ ಸೇನಾನಿ ಎರೆಯಂಗ, ಎರೆಯಂಗನ ಮಾವ ಈಶ್ವರಚಮೂಪತಿ. ಈತನು ಮರುವಳಿ, ಮಣ್ಣೆ, ಕೆಂಗೆರೆ, ಕಲ್ಲುವಳ್ಳಿ ನಾಡುಗಳ ಆಡಳಿತಾಧಿಕಾರಿಯಾಗಿದ್ದನು. ಈತನ ಹೆಂಡತಿ ಮೂಜಿಯಕ್ಕ (ಮಾಜಪ್ಪಿ) ಈಕೆಯು ಇಲ್ಲಿನ ಚೈತ್ಯಾಲಯವನ್ನೂ, ಪದ್ಮಾವತಿ ಎಂದು ಕರೆಯಲಾಗುವ (ಮೈದಾಳಕೆರೆ) ಕೆರೆಯನ್ನೂ ನಿರ್ಮಿಸಿದಳು. ಅಲ್ಲದೇ ಜಿನೇಶ್ವರ ಪೂಜೆ ಮತ್ತು ಜಿನ ಮುನಿಗಳ ಆಹಾರ, ಆಶ್ರಯಾದಿ ವ್ಯವಸ್ಥೆಗಳಿಗಾಗಿ ಭೂಮಿಯನ್ನು ದಾನವಾಗಿ ನೀಡಿದ್ದಳೆಂದು ತಿಳಿದು ಬರುತ್ತದೆ.[೪೭] **ಮಧುಗಿರಿ** ತಾಲೂಕು ಕೇಂದ್ರವು ಇಲ್ಲಿ ಆಳಿದ ಮಹಾನಾಡಪ್ರಭುಗಳ ಕಾರಣದಿಂದಾಗಿ ಇದೊಂದು ಚಾರಿತ್ರಿಕ ನೆಲೆಯೂ ಹಾಗೂ ಸಾಂಸ್ಕೃತಿಕ ನೆಲೆಯೂ ಆಗಿದೆ. ಇಲ್ಲಿನ ಏಕಶಿಲಾ ಬೆಟ್ಟದ ಕೆಳಗೆ ಪ್ರಾಚೀನವಾದ ಬಸದಿಯಿದೆ. ಇಲ್ಲಿ ಮಲ್ಲಿನಾಥಸ್ವಾಮಿಯನ್ನು ಪೂಜಿಸಲಾಗುತ್ತದೆ. ತುರುವೇಕೆರೆ ತಾಲೂಕಿನ **ಮಾಯಸಂದ್ರ** ಗ್ರಾಮದಲ್ಲಿ ಪಾರ್ಶ್ವನಾಥರ ಜಿನಾಲಯವಿದೆ. ಇತ್ತೀಚೆಗೆ ಆರ್ಯಿಕಾ ರಾಜೀಮತಿ ಎಂಬುವವರ ಸಹಕಾರದಿಂದ ಇಲ್ಲಿನ ಬಸದಿಯನ್ನು ಜೀರ್ಣೋದ್ಧಾರ ಗೊಳಿಸಲಾಗಿದೆ. ಮಧುಗಿರಿ ತಾಲೂಕಿನ **ಮಿಡಿಗೇಶಿ**ಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಇಲ್ಲಿನ ನಾಗಿರೆಡ್ಡಿಯು ಆಳ್ವಿಕೆಯನ್ನು ಮಾಡಿದ್ದನು. ಇಲ್ಲಿ ೨೩ ನೇ ತೀರ್ಥಂಕರ ಪಾರ್ಶ್ವನಾಥರ ಬಸದಿಯಿದೆ.ಇಲ್ಲಿ ಬ್ರಹ್ಮದೇವರನ್ನು ವಿಶೇಷವಾಗಿ ಪೂಜಿಸಲಾಗುತ್ತದೆ.

ಆಕರಗಳ ಅಗತ್ಯತೆಯು ಇತಿಹಾಸದ ಮೂಲ ಶಿಸ್ತು. ಈ ನೆಲೆಯಲ್ಲಿ ಆಕರಗಳಿಲ್ಲದೇ ಚರಿತ್ರೆಯಿಲ್ಲ. ಹೀಗಾಗಿ ಸಾಹಿತ್ಯ ಮತ್ತು ಮೌಖಿಕತೆಯನ್ನು ಲಿಖಿತ ಆಕರಗಳಿಗೆ ಪೂರಕವಾಗಿ ಬಳಸಿಕೊಳ್ಳಲಾಗಿತ್ತಿತ್ತು. ಸಾಹಿತ್ಯವು ಭಾವನಾತ್ಮಕವಾದುದು, ಕಾಲ್ಪನಿಕವಾದುದು ಎಂಬ ಮಿತಿಗಳಿದ್ದಾಗ್ಯೂ ಅವುಗಳು ಸಮಕಾಲೀನ ಸಮಾಜದಲ್ಲಿ ರೂಢಿಯಲ್ಲಿರುವ ವಾಸ್ತವಾಂಶಗಳನ್ನು ಒಳಗೊಂಡಿರುತ್ತವೆ. ಈ ಹಿನ್ನೆಲೆಯಲ್ಲಿ ಜೈನ ಸಾಹಿತ್ಯದಲ್ಲಿ ಉಲ್ಲೇಖಿಸಿರುವ ಮೌಖಿಕ ಆಕರಗಳಲ್ಲಿ ಚಾರಿತ್ರಿಕ ಅಂಶಗಳನ್ನು ಗುರುತಿಸಬಹುದಾಗಿದೆ.

ಉದಾಹರಣೆಗೆ : ದೇವಚಂದ್ರನ ರಾಜಾವಳಿ ಕಥೆಯಲ್ಲಿ ಮೌಖಿಕ ಆಕರಗಳಾದ ಹಲವು ಗಾದೆಗಳನ್ನು ಉಲ್ಲೇಖಿಸಲಾಗಿದೆ.[೪೮] 'ಹಂದಿಯೊಂದಿಗಾಡಿ ಕೆಂದಗರು ಹೇಲು ತಿಂದಂತೆ' ಕೆಟ್ಟವನ ಜೊತೆ ಸೇರಿದ ಒಳ್ಳೆಯವನು ಕೂಡ ದುಷ್ಟನಾಗುವನೆಂಬ ನೀತಿಯನ್ನು (ಸಹವಾಸ ದೋಷವನ್ನು) ಹೇಳಲಾಗುತ್ತದೆ, 'ಬಲ್ಲಿದನು ಹೇಲನ್ನು ತಿಂದರೆ ಔಷಧಿಯನ್ನು ತೆಗೆದು ಕೊಂಡಂತೆ, ಆದೇ ಬಡವನು ತಿಂದರೆ ಹೊಟ್ಟೆಗಿಲ್ಲವೆಂಬಂತೆ' ಶ್ರೀಮಂತನ ಅಸಹ್ಯ ಕೃತ್ಯವನ್ನು ಸಮರ್ಥಿಸಿಕೊಳ್ಳುವ, ಬಡವನಿಗೆ ತಕ್ಕುದೆಂದು ಆಡಿಕೊಳ್ಳುವ ಸಮಾಜದ ಮನಸ್ಥಿತಿಯನ್ನು ಇಲ್ಲಿ ವ್ಯಕ್ತಪಡಿಸಲಾಗಿದೆ. ಸಮಾಜದ ತಲವರ್ಗದ ಪರವಾಗಿ ನುಡಿಯುವ

'ನನಗೂ ಗೊತ್ತು ಮಣ್ಣು, ಅನ್ನ ತಿನ್ನದೇ ಮಣ್ಣು ತಿನ್ನುತ್ತಾನೊ' ಎಂಬ ನಾಣ್ಣುಡಿಗಳಿವೆ. ಸಂವೇದನಾಶೀಲವಾದ 'ಇರುವೆಗೆ ಮೂತ್ರವೇ ಪ್ರಳಯ ಜಲ' ಎಂಬ ಗಾದೆಗಳಿವೆ. 'ಉಪ್ಪಿಗೂ ಕಾಸಿಲ್ಲದೆ ಸಪ್ಪೆಯನ್ನು ತಿನ್ನುತ್ತಿರುವೆ' ಎಂಬ ನುಡಿಯಲ್ಲಿ ಕ್ಷಾಮ, ಬಡತನ, ಆಹಾರದ ಸ್ವರೂಪವನ್ನು ಗುರುತಿಸಬಹುದಾಗಿದೆ. 'ನವಣಕ್ಕಿ ಹಿಟ್ಟಿನ ಪಥ್ಯದಿಂದ ಪಿತ್ತ ನಿವಾರಣೆಯಾಗುತ್ತದೆ' ಎಂಬ ವಾಕ್ಯಗಳಲ್ಲಿ ಜನಪದರ ವೈದ್ಯ ನಂಬಿಕೆ, ಆಚರಣೆಗಳಿವೆ.

ಹೀಗೆ ಜೈನ ಸಾಹಿತ್ಯದಲ್ಲಿ ಉಲ್ಲೇಖಿಸಿರುವ ನಾಣ್ಣುಡಿಗಳು ತುಮಕೂರು ಪ್ರದೇಶದಲ್ಲಿ ಇಂದಿಗೂ ಪ್ರಚಲಿತವಾಗಿವೆ. ಹೀಗಾಗಿ ಇಂತಹ ಊರು, ಕೇರಿ, ಪಡಸಾಲೆ, ಹಟ್ಟಿ, ಅರಳೀಕಟ್ಟೆ, ಬೀದಿ ಬಯಲಲ್ಲಿ ಹುಟ್ಟಿದ, ಕಟ್ಟಿದ ಜನಪದ ಕಥೆ, ನುಡಿ, ಗಾದೆ ಮುಂತಾದ ಮೌಖಿಕ ಆಕರಗಳಲ್ಲಿ ಚಾರಿತ್ರಿಕ ಅಂಶಗಳನ್ನು ಗುರುತಿಸಬಹುದಾಗಿದೆ.

## ೬.೪ ಆಚರಣೆಗಳು

ತುಮಕೂರು ಜಿಲ್ಲೆಯ ಬಹುತೇಕ ಎಲ್ಲೆಡೆಯೂ ಹಲವು ಬಗೆಯ ಆಚರಣೆಗಳು ಅವುಗಳಲ್ಲಿ ಪ್ರಮುಖವಾದುವು

೧. ಹಬ್ಬಗಳು
೨. ಕೃಷಿ ಮತ್ತು ಮಳೆ ಸಂಬಂಧಿ ಆಚರಣೆಗಳು
೩. ಜಾತ್ರೆಗಳು
೪. ಜೋಗತಿ ಸಂಪ್ರದಾಯ
೫. ಸಾವು ಮತ್ತು ಶವಸಂಸ್ಕಾರ ಪದ್ಧತಿಗಳು

### ೬.೪.೧ ಹಬ್ಬಗಳು :

ಗ್ರಾಮದೇವತೆಯ ಊರ ಹಬ್ಬದಿಂದ ರಾಷ್ಟ್ರೀಯ ಹಬ್ಬಗಳವರೆಗೆ ಹಬ್ಬಗಳ ಹರವು ವಿಸ್ತಾರವಾಗಿದೆ. ಹಬ್ಬಗಳು ಸಂಪ್ರದಾಯಗಳ ಮೊತ್ತವಾಗಿವೆ. ಭಾರತೀಯ ಸಂಸ್ಕೃತಿಯಲ್ಲಿ ಹಬ್ಬಗಳಿಗೂ ಋತುಮಾನಗಳಿಗೂ ಅವಿನಾಭಾವ ಸಂಬಂಧವಿದೆ. ಸಮುದಾಯದ ಸಹಭಾಗಿತ್ವಕ್ಕೆ ಅನುಗುಣವಾಗಿ ಹಬ್ಬಗಳನ್ನು ಮೂರು ರೀತಿಯಲ್ಲಿ ವರ್ಗೀಕರಿಸಿಕೊಳ್ಳಲಾಗಿದೆ. ಶ್ರಮವಿಭಜನೆಯ ತತ್ವಾಧರಿತ ಸಮಾಜದಲ್ಲಿ ಮಾಡಲಾಗುವ ಬಹುತೇಕ ಎಲ್ಲ ಆಚರಣೆಗಳಲ್ಲಿ ಸರ್ವ ಸಮುದಾಯಗಳು ಪ್ರತ್ಯಕ್ಷ ಅಥವಾ ಪರೋಕ್ಷವಾಗಿ ಪಾಲ್ಗೊಳ್ಳುವುದನ್ನು ಗುರುತಿಸಬಹುದು. ಹಾಗಾಗಿ ಇಂತಹ ವಿಂಗಡನೆಯು ಅಸಮಂಜಸವೆಂದು ಕಂಡುಬರುತ್ತದೆ. ಆದರೂ ಅಧ್ಯಯನದ ಸಲುವಾಗಿ ಈ ಕೆಳಕಂಡಂತೆ ವರ್ಗೀಕರಿಸಿಕೊಳ್ಳಲಾಗಿದೆ.

೧) ವೈಯಕ್ತಿಕ ಹಬ್ಬಗಳು– ವ್ಯಕ್ತಿಕೇಂದ್ರಿತ ಹಬ್ಬಗಳು. ಹುಟ್ಟುಹಬ್ಬ, ನಾಮಕರಣ, ಲಿಂಗಧಾರಣೆ ಇತ್ಯಾದಿ.

೨) ರಾಷ್ಟ್ರೀಯ ಹಬ್ಬಗಳು– ರಾಷ್ಟ್ರೀಯ ಮಹತ್ವದ ಘಟನೆಗಳ ಸ್ಮರಣಾರ್ಥ, ರಾಷ್ಟ್ರ ವ್ಯಾಪಿಯಾಗಿ ಆಚರಿಸುವ ಹಬ್ಬಗಳು. ಗಣರಾಜ್ಯೋತ್ಸವ, ಅಂಬೇಡ್ಕರ್ ಜಯಂತಿ,

ಸ್ವಾತಂತ್ರ್ಯೋತ್ಸವ, ಗಾಂಧೀಜಿ ಜಯಂತಿ ಇತ್ಯಾದಿ.

೩) ಮತೀಯ ಹಬ್ಬಗಳು- ಧರ್ಮ, ಜಾತಿಗಳಿಗೆ ಸೀಮಿತಗೊಳಿಸಿಕೊಂಡು ಆಚರಿಸುವ ಹಬ್ಬಗಳು.

ಯುಗಾದಿ, ಶ್ರೀರಾಮನವಮಿ, ನಾಗರಪಂಚಮಿ, ವರಮಹಾಲಕ್ಷ್ಮಿ, ಗೌರಿ ಮತ್ತು ಗಣೇಶ ಹಬ್ಬ, ಮಹಾನವಮಿ, ವಿಜಯದಶಮಿ, ದೀಪಾವಳಿ, ಕಾರ್ತಿಕಮಾಸದ ಆಚರಣೆ, ಸಂಕ್ರಾಂತಿ, ಮಹಾಶಿವರಾತ್ರಿ, ಬಾಬಯ್ಯ, ಉರುಸ್, ಮಹಾವೀರ ಜಯಂತಿ, ಕ್ರಿಸ್‌ಮಸ್, ಗುಡ್‌ಫ್ರೈಡೇ, ಮುಂತಾದವು. ಹಬ್ಬಗಳ ಆಚರಣೆಯ ಮಹತ್ವ, ಮತ್ತು ಈ ಹಬ್ಬಗಳಲ್ಲಿ ಪಾಲ್ಗೊಳ್ಳುವ ಸಮುದಾಯವನ್ನು ಕುರಿತು ಸಂಕ್ಷಿಪ್ತವಾಗಿ ಅಧ್ಯಯನವನ್ನು ಮಾಡಲಾಗಿದೆ.[೪೯]

**ಊರಹಬ್ಬ (ಮಾರಮ್ಮನ ಪೂಜೆ, ಜಾತ್ರೆ)** : ತುಮಕೂರು ಪ್ರದೇಶದ ಪ್ರತೀ ಹಳ್ಳಿಯಲ್ಲಿಯೂ ಗ್ರಾಮ ದೇವತೆಗಳ ದೇವಾಲಯಗಳಿವೆ. ಅವುಗಳಲ್ಲಿ ಮಾರಮ್ಮ ಪ್ರಮುಖವಾದ ದೇವತೆ. ಸ್ತ್ರೀ ದೇವತೆಯಾಗಿರುವ ಈಕೆಯನ್ನು ದುಷ್ಟ ಶಕ್ತಿಗಳ ನಿಗ್ರಹದ ರೂವಾರಿಯಂತೆ ಜನಪದರು ಭಾವಿಸಿದ್ದಾರೆ, ಈಕೆಯು ಉನ್ನತ ಕುಲಕ್ಕೆ ಸೇರಿದವಳೆಂಬುದು ಜನಪದರ ನಂಬಿಕೆಯಗಿದೆ. ಅಂತೆಯೇ ಈಕೆಯನ್ನು ಇಷ್ಟಪಟ್ಟು ವಿವಾಹವಾದ ತಲವರ್ಗದ ಗಂಡನು ಜಾತಿಯನ್ನು ಮರೆಮಾಚಿದನು ಎಂಬ ಕಾರಣಕ್ಕೆ ಆತನನ್ನೇ ಬಲಿಪಡೆಯುತ್ತಾಳೆ. ಈ ನೆಲೆಯಲ್ಲಿಯೇ 'ದಾರಿಯಲ್ಲಿ ಹೋಗುವ ಮಾರಿ ಮನೆಗೆ ಹೊಕ್ಕಿದಂತೆ', 'ಒಲಿದರೆ ನಾರಿ ಮನಿದರೆ ಮಾರಿ' ಎಂಬ ಗಾದೆಗಳು ಪ್ರಚಲಿತದಲ್ಲಿವೆ.

ಇಲ್ಲಿ ಅಂತರ್ಜಾತಿ ವಿವಾಹದ ಪರಿಕಲ್ಪನೆಯಿದೆ. ಆದರೂ ಪ್ರತಿಲೋಮ ವಿವಾಹ ಪದ್ದತಿಯನ್ನು ಸಹಿಸದ ಮೇಲ್ವರ್ಗವು ಸೃಷ್ಟಿಸಿದ ಸಾಹಿತ್ಯವನ್ನು ಪ್ರತಿಲೋಮ ವಿವಾಹದ ಪರಿಣಾಮವನ್ನು ಸಮಾಜಕ್ಕೆ ಸೂಚ್ಯವಾಗಿ ತಿಳಿಸಲು ಬಳಸಿಕೊಂಡಿರುವುದನ್ನು ಗಮನಿಸಬಹುದಾಗಿದೆ. ಮೇಲ್ವರ್ಗವು ಸೃಷ್ಟಿಸಿದ ಸಾಹಿತ್ಯವನ್ನು ತಲವರ್ಗವು ಹೇಳುವಂತೆ ಕಂಡುಬರುತ್ತದೆ.

ಸಾಮಾನ್ಯವಾಗಿ ಮಾರಮ್ಮನ ದೇವಾಲಯದ ಮುಂದೆ ಹಾಗೂ ಸುತ್ತಲು ಬೇವಿನ ಮರಗಳನ್ನು ಬೆಳೆಸಿರುವುದು ಕಂಡುಬರುತ್ತದೆ. ಬೇವಿನಮರವು ರೋಗ ನಿರೋಧಕದ ಪ್ರತಿರೂಪವಾಗಿದೆ. ಇಲ್ಲಿ ಮಾರಮ್ಮ ರೋಗಗಳ ಪ್ರಸಾರಕ ಹಾಗೂ ರೋಗಗಳ ನಿರ್ಮೂಲಕಳಾಗಿ ಪಾತ್ರವನ್ನು ವಹಿಸುತ್ತಾಳೆ. ಪ್ಲೇಗು, ಕಾಲರಾದಂತಹ ಸಾಂಕ್ರಾಮಿಕ ರೋಗಗಳು ಮಾರಮ್ಮನಿಗೆ ಬಂದಂತಹ ಕೋಪದ ಪ್ರಭಾವವೆಂದೇ ಭಾವಿಸಲಾಗುತ್ತದೆ. ಅಂತೆಯೇ ಹಲವು ಆಚರಣೆಗಳನ್ನು ಮಾಡುವ ಮೂಲಕ ರೋಗಗಳನ್ನು ಪರಿಹರಿಸುವಂತೆ ಆಕೆಯನ್ನೇ ಮೊರೆ ಹೋಗಲಾಗುತ್ತದೆ.

**ಮಾರಮ್ಮ ಕಥನ** : ಮಾರಮ್ಮನ ಕಥನಗಳು ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗಿ ಪ್ರಚಲಿತದಲ್ಲಿವೆ. ಬ್ರಾಹ್ಮಣ ಜಾತಿಯ ಸುಬ್ಬರಾಯನೆಂದು ಹೇಳಿಕೊಂಡು ಬಾಲಗೌರಿಯನ್ನು

ವಿವಾಹವಾದ ಕದುರನು ಸಾಂಸಾರಿಕ ಜೀವನ ಸಾಗಿಸುತ್ತಿದ್ದನು. ಹೆಂಡತಿಗೆ ತಿಳಿಯದಂತೆ ಕಾಡಿನಲ್ಲಿ ಚಪ್ಪಲಿ ಹೊಲೆಯುವ ಕಾಯಕವನ್ನು ಮಾಡುತ್ತಿದ್ದನು. ಒಮ್ಮೆ ಈತನನ್ನು ಹಿಂಬಾಲಿಸಿದ ಈತನ ಮಕ್ಕಳು ಚಪ್ಪಲಿಹೊಲೆಯುವ ವೃತ್ತಿಯನ್ನು ಅನುಕರಿಸುತ್ತಾರೆ. ಇದನ್ನು ಕಂಡು ಬಾಲಗೌರಿಯು ಕದುರನನ್ನು ಅನುಮಾನಿಸುತ್ತಾಳೆ. ಒಮ್ಮೆ ಕದುರನ ತಾಯಿ, ಮಗ, ಸೊಸೆಯ ಮನೆಗೆ ಬಂದಾಗ ಸಿದ್ಧ ಮಾಡಿದ್ದ ಸಿಹಿ ಭಕ್ಷ್ಯ ಬೋಜನಗಳನ್ನು ಸೇವಿಸಿದ ಬಳಿಕ 'ಕರುವಿನ ಕಾಲು ಕಡಿದ ಸಮವಿಲ್ಲ' ಎಂಬ ಮಾತನ್ನು ಆಡುತ್ತಾಳೆ. ಇದನ್ನು ಕೇಳಿದ ಸೊಸೆಯ ಸಂದೇಹವು ದೃಡಪಟ್ಟು ಕದುರನನ್ನು ಕೊಲ್ಲಲು ನಿಶ್ಚಯಿಸುತ್ತಾಳೆ. ಈಕೆಯಿಂದ ತಪ್ಪಿಸಿಕೊಳ್ಳಲು ಓಡಿ ಹೋದ ಕದುರನು ಹುಲ್ಲು ಬಣವೆಯ ಬಳಿಯಿದ್ದ ರಾಯಚೂರಿನ ವಕ್ಕಲಿಗರ ಗೌಡನ ಕೋಣದ ಹೊಟ್ಟೆಯೊಳಗೆ ಹೊಕ್ಕು ರಕ್ಷಣೆಯನ್ನು ಪಡೆದನಂತೆ. ಹೀಗಾಗಿ ಗಂಡನು ಪಟ್ಟದ ಕೋಣವಾಗುವಂತೆ, ತನ್ನ ನಾಲ್ಕು ಜನ ಗಂಡು ಮಕ್ಕಳು ಕ್ರಮವಾಗಿ ಮಲಮರಿ, ಧೂಳುಮರಿ, ದೃಷ್ಟಿಮರಿ, ಬಾನದ ಮರಿಗಳಾಗುವಂತೆ ಶಾಪಕೊಟ್ಟು ಕೊಂಡು ತಾನೂ ಸಹ ಜನ್ಮಾಂತರಗಳ ಚಕ್ರದಲ್ಲಿ ಸಿಲುಕಿಮಾರಿ ದೇವತೆಯಾದಳು.[೫೦]

**ಅಸಾದಿಗಳು** : ಅಸಾದಿ ಎಂದರೆ ಪ್ರಾಧ್ಯಾಪಕರಾದ ಚಿನ್ನಸ್ವಾಮಿ ಸೋಸಲೆ ರವರು 'ಪ್ರಸಾದಿ' ಎಂದು ಅರ್ಥೈಸುತ್ತಾರೆ. ಮುಂದುವರೆದು ಇದೊಂದು ಪರ್ಶಿಯನ್ ಪದವಾಗಿದ್ದು, ಅರಬ್‌ನಿಂದ ಬಂದ ಮುಸ್ಲಿಮರು ಇಲ್ಲಿನ ವೈಧಿಕರಂತೆ ತಮ್ಮದೇ ಆಚಾರಗಳನ್ನು ಪಾಲಿಸಿದಂತೆ 'ಅಸಾದಿಗಳು' ಗೋಚರಿಸುತ್ತಾರೆ ಎಂದು ಅಭಿಪ್ರಾಯಪಟ್ಟಿದ್ದಾರೆ. ಈತನು ತನ್ನ ತಾಯಿ ಮಾರಮ್ಮಳನ್ನು ಬೈಯ್ಯುತ್ತಾ, ತೆಗಳುತ್ತಾ, ನಿಂದಿಸುತ್ತಾ ಆಕೆಯ ಮಹಿಮೆಯನ್ನು ಸಾರುತ್ತಾ ಸಾಗುವನು. ಮಾರಮ್ಮನನ್ನು ಗುಡಿ ತುಂಬಿಸಿಕೊಳ್ಳುವಾಗ ಹೊಗಳುವ ಇವರು, ಆಕೆಯನ್ನು ಸಾಗಾಕುವಾಗ ಬೈಯ್ಯುವರು. ಮಾರಮ್ಮನ ಜಾತ್ರೆಯಲ್ಲಿ ಈತನ ಪಾತ್ರವು ಪ್ರಮುಖವಾದುದು. ಅಸಾದಿಯ ತಂದೆ ಮತ್ತು ಅಣ್ಣನನ್ನು ಸಂಹಾರ ಮಾಡಿದ ಮಾರಮ್ಮಳು, ತನ್ನ ಕಿರಿಯ ಮಗನಾದ ಅಸಾದಿಯನ್ನು ಕುರಿತು ನೀನು ನನಗೆ ಆಸೆ ಆದ ಮಗ ಹಾಗಾಗಿ ನೀನು ಬದುಕಿ ನನ್ನ ಮಹಿಮೆಯನ್ನು ಸಾರು ಎಂದು ಆಜ್ಞಾಪಿಸಿದಳು ಎಂಬ ನಂಬಿಕೆಯಿದೆ. ಹೀಗಾಗಿ ಅಸಾದಿಯನ್ನು ಆಸೆ + ಆದ ಮಗ = ಆಸಾದಿ ಎಂದೂ ಸಹ ಕರೆಯಲಾಗುತ್ತದೆ.[೫೧]

ತುಮಕೂರು ಜಿಲ್ಲೆಯ ತಿಪಟೂರಿನ ನೊಣವಿನಕೆರೆ, ಹೊನ್ನವಳ್ಳಿ, ಗುಬ್ಬಿಯ ಇಸ್ಲಾಂಪುರ, ನಿಟ್ಟೂರು, ಬೆಳ್ಳಾವಿ, ತುರುವೇಕೆರೆಯ ಸೋಮೇನಹಳ್ಳಿ, ಚಿಕ್ಕನಾಯಕನಹಳ್ಳಿಯ ಹುಳಿಯಾರು, ದೇವಾಂಗ ಬೀದಿ, ಶೆಟ್ಟಿಕೆರೆ, ಪಾವಗಡದ ಬ್ಯಾಡಗೂರು, ವೀರ್ಲಗೊಂದಿ, ಸಿರಾದ ದ್ವಾರನಕುಂಟೆ, ತುಮಕೂರಿನ ದಿಬ್ಬೂರು, ಮಧುಗಿರಿಯ ಮದೇನಹಳ್ಳಿ ಪ್ರದೇಶಗಳಲ್ಲಿ ಅಸಾದಿಗಳನ್ನು ಕಾಣಬಹುದು. [೫೨]

ಮಾದಿಗರಲ್ಲಿ ಯಾರು ಬೇಕಾದರೂ ಅಸಾದಿಗಳಾಗುವಂತಿಲ್ಲ. ಇದು ವಂಶಪಾರಂಪರಿಕವಾಗಿ ಮಾತ್ರವೇ ಅಸಾದಿಗಳಾಗುವರು. ಅಂದರೆ ಅಸಾದಿ ಧೀಕ್ಷೆ ಪಡೆಯುವ ವ್ಯಕ್ತಿಯ ಹಿಂದಿನ ತಲೆಮಾರಿನವರು ಅಸಾದಿಗಳಾಗಿರಬೇಕು. ಸಾಮಾನ್ಯವಾಗಿ ಪುರುಷರು ಮಾತ್ರ ಮದುವೆಗೆ ಮುನ್ನವೇ ಅಸಾದಿಯಾಗಿ ಧೀಕ್ಷೆಯನ್ನು ಪಡೆಯುತ್ತಾರೆ. ಗುರುಹಿರಿಯರು ನಿಶ್ಚಯಿಸಿದ ದಿನದಂದು ಮಾರಮ್ಮನ ದೇವಾಲಯದಲ್ಲಿ, ಪೂಜಾರಿಗಳ ಸಮ್ಮುಖದಲ್ಲಿ ಅಸಾದಿಯಾಗುವ ವ್ಯಕ್ತಿಯನ್ನು ಕಂಬಳಿಯ ಮೇಲೆ ಕೂರಿಸಿ ಅರಿಸಿನ ಕುಂಕುಮವಿಟ್ಟು, ಮಾರಮ್ಮದೇವಿಯ ಮೇಲಿನ ಸೀರೆಯನ್ನು ಹೊದಿಸಿ, ಹಲಗೆಯನ್ನು ನೀಡುವ ಮೂಲಕ ಧೀಕ್ಷೆ ನೀಡಲಾಗುತ್ತದೆ. ಆಚಾರರು ಅಸಾದಿ ಹಲಗೆಯನ್ನು ಬೀಟೆ, ತಾರಿ, ಬೇವಿನ ಮರದಿಂದ ತಯಾರು ಮಾಡಿರುತ್ತಾರೆ. ಅಸಾದಿಗಳು ಸಾಮಾನ್ಯರಂತೆ ಉಡುಗೆಗಳನ್ನು ತೊಡುತ್ತಾರೆ. ಮಾರಮ್ಮನ ಜಾತ್ರೆಯ ಸಂದರ್ಭದಲ್ಲಿ ತಲೆಗೆ ಮುಂಡಾಸು, ಉದ್ದನೆಯ ಬಿಳಿಯ ನಿಲುವಂಗಿಯನ್ನು ಧರಿಸುತ್ತಾರೆ. ಇವರು ಊರಿನ ಚಾಕರಿಯನ್ನು ಮಾಡುವುದಿಲ್ಲ. ಚಪ್ಪಲಿಯನ್ನು ಹೊಲಿಯುವುದಿಲ್ಲ. ಮಾಂಸಾಹಾರಿಗಳೂ ಆದ ಇವರು ಯಾವುದೇ ಸತ್ತ ಪ್ರಾಣಿಯನ್ನು ಮುಟ್ಟುವುದಿಲ್ಲ ಹಾಗೂ ಆಡು (ಹೆಣ್ಣು ಮೇಕೆ) ಮಾಂಸವನ್ನು ಸೇವಿಸುವುದಿಲ್ಲ.[೫೩]

**೬.೪.೨ ಕೃಷಿ ಮತ್ತು ಮಳೆ ಸಂಬಂಧಿ ಆಚರಣೆಗಳು :**

ಕೃಷಿ ಬದುಕಿನ ನೆಲೆಯ ಮೌಖಿಕ ಸಂಪ್ರದಾಯದಲ್ಲಿ ಕೃಷಿ ಮತ್ತು ಮಳೆ ಸಂಬಂಧಿತ ಆಚರಣೆಗಳನ್ನು ಆಚರಿಸಲಾಗುತ್ತದೆ. ಇವುಗಳಲ್ಲಿ ಪ್ರಮುಖವಾದುವುಗಳನ್ನು ವಿವರಿಸಲಾಗಿದೆ. ಪ್ರಕೃತಿಯ ಮಡಿಲಲ್ಲಿ ಅಲೆಮಾರಿಯಾಗಿ ಬೆಳೆದ ಮಾನವನು ಸ್ಥಿರ ಜೀವನವನ್ನು ಆರಂಭಿಸಿದ ನಂತರದಲ್ಲಿ ವ್ಯವಸಾಯವನ್ನು ಒಂದು ವೃತ್ತಿಯನ್ನಾಗಿ ಮಾಡಿಕೊಂಡನು. ಇದು ನಾಗರಿಕತೆಯ ವಿಕಸನದ ಹಾದಿಯಲ್ಲಿ ಆದಂತಹ ಮಹತ್ವದ ಬೆಳವಣಿಗೆಯಾಗಿದೆ. ಕೃಷಿಯನ್ನು ಭಾವನಾತ್ಮಕ ನೆಲೆಯಲ್ಲಿ ಕಂಡುಕೊಂಡರು. ಹೀಗಾಗಿ ಕೃಷಿ ಮತ್ತು ಮಳೆಗೆ ಸಂಬಂಧಿಸಿದ ಆಚರಣೆಗಳನ್ನು ರೂಢಿಸಿಕೊಳ್ಳಲಾಯಿತು.

ಕೃಷಿ ಸಂಬಂಧಿ ಆಚರಣೆಗಳೆಂದರೆ – ಮಂದೆಹಾಕುವುದು, ಹೊನ್ನಾರು, ನೇಗಿಲುಪೂಜೆ, ಬಿತ್ತನೆಪೂಜೆ, ದೃಷ್ಟಿಬೊಂಬೆ ಮಾಡುವುದು. ಹೊಲದ ದೇವರು ಮಾಡುವುದು, ಚರಗಚೆಲ್ಲುವುದು, ಬೆಳೆಹರಕೆಗಳು, ಕೊಯ್ಲುಪೂಜೆ, ಕಣಮಾಡುವ ಪೂಜೆ, ರಾಶಿಪೂಜೆ ಮುಂತಾದುವು. ಇವುಗಳನ್ನು ಸಂಕ್ಷಿಪ್ತವಾಗಿ ವಿವರಿಸಲಾಗಿದೆ.

**ಮಂದೆಹಾಕುವುದು** : ಮುಂಗಾರು ಮಳೆಗೆ ಮುಂಚೆ ಕುರಿಗಳನ್ನು ಮೇಯಿಸುತ್ತಾ ದೂರದ ಪ್ರದೇಶಗಳಿಗೆ ವಲಸೆ ಹೋಗುವುದು ರೂಢಿಯಲ್ಲಿದೆ. ಮೇವನ್ನು ಅರಸುತ್ತಾ ದೈನಂದಿನ ಬದುಕಿಗೆ ಅಗತ್ಯವಾದ ಸಾಮಾನು ಸರಂಜಾಮುಗಳನ್ನು ಕತ್ತೆಗಳ ಮೇಲೆ ಹೇರಿಕೊಂಡು ಹೋಗುವರು. ಇವರನ್ನು 'ಮಂದೆ ಕುರಿಯವರು' ಎಂದು ಕರೆಯಲಾಗುತ್ತದೆ. ಊರಿನ

ಹೊರವಲಯದ ಜಮೀನಿನಲ್ಲಿ ಮಾಲೀಕನ ಅನುಮತಿಯ ಮೇರೆಗೆ ರಾತ್ರಿ ತಂಗುವರು.ಆ ಜಮೀನಿನಲ್ಲಿಯೇ ಕುರಿಗಳನ್ನು ನಿಲ್ಲಿಸಲಾಗುತ್ತದೆ. ರಾತ್ರಿಯಿಡೀ ಕುರಿಗಳು ಹಾಕಿದ ಗೊಬ್ಬರ ಮತ್ತು ಗಂಜಲವು ಜಮೀನಿನ ಫಲವತ್ತತೆಯನ್ನು ಹೆಚ್ಚಿಸುತ್ತದೆ. ಇದಕ್ಕೆ ಪ್ರತಿಯಾಗಿ ಜಮೀನಿನ ಮಾಲೀಕನು ಕುರಿ ಮಂದೆಯವರಿಗೆ ಮೊದಲೇ ನಿಗಧಿಪಡಿಸಿದಷ್ಟು ಹಣ, ದವಸ, ಧಾನ್ಯಗಳನ್ನು ನೀಡುತ್ತಾರೆ.

**ಹೊನ್ನಾರು** : ಹೊನ್ನಾರು ಆಚರಣೆಯನ್ನು 'ಮೊದಲು ಮಾಡುವುದು', 'ಮಡಕೆಪೂಜೆ' ಎಂದೂ ಸಹ ಕರೆಯಲಾಗುತ್ತದೆ. ಮುಂಗಾರು ಮಳೆಯು ಆರಂಭವಾಗಿ ಮಳೆಯ ಹನಿಯು ಭೂಮಿಗೆ ಬಿದ್ದ ನಂತರದಲ್ಲಿ ಉಳುಮೆಯನ್ನು ಮಾಡುವ ಮುನ್ನ ಈ ಆಚರಣೆಯನ್ನು ಮಾಡುವರು. ಸೋಮವಾರದ ದಿನ ಈ ಆಚರಣೆಯನ್ನು ಮತ್ತು ಉಳುಮೆಯನ್ನು ಮಾಡಬಾರದೆಂಬ ನಂಬಿಕೆಯಿದೆ. ಊರಿನವರೆಲ್ಲರೂ ಸಾಮೂಹಿಕವಾಗಿ ಎತ್ತುಗಳಿಗೆ ಮೈತೊಳೆದು ಉಳುಮೆ ಮಾಡುವ ಹೊಲದಲ್ಲಿ ನೇಗಿಲಿಗೆ ಹಾಗೂ ರಾಸುಗಳಿಗೆ ಪೂಜೆಯನ್ನು ಮಾಡುವರು. ಕೊರಟಗೆರೆ, ಮಧುಗಿರಿ, ತುಮಕೂರು ಪ್ರದೇಶಗಳಲ್ಲಿನ ರೈತರು ವೈಯಕ್ತಿಕವಾಗಿ ತಮ್ಮ ಜಮೀನಿನಲ್ಲಿ ಮಡಕೆ ಪೂಜೆ ಆಚರಣೆಯನ್ನು ಮಾಡುವರು. ಪೂಜಾ ಸ್ಥಳಕ್ಕೆ ಆಗಮಿಸಿದ ಹಿರಿಯರು ಮತ್ತು ಮಕ್ಕಳಿಗೆ ವೀಳ್ಯದ ಎಲೆ, ಅಡಿಕೆ, ಬಾಳೆಹಣ್ಣು ಮತ್ತು ಚರ್ಪನ್ನು ನೀಡುವರು. ಚರ್ಪು ಎಂದರೆ ನೆನೆಅಕ್ಕಿ, ನೆನೆಗಡಲೆ, ಬೆಲ್ಲ, ಕಾಯಿತುರಿ, ಎಳ್ಳಿನ ಮಿಶ್ರಣವಾದ ಸಿಹಿ ತಿನಿಸು.

**ಬಿತ್ತನೆಪೂಜೆ** : ಧಾನ್ಯವನ್ನು ಹೊಲದಲ್ಲಿ ಬಿತ್ತುವ ಮುನ್ನ ವಿಘ್ನನಿವಾರಕನಾದ ಪಿಳ್ಳೇರಾಯನನ್ನು ಆರಾಧಿಸುವ ಸಂಪ್ರದಾಯವಿದೆ. ಬಿತ್ತನೆ ಮಾಡುವ ಹೊಲದ ಭಾಗವೊಂದರಲ್ಲಿ ಮೂರು ಬೆನೆವಣ್ಣಗಳನ್ನು (ಚಿಕ್ಕ ಕಲ್ಲುಗಳು) ಜೊತೆಗೆ ಗೋವಿನ ಸಗಣಿ ಮತ್ತು ಗರಿಕೆ ಹುಲ್ಲಿನಿಂದ ಮಾಡಿದ ಪಿಳ್ಳೇರಾಯನನ್ನು ಇಟ್ಟು ಪೂಜಿಸಲಾಗುತ್ತದೆ. ಈ ಪೂಜೆಯ ನಂತರವಷ್ಟೇ ಬಿತ್ತನೆ ಕಾರ್ಯವು ಆರಂಭವಾಗುತ್ತದೆ.

**ಕುರಿತುಳಿಸುವುದು** : ತುಮಕೂರು ಜಿಲ್ಲೆಯ ಸಿರಾ, ಚಿಕ್ಕನಾಯಕನಹಳ್ಳಿಯ ಕಡೆಗಳಲ್ಲಿ ಬೀಜಗಳನ್ನು ಬಿತ್ತಿದ ನಂತರ ಕುರಿಗಳಿಂದ ಹೊಲವನ್ನು ತುಳಿಸಲಾಗುತ್ತದೆ. ಉಳುಮೆಮಾಡಿ ಬೀಜಗಳನ್ನು ಬಿತ್ತಿರುವುದರಿಂದ ಹೊಲದ ಮಣ್ಣು ಸಡಿಲಗೊಂಡಿದ್ದು ಗಾಳಿ ತೂರುವುದರಿಂದ ಬೀಜಗಳು ಮೊಳೆಯದೆ ಕೆಟ್ಟುಹೋಗುವ ಸಂಭವವಿರುತ್ತದೆ. ಆದರೆ ಕುರಿತುಳಿಸುವುದರಿಂದ, ಹೊಲದಲ್ಲಿನ ಮಣ್ಣು ಬಿಗಿಬರುತ್ತದೆ. ಹಾಗಾಗಿ ಬೀಜಗಳು ಸಮರ್ಪಕವಾಗಿ ಮೊಳಕೆಯೊಡೆದು ಬೆಳೆಯುತ್ತವೆ.

**ದೃಷ್ಟಿತೆಗೆಯುವುದು** : ತುಮಕೂರಿನ ಬಹುತೇಕ ಪ್ರದೇಶಗಳಲ್ಲಿ ಮಹಾನವಮಿ ಹಬ್ಬದ ವೇಳೆಗೆ ಮುಂಗಾರು ಬೆಳೆಯು ಹುಲುಸಾಗಿ ಬೆಳೆದು ನಿಂತಿರುತ್ತದೆ. ಈ ಸಂದರ್ಭದಲ್ಲಿ ಬೆಳೆಗೆ ದೃಷ್ಟಿ

(ಕಣ್ಣಾಸರೆ) ತಾಕಬಾರದು ಎಂಬ ನಂಬಿಕೆಯಿದೆ. ಇದರಿಂದಾಗಿ ಕಪ್ಪು ಮಡಿಕೆಯೊಂದಕ್ಕೆ ಸುಣ್ಣದಲ್ಲಿ ಮಾನವನ ಮುಖವೊಂದನ್ನು ಚಿತ್ರಿಸಿ ಹೊಲದ ಮಧ್ಯಭಾಗದಲ್ಲಿ ನಿಲ್ಲಿಸಿದ ಕಡ್ಡಿಯೊಂದಕ್ಕೆ ಬೋರಲಾಗಿ ಇಡಲಾಗುತ್ತದೆ. ಇದನ್ನು 'ದೃಷ್ಟಿಮಾನವ' ಎಂದೇ ಕರೆಯಲಾಗುತ್ತದೆ. ಇದರಂತೆಯೇ ಶಿಲುಬೆಯಕಾರದ ಆ ಕಂಬಕ್ಕೆ ಹಳೆಯ ಅಂಗಿಯೊಂದನ್ನು ತೊಡಿಸಲಾಗುತ್ತದೆ. ಈ ರೀತಿಯಾಗಿ ಮಾಡುವುದು ಕೀಟ, ಪಕ್ಷಿಗಳಿಂದ ಬೆಳೆಯನ್ನು ರಕ್ಷಿಸುವ ತಂತ್ರವೂ ಆಗಿದೆ.

**ಮೊಸರನ್ನ ಚೆಲ್ಲುವುದು** : ಇದನ್ನು 'ಹೊಲಕ್ಕೆ ಎಡೆಯಿಡುವುದು' ಎಂದೂ ಕರೆಯಲಾಗುತ್ತದೆ. ಬೆಳೆಯು ಹುಲುಸಾಗಿ ಬೆಳೆದಿರುವ ಹೊಲದಲ್ಲಿ ಬೆಣವ, ಪಿಳ್ಳೇರಾಯನನ್ನು ಇಟ್ಟು ಅದರ ಮುಂದೆ ಮೊಸರನ್ನವನ್ನು ಎಡೆಯಿಟ್ಟು, ದೀಪವನ್ನು ಹಚ್ಚಿ, ಅರಿಸನ ಕುಂಕುಮ, ವೀಳ್ಯೆದೆಲೆ, ಹೂ, ಹಣ್ಣು, ಕಾಯಿ, ಊದುಬತ್ತಿ, ಬಳೆಬಿಚ್ಚೋಲೆ ಮುಂತಾದ ಪೂಜಾ ಸಾಮಗ್ರಿಗಳಿಂದ ಪೂಜಿಸಲಾಗುವುದು. ಪೂಜೆಯು ಮುಕ್ತಾಯವಾದ ಮೇಲೆ ಮೊಸರನ್ನ, ಅರಿಸಿನ ಕುಂಕುಮ, ಹೂಗಳನ್ನು ಒಂದಾಗಿ ಬೆರೆಸಿಕೊಂಡು ಹೊಲದ ಸುತ್ತಲೂ ಬೆಳೆಗೆ ಹಾಕಲಾಗುವುದು. ಇದರಿಂದ ಬೆಳೆಗೆ ವಕ್ರದೃಷ್ಟಿ ತಗಲುವುದಿಲ್ಲವೆಂಬ ನಂಬಿಕೆಯಿದೆ. ಈ ಆಚರಣೆಯಲ್ಲಿ ದೀಪವು ರಾತಿಯಿಡೀ ಉರಿಯುವುದರಿಂದ ಕೀಟಗಳು ಬೆಳಕಿನೆಡೆಗೆ ಬರುತ್ತವೆ. ಆಗ ಪಕ್ಷಿಗಳು ಬೆಳೆನಾಶಕ ಕೀಟಗಳನ್ನು ತಿಂದು ಬೆಳೆಯನ್ನು ಕೀಟಬಾಧೆಯಿಂದ ರಕ್ಷಿಸುತ್ತವೆ ಎಂಬ ತಾರ್ಕಿಕ ಸತ್ಯವೂ ಇದೆ.

**ಹೊಲದ ದೇವರು :** ಹುಲುಸಾಗಿ ಬೆಳೆದ ಹೊಲದಲ್ಲಿ ಫಸಲನ್ನು ಕಟಾವು ಮಾಡುವ ಮುನ್ನ ಮುನಿಯಪ್ಪ ದೇವರನ್ನು ಪೂಜಿಸಲಾಗುತ್ತದೆ. ಇದಕ್ಕೆ 'ಹೊಲದ ದೇವರು' ಎಂದೂ ಕರೆಯಲಾಗಿದೆ. ಇದನ್ನು ವರ್ಷಕ್ಕೊಮ್ಮೆ ಪಾರಂಪರಿಕವಾಗಿ ಆಚರಿಸಲಾಗುತ್ತದೆ. ಹೊಲದ ಬದುವೊಂದರ ಮೇಲಿರುವ ಅರಳೀಮರ, ತುಗ್ಗಲೀಮರ, ಬೇವಿನಮರ, ಅಥವಾ ಬೇಟೆಮರದ ಕೆಳಗೆ ನಾಲ್ಕು ಕಲ್ಲುಗಳಿದ ಚಿಕ್ಕದಾದ ಗುಡಿಯನ್ನು ನಿರ್ಮಿಸಲಾಗುತ್ತದೆ. ಈ ಗುಡಿಯಲ್ಲಿ ಕಲ್ಲೊಂದನ್ನು ಇಟ್ಟು ಅದನ್ನೇ ದೇವರು ಎಂಬುದಾಗಿ ಪೂಜಿಸಲಾಗುತ್ತದೆ. ಸಸ್ಯಾಹಾರಿಗಳು ಸಿಹಿ ಬೋಜನವನ್ನು ಮಾಡಿದರೆ, ಮಾಂಸಾಹಾರಿಗಳು ಕುರಿ, ಮೇಕೆ, ಕೋಳಿಗಳನ್ನು ಬಲಿನೀಡುವರು. ರಕ್ತದಲ್ಲಿ ಅನ್ನವನ್ನು ಬೆರೆಸಿ ಹೊಲದ ಸುತ್ತಲೂ ಚೆಲ್ಲಲಾಗುತ್ತದೆ. ಈ ಆಚರಣೆಯಲ್ಲಿ ನೆಂಟರು, ಬಂಧುಗಳು, ಗೆಳೆಯರು, ಸಾರ್ವಜನಿಕರು ಭಾಗವಹಿಸಿ ಪಂಕ್ತಿಯಲ್ಲಿ ಸಹಭೋಜನವನ್ನು ಮಾಡುತ್ತಾರೆ.

**ಕೊಯ್ಲುಪೂಜೆ** : ಬೆಳೆದು ನಿಂತ ಫಸಲನ್ನು ಕಟಾವು ಮಾಡುವ ಮುನ್ನ ಕೊಯ್ಲು ಪೂಜೆಯನ್ನು ಮಾಡುವರು. ಇದನ್ನು 'ಮೊದಲು ಮಾಡುವುದು' ಎಂದೂ ಕರೆಯಲಾಗುತ್ತದೆ. ನೆಲಗಡಲೆಯನ್ನು ಮಣ್ಣಿನಿಂದ ಬೇರ್ಪಡಿಸಲು ಭೂಮಿಯು

ಹದವಾಗಿರುವ ಹಾಗೂ ಫಸಲನ್ನು ಕೊಯ್ಲುಮಾಡಲು ಶುಭಕರವಾದ ದಿನದಂದು ಈ ಪೂಜೆಯನ್ನು ಮಾಡಲಾಗುತ್ತದೆ. ಹೊಲದ ಬದುವಿನ ಮೇಲೆ ಮೂರು ಬೆಣವಗಳನ್ನು ಇಡಲಾಗುವುದು. ಅವುಗಳ ಮುಂದೆ ಹಸುವಿನ ಹಾಲು, ಒಂದು ಹಿಡಿ ತೆನೆ, ಕುಡುಗೋಲುಗಳನ್ನು ಇಟ್ಟು ಪೂಜಾ ಸಾಮಗ್ರಿಗಳೊಂದಿಗೆ ಶ್ರದ್ಧೆಯಿಂದ ಪೂಜಿಸಲಾಗುವುದು. ಹಾಗೂ ಹಾಲನ್ನು ಬೆಣವಗಳ ಮೇಲೆ ಭಕ್ತಿಯಿಂದ ಸುರಿಯುವರು. ಮಂಗಳಕರವೆಂದು ಭಾವಿಸಿದ ವ್ಯಕ್ತಿಯು ಮೊದಲು ಫಸಲನ್ನು ಕಟಾವು ಮಾಡುವ ಮೂಲಕ ಆರಂಭ ಮಾಡುವರು. ನಂತರವಷ್ಟೇ ಕುಯ್ಲು ಕಾರ್ಯವು ಆರಂಭವಾಗುತ್ತದೆ.

**ಕಣಮಾಡುವುದು :** ಕಟಾವು ಮಾಡಿದ ಬೆಳೆಯನ್ನು ಕಣದಲ್ಲಿ ಸ್ವಚ್ಛಗೊಳಿಸಿಕೊಳ್ಳಲಾಗುವುದು. ಕಣ ಎಂದರೆ ಹೊಲದ ಎತ್ತರದ ಒಂದು ಭಾಗದ ಭೂಮಿಯನ್ನು ಗಟ್ಟಿಗೊಳಿಸಿ ಸಗಣಿಯಿಂದ ಸಾರಿಸಲಾಗುತ್ತದೆ. ಕಣವನ್ನು ಬಂಡೆಯಂತೆ ಗಟ್ಟಿಗೊಳಿಸಿ ಒಣಗಿಸಲಾಗಿರುತ್ತದೆ. ಇಲ್ಲಿಯೇ ಹುಲ್ಲಿನಿಂದ ಧಾನ್ಯವನ್ನು, ತೆನೆಯಿಂದ ಕಾಳುಗಳನ್ನು ಬೇರ್ಪಡಿಸುವಂತಹ ಕಾರ್ಯವು ನಡೆಯುವುದು.ಕಣವು ಪವಿತ್ರವಾದ ತಾಣವೆಂದು ಭಾವಿಸಲಾಗಿದೆ.

**ರಾಶಿಪೂಜೆ :** ಕಟಾವು ಮಾಡಿದ ಬೆಳೆಯಿಂದ (ತೆನೆಯಿಂದ) ಧಾನ್ಯವನ್ನು ಬೇರ್ಪಡಿಸಿ ಕಣದಲ್ಲಿ ರಾಶಿ ಮಾಡಲಾಗವುದು. ದಿನಂಪ್ರತಿ ಹಗಲಲ್ಲಿ ಬಿಸಿಲಿನಿಂದ ಧಾನ್ಯನ್ನು ಒಣಗಿಸಿ ಸಂಜೆ ವೇಳೆಗೆ ರಾಶಿಯನ್ನು ಮಾಡಿ ಹುಲುಸು ಕಟ್ಟಲಾಗುತ್ತದೆ. ಹುಲುಸು ಎಂದರೆ ಬಲಗೈನಲ್ಲಿ ಹಿಡಿ ಧಾನ್ಯ ಮತ್ತು ಬಿದಿರು ಮರದಿಂದ ಮಾಡಿರುವ ಮೊರವನ್ನು ಹಿಡಿದು, ರಾಶಿಯ ಸುತ್ತಲೂ ಪ್ರದಕ್ಷಿಣೆಯನ್ನು ಮಾಡಿ, ಮೂಡಣ ದಿಕ್ಕಿನಲ್ಲಿ ರಾಶಿಯ ಮೇಲೆ ಮೊರದ ಮೂಲಕ ಮೂರು ಗೆರೆಗಳನ್ನು ಎಳೆದು, ಶ್ರದ್ಧೆಯಿಂದ ಪೂಜಿಸುವುದು. ಧಾನ್ಯಗಳನ್ನು ಒಣಗಿಸಿ ಸ್ವಚ್ಛಗೊಳಿಸಿ ಸಿದ್ಧಗೊಂಡ ಮೇಲೆ ರೈತರು ಸಂತಸದಿಂದ ರಾಶಿಪೂಜೆಯನ್ನು ಮಾಡುವರು. ಅಲ್ಲಿಗೆ ಬಂದ ಜನರಿಗೆ ತೆಂಗಿಕಾಯಿ, ಬೆಲ್ಲ ಮತ್ತು ಚರ್ಪನ್ನು ನೀಡಲಾಗುತ್ತದೆ. ಕೂಲಿದಾರರಿಗೆ ಕೂಲಿಯಾಗಿ ಹಣದ ಬದಲು ಧಾನ್ಯಗಳನ್ನು ನೀಡಲಾಗುತ್ತದೆ. ಧಾನ್ಯವನ್ನು ಮೊರದಲ್ಲಿ ದಾನವಾಗಿ ನೀಡುವರು ಇಲ್ಲಿಗೆ ಬಂದಂತಹ ಪಣಗಾರ, ಪೂಜಾರಿ, ಅಗಸ, ಕ್ಷೌರಿಕ, ನೀರಗಂಟಿ ಮುಂತಾದ ಆಯಗಾರರಿಗೆ ದವಸ ಧಾನ್ಯಗಳನ್ನು ನೀಡಲಾಗುತ್ತದೆ. ನಂತರ ಚೀಲಗಳಿಗೆ ತುಂಬಲಾಗುತ್ತದೆ. ಧಾನ್ಯವನ್ನು ಅಳೆಯಲು ಮೊರ, ಬಳ್ಳದಂತಹ ಅಳತೆಮಾನಗಳನ್ನು ಬಳಸಲಾಗುವುದು. ರಾಶಿ ಪೂಜೆಯ ಸಂದರ್ಭದಲ್ಲಿ ಕೆಲವು ನಂಬಿಕೆಗಳು ರೂಢಿಯಲ್ಲಿವೆ. ೧) ಬೆಳೆದ ಫಸಲಿನಲ್ಲಿ ಸ್ವಲ್ಪ ಧಾನ್ಯವನ್ನು ದಾನವಾಗಿ ನೀಡುವುದು ಒಳ್ಳೆಯದು. ೨) ಧಾನ್ಯದ ರಾಶಿಯ ಮೇಲೆ ನಿಲಿಸಿರುವ ಕಡ್ಡಿಯು ಬಿದ್ದರೆ ಅದನ್ನು ಅಪಶಕುನವೆಂದು ಬಗೆಯುತ್ತಾರೆ. ೩) ಕಣದಲ್ಲಿ ಸಣ್ಣ ಮಕ್ಕಳು ಬೀಳಬಾರದು ಒಂದು ವೇಳೆ ಬಿದ್ದರೆ ಅದು ಶ್ರೇಯಸ್ಸಲ್ಲ. ೪) ಕಣದಲ್ಲಿ ಚಪ್ಪಲಿಯನ್ನು ಹಾಕಿಕೊಂಡು ಓಡಾಡುವಂತಿಲ್ಲ. ಚಪ್ಪಲಿಯನ್ನು ಕಣದಿಂದ ಹೊರಗೆ

ಇಡಲಾಗುತ್ತದೆ. ೫) ಮೊರ, ಬಳ್ಳಕ್ಕೆ ಬದಲಾಗಿ ಸೇರಿನಿಂದ ಧಾನ್ಯವನ್ನು ಅಳುಯುವುದು ಉದಾರತೆಯ ಸಂಕೇತವಲ್ಲ.

ಕೃಷಿಯಾಧಾರಿತ ಸಮಾಜದಲ್ಲಿ ಮಳೆಗೆ ವಿಶಿಷ್ಟವಾದ ಸ್ಥಾನವನ್ನು ನೀಡಲಾಗಿದೆ. ಮಳೆಯು ಜನಸಮುದಾಯದ ಭಾವನೆಗಳ ಭಾಗವಾಗಿ ಕಂಡುಬರುತ್ತದೆ. ಈ ನೆಲೆಯಲ್ಲಿ ಮಳೆಗೆ ಸಂಬಂಧಿಸಿದ ಆಚರಣೆಗಳು ರೂಢಿಯಲ್ಲಿವೆ. ಅವುಗಳಲ್ಲಿ ಪ್ರಮುಖವಾದುವುಗಳೆಂದರೆ- ಮಳೆ ಮಲ್ಲಪ್ಪನ ಪೂಜೆ, ಗಂಗಮ್ಮನ ಪೂಜೆ ಮುಂತಾದುವು.

**ಮಳೆ ಮಲ್ಲಪ್ಪನ ಪೂಜೆ** : ಮಳೆ ಮಲ್ಲಪ್ಪನ ಪೂಜೆಯನ್ನು, ಮಳೆರಾಯನ ಪೂಜೆ ಎಂದು ಸಹ ಕರೆಯಲಾಗುತ್ತದೆ. ಮಳೆಯು ಸಕಾಲಕ್ಕೆ ಬಾರದೇ ಸಕಲ ಜೀವರಾಶಿಗೆ ನೀರಿನ ಕೊರತೆಯುಂಟಾದಾಗ ಈ ಪೂಜೆಯನ್ನು ಮಾಡಲಾಗುತ್ತದೆ. ಅಲ್ಲದೇ ಕತ್ತೆಗಳ ಮದುವೆ, ಕಪ್ಪೆಗಳ ಮದುವೆಯನ್ನು ಮಾಡುವ ಮೂಲಕ ಮಳೆ ಬರುತ್ತದೆ ಎಂಬ ನಂಬಿಕೆಯಿದೆ. ಒಂದು ಹಲಗೆಯ ಮೇಲೆ ಜೇಡಿಮಣ್ಣಿನಿಂದ ಮಳೆರಾಯ ದೇವರ ಮೂರ್ತಿಯನ್ನು ಮಾಡಲಾಗುವುದು. ಈ ಮೂರ್ತಿಗೆ ಅರಿಶಿಣ, ಕುಂಕುಮ, ಹೂಗಳಿಂದ ಅಲಂಕರಿಸಿ ಒಬ್ಬ ವ್ಯಕ್ತಿಯ ತಲೆಯ ಮೇಲೆ ದೇವರನ್ನು ಹೊರಿಸಿಕೊಂಡು ತಮಟೆ ವಾದ್ಯಗಳೊಂದಿಗೆ ಕುಣಿಯುತ್ತಾ, ಮೆರವಣಿಗೆ ಮಾಡುತ್ತಾ, "ಬಾರಪ್ಪೋ ಮಳೆರಾಯ ನೀನು ಬಂದುಯ್ಯೋ ದೇವೇಂದ್ರ" ಎಂಬ ಹಾಡನ್ನು ಸಾಮೂಹಿಕವಾಗಿ ಹಾಡುತ್ತಾ ಊರಿನ ಪ್ರತಿಯೊಂದು ಮನೆಯ ಮುಂದೆ ಹೋಗಲಾಗುತ್ತದೆ. ಪ್ರತೀ ಮನೆಯವರು ಸ್ವಲ್ಪ ನೀರನ್ನು ಮಳೆಮಲ್ಲಪ್ಪನ ಮೂರ್ತಿಯ ಮೇಲೆ ಸುರಿದು ಪೂಜಿಸುತ್ತಾರೆ. ಹಾಗೂ ದವಸ ಧಾನ್ಯಗಳನ್ನು ದಾನವಾಗಿ ನೀಡುತ್ತಾರೆ. ಹೀಗೆ ಊರೆಲ್ಲ ಸುತ್ತಿದ ಮೇಲೆ ಊರಿನ ದೇವಾಲಯದ ಬಳಿ ಮಳೆರಾಯನನ್ನು ಇಟ್ಟು ಈಗಾಗಲೇ ಸಂಗ್ರಹಿಸಿದ ದವಸ ಧಾನ್ಯದಿಂದ ಅಡುಗೆ ಮಾಡಿ ದೇವರಿಗೆ ನೈವೇಧ್ಯವನ್ನು ಅರ್ಪಿಸಲಾಗುತ್ತದೆ. ಪೂಜೆಯನ್ನು ಮಾಡಿ ಊರಿನ ಜನರು ಸಾಮೂಹಿಕವಾಗಿ ಊಟವನ್ನು ಮಾಡುವರು. ನಂತರ ಮಳೆ ಮಲ್ಲಪ್ಪನನ್ನು ನೀರಿಗೆ ವಿಸರ್ಜಿಸುವರು. ಹೀಗೆ ಮಾಡುವುದರಿಂದ ಮಳೆ ಸುರಿಯುತ್ತದೆಂಬ ನಂಬಿಕೆ ಇಲ್ಲಿನ ಸಮುದಾಯದಲ್ಲಿದೆ.

**ಗಂಗಮ್ಮನ ಪೂಜೆ** : ಬಹುತೇಕ ಎಲ್ಲ ಊರುಗಳಲ್ಲಿಯೂ ಕೆರೆಗಳನ್ನು ನಿರ್ಮಾಣ ಮಾಡಿರುವುದನ್ನು ಪ್ರಾಚೀನ ಗ್ರಾಮೀಣ ಪರಂಪರೆಯಲ್ಲಿ ಕಾಣಬಹುದಾಗಿದೆ. ಕೃಷಿ ಸಂಪತ್ತಿನ ಸಮೃದ್ಧಿಗೆ ಕೆರೆಗಳು ಮೂಲ ಕಾರಣವಾಗಿವೆ. ಆ ಎಲ್ಲ ಕೆರೆಗಳಲ್ಲಿ ಗಂಗಮ್ಮನ ಪೂಜೆಯನ್ನು ಒಂದಿಲ್ಲೊಂದು ಸಂದರ್ಭದಲ್ಲಿ ಮಾಡುವುದನ್ನು ಕಾಣಬಹುದು. ಸಾಮಾನ್ಯವಾಗಿ ಕೆರೆಗಳು ನೀರಿನಿಂದ ತುಂಬಿ ಕೋಡಿ ಹೋದಾಗ, ಗೌರಿ ಹಬ್ಬ, ಮದುವೆ ಮುಂತಾದ ಸಂದರ್ಭಗಳಲ್ಲಿ ಗಂಗಾ ಪೂಜೆ ನಡೆಯುತ್ತದೆ.

**೬.೪.೩ ಜಾತ್ರೆಗಳು :**

'ಜಾತ್ರೆ' ಎಂಬ ಪದವನ್ನು 'ಯಾತ್ರೆ' ಎಂಬ ಪದಕ್ಕೆ ಸಮಾನವಾಗಿಯೂ ಬಳಸಲಾಗುತ್ತದೆ. ಪುಣ್ಯಕ್ಷೇತ್ರಗಳೆಂದು ಪರಿಗಣಿಸಲ್ಪಟ್ಟ ಸ್ಥಳಗಳನ್ನು ನೋಡಿ ಧನ್ಯತಾಭಾವವನ್ನು ಹೊಂದುವ ಸಲುವಾಗಿ ದೂರದ ಸ್ಥಳಗಳಿಗೆ ದೇವರು, ದೈವ, ಅಥವಾ ದೈವಾಂಶವುಳ್ಳವರೆಂದು ಪರಿಗಣಿಸಲ್ಪಟ್ಟವರಿಗೆ (ಸಾಧು, ಸಂತ, ಸನ್ಯಾಸಿಗೆ) ಪೂಜೆ, ಹರಕೆಗಳನ್ನು ಸಲ್ಲಿಸಲು ಜನರು ವರ್ಷದ ಒಂದು ನಿರ್ದಿಷ್ಟ ಕಾಲದಲ್ಲಿ ಹೋಗಿ ಬರುತ್ತಾರೆ. ದೇವಾಲಯವನ್ನು ಕೇಂದ್ರವಾಗಿಟ್ಟುಕೊಂಡು ಯಾವುದೋ ಒಂದು ನಿಗಧಿಯಾದ ವೇಳೆಯಲ್ಲಿ ಪರಿಷೆ ನೆರೆಯುವುದೇ ಜಾತ್ರೆ. ಜಾತ್ರೆಯ ಇನ್ನೊಂದು ಮುಖ ಪ್ರಯಾಣ, ಯಾತ್ರೆ. ಇಂದಿನಂತೆ ವಾಹನ ಸೌಲಭ್ಯವಿಲ್ಲದ ಹಿಂದಿನ ಕಾಲದಲ್ಲಿ ಹತ್ತಾರು ಮೈಲಿ ದೂರದ ಊರುಗಳಿಗೆ ನಡೆದು ಹೋಗುವುದು, ಇಲ್ಲವೆ ಬಂಡಿ ಕಟ್ಟಿಕೊಂಡು ಹೋಗುವುದು ಸಾಮಾನ್ಯವಾಗಿತ್ತು. ಒಂದರೆಡು ಕುಟುಂಬಗಳಷ್ಟೇ ಅಲ್ಲದೆ ಹತ್ತಾರು ಕುಟುಂಬಗಳು ಜಾತ್ರೆಗೆ ಹೋಗುತ್ತಿದ್ದವು. ಹೀಗೆ ನಾಲ್ಕಾರು ಊರುಗಳಿಂದ ಒಟ್ಟು ಸೇರಿದ ಜನರ ಗುಂಪು ಕೂಡ ಜಾತ್ರೆಯ ಬಹು ಮುಖ್ಯ ಭಾಗ. ಕರ್ನಾಟಕದಲ್ಲಿ ದನ ಮತ್ತು ಜನಗಳ ಜಾತ್ರೆ ಪ್ರತ್ಯೇಕವಾಗಿ, ಕೆಲವು ಕಡೆ ಒಟ್ಟಾಗಿ ನಡೆಯುವುದನ್ನು ಕಾಣಬಹುದು. ಯಾವುದೋ ಕಾರಣದಿಂದ ಹೆಚ್ಚು ಜನರು ಗುಂಪು ಗೂಡಿದಾಗ ಆ ಸಮೂಹವನ್ನು "ಜಾತ್ರೆ" ಎಂದು ಉದ್ಗರಿಸುವುದು ಸಾಮಾನ್ಯವಾಗಿದೆ. ಅಂದರೆ ಜನಗಳಿಲ್ಲದ ಜಾತ್ರೆಯನ್ನು ಕಲ್ಪಿಸಿಕೊಳ್ಳಲಾಗದು. 'ಜನ ಮರಳೋ ಜಾತ್ರೆ ಮರುಳೋ', 'ಧಾರೆಯಾದ ಮೇಲೆ ಮದುವೆ ಆಯ್ತು, ಥೇರು ಹರಿದ ಮೇಲೆ ಪರಿಷೆ ಆಯ್ತು' ಎಂಬ ನುಡಿಗಟ್ಟುಗಳು ಜನ, ತೇರು ಇದ್ದರೆ ಜಾತ್ರೆಯ ಸೊಬಗು ಎಂಬುದನ್ನು ಒತ್ತಿ ಹೇಳುತ್ತವೆ. ತೇರು ಇಲ್ಲದ ಜಾತ್ರೆಗಳು ಇರುವುದಾದರೂ ಅಷ್ಟಾಗಿ ಶೋಭೆ ಕಾಣದು. ಧರ್ಮ ಮತ್ತು ಹಬ್ಬಗಳಿಗೆ ಬಿಡಿಸಲಾರದ ಸಂಬಂಧವೇ ಜಾತ್ರೆ ರೂಪು ತಳೆಯಲು ಪ್ರಮುಖ ಕಾರಣವೆನ್ನಬಹುದು. ಜಾತ್ರೆಯೆಂದರೆ ದೇವರಿಗೆ ಭಕ್ತಿ, ಕಾಣಿಕೆ ಸಲ್ಲಿಸುವುದಷ್ಟೇ ಆಗಿರದೇ ವಿಶಿಷ್ಟ ಧಾರ್ಮಿಕ ಆಚರಣೆಗಳು, ಎಲ್ಲ ಜಾತಿಯ ಜನರ ಪಾಲ್ಗೊಳ್ಳುವಿಕೆ, ಕೋಲಾಟ, ಕುಸ್ತಿ, ಜಾದೂ, ವಿವಿಧ ವಾದ್ಯಗಳ ಮೇಳೈಸುವಿಕೆ, ಗೃಹಾಲಂಕಾರ, ಗೃಹಬಳಕೆಯ, ಕೃಷಿಸಾಮಗ್ರಿಗಳ ಮಕ್ಕಳ ವೈವಿಧ್ಯಮಯ ಆಟದ ಸಾಮಾನುಗಳು ತಿಂಡಿ ತಿನಿಸುಗಳು, ಪಾನೀಯಗಳು ಮಾರಾಟ, ಇಲ್ಲವೇ ಕೊಳ್ಳುವಿಕೆ ಸಾಮಾನ್ಯವಾಗಿರುತ್ತದೆ.

ತುಮಕೂರು ಜಿಲ್ಲೆಯಲ್ಲಿನ ಪ್ರತಿಯೊಂದು ಊರಿನ ಗ್ರಾಮದೇವತೆಯ ಹೆಸರಿನಲ್ಲಿ ಜಾತ್ರೆಗಳನ್ನು ಆಚರಿಸಲಾಗುತ್ತದೆ.[೫೪] ಮಧುಗಿರಿ ತಾಲೂಕಿನ ಪರಿಸರದಲ್ಲಿರುವ ವಿಶೇಷವಾಗಿ ಕೊಂಡವಾಡಿ ಗ್ರಾಮದಲ್ಲಿರುವ ಕಾಟುಮಲಿಂಗ ದೇವರಿಗೆ ಪೂಜೆ ಮಾಡುವವರು ಕುಂಚಿಟಿಗರಾಗಿದ್ದು, ನಾಯಕರು ಜಾತ್ರಾ ಉತ್ಸವದಲ್ಲಿ ಪ್ರಧಾನ ಪಾತ್ರ ವಹಿಸುತ್ತಾರೆ.

ನಿಡಗಲ್ಲನ್ನಾಳೋ ದೊರೆಗಳು ಬರವೂತಂಕ
ಸಿಡಿಯತ್ತ ಸ್ವಾರವ್ವ ಇಳಿಯಾಳು। ಸೀರ್ಯಾದ
ದೊರೆಗಾಳೂ ಬರುವರಿಗೆ॥[೫೫]

ನಿಡಗಲ್ಲು, ಸಿರಾದ ಜನ ಪ್ರತಿನಿಧಿಗಳು ಸ್ವಾರಮ್ಮನ ಜಾತ್ರೆಯಂತಹ ಮೌಖಿಕ ಸಂಪ್ರದಾಯ ಆಚರಣೆಯ ಸಂದರ್ಭದಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುತ್ತಿದ್ದರು, ಇಲ್ಲಿನ ಶ್ರಮಿಕ ವರ್ಗಗಳು ಸಿಡಿಯಂತಹ ಅಪಾಯಕಾರಿ ಕ್ರೀಡೆಯಲ್ಲಿ ಪಾಲ್ಗೊಳ್ಳುವ ಮೂಲಕ ನೋವುಂಡು ಜನರಲ್ಲಿ ಭಯ ಭಕ್ತಿಗಳನ್ನು ಮೂಡಿಸುತ್ತಿದ್ದರು. ಬೇಡರಿಂದ ಹತ್ಯೆಯಾದ ಬಂದ್ಕುಂಟೆ ಈರುಚಿಕ್ಕಣ್ಣನು ಇಲ್ಲಿನ ಗೊಲ್ಲರ ಆರಾಧ್ಯ ದೈವನಾಗಿದ್ದಾನೆ. ಈರುಚಿಕ್ಕಣ್ಣನ ಕಾವ್ಯದಲ್ಲಿ ಈ ಕೆಳಕಂಡಂತೆ ಉಲ್ಲೇಖಿಸಿದೆ

ಗುದ್ದುಲಿ ತರಿಸ್ಯಾನು ದಿಬ್ಬವ ಅಗಿಸ್ಯಾನು
ದಿಬ್ಬೆಂಬ ಹರೆಯ ತರಿಸ್ಯಾರು। ಬಂದಕುಂಟೆ
ದಿಬ್ಬದ ಮೇಲ್ಪರಿಸೆ ನಡಿಸ್ಯಾರು॥ [೫೬]

ಈ ಪರಿಷೆಯಲ್ಲಿ ಹಲವು ಸಮುದಾಯಗಳು ಪಾಲ್ಗೊಳ್ಳುತ್ತಿದ್ದವು. ಪ್ರತೀ ಸಮುದಾಯಗಳು ತಾವು ನಿರ್ವಹಿಸುವ ಕೆಲಸಕ್ಕೆ ಪ್ರತಿಯಾಗಿ ಗೌರವವನ್ನು ಪಡೆಯುತ್ತಿದ್ದವು

ಹರೆಯ ಬಡಿಯುವವನಿಗೆ ಏನ್ಕೊಟ್ಟೆ ಚಿಕ್ಕಣ್ಣ
ನಿಲುವಂಗಿ ಮೇಲೆ ಬಳಿಯಂಗಿ। ಕೊಟ್ಟಾರೆ
ರೂವಾರದ ಹರೆಯ ಬಡಿದಾನು॥ [೫೭]

ಬಂದ್ಕುಂಟೆ ಗ್ರಾಮದ ನೆರೆಯ ಚಿಕ್ಕೋಬನಹಳ್ಳಿ ಮದಲೂರಿನ ಜನರು ಈ ಜಾತ್ರೆಯಲ್ಲಿ ಭಾಗವಹಿಸುತ್ತಿದ್ದರು.

ಅಪ್ಪಾಗೆ ನೀರನ್ನು ಮತ್ತಾರು ವೈವೋರು
ಚಿಕ್ಕೋಬ್ನಳ್ಳಿ ಮದಲೂರು। ಗೌಡಗಳು
ಅಪ್ಪೈಗೆ ನೀರು ಎರೆದಾರು॥ [೫೮]

ಜಾತ್ರೆಗಳು ಆಚರಣೆಗಳೇ ಆದರೂ ಇಲ್ಲಿ ಜನಾಂಗೀಯ ವ್ಯತ್ಯಾಸವನ್ನು ಗುರುತಿಸಬಹುದು. ಇಲ್ಲಿ ನಡೆಯುವ ಎಲ್ಲ ಶ್ರಮದಾಯಕ ಕೆಲಸಗಳಲ್ಲಿ ತಲವರ್ಗವನ್ನು ಸಕ್ರಿಯವಾಗಿ ಬಳಸಿಕೊಂಡಿದ್ದರೂ ಸಹ ನಿರ್ದಿಷ್ಟಪಡಿಸಿದ ಶ್ರಮದಾಯಕ ಕೆಲಸಗಳನ್ನು ಮಾಡುವುದು ತನ್ನ ಅಧಿಕಾರ, ಪಾರಂಪರಿಕವಾಗಿ ಬಂದ ಗೌರವವೆಂದು ಭಾವಿಸುವ ಮನಸ್ಥಿತಿಯಿದೆ. ಸಾಮಾಜಿಕ ಅಂತಸ್ತು ಮತ್ತು ಕಟ್ಟುಪಾಡುಗಳ ನೆಲೆಯಲ್ಲಿ ದುಡಿಸಿಕೊಳ್ಳುವ ಯಜಮಾನಿಕೆಯ ಮನಸ್ಥಿತಿಯನ್ನು ಮೇಲ್ವರ್ಗಗಳಲ್ಲಿ ಕಾಣಬಹುದು. ಹಾಗೂ ಜಾತ್ರೆಗಳಂತಹ ಮೌಖಿಕ ಸಂಪ್ರದಾಯಗಳಲ್ಲಿ ರಾಜಠೀವಿಯಿಂದ ಬೀಗುವ ಪ್ರಭುತ್ವದ ನಡೆಯನ್ನು ಗುರುತಿಸಬಹುದು. 'ಬೆಕ್ಕಿಗೆ ಚೆಲ್ಲಾಟ ಇಲಿಗೆ ಪ್ರಾಣ ಸಂಕಟ' ಎಂಬ ಗಾದೆಯಂತೆ ಸಿಡಿಕಂಬ, ಹುಲಿವೇಷ, ಬಾಯಿಗೆ ಬೀಗ, ಅಗ್ನಿಕೊಂಡ, ಚಾಟಿಸೆಣೆತ, ಕತ್ತಿವರಸೆಯಂತಹ ಆಚರಣೆಗಳಲ್ಲಿ ಶ್ರಮಿಕ ತಲವರ್ಗವು ತನ್ನ ಜೀವದ ಜೊತೆ ಸೆಣಸುವಂತಹ ಅಪಾಯಗಳನ್ನು ಎದುರಿಸುವ ಮತ್ತು ಪ್ರಭುತ್ವ ನೆಲೆಯ ವರ್ಗಗಳು ಮನರಂಜಿಸುವ ಸನ್ನಿವೇಶಗಳನ್ನು ಗುರುತಿಸಬಹುದು.

### ೬.೪.೪ ಜೋಗಿತಿ ಸಂಪ್ರದಾಯ :

ಉತ್ತರ ಕರ್ನಾಟಕದ ಬೆಳಗಾಂ, ಸವದತ್ತಿ, ಧಾರವಾಡ, ವಿಜಾಪುರ ಗುಲ್ಬರ್ಗಾ, ರಾಯಚೂರು, ಬಳ್ಳಾರಿ ಜಿಲ್ಲೆಯ ಹಾಗೂ ಶಿವಮೊಗ್ಗ ಜಿಲ್ಲೆಯ ಚಂದ್ರಗುತ್ತಿಗಳಲ್ಲಿ ಇರುವಂತೆಯೇ ತುಮಕೂರಿನ ಅಲ್ಲಲ್ಲಿ ಈ ಸಂಪ್ರದಾಯವಿದೆ. ಹೆಣ್ಣು ಮಕ್ಕಳಿಗೆ ಮದುವೆಯಾಗುವುದಕ್ಕೆ ಮುಂಚೆ ಜೋಗಿತಿಯ ದೀಕ್ಷೆಯನ್ನು ಕೊಡುವುದು, ದೇವದಾಸಿ ಪದ್ಧತಿಗೆ ಸಮಾನವಾದ ಸಂಪ್ರದಾಯವಾಗಿದೆ. ವಿರೂಪಾಕ್ಷ ಮಹಾರಾಯನ ದಂಡನಾಯಕನಾದ ಸಿಂಗಪ್ಪನು ರಾಜ್ಯವಾಳುತ್ತಿರಲು ಆತನ ಮಹಾಸಾಮಂತನಾಗಿದ್ದ ಕಳಸನಾಯಕನ ಪತ್ನಿಯಾದ ಕಲ್ಲರಸಿಯಮ್ಮ ಎಂಬುವರು ಸಿದ್ಧಮಲ್ಲಿಕಾರ್ಜುನ ಗುಡಿಯ ಜೀರ್ಣೋದ್ಧಾರ ಮಾಡಿಸಿ ಭೋಗಮಂಟಪ, ಗೋಪುರ, ಶಿಖರ, ಸಭಾಂಗಣ ಪಾಠಶಾಲೆಗಳನ್ನು ಸೇರಿಸಿ ಅಮೃತಪಡಿಗಾಗಿ ಭೂದಾನವನ್ನು ಮಾಡಿದ್ದಳು. ಇಲ್ಲಿ ಗಾಯಕಿ ಮಹಾದೇವಿ, ತಾಳದ ಮೂಕಜ್ಜಿ ಎಂಬುವರು ಬಸವಿಯರಾಗಿದ್ದರು.[೫೯]

ಗುಬ್ಬಿ ತಾಲೂಕಿನ ಕಲ್ಲೂರು ಹೋಬಳಿಯ ಆಲೂರು ಗ್ರಾಮವು ೧೪ ನೇ ಶತಮಾನದಲ್ಲಿ ಹೊಯ್ಸಳ ಸಾಮಂತರಾಜ್ಯದ ಕೇಂದ್ರವಾಗಿತ್ತು. ಇಲ್ಲಿ ಭೀಮನಾಯಕ ಎಂಬುವನು ಆಡಳಿತವನ್ನು ನಿರ್ವಹಿಸುತ್ತಿದ್ದನು. ಈತನು ಸಂಪಿಗೆ ಗ್ರಾಮದಲ್ಲಿ ಶಿಥಿಲವಾಗಿದ್ದ ಮಲ್ಲಿಕಾರ್ಜುನ ದೇವಾಲಯವನ್ನು ಜೀರ್ಣೋದ್ಧಾರಗೊಳಿಸಿ ಗರ್ಭಗೃಹ, ಮುಖಮಂಟಪ, ಪಡಸಾಲೆ, ಶಿಖರವನ್ನು ನಿರ್ಮಿಸಿದನು. ಅಲ್ಲದೇ ಸಂಪಿಗೆ ಗ್ರಾಮದ ಕೆರೆಯ ತೂಬಿನ ಮುಂದಿನ ಜಮೀನನ್ನು ದೇವಾಲಯದ ನಿರ್ವಹಣೆಗಾಗಿ ದಾನವಾಗಿ ನೀಡಿದ್ದನು.ಇಲ್ಲಿ 'ಮಹಾದೇವಿ' ಎಂಬ ಗಾಯಕಿಯನ್ನು, ತಾಳ ಹಾಕಲು 'ಮಾಕಬ್ಬೆ' ಎಂಬುವವಳನ್ನು ಒಳಗೊಂಡಂತೆ ಒಟ್ಟು ೩೦ ಮಂದಿಯನ್ನು ಕೀರ್ತನೆಗಳನ್ನು ಹಾಡಲು ನೇಮಿಸಲಾಗಿತ್ತು. ಮಹಾದೇವಿ ಮತ್ತು ಮಾಕಬ್ಬೆಯರು ದೇವದಾಸಿಯರಾಗಿದ್ದರು.[೬೦]

ಚಿಕ್ಕನಾಯಕನಹಳ್ಳಿಯ ಕಂದಿಕೆರೆ, ಹೆಸರಹಳ್ಳಿಗಳಲ್ಲಿ ದೇವದಾಸಿ ಪದ್ಧತಿಯಿದೆ. ತಮ್ಮ ಮನೆತನದ ಹೆಣ್ಣು ಮಗಳಿಗೆ ದೀಕ್ಷೆ ಕೊಡದಿದ್ದರೆ ದೇವಿಯು ಕೋಪಿಸಿಕೊಳ್ಳುವಳೆಂಬ ಭಯವೇ ಈ ಪದ್ಧತಿಯ ಆಚರಣೆಗೆ ಕಾರಣವಾಗಿದೆ. ಹಳೆಯ ತಲೆಮಾರಿನ ಹಿರಿಯ ದೇವದಾಸಿಯರು ಕಾಲವಾದ ಮೇಲೆ ದೇವರ ಹೆಸರಿನಲ್ಲಿ ಪಟ್ಟ ಕಟ್ಟಿಸಿಕೊಂಡು ದೇವದಾಸಿಯರಾಗುವ ಪದ್ಧತಿ ಈಗ ನಿಂತು ಹೋಗಿದೆ. ಕೆಲವರು ಶ್ರೀರೇಣುಕಾ ಯಲ್ಲಮ್ಮ ದೇವಿಯ ಹೆಸರಿನಲ್ಲಿ ಜೋಗಿತಿ ದೀಕ್ಷೆಯನ್ನು ಪಡೆದು ದೇವದಾಸಿಯರಾದರೆ, ಬೆಸ್ತರು ಕೆಂಪಮ್ಮ ದೇವಿಯ ಹೆಸರಿನಲ್ಲಿ ದೀಕ್ಷೆ ಪಡೆದು ದೇವದಾಸಿಯರಾಗುತ್ತಾರೆ.[೬೧] ಈಗ ಈ ಸಂಪ್ರದಾಯವು ಮರೆಯಾಗುತ್ತಿದೆ. ಶ್ರೀರೇಣುಕಾ ಯಲ್ಲಮ್ಮ ದೇವಿಯ ನಿಮ್ನ ವರ್ಗದ ಜೋಗಿತಿ ಮಾವೂರಮ್ಮ, ಯಲ್ಲಮ್ಮ, ಬೆಸ್ತರ ಜನಾಂಗದ ಕೆಂಪಮ್ಮ ದೇವಿಯ ದೇವದಾಸಿ ದೊಡ್ಡಕೆಂಪಮ್ಮ ಇವರು ಈ ಸಂಪ್ರದಾಯದ ಕಡೆಯ ದೇವದಾಸಿಯರು ಆಗಿದ್ದಾರೆ.

ಉತ್ತರದೇವಿಯ ಲಾವಣಿಗಳಲ್ಲಿ ಜೋಗತಿ ಸಂಪ್ರದಾಯದ ಸೂಕ್ಷ್ಮತೆಗಳನ್ನು ಗುರುತಿಸಬಹುದಾಗಿದೆ. ಸೊಸೆಯ ಮೇಲೆ ಪ್ರಭುತ್ವವನ್ನು ಹೇರಲು ಮುಂದಾಗುವ ಅತ್ತೆಯು ತನ್ನ ಮಗನಿಗೆ ಈ ಕೆಳಕಂಡಂತೆ ಹೇಳುತ್ತಾಳೆ.

ಉತ್ತರದೇವೆಂಬೊ ಸೊಸೆ ಬೇಡ ಕಂದಯ್ಯ
ಬಿಟ್ಟು ಬಿಡವಳ ಬಸವೀಯ॥[೨]

ಅತ್ತೆಯ ಈ ಹೇಳಿಕೆಯಿಂದ ಅಂದಿನ ಸೊಸೆಯಂದಿರ ಸ್ಥಾನ ಮಾನಗಳನ್ನು ಅರಿಯಬಹುದಾಗಿದೆ. ಯಾಜಮಾನಿಕೆಯ ಪ್ರತೀಕದಂತಿರುವ ಅತ್ತೆಯು ಪುರುಷ ಪ್ರಧಾನ ವ್ಯವಸ್ಥೆಯೊಂದಿಗೆ ಜೊತೆಗೂಡಿ ತನ್ನಂತೆಯೇ ಮಹಿಳೆಯಾಗಿರುವ ಸೊಸೆಯನ್ನು ತಮ್ಮ ಅಧಿಕಾರದ ನೆಲೆಯಲ್ಲಿ ಶೋಷಣೆಗೆ ಒಳಪಡಿಸುತ್ತಿದ್ದ ರೀತಿಯನ್ನು ಗಮನಿಸಬಹುದಾಗಿದೆ.

**೬.೪.೫ ಸಾವು ಮತ್ತು ಶವಸಂಸ್ಕಾರ ಪದ್ದತಿ :**

ಮನುಕುಲವು ಸುಖ, ದುಃಖ, ಸಾವು, ನೋವುಗಳಿಗೆ ಪೂರಕವಾಗಿ ಆಚರಿಸಿಕೊಂಡು ಬಂದಿರುವ ಸಂಪ್ರದಾಯಗಳು ವಿಭಿನ್ನವಾಗಿವೆ. ಇವುಗಳ ಪೈಕಿ ಸಾವು, ನೋವುಗಳ ನೆಲೆಯಲ್ಲಿ ಶವವನ್ನು ಮಣ್ಣಿನಲ್ಲಿ ಸಮಾಧಿ ಮಾಡುವ, ಬೆಂಕಿಯಲ್ಲಿ ಸುಡುವ, ಪದ್ಧತಿಗಳು ರೂಢಿಯಲ್ಲಿವೆ. ಹಾಗೂ ಈ ಸಂಬಂಧಿತ ಕೆಲವು ಕಟ್ಟುಪಾಡುಗಳು, ರೀತಿ ರಿವಾಜುಗಳು ಅಸ್ತಿತ್ವದಲ್ಲಿವೆ. ಮೌಖಿಕ ಕಾವ್ಯಗಳಲ್ಲಿಯೂ ಸಹ ಶವ ಸಂಸ್ಕಾರ ಪದ್ಧತಿಗೆ ಸಂಬಂಧಿಸಿದ ವಿವರಗಳು ಲಭ್ಯವಾಗುತ್ತವೆ.

ಕೆಂಚಮ್ಮ ಕೆರೆಗೆ ಹಾರವಾಗುವ, ಈರುನಾಗಮ್ಮ, ಭೀಮಾಸತಿಯರು ಸತಿಸಹಗಮನದ ಮೂಲಕ ಪಾರಂಪರಿಕ ಸಂಪ್ರದಾಯಗಳನ್ನು ಪಾಲಿಸುವುದು ಕಂಡುಬರುತ್ತದೆ. ಸಿರಿವೊಳಲಿನ ಜನರು ಇಂದಿಗೂ ವಡ್ಡಗೆರೆ ಈರುನಾಗಮ್ಮನ ಆರಾಧಕರಾಗಿದ್ದಾರೆ. ಈರುನಾಗಮ್ಮಳು ತನ್ನ ಪತಿ ನಾಗಣ್ಣನೊಂದಿಗೆ ಚಿತೆಯೇರಲು ಬೇಕಾದ ಸೌದೆಯನ್ನು, ಸಿರಿವೊಳಲಿಗೆ ಹತ್ತಿರದ ಆಂಧ್ರಪ್ರದೇಶದ ಮಡಕಸಿರಾ ತಾಲೂಕಿನ ಅಮರಾಪುರದ ತಮ್ಮಡಿಹಳ್ಳಿ ಮತ್ತು ಗೌಡನಕುಂಟೆಯಿಂದ, ಹನ್ನೆರಡು ಬಂಡಿಗಳಲ್ಲಿ ತರಲಾಗಿತ್ತು. ಸತಿಪದ್ದತಿಯಲ್ಲಿ ಬೆಂಕಿಯಲ್ಲಿ ಸುಡಲು ಸಿರಿಗಂಧದ ಬಳಸಲಾಗಿತ್ತೆಂಬ ಅಂಶಗಳು ತಿಳಿದುಬರುತ್ತವೆ..

ಬಂದಕುಂಟೆ ಈರುಚಿಕ್ಕಣ್ಣನ ಕಾವ್ಯದಲ್ಲಿ ವ್ಯಕ್ತಪಡಿಸಿರುವಂತೆ ತಾಯಿ, ತಂಗಿ, ಬಂಧು, ಬಳಗದ ಮಾತುಗಳನ್ನು ಆಲಿಸದ ಈರಣ್ಣನು “ಸೋಮಾರ್ದ ಯಾಳ್ಯೇಕೀರಣ್ಣ ಮಡಿದಾನೊ” ಎಂಬ ಈ ಕಾವ್ಯಕ್ಕೆ ಪೂರಕವಾಗಿ ಪರನಾರಿಯಾದ ಬೇಡರ ಓಬವ್ವಳ ಸಂಗವನ್ನು ಮಾಡಿ ಹತ್ಯೆಯಾಗುತ್ತಾನೆ. ಇಂದಿಗೂ ಬಂದ್ಕುಂಟೆ ಗ್ರಾಮದ ಊರು ಬಾಗಿಲಿನಲ್ಲಿ ಈರುಚಿಕ್ಕಣ್ಣನ ಸಮಾಧಿಯಿದೆ. ಜನಸಮುದಾಯವು ಅದನ್ನು ಇಂದಿಗೂ ಪೂಜಿಸುತ್ತಾರೆ. ಬೇಟೆ ವಿಷಯವನ್ನೇ ನೆಪವಾಗಿಸಿಕೊಂಡು ವೀರಸೀಗಣ್ಣನನ್ನು ಹತ್ಯೆಗೈದ ಬಳಿಕ ಆತನನ್ನು ಸಮಾಧಿ ಮಾಡುವ ಪ್ರಸಂಗವು ಕಾವ್ಯದಲ್ಲಿದೆ.

ಅಪ್ಪ ಸಲಿಕೆ ತಾರೋ ತಮ್ಮ ಗುದ್ದಲಿ ತಾರೋ
ಬಿನ್ನಾಣಿ ಮರಳ ತೆಗೆ ಬಾರೋ। ಸೀಗಣ್ಣನ
ಹೊನ್ನು ಮಡಗಿದಾಂಗೆ ಮಡಗಾನಿ॥[೬೩]

ಈ ಕಾವ್ಯದಲ್ಲಿ ಅಂದು ಬಳಸಲಾಗುತ್ತಿದ್ದ ಸಲಿಕೆ (ಗುದ್ದಲಿ) ಯಂತಹ ಮಣ್ಣು ತೆಗೆಯುವ ಉಪಕರಣಗಳನ್ನು ಬಳಸಿ ಶವವನ್ನು ಮಣ್ಣಿನಲ್ಲಿ ಹೂತು, ಸಮಾಧಿಯನ್ನು ಮಾಡುತ್ತಿದ್ದ ಬಗ್ಗೆ ತಿಳಿದುಬರುತ್ತದೆ.

ಆರು ಮಂದಿ ಮಾವುಗಳು ಆರು ಕಾಯಿ ತಕ್ಕೊಂಡು
ಆರು ಜೋಡುರಿಮೆ ಕರ್‍ಕೊಂಡು। ಸೋಮಾರದ
ವೇಳ್ಯಾಕೆ ನೀವು ಬರಬೇಕು॥
ಸೋಮಾರದ ವೇಳ್ಯಾಕೆ ಸೀಗಣ್ಣ ಮಡಿದಾನು।[೬೪]

ಈ ಕಾವ್ಯದಿಂದ ಸಂಪ್ರದಾಯದಲ್ಲಿ ಪಾಲ್ಗೊಳ್ಳುತ್ತಿದ್ದ ಬಂಧು ಬಾಂಧವರ ಬಗ್ಗೆ ಹಾಗೂ ಮಾವಂದಿರು ಶವ ಸಂಸ್ಕಾರದ ಸಂದರ್ಭದಲ್ಲಿ ತರಬೇಕಾಗಿದ್ದ ಸಾಮಗ್ರಿಗಳ ಬಗ್ಗೆ ತಿಳಿಯಲಾಗಿದೆ. ಈ ಮೂಲಕ ಅಂದಿನ ಶವಸಂಸ್ಕಾರ ಪದ್ಧತಿಯ ರೀತಿ ರಿವಾಜುಗಳನ್ನು ತಿಳಿಯಲು ಸಹಾಯಕವಾಗಿದೆ. ಜನಪದ ಸಂಪ್ರದಾಯಗಳು ಅವು ಪರಿವರ್ತನೆಯನ್ನು ಮೈಗೂಡಿಸಿಕೊಂಡು ಪರಂಪರೆಯಲ್ಲಿ ಆಚರಿಸಲ್ಪಡುವ ರೀತಿ ನೀತಿಗಳನ್ನು ಅರಿಯಲು ಸಹಾಯಕವಾಗಿದೆ.

## ೬.೫ ನಂಬಿಕೆಗಳು

ನಂಬಿಕೆಗಳು ಜನಸಾಮಾನ್ಯರ ಭಾವನಾತ್ಮಕ ಅಂಶಗಳಾಗಿವೆ. ಇವುಗಳ ಸತ್ಯಾಸತ್ಯತೆಯನ್ನು ಕೆದಕುವುದು ಕೆಲವೊಮ್ಮೆ ಮಾನಸಿಕ ಆಘಾತಕ್ಕೆ ಕಾರಣವಾಗುವ ಸಂಭವವೇ ಹೆಚ್ಚು. ಶ್ರೇಷ್ಠ ವ್ಯಕ್ತಿ ಅಥವಾ ಸ್ಥಳವೊಂದನ್ನು ಒಂದೇ ಪ್ರದೇಶಕ್ಕೆ ಸೀಮಿತಗೊಳಿಸದೇ ತಮ್ಮ ಸ್ಥಳೀಯ ಮಟ್ಟದಲ್ಲೂ ಅದು ಆತನನ್ನು ಆವಾಹಿಸಿ ಆತನ ಮೌಲ್ಯಗಳನ್ನು ರೂಢಿಸಿಕೊಳ್ಳುವ ಪ್ರಯತ್ನ ಅಂದರೆ ಶ್ರೇಷ್ಠ ವ್ಯಕ್ತಿಯೊಬ್ಬನನ್ನು ಒಂದೇ ಸ್ಥಳ, ಕುಲ, ವರ್ಗಕ್ಕೆ ಸೀಮಿತಗೊಳಿಸದೇ ಸಾರ್ವತ್ರಿಕಗೊಳಿಸುವ ಜನಪದರ ಪ್ರಯತ್ನಗಳ ಫಲವೇ ಪುರಾಣ, ಪ್ರತೀತಿ, ಸಾಮಾನ್ಯ ನಂಬಿಕೆಗಳು ಹುಟ್ಟಿಕೊಳ್ಳಲು ಕಾರಣವಾಗಿವೆ. ನಂಬಿಕೆಗಳನ್ನು ಚಾರಿತ್ರಿಕ ನೆಲೆಯಲ್ಲಿ ಅಭ್ಯಸಿಸುವುದು ಕಷ್ಟಸಾಧ್ಯವೇ ಸರಿ. ನಂಬಿಕೆಗಳನ್ನು ಅವುಗಳ ಸ್ವರೂಪಕ್ಕೆ ಅನುಗುಣವಾಗಿ ಅಧ್ಯಯನದ ಸಲುವಾಗಿ ಈ ಕೆಳಕಂಡಂತೆ ವರ್ಗೀಕರಿಸಿಕೊಳ್ಳಲಾಗಿದೆ.

೧. ಚಾರಿತ್ರಿಕ ನಂಬಿಕೆಗಳು

೨. ಕೃಷಿ ಆಧಾರಿತ ನಂಬಿಕೆಗಳು

೩. ಜಾತಿ ಆಧಾರಿತ ನಂಬಿಕೆಗಳು

೪. ಮಹಾಕಾವ್ಯಗಳ ಆಧಾರಿತ ನಂಬಿಕೆಗಳು

೫. ಮೌಖಿಕ ಕಾವ್ಯಗಳ ಆಧಾರಿತ ನಂಬಿಕೆಗಳು

ಈ ಅಧ್ಯಯನದ ಪರಿಮಿತಿಯಲ್ಲಿ ಸಾಧ್ಯವಾಗಬಹುದಾದ ಕೆಲವು ನಂಬಿಕೆಗಳನ್ನು ಕ್ರೂಢೀಕರಿಸುವ ಪ್ರಯತ್ನವನ್ನು ಮಾಡಲಾಗಿದೆ.

೧) **ಚಾರಿತ್ರಿಕ ನಂಬಿಕೆಗಳು** : ತೋಂಟದ ಯತಿಗಳು ‘ಗುಬ್ಬಿಯ ಪಲ್ಲಕ್ಕಿಯಲ್ಲಿ ಮಾಯವಾಗಿ ಕಡಬದಲ್ಲಿ ಪ್ರತ್ಯಕ್ಷರಾದರು.’[೬೫] ಇದರ ವಿಮರ್ಶಾತ್ಮಕ ವಿವರಣೆಯನ್ನು ಈ ರೀತಿಯಾಗಿ ತಿಳಿಯಬಹುದಾಗಿದೆ. ಗುಬ್ಬಿ ಹೊಸಹಳ್ಳಿ ಪಾಳೆಯಗಾರರಿಗೆ ಗುಬ್ಬಿಯ ಗೋಸಲ ಚನ್ನಬಸವೇಶ್ವರರು ರಾಜಗುರುಗಳಾಗಿದ್ದರು. ಇವರು ತೋಂಟದ ಯತಿಗಳ ಗುರುಗಳೂ ಹೌದು.ಗೋಸಲ ಚನ್ನಬಸವೇಶ್ವರರ ಸಮಾಧಿಯು ಗುಬ್ಬಿಯಲ್ಲಿ ಇರುವುದರಿಂದ ತೋಂಟದ ಯತಿಗಳು ತನ್ನ ಗುರುಗಳಿಗೆ ಗೌರವವನ್ನು ಸಲ್ಲಿಸುವ ಸಲುವಾಗಿ ಗುಬ್ಬಿಯ ಪರಿಸರದಲ್ಲಿ ಪಲ್ಲಕ್ಕಿಯಲ್ಲಿ ಸಾಗುವುದರ ಬದಲಾಗಿ ಕಾಲ್ನಡಿಗೆಯಲ್ಲಿ ಸಾಗಿದ್ದರು ಎಂದು ವಿಶ್ಲೇಷಿಸಬಹುದಾಗಿದೆ.

ಪ್ರತಾಪರುದ್ರನ ಆಳ್ವಿಕೆಯಲ್ಲಿದ್ದ ವೋರಗಲ (ಓರಂಗಲ್) ನಾಡಿನಲ್ಲಿ ಪದುಮಲದೇವಿಯ ಮಗನಾಗಿ ಜನಿಸಿದ ಈರುಗ್ಯಾತರಾಯನ ಅಸಹಜ ಜನ್ಮದ ಕುರಿತು ಕೆಳಕಂಡಂತೆ ಉಲ್ಲೇಖಿಸಲಾಗಿದೆ.

> ಹಡೆದಾಳೆ ಪದುಮವ್ವನ ತೊಡೆಯ ಸೋಕ್ಯಾವೆಂದು
> ನಡುಬೆನ್ನಿಗೆ ಈರಣ್ಣ ಒಡೆದಾನೆ। ಹೆಡೆದಮ್ಮ
> ಎದುರಿಗಿರುವವರ್ಯಾರೆ॥ [೬೬]

ಈ ಜನಪದ ಪದ್ಯದಲ್ಲಿನ ಹುಟ್ಟಿನ ಅಸಹಜತೆಯನ್ನು ಅವಲೋಕಿಸಿದಾಗ ಸಮುದಾಯದಲ್ಲಿನ ಕಟ್ಟು ಕಟ್ಟಳೆಗಳನ್ನು ಮೀರಿದ ಹುಟ್ಟಿಗೊಂದು ದೈವಿಕತೆಯನ್ನು ಆರೋಪಿಸಿ ತಮ್ಮ ಹೆಣ್ಣುಮಕ್ಕಳನ್ನು / ಮಗುವನ್ನು ಕಾಪಾಡಿಕೊಳ್ಳುವ ಪ್ರಯತ್ನವು ನಡೆದೇ ಇರುತ್ತದೆ. ಹುಟ್ಟಿಗೆ ಕಾರಣವಾದ ವ್ಯಕ್ತಿಯ ಹೆಸರನ್ನು ಗೌಪ್ಯವಾಗಿಡುತ್ತಲೇ ಸೂಚ್ಯವಾಗಿ ಬಹಿರಂಗ ಪಡಿಸುವ ಪ್ರಯತ್ನವು ನಡೆದೇ ಇರುತ್ತದೆ. ಬುದ್ಧನು ತನ್ನ ತಾಯಿಯ ಸೊಂಟದ ಮೂಲಕ ಹುಟ್ಟಿ ಬಂದದ್ದು, ಜುಂಜಪ್ಪನು ತನ್ನ ತಾಯಿಯ ಬೆನ್ನನ್ನು ಸೀಳಿಕೊಂಡು ಹುಟ್ಟಿ ಬಂದದ್ದು[೬೭] ತಾವು ಆರಾಧಿಸುವ ಸಾಂಸ್ಕೃತಿಕ ವೀರನು ಸಾಮಾನ್ಯನಂತೆ ಹುಟ್ಟಲಿಲ್ಲ ಎಂದು ಹೇಳುವುದು ಜನಪದರ ಆಶಯವಾಗಿರುತ್ತದೆ. ಇಲ್ಲಿ ತಾರ್ಕಿಕವಾದ ಅರ್ಥವನ್ನು ಹುಡುಕುವ ಪ್ರಯತ್ನವು ಜನಪದರ ಭಾವನೆಗಳಿಗೆ ಘಾಸಿಯನ್ನು ಉಂಟು ಮಾಡುವಂತೆ ಇರಬಾರದು.

೨) **ಕೃಷಿ ಆಧಾರಿತ ನಂಬಿಕೆಗಳು** : ಮಳೆಯು ಸಕಾಲದಲ್ಲಿ ಬಾರದೇ ಇದ್ದಾಗ ರೈತ ಸಮುದಾಯವು ಆತಂಕದಿಂದ ಆಕಾಶದೆಡೆಗೆ ನೋಡುವುದನ್ನು ಕಾಣಬಹುದು. ಮಾನವನು ತನ್ನ ಅನುಭವದ ಹಿನ್ನೆಲೆಯಲ್ಲಿ ಪ್ರಕೃತಿಯಲ್ಲಿನ ಕೀಟಗಳು, ಪ್ರಾಣಿಗಳು, ಪಕ್ಷಿಗಳ ಚಲನವಲನವನ್ನು ಗಮನಿಸಿದನು. ಸೂರ್ಯ ಚಂದ್ರರ ಸ್ಥಿತಿಗತಿಗಳನ್ನು ಅಭ್ಯಾಸ ಮಾಡಿದನು ಇವುಗಳ ಹಿನ್ನೆಲೆಯಲ್ಲಿ ಮಳೆಗೆ ಸಂಬಂಧಿತವಾದ ಅರಿವನ್ನು ಪಡೆದುಕೊಂಡನು. ಪರಿಸರದಲ್ಲಿನ ಇತರ ಜೀವಿಗಳ ಬದುಕನ್ನು ಸೂಕ್ಷ್ಮವಾಗಿ ಗ್ರಹಿಸುವ ಮೂಲಕ

ಪ್ರಕೃತಿಯಲ್ಲಾಗುವ ಬದಲಾವಣೆಗಳನ್ನು ಗಮನಿಸಿದನು. ಆ ಮೂಲಕ ಮಳೆಯ ಮುನ್ಸೂಚನೆಯನ್ನು ಅರಿತನು. ಪಾರಂಪರಿಕವಾಗಿ ಗಮನಿಸಿ ಅನುಭವಿಸಿದ ಅರಿವಿನ ಹಿನ್ನೆಲೆಯಲ್ಲಿ ಜನಪದ ಸಮುದಾಯದಲ್ಲಿ ಮಳೆಗೆ ಸಂಬಂಧಿತವಾದ ನಂಬಿಕೆಗಳು ಕಂಡು ಬರುತ್ತವೆ. ತಲೆಮಾರಿನಿಂದ ತಲೆಮಾರಿಗೆ ಇಂತಹ ನಂಬಿಕೆಗಳು ಸಾಗುತ್ತಾ ಬಂದಿವೆ. ತುಮಕೂರು ಜಿಲ್ಲೆಯ ಪ್ರದೇಶದಲ್ಲಿರುವ ಇಂತಹ ಮಳೆಗೆ ಸಂಬಂಧಿತವಾದ ನಂಬಿಕೆಗಳನ್ನು ಗ್ರಹಿಸಬಹುದು. ಅವುಗಳೆಂದರೆ :

**ಈ ಕೆಳಕಂಡ ಸಂದರ್ಭಗಳಲ್ಲಿ ಮಳೆ ಬರುತ್ತದೆಂಬ ನಂಬಿಕೆಗಳಿವೆ.**

- ಸೂರ್ಯ ಮತ್ತು ಚಂದ್ರ ಗೂಡು ಕಟ್ಟಿದರೆ,
- ಸಂಜೆ ಕೆಮ್ಮುಗಿಲಾದರೆ, ಹುಣಸೆ ಹೂವು ಹೆಚ್ಚಾಗಿ ಮೂಡಿದರೆ ಮಳೆ ಹೆಚ್ಚಾಗಿ ಬರುತ್ತದೆ
- ಕರುವು ಕಲ್ಲನ್ನು ತಂದು ಹಾಕಿದ್ದರೆ ಮಳೆ ಬರುವುದಿಲ್ಲ. ಆದರೆ ಆ ಕಲ್ಲನ್ನು ಬೇರೆಡೆ ಸಾಗಿಸಿದರೆ,
- ಮಳೆರಾಯನನ್ನು ಆರಾಧನೆ ಮಾಡಿದರೆ,
- ಹಲವು ನಾಯಿಗಳು ಒಟ್ಟಾಗಿ ಮುಗಿಲ ಕಡೆ ಮುಖ ಮಾಡಿ ಬೊಗಳಿದರೆ,
- ಕಪ್ಪು ಇರುವೆಗಳು ತತ್ತಿಯನ್ನು ಕಚ್ಚಿಕೊಂಡು ನಡೆಯುತ್ತಿದ್ದರೆ,
- ನೆಲಕಿರುಬ ಕೂಗಿದರೆ,
- ರಣಹದ್ದುಗಳು ಅತೀ ಎತ್ತರದಲ್ಲಿ ಹಾರುತ್ತಿದ್ದರೆ,
- ಈಚಲ ಹುಳುಗಳು ಹೆಚ್ಚಾಗಿ ಕೂಡಿದರೆ,
- ತೊಟ್ಟಿಲ ಹುಳು (ಚಿಟ್ಟೆ) ಹೆಚ್ಚಾಗಿ ಹಾರಾಡಿದರೆ,
- ಮೇಯುತ್ತಿರುವ ಕುರಿಗಳು ಆಗಾಗ ಗುಂಪು ಕೂಡಿದರೆ,
- ಕಪ್ಪೆಗಳು ನಿರಂತರವಾಗಿ ವಟಗುಟ್ಟಿದರೆ,
- ಕತ್ತೆಗಳಿಗೆ ಅಥವಾ ಕಪ್ಪೆಗಳಿಗೆ ಮದುವೆ ಮಾಡಿದರೆ,
- ಸುರಿಯುತ್ತಿರುವ ಮಳೆಯಲ್ಲಿ ಬೆಂಕಿಕೊಳ್ಳಿಯನ್ನು ಹಿಡಿದು ತಿರುಗಿದರೆ,
- ಕೋಳಿಗಳು ತಮ್ಮ ರೆಕ್ಕೆಯನ್ನು ಬಿಡಿಸಿಕೊಂಡು ಬಿಸಿಲು ಕಾಯಿಸಿದರೆ,

**ಈ ಕೆಳಕಂಡ ಸಂದರ್ಭಗಳಲ್ಲಿ ಮಳೆ ಬರುವುದಿಲ್ಲ ಎಂಬ ನಂಬಿಕೆಗಳಿವೆ.**

- ತೊನ್ನು ಚರ್ಮ ರೋಗವಿದ್ದು ಸತ್ತವರನ್ನು ಹೂತಿದ್ದರೆ ಮಳೆ ಬರುವುದಿಲ್ಲ. ಆದರೆ ಸಮಾಧಿ ಮೇಲೆ ಉಪ್ಪು ಸುರಿದು ಹುಣಸೇ ಗೂಟ ಹೊಡೆದರೆ ಅಥವಾ ಆ ಶವವನ್ನು ಸಮಾಧಿಯಿಂದ ಹೊರಗೆ ತೆಗೆದು ಸುಟ್ಟಲ್ಲಿ ಮಳೆ ಬರುತ್ತದೆ.
- ಸೂರ್ಯ ಮಾತ್ರ ಗೂಡು ಕಟ್ಟಿದರೆ ಮಳೆ ಬೀಳುವ ಸಾಧ್ಯತೆ ಕಡಿಮೆ

## ೩) ಜಾತಿ ಆಧಾರಿತ ನಂಬಿಕೆಗಳು :

ತುಮಕೂರು ಜಿಲ್ಲೆಯ ಪ್ರತೀ ಹಳ್ಳಿಯಲ್ಲಿಯೂ ಮಾರಮ್ಮನ ದೇಗುಲವಿದೆ. ಸ್ತ್ರೀ ದೇವತೆಯಾಗಿರುವ ಈಕೆಯನ್ನು ದುಷ್ಟ ಶಕ್ತಿಗಳ ನಿಗ್ರಹದ ರೂವಾರಿಯಂತೆ ಜನಪದರು ಭಾವಿಸಿದ್ದಾರೆ, ಈಕೆಯು ಉನ್ನತ ಕುಲಕ್ಕೆ ಸೇರಿದವಳೆಂಬುದು ಜನಪದರ ನಂಬಿಕೆಯಗಿದೆ. ಅಂತೆಯೇ ಈಕೆಯನ್ನು ಇಷ್ಟಪಟ್ಟು ವಿವಾಹವಾದ ತಲವರ್ಗದ ಗಂಡನು ಜಾತಿಯನ್ನು ಮರೆಮಾಚಿದನೆಂಬ ಕಾರಣಕ್ಕೆ ಆತನನ್ನೇ ಬಲಿಪಡೆಯುತ್ತಾಳೆ. ಈ ನೆಲೆಯಲ್ಲಿಯೇ 'ದಾರಿಯಲ್ಲಿ ಹೋಗುವ ಮಾರಿ ಮನೆಗೆ ಹೊಕ್ಕಿದಂತೆ', 'ಒಲಿದರೆ ನಾರಿ ಮನಿದರೆ ಮಾರಿ' ಎಂಬ ಗಾದೆಗಳು ಪ್ರಚಲಿತದಲ್ಲಿವೆ.

ಇಲ್ಲಿ ಅಂತರ್ಜಾತಿ ವಿವಾಹದ ಪರಿಕಲ್ಪನೆಯಿದೆಯಾದರೂ ಪ್ರತಿಲೋಮ ವಿವಾಹ ಪದ್ಧತಿಯನ್ನು ಸಹಿಸದ ಮೇಲ್ವರ್ಗವು ಸೃಷ್ಟಿಸಿದ ಸಾಹಿತ್ಯವನ್ನು ಪ್ರತಿಲೋಮ ವಿವಾಹದ ಪರಿಣಾಮವನ್ನು ಸಮಾಜಕ್ಕೆ ಸೂಚ್ಯವಾಗಿ ತಿಳಿಸಲು ಬಳಸಿಕೊಂಡಿರುವುದನ್ನು ಗಮನಿಸಬಹುದಾಗಿದೆ. ಮೇಲ್ವರ್ಗವು ಸೃಷ್ಟಿಸಿದ ಸಾಹಿತ್ಯವನ್ನು ತಲವರ್ಗವು ಹೇಳುವಂತೆ ಕಂಡುಬರುತ್ತದೆ. ಸಾಮಾನ್ಯವಾಗಿ ಮಾರಮ್ಮನ ದೇವಾಲಯದ ಮುಂದೆ ಹಾಗೂ ಸುತ್ತಲು ಬೇವಿನ ಮರಗಳನ್ನು ಬೆಳೆಸಿರುವುದು ಕಂಡುಬರುತ್ತದೆ. ಬೇವಿನಮರವು ರೋಗ ನಿರೋಧಕದ ಪ್ರತಿರೂಪವಾಗಿದೆ. ಇಲ್ಲಿ ಮಾರಮ್ಮ ರೋಗಗಳ ಪ್ರಸಾರಕ ಹಾಗೂ ರೋಗಗಳ ನಿರ್ಮೂಲಕಳಾಗಿ ಪಾತ್ರವನ್ನು ವಹಿಸುತ್ತಾಳೆ. ಪ್ಲೇಗು, ಕಾಲರಾದಂತಹ ಸಾಂಕ್ರಾಮಿಕ ರೋಗಗಳು ಮಾರಮ್ಮನಿಗೆ ಬಂದಂತಹ ಕೋಪದ ಪ್ರಭಾವವೆಂದೇ ಬಾವಿಸಲಾಗುತ್ತದೆ. ಅಂತೆಯೇ ರೋಗಗಳನ್ನು ಪರಿಹರಿಸುವಂತೆ ಆಕೆಯನ್ನೇ ಮೊರೆ ಹೋಗಲಾಗುತ್ತದೆ.

## ೪) ಮಹಾಕಾವ್ಯಗಳ ಆಧಾರಿತ ನಂಬಿಕೆಗಳು :

೧) ಕಡಬ ಗ್ರಾಮವು ಶಿಂಷಾ ನದಿಯ ದಂಡೆಯ ಮೇಲಿದ್ದು, ಇಲ್ಲಿನ ಆಶ್ರಮದಲ್ಲಿ ಕದಂಬ ಎಂಬ ಋಷಿಯು ವಾಸ ಮಾಡುತ್ತಿದ್ದರಿಂದ ಈ ನೆಲೆಗೆ ಕಡಬ ಎಂಬ ಹೆಸರು ಬಂದಿತು.

೨) ಕುಣಿಗಲ್ ತಾಲೂಕಿನಲ್ಲಿ ಹರಿಯುವ ನಾಗಿಣಿ ನದಿಯಲ್ಲಿ ಸ್ನಾನ ಮಾಡಿ ನೃಗನೆಂಬ ರಾಜರ್ಷಿಯು ಮುಕ್ತಿ ಪಡೆದನು.

೩) ತುರುವೇಕೆರೆ ತಾಲೂಕಿನ ತಂಡಗವು ದೊರೆ ಶಾಲೀವಾಹನನ ಜನ್ಮಸ್ಥಳವೆಂದೂ, ಕುಂಬಾರ ಮಹಿಳೆಯ ಗರ್ಭದಲ್ಲಿ ಜನಿಸಿದನು.

೪) ತುರುವೇಕೆರೆಯ ಸಮೀಪದಲ್ಲಿ ಪಂಚಲಿಂಗಗಳಿದ್ದು ಇವುಗಳ ಪೂಜೆಗಾಗಿ ಇಲ್ಲಿಯೇ ಪರ್ಣಶಾಲೆಯನ್ನು ನಿರ್ಮಿಸಿಕೊಂಡು ವಾಸಿಸುತ್ತಿದ್ದ ಕೈಕಂಡು ಮಹರ್ಷಿಯು ತನ್ನ ತಪಸ್ಸಿದ್ಧಿಯಿಂದ ಮುಕ್ತಿ ಪಡೆದನು.

೫) ತುರುವೇಕೆರೆ ತಾಲೂಕಿನ ಸಂಪಿಗೆ ಗ್ರಾಮವು ಪುರಾಣಕಾಲದ ಚಂಪಕಾ ನಗರವಾಗಿದ್ದು, ಇದು ಮಹಾಭಾರತದ ಹಂಸಧ್ವಜನ ಮಗ ಸುಧನ್ವನ ರಾಜಧಾನಿಯಾಗಿತ್ತು.

೬) ಮಧುಗಿರಿ ತಾಲೂಕಿನ ಮಿಡಿಗೇಶಿ ಸಮೀಪದ ಕತ್ತಿರಾಜನಹಳ್ಳಿ ಬೆಟ್ಟಗಳಲ್ಲಿ ಕೊಂತಿಬಂಡೆ ಮತ್ತು ಭೀಮನ ಗವಿಗಳೆಂದು ಕರೆಯುವ ಪ್ರದೇಶಗಳು ಮಹಾಭಾರತಕ್ಕೆ ಸಂಬಂಧಿಸಿವೆ.

೭) ದ್ವಾಪರಯುಗದಲ್ಲಿ ಮೃಖಂಡ ಮತ್ತು ಚಂದ್ರಚೂಡಾಮುನಿಗಳು ಬದರಿಯಿಂದ ತೀರ್ಥಯಾತ್ರೆ ಹೊರಟು ತುರುವೇಕೆರೆಗೆ ಆಗಮಿಸಿ ತಪಸ್ಸು ಮಾಡುತ್ತಿದ್ದಾಗ ಇಲ್ಲಿ ಅಡಗಿದ್ದ ಮಹಾ ಮಾಯಾವಿ ರಾಕ್ಷಸರು ಮೃಗರೂಪವನ್ನು ಧರಿಸಿ ತಪಸ್ಸಿಗೆ ಭಂಗ ತರಲಾರಂಭಿಸಿದಾಗ, ಮುನಿಗಳ ಪ್ರಾರ್ಥನೆಗೆ ಪ್ರಸನ್ನನಾಗಿ ಅಶ್ವಾರೂಢನಾಗು ಆಗಮಿಸಿ ರಾಕ್ಷಸರನ್ನು ಸಂಹರಿಸಿ ಮುನಿಗಳಿಗೆ ದರ್ಶನವನ್ನು ನೀಡಿ, ಆಶೀರ್ವದಿಸಿದನೆಂಬ ಪ್ರತೀತಿಯಿದೆ. ಸಾಕ್ಷಾತ್ ಭಗವಂತನೇ ಮೃಗರೂಪವನ್ನು ಧರಿಸಿ ಬೇಟೆಯಾಡಿ ರಾಕ್ಷಸರನ್ನು ಕೊಂದಿದ್ದರಿಂದ ಅವನಿಗೆ ವರದಬೇಟೆರಾಯಸ್ವಾಮಿ ಎಂಬ ಹೆಸರಿದೆ.

೮) ಶ್ರೀರಾಮಚಂದ್ರನು ಸೀತೆಯೊಂದಿಗೆ ಕೊರಟಗೆರೆ ತಾಲೂಕಿನ ಸಿದ್ಧರಬೆಟ್ಟಕ್ಕೆ ಆಗಮಿಸಿದ್ದನು. ಇಲ್ಲಿ ವಾಸಿಸುತ್ತಿದ್ದ ಕಾಕಾಸುರನು ಇವರಿಗೆ ತೊಂದರೆ ನೀಡಿದನೆಂದೂ ಆಗ ಶ್ರೀರಾಮಚಂದ್ರನು ಕಾಕಾಸುರನ ಗರ್ವಭಂಗ ಮಾಡಿ ಇಲ್ಲಿ ಸುಳಿಯದಂತೆ ಆಜ್ಞೆ ಮಾಡಿದನೆಂದು ಐತಿಹ್ಯವಿದೆ. ಇಲ್ಲಿ ಕಾಗೆಗಳ ಸಂಚಾರವೇ ಇಲ್ಲದಿರುವುದರ ಹಿನ್ನೆಲೆಯಲ್ಲಿ ಈ ನೆಲೆಯನ್ನು ಕಾಕನಗಟ್ಟಲು ಎಂದು ಕರೆಯಲಾಗುತ್ತದೆ.

ವನವಾಸದ ಸನ್ನಿವೇಶದಲ್ಲಿ ಶ್ರೀರಾಮಚಂದ್ರನು ಪಾವಗಡ ತಾಲೂಕಿನ ತಿರುಮಣಿ ಕಡೆಯಿಂದ ಇಲ್ಲಿನ ಕಾಮನಬೆಟ್ಟ (ಕಾಮನಬೆಟ್ಟಕ್ಕೆ ಈ ಮುಂದಿನ ಹಲವು ಹೆಸರುಗಳಿವೆ, ಅವುಗಳೆಂದರೆ : ಕಾವಿನಬೆಟ್ಟ, ಕಾಕಾದ್ರಿಗಿರಿ, ಕಾಮಿನಿಕೊಂಡ, ಕಾಕಾದ್ರಿಪರ್ವತ, ಕಾವಿನಕೊಂಡ) ಬಂದಿದ್ದು ಇಲ್ಲಿ ಶ್ರೀರಾಮನು ಸೀತೆಯ ತೊಡೆಯಮೇಲೆ ಪವಡಿಸಿರಲು ಕಾಕರಾಜನು ಸೀತೆಗೆ ಹಿಂಸೆಯನ್ನು, ಶ್ರೀರಾಮನಿಗೆ ನಿದ್ರಾಭಂಗವನ್ನು ಉಂಟುಮಾಡಿದನು. ಇದರಿಂದ ಕುಪಿತನಾದ ಶ್ರೀರಾಮನು ಕಾಕಾಸುರನ ಗರ್ವಭಂಗ ಮಾಡಿ ಇಲ್ಲಿಗೆ ಸುಳಿಯದಂತೆ ಆಜ್ಞೆ ಮಾಡಿದನೆಂದು ಐತಿಹ್ಯವಿದೆ. ಇಲ್ಲಿಯು ಕೂಡ ಕೊರಟಗೆರೆ ತಾಲೂಕಿನ ಸಿದ್ಧರಬೆಟ್ಟದಂತೆ ರಸಸಿದ್ಧ ಸಿದ್ಧರಗವಿಯಲ್ಲಿ ಸಿದ್ಧಯೋಗಿಯೊಬ್ಬರು ತಪಸ್ಸನ್ನು ಮಾಡಿದ್ದರೆಂಬ ಐತಿಹ್ಯವೂ ಇದೆ.

೯) ಗುಬ್ಬಿ ತಾಲೂಕಿನ ಕಡಬ ಗ್ರಾಮದ ಹತ್ತಿರ ಶ್ರೀರಾಮಚಂದ್ರನು ಲಂಕೆಯಿಂದ ಅಯೋಧ್ಯೆಗೆ ವಾಪಾಸ್ಸಾಗುತ್ತಿದ್ದಾಗ ಸೀತೆಯ ಪ್ರಾರ್ಥನೆಯಂತೆ ಇಲ್ಲಿ ಹರಿಯುತ್ತಿದ್ದ ನದಿಗೆ ಅಡ್ಡಲಾಗಿ ಕೆರೆಯೊಂದನ್ನು ನಿರ್ಮಿಸಿದನು.

೧೦) ಅಯೋಧ್ಯೆಗೆ ತನ್ನ ಪರಿವಾರದೊಂದಿಗೆ ಹೋಗುವಾಗ ಶ್ರೀರಾಮಚಂದ್ರನು ತುಮಕೂರಿನ ದೇವರಾಯನ ದುರ್ಗದ ಅರಣ್ಯದ ಮಧ್ಯೆ ತನ್ನ ಪರಿವಾರದವರ ನೀರಿನ ದಾಹವನ್ನು ನೀಗಿಸಲು, (ತಿಲಕವನ್ನು ಇಟ್ಟುಕೊಳ್ಳಲು) ಬಾಣದಿಂದ ಚಿಲುಮೆಯನ್ನು ಸೃಷ್ಟಿಸಿದನು. ಇಂದಿಗೂ ಇಲ್ಲಿಯೇ ನಾಮದ ಚಿಲುಮೆಯೆಂಬ ಸ್ಮಾರಕವಿದೆ.

**೫) ಮೌಖಿಕ ಕಾವ್ಯಗಳ ಆಧಾರಿತ ನಂಬಿಕೆಗಳು :**

೧) ಈರುಗ್ಯಾತರಾಯನು ನಿತ್ಯವೂ ಪೆನುಕೊಂಡೆಯ ಅರಸರಿಗೆ ಕಳುಹಿಸುತ್ತಿದ್ದ ಹುಲಿಯ ಹಾಲನ್ನು ಹುಲಿಯ ಹಾಲಲ್ಲವೆಂದು ಅರಸನು ಜರೆದಾಗ ವೀರಕ್ಯಾತರಾಯನು ಹುಲಿಯ ದಂಡನ್ನೇ ತರವುದು. ಹಾಗೂ ಕೇವಲ ೭ ದಿನಗಳಲ್ಲಿ ಜೋಳವನ್ನು ಬಿತ್ತಿ ಬೆಳೆಯುವುದು. ತುಂಬೋಡಿಯವರು ಜೋಳವನ್ನು ಕದ್ದು ಕುಯ್ಯಲು ಬಂದಾಗ ಅವರ ಕಣ್ಣುಗಳು ಕಾಣದಂತೆ ಪವಾಡವನ್ನು ಮಾಡುವುದು.

೨) ದ್ವಾರಕಾ ನಗರದಿಂದ ದಕ್ಷಿಣದೆಡೆಗೆ ವಲಸೆ ಹೊರಟ ಉಂಡೇತ್ರಾಯನ ವಂಶಸ್ಥರಿಗೆ ಮಾರ್ಗ ಮಧ್ಯದಲ್ಲಿ ನದಿಯು ಅಡ್ಡಲಾಗಿದ್ದು ತಮ್ಮನ್ನು ನದಿ ದಾಟಿಸಲು ತಮ್ಮದೇ ಆವಿನಗೂಡಿನ ಹಂಡೇಕುರುಬರವನಾದ ಜಲಧಿಬೊಪ್ಪರಾಯನನ್ನು ಪ್ರಾರ್ಥಿಸುವುದು ಆತನ ಸಹಾಯಕ್ಕೆ ಪ್ರತಿಯಾಗಿ ಆತನ ಕೋರಿಕೆಯಂತೆ ಜಲಧಿಬೊಪ್ಪರಾಯನ ಮುಂಡಕ್ಕೆ ತಮ್ಮ ಮಗಳನ್ನು ವಿವಾಹಮಾಡಿ ಕೊಡುವುದಾಗಿ ಭಾಷೆಯನ್ನು ನೀಡುವುದು. ಬೊಪ್ಪರಾಯನು ಗಂಗಾಭವಾನಿಯನ್ನು ಪ್ರಾರ್ಥಿಸಿ ತನ್ನ ಶಿರವನ್ನು ಬಲಿಯಾಗಿ ನೀಡುವ ಮೂಲಕ ಬೊಪ್ಪರಾಯನ ತಂಗಿ ಮದ್ದೆಮ್ಮ ನದಿಗೆ ಅಡ್ಡಲಾಗಿ ಅಣೆಕಟ್ಟೆಯಂತೆ ಮಲಗುವುದು. ಈ ಮೂಲಕ ಉಂಡೇತ್ರಾಯನ ವಂಶಸ್ಥರು ನದಿಯನ್ನು ದಾಟಲು ಅನುವು ಮಾಡಿಕೊಡುವುದು.

೩) ಬಂದಕುಂಟೆ ಈರುಚಿಕ್ಕಣ್ಣನು ಹತ್ಯೆಯಾದ ಸ್ಥಳದಲ್ಲಿ ಇಂದಿಗೂ ಬಂದ್ಕುಂಟೆ ಕೆರೆಯಿದೆ ಈತನ ತಲೆಯು ಬಂದ್ಕುಂಟೆಯ ಊರಬಾಗಿಲ ಮುಂದೆಯೂ ಮುಂಡವು ಈ ಕೆರೆಯ ಮುಂದೆ ಬೀಳುತ್ತದೆ. ಈ ದೇಹದಿಂದ ರಕ್ತದ ಹೊಳೆಯೇ ಹರಿದು ಕೆರೆಯು ರಕ್ತದ ಮಡುವಾಗುತ್ತದೆ. ಇದರಿಂದಾಗಿ ಇಂದಿಗೂ ಈ ಕೆರೆಯ ನೀರು ರಕ್ತವರ್ಣದಿಂದ ಕಾಣುತ್ತದೆ ಎಂಬುದು ಈ ಸುತ್ತಿನ ಜನರ ನಂಬಿಕೆಯಾಗಿದೆ.

೪) ನಿಡಗಲ್ಲು ನಾಯಕರು ಈರಣ್ಣನ ದನಗಳ ಅಂದಕ್ಕೆ ಮನಸೋತು ಅವುಗಳನ್ನು ವಶಮಾಡಿಕೊಳ್ಳುವ ಸಲುವಾಗಿ ಈರಣ್ಣನ ದನಗಳು ತಮ್ಮ ಬೆಳೆಯನ್ನು ಮೇಯ್ದಿವೆ ಎಂಬ ಆರೋಪವನ್ನು ಮಾಡಿ ಈತನ ತಲೆಯನ್ನು ಕಡಿದರು. ಆದರೆ ಈರಣ್ಣನು ನೆಲಕ್ಕೆ ಬೀಳದೆ ತನ್ನ ಗಣೆಯೊಂದಿಗೆ ರುಂಡದಲ್ಲಿ ಹಿಮ್ಮುಖವಾಗಿ ನಡೆಯುತ್ತಾ ಶತೃಗಳನ್ನು ಹಿಮ್ಮೆಟ್ಟಿಸಿದನು. ಅಂತಿಮವಾಗಿ ಗಿಡವೊಂದಕ್ಕೆ ಎಡವಿ ಬಿದ್ದು ಸಾವನ್ನಪ್ಪಿದನು.

೫) ಭೀಮಾಸತಿಯು ಸತಿಸಹಗಮನ ಮಾಡಿದ ಮಾರನೇ ದಿನ ಆ ಬೂದಿಯನ್ನು ಪರೀಕ್ಷಿಸಲಾಗುತ್ತದೆ. ಅದರಲ್ಲಿ ನಿಂಬೆಹಣ್ಣು ದೊರೆಯುತ್ತದೆ. ನಿಂಬೆಹಣ್ಣು ಗೌಡರ ದಂಪತಿಗಳಲ್ಲಿ ಮಕ್ಕಳಾಗುವ ಶುಭ ಸಂಕೇತವೆಂದು ಗೋಚರಿಸುತ್ತದೆ. ಭೀಮಾಸತಿಯು ಹೇಳಿದಂತೆ ಗೌಡನಿಗೆ ಒಂದು ಗಂಡು ಮಗುವಿನ ಜನನವಾಗುತ್ತದೆ. ಭೀಮಾಸತಿಯ ಅತ್ತೆಯಾದ ಜಾಡಿಸೀತಾಬಾಯಿಯು ಪಶುಪಾಲಕಿಯಾಗಿದ್ದು, ದನಕರುಗಳಿಗೆ ರೋಗ

ಬಂದು ತೊಂದರೆಗೆ ಒಳಗಾಗುತ್ತವೆ. ಇದಕ್ಕೆ ಕಾರಣವನ್ನು ಯೋಚಿಸಿದ ಅತ್ತೆಯು ನನ್ನ ಸೊಸೆಯ ಶಾಪವಿರಬೇಕೆಂದು ಭಾವಿಸಿ ದೊಡ್ಡಣ್ಣೇಗೆರೆಗೆ ಬಂದು ತನ್ನ ಸೊಸೆ ಭೀಮಾಸತಿಯು ಸತಿ ಸಹಗಮನವಾದಂತಹ ಸ್ಥಳದಲ್ಲಿ ಮೂರ್ತಿಯನ್ನು ಪ್ರತಿಷ್ಠಾಪಿಸಿ ಮಣ್ಣಿನ ದೇವಾಲಯವನ್ನು ನಿರ್ಮಿಸುವ ಮೂಲಕ ಪೂಜಿಸುತ್ತಾಳೆ. ಹಾಗೂ ಒಳಿತು ಮಾಡುವಂತೆಯೂ, ಪಶುಗಳ ರೋಗವನ್ನು ವಾಸಿ ಮಾಡುವಂತೆಯೂ ಪ್ರಾರ್ಥಿಸುತ್ತಾಳೆ. ಇದರಿಂದಾಗಿ ದನ ಕರುಗಳ ಕಾಯಿಲೆಯು ವಾಸಿಯಾಯಿತು. ಈಕೆಯು ಸಹಗಮನ ಮಾಡುವ ಕಾಲದಲ್ಲಿ ಆಕೆ ಗರ್ಭಿಣಿಯಾಗಿದ್ದಳಂತೆ ಆಗ ತನ್ನ ಹೊಟ್ಟೆಯೊಳಗಿನ ಪಿಂಡವನ್ನು ತೆಗೆದು ಸಹಗಮನ ಮಾಡಿದಳಂತೆ. ಆ ಪಿಂಡವನ್ನು ಊರ ಹೊರಗೆ ಸಂಸ್ಕಾರ ಮಾಡಲಾಗಿದೆ. ಇಂದಿಗೂ ಭೀಮಾಸತಿ ದೇವಾಲಯಕ್ಕೆ ಬಂದ ಭಕ್ತರು ಆ ಪಿಂಡ ಸಂಸ್ಕಾರ ಮಾಡಿದ ಸ್ಥಳಕ್ಕೆ ಹೋಗಿ ಚಿಕ್ಕಕಲ್ಲನ್ನು ಗುಡ್ಡೆಗೆ ಎಸೆಯುವಂತಹ 'ಕಲ್ಯಾಣ' ವನ್ನು ಮಾಡುತ್ತಾರೆ. ಹೀಗಾಗಿ ಗರ್ಭಿಣಿಯಾದ ಭೀಮಾಸತಿಯು ಸಹಗಮನ ಹೊಂದಿದ್ದರಿಂದ ಗರ್ಭಿಣಿ ಸ್ತ್ರಿಯರು ಈ ದೇವಾಲಯದ ಒಳಗೆ ಹೋಗಬಾರದೆಂಬ ನಂಬಿಕೆ, ರೂಢಿಯಿದೆ.

೬) ಹೊನ್ನೇಮರದ ಈರಣ್ಣನ ಗಣೆಯ ನಾದಕ್ಕೆ ಬೇಡರ ಹುಡುಗಿಯೊಬ್ಬಳು ಮಾರು ಹೋಗುತ್ತಾಳೆ. ತನ್ನನ್ನು ವರಿಸುವಂತೆ ಒತ್ತಾಯಿಸುತ್ತಾಳೆ. ಈರಣ್ಣನು ಅವಳ ಕೋರಿಕೆಯನ್ನು ನಿರಾಕರಿಸುತ್ತಾನೆ. ಕುಪಿತಳಾದ ಈಕೆಯು ಈರಣ್ಣನು ತನ್ನನ್ನು ಅವಮಾನಗೊಳಿಸಲು ಯತ್ನಿಸಿದನೆಂದು ತನ್ನ ಅಣ್ಣಂದಿರಿಗೆ ದೂರು ಹೇಳುತ್ತಾಳೆ. ಸುದ್ದಿ ಕೇಳಿ ಕೋಪಗೊಂಡ ಆಕೆಯ ಆರು ಜನ ಅಣ್ಣಂದಿರು ಈರಣ್ಣನನ್ನು ಬಾಣದಿಂದ ಕೊಲ್ಲುತ್ತಾರೆಂದು ಹೇಳಲಾಗುತ್ತದೆ. ನಿರಪರಾಧಿಯಾದ ತನಗೆ ಈ ದುರ್ಗತಿಯು ಬಂದಿದ್ದನ್ನು ಮನಗಂಡು ಆ ಬೇಡರನ್ನು ನಾಶಮಾಡಲು ಶಕ್ತಿಯನ್ನು ನೀಡುವಂತೆ ಹೊಯ್ಸಳಕಟ್ಟೆಯ ಕರಿಯಮ್ಮ ದೇವರನ್ನು ಕೋರಿಕೊಳ್ಳುತ್ತಾನೆ. ಆಗ ಆ ದೇವಿಯು 'ಊರ ಮುಂದಿನ ಅರಳಿಮರವನ್ನು ಬೇರು ಸಹಿತ ಕಿತ್ತರೆ ಶಕ್ತಿ ತುಂಬು'ವುದಾಗಿ ಹೇಳಿದಳು. ಬಲಶಾಲಿಯಾದ ಈರಣ್ಣನು ಎಡಗೈಯ ಹೆಬ್ಬೆಟ್ಟಿನಿಂದ ಅರಳಿಮರವನ್ನು ಬೇರುಸಹಿತ ಕೀಳುತ್ತಾನೆ. ನಂತರ ಕರಿಯಮ್ಮ ದೇವಿಯಿಂದ ಶಕ್ತಿಯನ್ನು ಪಡೆದು ಅವರನ್ನು ನಾಶ ಮಾಡುತ್ತಾನೆ, ಎಂಬ ನಂಬಿಕೆಯಿದೆ.

೭) ಒಂದೇ ರೀತಿಯ ನಂಬಿಕೆಗಳು : ದಾಳವಟ್ಟ, ನಾಗಲಮಡಿಕೆ, ಪಾಲನಹಳ್ಳಿ, ಶೆಟ್ಟಿಕೆರೆ ಗ್ರಾಮಗಳ ಸ್ಥಳನಾಮಗಳನ್ನು ವಿವೇಚಿಸಿದಾಗ ವ್ಯಾಪಾರಿಗಳು ಮಾರ್ಗ ಮಧ್ಯದಲ್ಲಿ ತಂಗುವ, ಒಲೆಯಿಂದ ಅಡಿಗೆ ಮಾಡುವ, ದೇವರನ್ನು ನೆಲೆಗೊಳಿಸಿ ಪೂಜಿಸುವಂತಹ ಒಂದೇ ಸ್ವರೂಪದ ವಿವರಗಳು ಲಭಿಸುತ್ತವೆ.

## ಟಿಪ್ಪಣಿಗಳು

೧. ವೈಜಯಂತಿಮಾಲ ೧೯೮೧ ***"ವಡ್ಡಗೆರೆ ನಾಗಮ್ಮ ಕಾವ್ಯ"*** ಬೆಂಗಳೂರು ಕಸಾಪ ಪುಟ-೬೦

೨. ಉತ್ತರ ದೇವಿಯನ್ನು ಕುರಿತು ಮೌಖಿಕ ಕಾವ್ಯಗಳು ವಿಭಿನ್ನವಾಗಿ ಮೂಡಿಬಂದಿವೆ. ಸಂಘರ್ಷಗಳು ಮತ್ತು ಯುದ್ಧಗಳು ಸಾಮಾನ್ಯವಾಗಿದ್ದ ಸನ್ನಿವೇಶದಲ್ಲಿ ದಂಡಿಗೆ ಹೋದ ಗಂಡನು ಮರಳಿ ಬರುವುದಿಲ್ಲವೆಂದು ಹೇಳಲಾಗುತ್ತಿತ್ತು. ತವರೀಗೆ ಬಂದ ಉತ್ತರದೇವಿಗೆ ತವರಲ್ಲಿರಲು ತಾವು ಸಿಗುವುದಿಲ್ಲ. ಇದರಿಂದಾಗಿ ಮನೆಗೆ ತಡವಾಗಿ ಬಂದ ಉತ್ತರದೇವಿಯ ಶೀಲದ ಮೇಲೆ ಅತ್ತೆಯು ಶಂಕೆಯನ್ನು ವ್ಯಕ್ತಪಡಿಸುತ್ತಾಳೆ. 'ಮಗ ಸತ್ತರೆ ಮನೆಹಾಳು, ಸೊಸೆ ಸತ್ತರೆ ಸೋಭಾನೆ' ಎಂಬ ನಾಣ್ಣುಡಿಯಂತೆ ದಂಡಿನಿಂದ ಬಂದ ಮಗನಿಗೆ ಆಕೆಯನ್ನು ಬಸವಿ ಬಡಲು ಹೇಳುತ್ತಾಳೆ. ಅತ್ತೆಯಲ್ಲಿ ಎಲ್ಲವನ್ನೂ ತನ್ನ ಅಧಿಕಾರದ ತೆಕ್ಕೆಗೆ ಒಳಪಡಿಸಿಕೊಳ್ಳಬೇಕೆಂಬ ಭಾವನೆಯು ಕಂಡುಬರುವುದನ್ನು ಗುರುತಿಸಲಾಗಿದೆ. ತನ್ನ ನೈತಿಕ ಬದುಕಿಗೆ ಧಕ್ಕೆಯುಂಟಾದಾಗ ಸೊಸೆಯು ಯಜಮಾನಿಕೆಯ ಪ್ರತೀಕವಾದ ಅತ್ತೆಯ ಅಧಿಕಾರ ಮತ್ತು ದರ್ಪವನ್ನು ವಿರೋಧಿಸಿ ಪ್ರತಿಭಟಿಸುತ್ತಾಳೆ. ಆಗ ಅತ್ತೆಯು ತನ್ನ ಅಧಿಕಾರವನ್ನು ಉಳಿಸಿಕೊಳ್ಳಲು ಮಾಡುವ ಹುನ್ನಾರದ ಫಲವಾಗಿ ಸೊಸೆಗೆ ಊಟ, ವಸ್ತ್ರ, ಆಭರಣಗಳನ್ನು ನೀಡಲು ಮುಂದಾಗುವಳು. ಸಾಮಾಜಿಕ ಬದುಕಿನಲ್ಲಿ ತನ್ನ ವ್ಯಕ್ತಿತ್ವಕ್ಕೆ ದಕ್ಕೆ ತಂದದ್ದನ್ನು ಅಥವಾ ತನ್ನ ಚಾರಿತ್ಯವಧೆಯನ್ನು ಖಂಡಿಸುವ ಮನೋಭಾವವನ್ನು ಕಾಣಬಹುದಾಗಿದೆ. ತನ್ನನ್ನು ನಿಂದಿಸುವ ಅತ್ತೆಯ ಮನೆಯಲ್ಲಿ ಯಾವ ಫಲ ಮತ್ತು ಸಮೃದ್ಧಿಗಳು ಇರಬಾರದೆಂದು, ತನ್ನನ್ನು ನೋಯಿಸಿದ ಮನೆಯ ಸುಖ ಶಾಂತಿಗಳು ಕೂಡ ತನ್ನೊಂದಿಗೆ ಮರೆಯಾಗಲಿ ಎಂದು ಶಪಿಸುವ ಹೆಣ್ಣಿನ ವಿಭಿನ್ನ ಮುಖವನ್ನು ಕಾಣಬಹುದಾಗಿದೆ.

೩. ಹೆಗಡೆ ಎಲ್. ಆರ್. (ಸಂ) ೧೯೭೩ ***"ಕೆಲವು ಲಾವಣಿಗಳು"*** ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ ಪುಟ-೨೨೬

೪. ಉತ್ತರದೇವಿ ಎಂಬ ಸೊಸೆಯನ್ನು ಒಲ್ಲದ ಅತ್ತೆಯು ಆಕೆಗೆ ಹಲವು ಪರೀಕ್ಷೆಗಳನ್ನು ಒಡ್ಡುತ್ತಾಳೆ.

೫. ಹೆಗಡೆ ಎಲ್. ಆರ್. (ಸಂ) ೧೯೭೩ ***"ಪೂರ್ವೋಕ್ತ"*** ಪುಟ-೨೩೧

೬. ಹೆಗಡೆ ಎಲ್. ಆರ್. (ಸಂ) ೧೯೭೩ ***ಅದೇ*** ಪುಟ-೨೩೩

೭. ಕೆಂಕೆರೆ ಹನುಮಂತೇಗೌಡ (ಸಂ) ೨೦೧೧ ***"ಸಾಂಸ್ಕೃತಿಕ ವೀರರ ಮತ್ತು ಮಹಾಸತಿಯರ ಲಾವಣಿಗಳು"*** ತುಮಕೂರು ತು.ವಿ.ವಿ ಪುಟ-೨೫೯

೮. ***ಅದೇ*** ಪುಟ-೨೫೯

೯. ***ಅದೇ*** ಪುಟ-೨೬೭

೧೦. ***ಅದೇ*** ಪುಟ-೨೭೧

೧೧. ಚಲುವರಾಜು (ಸಂ) ೧೯೯೭ ***"ಜುಂಜಪ್ಪ"*** ಬುಡಕಟ್ಟು ಮಹಾ ಕಾವ್ಯ ಮಾಲೆ ಹಂಪಿ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ ಪುಟ-೫೮

೧೨. ***ಅದೇ*** ಪುಟ-೧೭೦

೧೩. ***ಅದೇ*** ಪುಟ-೫೫೯

೧೪. ***ಅದೇ*** ಪುಟ-೫೭೨

೧೫. ***ಅದೇ*** ಪುಟ-೫೯೪

೧೬. ತುಮಕೂರು ಜಿಲ್ಲೆಯಲ್ಲಿ ಅಸ್ತಿತ್ವದಲ್ಲಿರುವ ಜನಾಂಗಗಳನ್ನು ಅಧ್ಯಯನ ಮಾಡುವ ಅಗತ್ಯವಿರುವುದರಿಂದ ಸಾಂದರ್ಭಿಕವಾಗಿ ಇಲ್ಲಿನ ಜಾತಿಗಳನ್ನು ಸಂಕ್ಷಿಪ್ತವಾಗಿ ವಿವರಿಸಲಾಗಿದೆ.

**ಅಗ್ನಿವಂಶ ಕ್ಷತ್ರಿಯರು-** ಅಗ್ನಿವಂಶ ಕ್ಷತ್ರಿಯ, ತಿಗಳ ಎಂದು ಕರೆಯಲಾಗುವ ಈ ಜನಾಂಗದವರ ಮುಖ್ಯ ವೃತ್ತಿಯು ಬೇಸಾಯ ಆಗಿತ್ತು. ಜಿಲ್ಲೆಯ ಗುಬ್ಬಿ, ತುರುವೇಕೆರೆ ತಾಲ್ಲೂಕುಗಳಲ್ಲಿ, ಹಾಗೂ ತುಮಕೂರು ನಗರ ಪ್ರದೇಶದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಕಂಡು ಬರುವ ಇವರು ತೋಟಗಾರಿಕೆ ಬೆಳೆಗಳಿಗೆ ಹೆಸರಾದವರು. ರಾಗಿ, ಭತ್ತ, ಕಿರು ಧಾನ್ಯಗಳನ್ನು ಬೆಳೆಯುವರಾದರೂ ತೋಟಗಾರಿಕೆ ಬೆಳೆಗಳಾದ ಅಡಿಕೆ, ತೆಂಗು, ವೀಳೆಯ ಎಲೆ, ಸೊಪ್ಪು, ತರಕಾರಿಗಳನ್ನು ಬೆಳೆಯುವಲ್ಲಿ ಇವರು ನಿಪುಣರು. ಜನಾಂಗದ ರೀತಿ ನೀತಿಗಳನ್ನು ಎಲ್ಲರೂ ಪಾಲಿಸುವಂತೆ ಇಂದಿಗೂ ಓಡಿತ ಸಾಧಿಸಿದೆ. ಗೌಡ, ಆಣೆಕಾರರು, ಮುದ್ರೆ ಎಂಬ ಮೂರು ಬಗೆಗಳವರು ಕುಲದ ವಿಚಾರಗಳಲ್ಲಿ ಪ್ರಮುಖ ಪಾತ್ರ ವಹಿಸುವರು. ತಿಗಳರು ಈ ನೆಲದ ಆದಿವಾಸಿಗಳೆಂದೂ, ಮೂಲ ಸಂಸ್ಕೃತಿಯನ್ನೇ ಮುಂದುವರೆಸಿಕೊಂಡು ಬರುತ್ತಿರುವುದಾಗಿ ಹೆಮ್ಮೆಯಿಂದ ಹೇಳಿಕೊಳ್ಳುತ್ತಾರೆ. ಬೇಲೂರು,

ಹಳೇಬೀಡುಗಳ ನೃತ್ಯ ಭಂಗಿಯ ಸ್ತ್ರೀ ಮತ್ತು ಮದನಿಕೆಯರ ವಿಗ್ರಹಗಳಲ್ಲಿಯೂ ಮೂಗುತಿಯಿಲ್ಲದಿರುವಂತೆ, ತಿಗಳರ ಸ್ತ್ರೀಯರು, ಮಕ್ಕಳು ಮೂಗನ್ನು ಚುಚ್ಚಿಸಿಕೊಳ್ಳದೇ ಮೂಗುತಿಯನ್ನೂ ಧರಿಸುವುದಿಲ್ಲ. –ವಕ್ತೃ ವೆಂಕಟೇಶಮೂರ್ತಿ

**ಕುರುಬರು–** ಕುರುಬರಲ್ಲಿ ಸಾವಂತ ಕುರುಬರು, ಹಾಲಿನ ಕುರುಬರು, ಕಣಿವೆ ಕುರುಬ, ಶಂಖಿನ ಕುರುಬ, ತೆಕ್ಕ ಕುರುಬ, ಮುಂತಾದ ಒಳ ಪಂಗಡಗಳನ್ನು ಕಾಣಬಹುದು. ಇವರ ವೃತ್ತಿ ಕುರಿ ಸಾಕುವುದಾದರೂ ಕಂಬಳಿ ಉದ್ಯಮ, ಕೃಷಿ, ವ್ಯಾಪಾರ, ನೌಕರಿ ಮುಂತಾದ ಕ್ಷೇತ್ರಗಳಲ್ಲಿ ತೊಡಗಿಸಿಕೊಂಡಿದ್ದಾರೆ. ಸದರಿ ಪ್ರಾದೇಶಿಕ ವ್ಯಾಪ್ತಿಯಲ್ಲಿ ಬಹುಸಂಖ್ಯೆಯಲ್ಲಿ ಕಂಡು ಬರುತ್ತಾರೆ. ಬಯಲು ಸೀಮೆಯ ಭಾಗದಲ್ಲಿ ಕುರುಬರು ಕುರಿಕಾಯುವ ವೃತ್ತಿಯವರಾಗಿದ್ದು ಕಂಬಳಿ ನೇಯುವುದು ಅವರ ಮತ್ತೊಂದು ಉಪವೃತ್ತಿ. ಬದಲಾದ ಪರಿಸ್ಥಿತಿಯಲ್ಲಿ ಕಾಡುಗೊಲ್ಲರು, ಕುರಿಗಳ ಹಿಂಡುಗಳನ್ನು ಕಾಯುತ್ತಿದ್ದರು. ಇವರ ಕುರಿಗಳಿಂದ ಬರುತ್ತಿದ್ದ ಉಣ್ಣೆಯಿಂದ ಕುರುಬರು ಕಂಬಳಿ ನೇಯುತ್ತಿದ್ದರು. ಕಂಬಳಿಯನ್ನು ಗೊಲ್ಲರು ಮೇಲು ಹೊದಿಕೆಯಾಗಿ ಬಳಸುತ್ತಿದ್ದರು. ಇದು ವೃತ್ತಿ ಬದುಕಿನ ನಡುವೆ ಕೊಡುಕೊಳ್ಳುವಿಕೆಯ ಅಂಶವಾಗಿದೆ.

**ದೇವಾಂಗ–** ನೇಕಾರಿಕೆಯನ್ನು ಮುಖ್ಯ ವೃತ್ತಿಯನ್ನಾಗಿ ಮಾಡಿಕೊಂಡಿರುವ ದೇವಾಂಗ ಜಾತಿಯವರು ಹತ್ತಿ, ರೇಷ್ಮೆ, ನೂಲಿನಿಂದ ಬಟ್ಟೆ ತಯಾರಿಸುತ್ತಾರೆ. ಜೊತೆಗೆ ಕೆಲವರು ಕೃಷಿ, ವ್ಯಾಪಾರದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಆಧುನಿಕ ವಿದ್ಯುತ್ ಮಗ್ಗಗಳು ಅವಿಷ್ಕಾರದಿಂದ ಕೈಮಗ್ಗದ ನೇಕಾರಿಕೆ ಮೂಲೆ ಗುಂಪಾಯಿತು. ಗಂಧ, ನಾಮ, ಬಿಳಿಮಗ್ಗ, ಮುಂತಾದ ಒಳ ಪಂಗಡಗಳು ಕಂಡು ಬರುತ್ತವೆ. ಇವರ ಕುಲ ದೇವತೆ ಶ್ರೀ ಬನಶಂಕರಿ. ಬನದ ಹುಣ್ಣಿಮೆ, ಕಾರ್ತಿಕ ಮೊದಲಾದ ಸಂದರ್ಭದಲ್ಲಿ ಪೂಜಾ ಕಾರ್ಯದಲ್ಲಿ ಸಾಮೂಹಿಕವಾಗಿ ಪಾಲ್ಗೊಳ್ಳುವರು. ಇವರ ಸಂಪ್ರದಾಯ, ಆಚರಣೆಗಳು ವೈದಿಕ ಕ್ರಮದಲ್ಲಿಯೇ ನಡೆಯುತ್ತವೆ. ಮೊದಲಿಗೆ ಬ್ರಾಹ್ಮಣರು ಶುಭ ಕಾರ್ಯಗಳಿಗೆ ಪೌರೋಹಿತ್ಯ ನಡೆಸುತ್ತಿದ್ದರಿಂದ ಆ ಪ್ರಭಾವ ಇವರಲ್ಲಿದೆ. ಇತ್ತೀಚಿನ ವರ್ಷಗಳಲ್ಲಿ ತಮ್ಮ ಕುಲದ ಅರ್ಚಕರು ಪೌರೋಹಿತ್ಯ ಕಾರ್ಯವನ್ನು ಮಾಡುವುದು ಕಂಡು ಬರುತ್ತಿದೆ.

**ನಾಯಕರು–** ಬೇಟೆಗಾರರೂ, ವೀರಯೋಧರೂ ಆದ ಮ್ಯಾಸಬೇಡರು ಪಶುಪಾಲನ ಸಂಸ್ಕೃತಿಯನ್ನು ಹೊಂದಿರುವ ಬೇಡರು ಬುಡಕಟ್ಟು ಜನಾಂಗವಾಗಿದೆ. ಇವರನ್ನು ನಾಯಕರು ಎಂದೂ ಸಹ ಕರೆಯಲಾಗುವುದು. ಬೇಡರಲ್ಲಿ ಮುಖ್ಯವಾಗಿ ೩ ಪಂಗಡಗಳು ಕಂಡುಬರುತ್ತವೆ. ೧) ಊರು ಬೇಡರು ಬುಡಕಟ್ಟಿನ ಕಟ್ಟುಪಾಡುಗಳನ್ನು ಮುರಿದು ಬಹಿಷ್ಕಾರಕ್ಕೆ ಒಳಗಾಗಿ ನಾಗರಿಕ ಸಮಾಜದೊಂದಿಗೆ ಸಂಪರ್ಕ ಹೊಂದಿದವರು. ೨) ಪಾಳೆಯಗಾರರು ವಿಜಯನಗರದ ಅರಸರ ಆಳ್ವಿಕೆಯಲ್ಲಿ ನಾಯಂಕರ ಪದ್ಧತಿಯನ್ನು ಜಾರಿಗೆ ತಂದರು. ಅದರ ಪ್ರಕಾರ ಸಾಮಂತರು, ನಾಯಕರು, ಪ್ರಾಂತ್ಯಗಳನ್ನು ನೋಡಿಕೊಳ್ಳುತ್ತಿದ್ದರು. ಸ್ವಾಯತ್ತಾಧಿಕಾರವನ್ನು ಹೊಂದಿದ್ದ ಇವರು ವಿಜಯನಗರಸಾಮ್ರಾಜ್ಯದ ಪತನಾನಂತರ ಪಾಳೆಯಗಾರರಾಗಿ ಆಳಲಾರಂಭಿಸಿದರು. ೩) ಮ್ಯಾಸಬೇಡರು ಬೇಟೆ, ಪಶುಪಾಲನೆಯೊಂದಿಗೆ ಬೆಳೆದು ಬಂದ ಬುಡಕಟ್ಟು ಜನರಾದ ಮ್ಯಾಸಬೇಡರಿಗೆ ಪಶುಗಳೇ ಸಂಪತ್ತು. ಗೋಮೂತ್ರ, ಸಗಣಿಯು ಪವಿತ್ರ ಎಂಬ ಭಾವನೆ ಇದೆ. ತಮ್ಮ ಪಶುಗಳ ಆಹಾರ ಮತ್ತು ನೀರಿಗಾಗಿ ಕಾಡುಮೇಡು ಆಶ್ರಯಿಸಿ ಕಾಡುಗೊಲ್ಲರಂತೆ ಪಶುಪಾಲನೆಯಲ್ಲಿ ತೊಡಗಿಸಿಕೊಂಡಿದ್ದಾರೆ. ಕಾಡುಗೊಲ್ಲರಿಂದ ಮ್ಯಾಸಬೇಡರು ಪ್ರಭಾವಿತಗೊಂಡರು. ಇವರಿಬ್ಬರ ಆಚಾರ ವಿಚಾರಗಳು ಒಂದೇ ಆಗಿವೆ. ಕಾಡುಗೊಲ್ಲರ ಹಾಗೆ ಇವರೂ ಊರ ಹೊರವಲಯದಲ್ಲಿ ಪ್ರತ್ಯೇಕವಾಗಿ ಹಟ್ಟಿ ಹಾಕಿಕೊಂಡು ಜನಸಂಪರ್ಕದಿಂದ ದೂರ ವಾಸಿಸುತ್ತಾರೆ. ಬಹುತೇಕ ಕಡೆಗಳಲ್ಲಿ ಮ್ಯಾಸರ, ಕಾಡುಗೊಲ್ಲರ ಹಟ್ಟಿಗಳು ನೆರೆ ಹೊರೆಯಲ್ಲಿಯೇ ಕಂಡುಬರುತ್ತವೆ.

**ಬೋವಿ–** ಬಾರತೀಯ ಸಮಾಜದಲ್ಲಿ ಶ್ರಮವಿಭಜನೆಯ ನೆಲೆಯಲ್ಲಿ ಸೃಷ್ಟಿಯಾಗಿರುವ ಜಾತಿಗಳ ಪೈಕಿ ವಡ್ಡ ಅಥವಾ ಬೋವಿ ಜನಾಂಗವು ಪ್ರಮುಖವಾಗಿದೆ. ದೈಹಿಕ ಶ್ರಮದಾಯಕ ಕೆಲಸವಾದ ಬಾವಿಗಳನ್ನು ತೋಡುವ, ಕಲ್ಲು ಒಡೆಯುವ ಕೆಲಸಗಳಲ್ಲಿ ನಿಸ್ಸೀಮರು. ಕಟ್ಟಡಗಳಿಗೆ ಅಗತ್ಯವಾದ ಬಂಡೆ, ಸೈಜುಕಲ್ಲು, ಜಲ್ಲಿಕಲ್ಲುಗಳನ್ನು ಪೂರೈಸುವ ಕಾಯಕವು ಇವರ ಪ್ರದಾನ ವೃತ್ತಿಯಾಗಿತ್ತು. ಇವರಲ್ಲಿ ಇತ್ತೀಚೆಗೆ ಮೂಲವೃತ್ತಿಯನ್ನು ತೊರೆದು ಅನ್ಯ ಕಸುಬು, ನೌಕರಿಗಳಲ್ಲಿ ತೊಡಗಿದ್ದಾರೆ. ಈ ಕಸುಬು ಆಧಾರಿತ ಜಾತಿಯನ್ನು ಮರು ವರ್ಗೀಕರಿಸಿ ಕಲ್ಲುವಡ್ಡ, ಊರುವಡ್ಡ, ಬಂಡಿವಡ್ಡ, ಮಣ್ಣುವಡ್ಡ, ಬಯಲುವಡ್ಡ, ದೇಶದವಡ್ಡ ಮತ್ತು ಉಪ್ಪುವಡ್ಡರೆಂದು ವಿಭಾಗಿಸಲಾಗಿದೆ. – ಪಾಪಕ್ಕ ಜಗನ್ನಾಥಪುರ. ಮತ್ತು ಕೆ.ಅಭಿಶಂಕರ್ "*ತುಮಕೂರ್ ಗೆಜೆಟಿಯರ್*" ೧೯೬೯ ಕರ್ನಾಟಕ ಸರ್ಕಾರ, ಬೆಂಗಳೂರು.

**ಬೆಸ್ತರು–** ಕರ್ನಾಟಕ ಸರ್ಕಾರದ ಪ್ರವರ್ಗ–೧ ರಲ್ಲಿ ಗುರ್ತಿಸಲಾಗಿರುವ ಬೆಸ್ತರು ಶೈವಾರಾಧಕರು ಮತ್ತು ವೈಷ್ಣವ ಆರಾಧಕರೂ ಆಗಿದ್ದಾರೆ. ಇವರ ಕುಲದೇವತೆಯಾದ ಗಂಗೆಯನ್ನು ಗಂಗಾಸಪ್ತಮಿ ಅಥವಾ ಗಂಗಾಜಯಂತಿಯೆಂದು ವಿಶೇಷವಾಗಿ ಆಚರಿಸುವರು. ಬೆಸ್ತರನ್ನು ಗಂಗೆ ಮಕ್ಕಳು, ಗಂಗೆ ಕುಲದವರು,

ಗಂಗಾಪುತ್ರರು ಹೀಗೆ ಬೇರೆ ಬೇರೆ ಹೆಸರುಗಳಿಂದ ಕರೆಯುವರು. ಇವರ ಮೂಲ ವೃತ್ತಿ ಮೀನುಗಾರಿಕೆ. ಪ್ರಸ್ತುತ ಅವರು ಬೇಸಾಯ ಮತ್ತಿತರೇ ವೃತ್ತಿಗಳನ್ನು ಮಾಡುತ್ತಿದ್ದಾರೆ. ಇತರ ಜಾತಿಗಳಂತೆ ಜನನ, ಋತುಮತಿ, ವಿವಾಹಕ್ಕೆ ಸಂಬಂಧಪಟ್ಟಂತೆ ಸಂಪ್ರದಾಯಗಳನ್ನು ಆಚರಿಸುವರು.

**ಬ್ರಾಹ್ಮಣರು–** ಸಮಾಜದ ಶ್ರೇಣಿಕೃತ ಜಾತಿ ವ್ಯವಸ್ಥೆಯಲ್ಲಿ ಇದೊಂದು ಪ್ರಬಲ ಸಮುದಾಯವಾಗಿದೆ. ತಮ್ಮಲ್ಲಿನ ವಿಧ್ಯೆಯಿಂದ ಆಳುವವರ್ಗದ ನೆರವನ್ನು ಸುಲಭವಾಗಿ ಪಡೆದರು. ಧಾರ್ಮಿಕ ಕಾರ್ಯಗಳಿಗೆ ತಮ್ಮನ್ನು ತೆರೆದು ಕೊಂಡುದರಿಂದ ವೇದ, ಶಾಸ್ತ್ರಗಳ ಅಧ್ಯಯನ, ಪೌರೋಹಿತ್ಯ ಮುಂತಾದ ಕಾರ್ಯಗಳನ್ನು ಮುಂದುವರೆಸಿಕೊಡು ಬಂದರು. ಬಹು ಹಿಂದಿನಿಂದ ಓದು ಬರಹ ಬಲ್ಲವರಾಗಿದ್ದ ಇವರು ರಾಜರು, ಪಾಳೆಯಗಾರರಿಗೆ ಆಡಳಿತದಲ್ಲಿ ಪ್ರತ್ಯಕ್ಷ ಮತ್ತು ಪರೋಕ್ಷವಾಗಿ ನೆರವಾಗುತ್ತಿದ್ದರು. ಶಾಸನಗಳ ರಚನೆ, ಧಾರ್ಮಿಕ ಕಾರ್ಯಕ್ರಮಗಳು, ಆಚರಣೆಗಳಿಗೆ ಇವರ ನೆರವು ಅಗತ್ಯವಾಗಿತ್ತು. ಬ್ರಿಟಿಷರ ಆಗಮನದ ನಂತರದಲ್ಲಿಯೂ ಗ್ರಾಮಾಡಳಿತದಲ್ಲಿ ಶ್ಯಾನುಬೋಗ, ಗ್ರಾಮಕರಣಿಕರಂತಹ ವೃತ್ತಿಗಳನ್ನು ನಿರ್ವಹಿಸುತ್ತಿದ್ದರು. ಹೀಗಾಗಿ ಸುತ್ತಮುತ್ತಲಿನ ಗ್ರಾಮಗಳ ಹಿಡಿತವನ್ನು ಹೊಂದಿದ್ದರು. ನ್ಯಾಯದಾನ, ಪೌರೋಹಿತ್ಯ ಮತ್ತು ಇತರ ಧಾರ್ಮಿಕ ಕಾರ್ಯಗಳನ್ನು ಮಾಡುತ್ತಿದ್ದರು. ಗ್ರಾಮದಲ್ಲಿ ಪ್ರಧಾನ ಪಾತ್ರ ವಹಿಸುತ್ತಿದ್ದ ಇವರ ಜೀವನವು ಉತ್ತಮವಾಗಿ ನಡೆಯುತ್ತಿತ್ತು. ಆಧುನಿಕತೆಯ ಅಕ್ಷರಿಕ ಪ್ರಜ್ಞೆಯ ಪ್ರಭಾವದಿಂದಾಗಿ ಹಳ್ಳಿಗಳಲ್ಲಿ ಇವರ ಪ್ರಾಮುಖ್ಯತೆ ಕುಗ್ಗುತ್ತಾ ಬಂದಿತು. ಪರಿಣಾಮವಾಗಿ ಬಹುತೇಕವಾಗಿ ವಿವಿಧ ವಲಯಗಳಲ್ಲಿ ಉದ್ಯೋಗವನ್ನು ಅರಸಿ ನಗರಗಳತ್ತ ವಲಸೆ ಹೋದರು.

**ಮಾದಿಗರು–** ಕರ್ನಾಟಕ ಮತ್ತು ಆಂಧ್ರ ರಾಜ್ಯಗಳಲ್ಲಿ ಮಾದಿಗ, ಮಾದಾರ, ಆದಿಜಾಂಭವ ಕುಲ, ಆದಿಕರ್ನಾಟಕ ಎಂಬುದಾಗಿ ವಿವಿಧ ಹೆಸರುಗಳಿಂದ ಈ ಸಮುದಾಯವನ್ನು ಗುರುತಿಸಲಾಗಿದೆ. ಇವರು ಇತರ ರಾಜ್ಯಗಳಲ್ಲಿ ಬೇರೆ ಬೇರೆ ಪ್ರಾದೇಶಿಕ ಹೆಸರಿನಿಂದ ಗುರುತಿಸಲ್ಪಡುವರು. ಇವರ ಪ್ರಧಾನ ವೃತ್ತಿ ಚರ್ಮಗಾರಿಕೆ. ಇವರಲ್ಲಿ ಗಜ್ಲೇರು, ಎಮ್ಮೆಲರು, ಮಚ್ಲದರು, ಮಂದ್ಲರು, ಶಟ್ಲೇರು, ಮಗೇಲರು, ದಾಸಹೊಸಗೇರು, ಹೂವಿನವರು ಮುಂತಾದ ಬೆಡಗುಗಳು ಕಂಡು ಬರುತ್ತವೆ. ಇವರು ಶಿಕ್ಷಣ, ವ್ಯಾಪಾರ, ರಾಜಕೀಯ, ಕೃಷಿ, ಸರ್ಕಾರಿ ನೌಕರಿ, ಸ್ವಯಂ ಉದ್ಯೋಗಗಳತ್ತ ಪ್ರಸಕ್ತ ಸನ್ನಿವೇಶದಲ್ಲಿ ದಾಪುಗಾಲು ಹಾಕಿದ್ದಾರೆ.

**ವಕ್ಕಲಿಗರು–** ಒಕ್ಕಲಿಗ ಜಾತಿಯಲ್ಲಿ ರೈಸ್ ಗೆಜೆಟಿಯರ್‌ನಲ್ಲಿ ೫೪ ಒಳಪಂಗಡಗಳು ಇದ್ದವೆಂದು, ೧೯೩೧ರ ಜನಗಣತಿಯಂತೆ ೩೮ ಒಳಪಂಗಡಗಳಿದ್ದವೆಂದು, ನಾಗರಾಜು ಎಂ. ಹೆಚ್. ರವರ ಪ್ರಕಾರ ೧೦೦ಕ್ಕಿಂತ ಹೆಚ್ಚು ಒಳಪಂಗಡಗಳಿದ್ದವೆಂದು ಹೇಳುತ್ತಾ, ೧೦೮ ಒಳಪಂಗಡಗಳ ಪಟ್ಟಿಯನ್ನು (ಕುಂಚಿಟಿಗ, ಗಂಗಡಿಗಾರ, ಉಪ್ಪಿನಕೊಳಗದ ವಕ್ಕಲಿಗ, ಹಳ್ಳಿಕಾರ, ರೆಡ್ಡಿ, ಕಮ್ಮ ಇತ್ಯಾದಿ) ದಾಖಲಿಸಿದ್ದಾರೆ. ಕುಂಚಿಟಿಗ ಉಪಜಾತಿಯಲ್ಲಿ ಮತ್ತೆ ಒಳಪಂಗಡಗಳಿವೆ. ಅವುಗಳ ಸಂಖ್ಯೆಯಲ್ಲಿ ಭಿನ್ನಾಭಿಪ್ರಾಯಗಳಿವೆ. ಎಂ. ಪುಟ್ಟಯ್ಯನವರ ಪ್ರಕಾರ ೪೮ ಒಳಪಂಗಡಗಳಿವೆ. –ಎಂ.ಹೆಚ್ ನಾಗರಾಜು

**ವೀರಶೈವರು–** ತುಮಕೂರು ಜಿಲ್ಲೆಯು ಸಿದ್ದಗಂಗಾ ಮಠದ ಹಾಗೂ ಇತರ ವೀರಶೈವ ಮಠಗಳ ನೆಲೆಯಾಗಿದೆ.ಸಿದ್ಧಲಿಂಗ ಯತಿಗಳು ವೀರಶೈವ ಮತವನ್ನು ಪ್ರಚಾರ ಮಾಡಿ ಎಡೆಯೂರಿನಲ್ಲಿ ಐಕ್ಯವಾದರು. ವೀರಶೈವ ಧರ್ಮದಲ್ಲಿ ಅನೇಕ ಜಾತಿ ಉಪಜಾತಿಗಳು ಈ ವೇಳೆಗೆ ತಲೆ ಎತ್ತಿದ್ದವು. ಕಾಲಕಾಲಕ್ಕೆ ವೀರಶೈವ ಧರ್ಮಕ್ಕೆ ಮತಾಂತರವಾದುದರಿಂದ ಅಧಿಕ ಉಪಜಾತಿಗಳು ಉಂಟಾದವು. ಹೀಗಾಗಿ ಸಿದ್ಧಲಿಂಗ ಯತಿಗಳ ಪ್ರಭಾವ ಈ ನಾಡಿನಲ್ಲಿ ಪರಿಣಾಮಕಾರಿಯಾಗಿದೆ. ಕೃಷಿ, ಕೈಗಾರಿಕೆ, ವ್ಯಾಪಾರ, ನೌಕರಿ ಮುಂತಾದ ಕ್ಷೇತ್ರಗಳಲ್ಲಿಯೂ ಹೆಚ್ಚಿನದಾಗಿ ತಮ್ಮನ್ನು ತೊಡಗಿಸಿಕೊಂಡಿರುವರು. ಜಿಲ್ಲೆಯ ಬಹುತೇಕ ಎಲ್ಲ ಹಳ್ಳಿಗಳಲ್ಲಿಯೂ ಕಂಡು ಬರುವ ಇವರು ಸಾಮಾಜಿಕವಾಗಿ, ರಾಜಕೀಯವಾಗಿ ಪ್ರಾಬಲ್ಯವನ್ನು ಹೊಂದಿರುವುದನ್ನು ಕಾಣಬಹುದು. ಲಿಂಗಾಚಾರ, ಸದಾಚಾರ, ಭಕ್ತಚಾರ, ಶಿವಾಚಾರ ಮತ್ತು ಗಣಾಚಾರಗಳೆಂದು ಐದು ಆಚಾರಗಳು ಇವರಲ್ಲಿ ಕಂಡು ಬರುತ್ತವೆ. ಇವನ್ನು ಪಂಚಾಚಾರಗಳು ಎಂದು ಕರೆಯಲಾಗುತ್ತದೆ. ಹುಟ್ಟು, ಸಾವು ಮುಂತಾದ ಸಂದರ್ಭಗಳ ಸೂತಕಗಳಿಗೆ ಗಮನ ಕೊಡುವುದಿಲ್ಲ. ವೀರಶೈವರಲ್ಲಿ ಯಜ್ಞಯಾಗದಿಗಳಿಗೆ ಮಹತ್ವವಿಲ್ಲ. ವೀರಶೈವರಲ್ಲಿ ಆರಾಧ್ಯ ಎಂದು ಹೇಳುವ ವಿಶೇಷವಾದ ಪಂಗಡವೊಂದಿದೆ. ಅವರು ಇಷ್ಟ ಲಿಂಗದ ಜೊತೆಗೆ ಜನಿವಾರವನ್ನು ಧರಿಸುತ್ತಾರೆ. ವೇದೋಪನಿಷತ್ತುಗಳನ್ನು ನಂಬುತ್ತಾರೆ ಮತ್ತು ಯಾಗ–ಯಜ್ಞ ಕಾರ್ಯಗಳನ್ನು ಮಾಡುತ್ತಾರೆ. –ನಂಜುಂಡಸ್ವಾಮಿ.

**ಆದಿದ್ರಾವಿಡರು–** ಇವರ ಕುಲದ ಹುಟ್ಟಿನ ಬಗ್ಗೆ ಒಂದು ಪ್ರತೀತಿಯಿದೆ.ಒಂದು ದಿನ ಲೋಕ ಪರ್ಯಟನೆಗೆ ಹೊರಟ ಈಶ್ವರನು ಪಾರ್ವತಿಗೆ 'ಮಕ್ಕಳಿಗೆ ಕೆನೆ ಇಲ್ಲದ ಹಾಲನ್ನು ನೀಡು' ಎಂದು ಹೇಳಿ ಹೊರಟನಂತೆ. ಅದರಂತೆ ಪಾರ್ವತಿಯು ಕೆನೆಯ ಹಾಲನ್ನು ಕಾಯಿಸಿ ಕೆನೆಯನ್ನು ತಟ್ಟೆಯಲ್ಲಿಟ್ಟು ನೀರನ್ನು ತರಲು

ಹೋಗುತ್ತಾಳೆ.ಆಗ ತನ್ನ ಮಕ್ಕಳು ಕದ್ದು ಹಾಲನ್ನು ಕುಡಿದು, ಕೆನೆಯನ್ನು ತಿಂದು ಬಿಡುತ್ತಾರೆ. ಕೆನೆಯೇ ಇಷ್ಟು ರುಚಿಯಿರುವಾಗ ಹಾಲು ನೀಡಿದ ಕಾಮಧೇನು ಎಷ್ಟು ರುಚಿ ಇರಬೇಕೆಂದು ಕಾಮಧೇನುವನ್ನು ಕೊಡಲಿಯಿಂದ ಕೊಂದು ಮಾಂಸವನ್ನು ತಿನ್ನುತ್ತಿರುವುದನ್ನು ಬಂದ ಶಿವ ಪಾರ್ವತಿಯರು ನೋಡಿ ಇವರು ಮೈಲಿಗೆಯಾಗಿದ್ದಾರೆಂದು ಭಾವಿಸಿ ಶಿಕ್ಷಿಸಿದರೆಂಬುದು ಪ್ರತೀತಿ. ಬಲಗಡೆ ಕುಳಿತಿದ್ದವನು ಆದಿದ್ರಾವಿಡ (ಬಲಗೈನವರು), ಎಡಗಡೆ ಕುಳಿತಿದ್ದವ ಆದಿಕರ್ನಾಟಕ (ಎಡಗೈಯವರು) ಎಂದು ಕರೆಯಲಾಗುತ್ತದೆ. ತುಮಕೂರು ಜಿಲ್ಲೆಯ ಬಹುತೇಕ ಎಲ್ಲಾ ಗ್ರಾಮಗಳಲ್ಲೂ ಕಂಡು ಬರುತ್ತಾರೆ. ಇವರಲ್ಲಿ ಮಲ್ಲರು, ಗುಡ್ಡದವರು, ಮುಚ್ಚಳದವರು, ರಣಗಂಟಿಗರು, ಮೀನುಗರು, ಬೆಳ್ಳಿಯವರು, ಕಂಭದವರು, ಮುಂತಾದ ಬೆಡಗುಗಳಿವೆ. ಇವರನ್ನು ಛಲವಾದಿ, ಬಲಗೈಯವರು ಎಂಬೆಲ್ಲಾ ಹೆಸರುಗಳಿಂದ ಕರೆಯುವರು.– ರಂಗಧಾಮಯ್ಯ ಅಗ್ರಹಾರ

೧೭. ವಕ್ತೃ ಗಂಗಾಧರಯ್ಯ ಪಿ. ಸು. ೫೫ ವ. ಉಪ್ಪಾರ, ಕೊರಟಗೆರೆ.

೧೮. *ತುಮಕೂರು ಜಿಲ್ಲಾ ಗೆಜೆಟಿಯರ್* ಪುಟ–೧೮೫

೧೯. ವಕ್ತೃ ಮಂಜುನಾಥ ಸು ೪೨ ವ. ಉಪನ್ಯಾಸಕರು, ಬೋವಿ, ದೊಡ್ಡೆಣ್ಣೆಗೆರೆ

೨೦. ವಕ್ತೃ ತಿಪ್ಪಣ್ಣ ಸು ೬೭ ವ. ಕೂದಲು ವ್ಯಾಪಾರಿ ದೊಂಬಿದಾಸರು, ಶಿವಪುರ

೨೧. ವಕ್ತೃ ತಿಪ್ಪಣ್ಣ ಸು ೬೭ ವ. ಕೂದಲು ವ್ಯಾಪಾರಿ, ದೊಂಬಿದಾಸರು, ಶಿವಪುರ

೨೨. ವಕ್ತೃ ದೊಡ್ಡಯ್ಯ ಸು ೪೫ ವ. ಟೈಲರ್, ಹೆಳವರು, ಬುಕ್ಕಪಟ್ಟಣ

೨೩. ಜಂಗಮರಹಳ್ಳಿ ಮುದ್ದವೀರಪ್ಪ ೨೦೦೨ *"ವೀರನಾಗಪ್ಪನ ಪದ ಜನಪದ ಕಾವ್ಯ"* ಬೆಂಗಳೂರು, ಆರ್. ಡಿ. ಡಿಜಿಟಲ್ ಮೀಡಿಯಾ ಪುಟ–೩೫

೨೪. ***ಅದೇ*** ಪುಟ ೩೮

೨೫. ***ಅದೇ*** ಪು ೪೧

೨೬. ಸಣ್ಣನಾಗಪ್ಪ ೨೦೧೪ ***"ವೀರಸೀಗಣ್ಣನ ಜನಪದ ಕಾವ್ಯ"*** ಬೆಂಗಳೂರು ಗಣೆ ಪ್ರಕಾಶನ, ಪುಟ–೪೧ ಪದ್ಯ ೯೩

೨೭. ಹೊನ್ನಗಾನಹಳ್ಳಿ ಕರಿಯಣ್ಣ ೨೦೦೬ ***"ಬಂದ್ಕುಂಟೆ ಈರುಚಿಕ್ಕಣ್ಣನ ಕಾವ್ಯ"*** ತುಮಕೂರು, ಪುಣ್ಯಕೋಟಿ ಪ್ರಕಾಶನ ಪುಟ ೨೫–೨೬

೨೮. ಚಂದ್ರಶೇಖರ್ (ಸಂ) ೨೦೧೭ **"ತುಮಕೂರು ಜಿಲ್ಲಾ ಗೆಜೆಟಿಯರ್"** ಬೆಂಗಳೂರು ಪುಟ–೧೦೩೯

೨೯. ***ಎಫಿಗ್ರಾಫಿಯಾ ಕರ್ನಾಟಿಕ ಸಂಪುಟ*** ೧೬ ಸಿರಾ ೧೧೮

೩೦. ***ಅದೇ*** ೧೬ ಸಿರಾ ೧೧೬

೩೧. ***ಅದೇ*** ೧೨ ಸಿರಾ ೬೬

೩೨. ಮೊಯಿದ್ದೀನ್‌ಭಾಷಾ ಸು. ೬೮ ವ. ಉರ್ದು ಭಾಷಾ ಉಪನ್ಯಾಸಕರು, ಮುಸ್ಲಿಂ, ಮಧುಗಿರಿ.

೩೩. ರಹಮತ್ ತರೀಕೆರೆ ೨೦೧೪ ***"ಕರ್ನಾಟಕದ ಮೊಹರಂ"*** ಹಂಪಿ ಕ.ವಿ.ವಿ ಪುಟ–೩೯

೩೪. ರಹಮತ್ ತರೀಕೆರೆ ೨೦೧೪ ***ಅದೇ*** ಪುಟ–೪೮

೩೫. ನಂದೀಶ್ವರ. ಎನ್. ೨೦೦೮ ***"ಸಿರಾ ತಾಲೂಕು ದರ್ಶನ"*** ಸಿರಾ, ತೇಜಸ್ವಿ ಪ್ರಕಾಶನ ಪುಟ ೧೭೮.

೩೬. ಸೋಮೇಶಪ್ಪ ಸು. ೫೫ ವ. ಉಪನ್ಯಾಸಕರು. ಕುರುಬರು, ಗಾಣದಹುಣಸೆ, ಸಿರಾ

೩೭. ಪುಟ್ಟರಾಜು ಸು. ೪೬ ವ. ಉಪನ್ಯಾಸಕರು. ಕುಂಚಿಟಿಗರು, ಮೇಲುಕುಂಟೆ, ಸಿರಾ

೩೮. ನಂಜುಂಡಸ್ವಾಮಿ ಬಿ. (ಸಂ) ೧೯೯೭ ***"ಚೆನ್ನುಡಿ"*** ೫ನೇ ಕನ್ನಡ ಸಾಹಿತ್ಯ ಸಮ್ಮೇಳನ ಸ್ಮರಣ ಸಂಚಿಕೆ, (ಲೇ. ಧನಪಾಲ್ ಅನಕರನ್ ***'ಗುಬ್ಬಿ ಹಾಗೂ ತುಮಕೂರು ಕ್ಷೇತ್ರದ ಕನ್ನಡದ ಜನತೆಗೆ ವೆಸ್ಲಿಯನ್ ಮಿಷನರಿಗಳ ಸೇವೆ'***) ಗುಬ್ಬಿ, ತಾಲೂಕು ಕನ್ನಡ ಸಾಹಿತ್ಯ ಪರಿಷತ್ತು, ಪುಟ–೧೩೭

೩೯. ಯೋಗೀಶ್ವರಪ್ಪ ಡಿ. ಎನ್. (ಸಂ) ೨೦೦೨ ***"ಜಯಮಂಗಲಿ"*** ೪ನೇ ಕನ್ನಡ ಸಾಹಿತ್ಯ ಸಮ್ಮೇಳನ ಸ್ಮರಣ ಸಂಚಿಕೆ, (ಲೇ. ಪಿ. ಲಿಂಗರಾಜು 'ತುಮಕೂರು ಜಿಲ್ಲೆಯಲ್ಲಿ ಕ್ರೈಸ್ತ ಮಿಷನರಿಗಳ ಚಟುವಟಿಕೆ') ತುಮಕೂರು ಕಸಾಪ ಪುಟ–೧೪೫

೪೦. ಫ್ರಾನ್ಸಿಸ್ ಫಿಂಟೋ ಸು ೪೫ ವ. ಉಪನ್ಯಾಸಕರು. ಕ್ರೈಸ್ತರು, ತುಮಕೂರು ಟೌನ್.

೪೧. ಯೋಗೀಶ್ವರಪ್ಪ ಡಿ. ಎನ್. ೨೦೧೨ ***"ಕಲ್ಪಶೋಧ"*** ಬೆಂಗಳೂರು, ಪ್ರಗತಿ ಗ್ರಾಫಿಕ್ಸ್ ಪುಟ–೩೩೪

೪೨. ನಂಜುಂಡಸ್ವಾಮಿ ಬಿ. ಸು ೬೫ ವ. ಆಯುರ್ವೇದ ವೈದ್ಯರು, ವೀರಶೈವರು, ತುಮಕೂರು.

೪೩. ಯೋಗೀಶ್ವರಪ್ಪ ಡಿ. ಎನ್. (ಸಂ) ೨೦೦೨ ***ಅದೇ*** (ಲೇ. ಶಾಂತಾ ಸನ್ಮತಿ ಕುಮಾರ್ ***'ತುಮಕೂರು ಜಿಲ್ಲೆಯ ಜೈನಧರ್ಮ ಕ್ಷೇತ್ರಗಳು'***) ತುಮಕೂರು ಕಸಾಪ ಪುಟ–೧೦೮

೪೪. ***"ಎಪಿಗ್ರಾಫಿಯಾ ಕರ್ನಾಟಿಕ" ಸಂಪುಟ ೨೪*** ಗುಬ್ಬಿ ಶಾಸನ ಸಂಖ್ಯೆ ೪೫

೪೫. ***ಅದೇ*** ೨೪ ಗುಬ್ಬಿ ಶಾಸನ ಸಂಖ್ಯೆ ೪೬

೪೬. ***ಅದೇ*** ೨೪ ಗುಬ್ಬಿ ಶಾಸನ ಸಂಖ್ಯೆ ೪೮

೪೭. ***ಅದೇ*** ೨೪ ತುಮಕೂರು ಶಾಸನ ಸಂಖ್ಯೆ ೬೧

೪೮. ಚಿನ್ನಸ್ವಾಮಿ ಸೋಸಲೆ (ಸಂ) ೨೦೧೭ ***"ಪ್ರಾಚೀನ ಜೈನಕಾವ್ಯಗಳಲ್ಲಿ ಚಾರಿತ್ರಿಕ ಪ್ರಜ್ಞೆ"*** (ಲೇ, ಮಹಾದೇವ ಶಂಕನಪುರ, ರಾಜಾವಳಿ ಕಥೆ : ಜನಮುಖಿ ಚಾರಿತ್ರಿಕ ಪ್ರಜ್ಞೆ) ಹಂಪಿ, ಪ್ರಸಾರಾಂಗ ಕ.ವಿ.ವಿ. ಪುಟ ೪೧೭-೪೧೮

೪೯. **ಯುಗಾದಿ–** ಹಿಂದೂ ಪಂಚಾಂಗದ ಪ್ರಕಾರ (ಯುಗದ ಆದಿ) ವರ್ಷದ ಆರಂಭದ ದಿನವನ್ನು ಯುಗಾದಿ ಹಬ್ಬ ಎಂದು ಆಚರಿಸಲಾಗುತ್ತದೆ. ಮರಗಳು ಹಳೆಯ ಎಲೆಗಳನ್ನು ಉದುರಿಸಿ ಹೊಸ ಚಿಗುರನ್ನು ಹೊಂದಿ ಹೂಗಳಿಂದ ಕಂಗೊಳಿಸುತ್ತವೆ. ಪ್ರಕೃತಿಯನ್ನು ಗಮನಿಸಿದ ಜನಪದ ಸಮುದಾಯವು ಅದರಂತೆ ಹೊಸ ಬಟ್ಟೆಗಳನ್ನು ತೊಟ್ಟು ಸಂಭ್ರಮ ಪಡುವ ಯುಗಾದಿ ಹಬ್ಬದಂದು ಬೇವು ಬೆಲ್ಲವನ್ನು ತಾವು ತಿಂದು ಇತರರಿಗೂ ಹಂಚುವ ಮೂಲಕ ಬಾಳಿನ ಸುಖ-ದು:ಖಗಳನ್ನು ಸಮಾನವಾಗಿ ಸ್ವೀಕರಿಸಬೇಕೆಂಬ ನೆಲೆಯಲ್ಲಿ ಈ ದಿನವನ್ನು ಆಚರಿಸಲಾಗುತ್ತದೆ. ಈ ದಿನದಂದು ಮನೆ ದೇವರನ್ನು ಪೂಜಿಸಿ, ಒಬ್ಬಟ್ಟಿನ ಊಟ ಸವಿಯುವರು.ಯುಗಾದಿಯ ಮಾರನೇ ದಿನವನ್ನು 'ವರ್ಷದ ತೊಡಕು' ಅಂದರೆ ಹೊಸ ವರ್ಷಕ್ಕೆ ತೊಡಗುವಿಕೆಯಾಗಿ ಆಚರಿಸುವರು. ಹಾಗೆಯೇ ಅಂದು ಬೇಟೆಯಾಡಿ ತಂದ ಪ್ರಾಣಿಗಳ ಮಾಂಸವನ್ನು ಹಂಚಿಕೊಂಡು ಮಾಂಸದೂಟ ಮಾಡಿಕೊಂಡು ಸವಿಯುತ್ತಾರೆ.

**ಶ್ರೀರಾಮನವಮಿ–** ಚೈತ್ರಮಾಸ ಶುಕ್ಲಪಕ್ಷದ ನವಮಿಯಂದು ರಾವಣನ ಸಂಹಾರಕ್ಕಾಗಿ ರಾಮನು ಅವತರಿಸಿದನು ಎಂಬ ನಂಬಿಕೆಯ ನೆಲೆಯಲ್ಲಿ ಶ್ರೀರಾಮನವಮಿಯನ್ನು ಆಚರಿಸಲಾಗುತ್ತದೆ. ಬೆಲ್ಲದಪಾನಕ, ಮಜ್ಜಿಗೆ, ಹೆಸರುಬೇಳೆ ಕೋಸಂಬರಿಯನ್ನು ಹಬ್ಬದ ವಿಶೇಷ ಪಾನೀಯ ಮತ್ತು ತಿನಿಸುಗಳನ್ನು ಸಿದ್ಧಮಾಡಿ ದೇವರ ಜಗಲಿ, ಸಾರ್ವಜನಿಕ ಸ್ಥಳಗಳಲ್ಲಿ ಎಲ್ಲರಿಗೂ ಹಂಚಲಾಗುತ್ತದೆ. ಮೇಲ್ಜಾತಿಗಳೆಂದು ನಂಬಿರುವ ಸಮುದಾಯಗಳಲ್ಲಿ ವಿಶೇಷವಾಗಿ ರಾಮನ ಆರಾಧನೆ ಕಂಡು ಬರುತ್ತದೆ. ಶ್ರೀರಾಮನವಮಿಯ ದಿನದಿಂದಂದ ಏಳು ದಿನಗಳವರೆಗೆ ದೇವರ ಭಜನೆ, ನಾಟಕ, ತತ್ವಪದಗಳನ್ನು ಹಾಡಲಾಗುತ್ತದೆ.

**ನಾಗರ ಪಂಚಮಿ–** ಶ್ರಾವಣಮಾಸದ ಶುದ್ಧ ಪಂಚಮಿಯಂದು ಬರುವ ಈ ಹಬ್ಬದಲ್ಲಿ ಉಪವಾಸ, ನೇಮದಿಂದ ವಿಶೇಷವಾಗಿ ಹುತ್ತದ (ನಾಗರ) ಪೂಜೆಯನ್ನು ಮಾಡಲಾಗುತ್ತದೆ. ಮಡಿ, ಉಪವಾಸದಿಂದ ಹುತ್ತಕ್ಕೆ ಹಾಗೂ ನಾಗರಕಲ್ಲಿಗೆ ಹಾಲೆರೆಯಲಾಗುತ್ತದೆ. ಹಾವಿನ ಬಗೆಗೆ ಇರುವ ಭಯವೇ ಭಕ್ತಿಯ ರೂಪ ತಳೆದು ಆಚರಣೆಗೆ ಎಡೆಮಾಡಿ ಕೊಟ್ಟಿರುವುದನ್ನು ಇಲ್ಲಿ ಗುರುತಿಸಬಹುದಾಗಿದೆ.

**ವರಮಹಾಲಕ್ಷ್ಮಿವ್ರತ–**ಶ್ರಾವಣಮಾಸದಲ್ಲಿ ಮಹಾಲಕ್ಷ್ಮಿಯನ್ನು ಆರಾಧಿಸಲಾಗುತ್ತದೆ. ಶುಕ್ರವಾರ ದಿನದಂದು ಸ್ನಾನ ಮಾಡಿ ಮಡಿಯಿಂದ ಇದ್ದು ಪೂಜ್ಯ ಭಾವನೆಯಿಂದ ಆಕೆಯನ್ನು ಪೂಜಿಸಲಾಗುತ್ತದೆ. ಮಹಾಲಕ್ಷ್ಮಿ ವಿಗ್ರಹ ಅಥವಾ ಫೋಟೋಗೆ ಬಗೆ ಬಗೆಯ ಅಲಂಕಾರವನ್ನು ಮಾಡಿ ಆಕೆಯ ಮುಂದೆ ಹೂ, ಹಣ್ಣು, ಹಣ, ಒಡವೆಗಳನ್ನು ಇಟ್ಟು ಲಕ್ಷ್ಮೀಪದಗಳನ್ನು ಹಾಡುತ್ತಾ ಪೂಜಿಸುವರು. ಬ್ರಾಹ್ಮಣರು, ಶೆಟ್ಟರು, ವೀರಶೈವರಲ್ಲಿ ಈ ಸಂಪ್ರದಾಯವು ವಿಶೇಷವಾಗಿ ಕಂಡು ಬರುತ್ತದೆ.

**ಗೌರಿಹಬ್ಬ–** ಬಾದ್ರಪದ ಮಾಸದ ಶುಕ್ಲ ಪಕ್ಷದಲ್ಲಿ ಗೌರಿ ಹಬ್ಬವನ್ನು ಆಚರಿಸಲಾಗುತ್ತದೆ. ಗೌರಿ ವ್ರತವನ್ನು ಶ್ರದ್ಧೆ, ಭಕ್ತಿಯಿಂದ ಆಚರಿಸಿದರೆ ವಿವಾಹಿತ ಹೆಣ್ಣು ಮಕ್ಕಳಿಗೆ ಮುತ್ತೈದೆ ಭಾಗ್ಯವೂ, ಸಂತಾನ ಪ್ರಾಪ್ತಿಯೂ ಆಗುತ್ತದೆ. ಹಾಗೂ ಅವರ ಬಾಳಲ್ಲಿ ನೆಮ್ಮದಿಯು ನೆಲೆಸುತ್ತದೆ. ಅಂತೆಯೇ ಮದುವೆಯಾಗದ ಹೆಣ್ಣು ಮಕ್ಕಳಿಗೆ ಬೇಗ ಕಂಕಣ ಭಾಗ್ಯ ಉಂಟಾಗುತ್ತದೆ ಎಂಬ ನಂಬಿಕೆಯಿದೆ. ತವರು ಮನೆಯವರು ಮದುವೆಯಾದ ಹೆಣ್ಣು ಮಕ್ಕಳಿಗೆ ಬಾಗಿನ ನೀಡುವ ಪದ್ಧತಿಯು ಈ ಹಬ್ಬದ ವಿಶೇಷತೆಯಾಗಿದೆ.

**ಗಣೇಶಚತುರ್ಥಿ–** ಗೌರೀ ಹಬ್ಬದ ಮಾರನೇ ದಿನ ಗಣೇಶ ಹಬ್ಬವನ್ನು ಆಚರಿಸುವರು. ಈ ಆಚರಣಾಯ ಸಂದರ್ಭದಲ್ಲಿ ವಿಘ್ನ ನಿವಾರಕನಾದ ಗಣೇಶನ ಪೂಜೆಯನ್ನು ಬಲು ಸಂಭ್ರಮದಿಂದ ನಡೆಯುತ್ತದೆ. ತುಮಕೂರಿನ ಗೂಳೂರು, ಮತ್ತು ವಿನಾಯಕನಗರದಲ್ಲಿ ಗಣಪತಿಯನ್ನು ವಿಶೇಷವಾಗಿ ಆರಾಧಿಸಲಾಗುತ್ತದೆ. ಮನೆ, ದೇವಾಲಯ, ಸಾರ್ವಜನಿಕ ಸ್ಥಳಗಳಲ್ಲಿ ಮಣ್ಣಿನಿಂದ ಮಾಡಿರುವ ಗಣೇಶನ ಮೂರ್ತಿಯನ್ನು ಪ್ರತಿಷ್ಠಾಪಿಸಿ ನಿಗಧಿತ ದಿನಗಳ ನಂತರ ನದಿ, ಕೆರೆ ಅಥವಾ ಜಲಸಂಗ್ರಹಾಗಾರಗಳಲ್ಲಿ ವಿಸರ್ಜಿಸುವರು. ಯಕ್ಷಗಾನ, ನಾಟಕ, ಹರಿಕತೆ, ಕರಪಾಲಮೇಳ, ನೃತ್ಯ ಕೋಲಾಟ ಮುಂತಾದ ಕಲೆಗಳನ್ನು ಪ್ರದರ್ಶಿಸಿ ಜನರಿಗೆ ಮನರಂಜನೆಯನ್ನು ನೀಡಲಾಗುತ್ತದೆ. ಹಾಡುಗಾರಿಕೆ, ಕ್ರೀಡೆ ವಿವಿಧ ಸಾಂಸ್ಕೃತಿಕ ಸ್ಪರ್ಧೆಗಳನ್ನು ಏರ್ಪಡಿಸಿ ವೈವಿಧ್ಯಮಯವಾದ ಕಾರ್ಯಕ್ರಮಗಳನ್ನು ನಡೆಸುವರು. ಇಲ್ಲಿ ಕೇರಿಯ ಜನರೆಲ್ಲಾ ಪಾಲ್ಗೊಳ್ಳುವಂತೆ

ಮಾಡಲಾಗುತ್ತದೆ. ಗಣೇಶ ಚತುರ್ಥಿಯನ್ನು ಸರ್ವರೂ ಸಾಮರಸ್ಯತೆಯಿಂದ ಪೂಜಿಸುವರು. ಈ ಹಬ್ಬದಂದು ಕಡುಬಿನ ಅಡುಗೆ ವಿಶೇಷವಾದುದು. ಪ್ರಸ್ತುತವೂ ಈ ಹಬ್ಬವನ್ನು ದಿನದಿಂದ ದಿನಕ್ಕೆ ವಿಜೃಂಭಣೆಯಿಂದ ಆಚರಿಸಲಾಗುತ್ತಿದೆ.

**ಮಹಾನವಮಿ–** ಗೌರಿಹಬ್ಬದ ನಂತರ ಬರುವ ಹುಣ್ಣಿಮೆಯಿಂದ ಅಮಾವಾಸ್ಯೆಯವರೆಗೆ ಮಹಾನವಮಿ ಹಬ್ಬವನ್ನು ಆಚರಿಸಲಾಗುತ್ತದೆ. ಅಗಲಿದ ಕುಟುಂಬದ ಹಿರಿಯರನ್ನು ಅಂದು ಪ್ರತೀ ಕುಟುಂಬಗಳಲ್ಲಿ ಪೂಜಿಸುವರು. ಹಿರಿಯರು ತಾವು ಬದುಕಿದ್ದಾಗ ಇಷ್ಟಪಟ್ಟು ಬಳುಸುತ್ತಿದ್ದ ಆಹಾರ, ತಿನಿಸು ಮತ್ತು ಸಾಮಗ್ರಿಗಳನ್ನು ಎಡೆಯಾಗಿ ಇಡಲಾಗುವುದು.ಈ ಅವಧಿಯಲ್ಲಿ ಸ್ವರ್ಗದ ಬಾಗಿಲು ತೆರೆದಿರುತ್ತದೆಂಬ ನಂಬಿಕೆಯಿದೆ. ಹಿರಿಯರ ಹಬ್ಬವನ್ನು ಮಾಂಸಹಾರಿಗಳು ಬಹು ವಿಜೃಂಭಣೆಯಿಂದ ಆಚರಿಸುವರು. ಮಾಂಸದ ಅಡುಗೆಯನ್ನು ಮಾಡಿ ನೆಂಟರನ್ನು, ಪರಿಚಿತರನ್ನು ಆಹ್ವಾನಿಸುವರು.

**ಆಯುಧಪೂಜೆ–** ಶಕ್ತಿ ಸ್ವರೂಪಿಯಾದ ಬನ್ನಿ ಮರವನ್ನು ಪೂಜಿಸಿ ತಾವು ಬಚ್ಚಿಟ್ಟಿದ್ದ ಆಯುಧಗಳನ್ನು ಪಡೆದು ಪಾಂಡವರು ವಿಜಯವನ್ನು ಪಡೆದುದರಿಂದ ಆ ದಿನವನ್ನು ವಿಜಯ ದಶಮಿಯೆಂದು ಆಚರಿಸುವರು. ಮಹಿಷಾಸುರನನ್ನು ದುರ್ಗಾದೇವಿಯು ಸಂಹರಿಸಿದುದರಿಂದ ಮಾಡುವ ವಿಶೇಷ ಪೂಜೆಯು ದುರ್ಗಾಷ್ಟಮಿ ಎನಿಸಿದೆ. ಆಯುಧ ಪೂಜೆಯಂದು ನಾವು ಬಳಸುವ ಎಲ್ಲ ವಾಹನಗಳು, ಯಂತ್ರಗಳು, ಸಲಕರಣೆಗಳನ್ನು ಪೂಜಿಸಲಾಗುತ್ತದೆ. ಹಾಗೂ ಪ್ರಾಣಿಬಲಿಯನ್ನು ನೀಡಲಾಗುವುದು.

**ದೀಪಾವಳಿ–** ಬೆಳಕಿನ ಹಬ್ಬವಾದ ದೀಪಾವಳಿಯು ಜನಪ್ರಿಯ ಹಬ್ಬಗಳಲ್ಲಿ ಒಂದು. ಬಂಧನದಲ್ಲಿದ್ದ ಹದಿನಾರು ಸಾವಿರ ಗೋಪಿಕಾ ಸ್ತ್ರೀಯರನ್ನು ಶ್ರೀಕೃಷ್ಣಪರಮಾತ್ಮನು ಮುಕ್ತಗೊಳಿಸಿದ ಸ್ಮರಣಾರ್ಥವಾಗಿ ನರಕಚತುರ್ದಶಿ / ದೀಪಾವಳಿಯನ್ನು ಆಚರಿಸಲಾಗುತ್ತದೆ. ಅಂದು ಪ್ರತೀ ಮನೆಗಳಲ್ಲಿಯೂ ಹಣತೆಗಳನ್ನಿಟ್ಟು ಪೂಜೆ ಮಾಡುವುದು ಕಂಡು ಬರುತ್ತದೆ. ಹೆಣ್ಣು ಮಕ್ಕಳಿಗೆ, ಅಳಿಯಂದಿರಿಗೆ ಅದರಲ್ಲೂ ಹೊಸ ಅಳಿಯನಿಗೆ ವಿಶೇಷವಾಗಿ ದೀಪಾವಳಿ ಹಬ್ಬದಲ್ಲಿ ಆಹ್ವಾನವಿರುತ್ತದೆ. ಪಟಾಕಿ ಸಿಡಿಸಿ ಸಂಭ್ರಮಿಸುವ ಹಬ್ಬವಾಗಿ ಆಚರಿಸುವರು.

**ಕಾರ್ತಿಕಮಾಸದ ಪೂಜೆ–** ತುಮಕೂರು ಜಿಲ್ಲೆಯ ಬಹುತೇಕ ಎಲ್ಲ ಗ್ರಾಮದೇವತೆಗಳಿಗೆ ಕಾರ್ತೀಕ ಮಾಸದಲ್ಲಿ ವಿಶೇಷ ಪೂಜೆಯನ್ನು ಸಲ್ಲಿಸಲಾಗುತ್ತದೆ. ಭಕ್ತಿ ಭಾವದಿಂದ ದೇವರುಗಳಿಗೆ ನೈವೇದ್ಯ, ಅಭಿಷೇಕ, ವೀಳ್ಯೆದೆಲೆಪೂಜೆ ಮುಂತಾದ ಬಗೆಯಲ್ಲಿ ಆರಾಧಿಸಲಾಗುತ್ತದೆ. ಕಾರ್ತಿಕ ಮಾಸ ಪೂರ್ತಿ ದೇವಾಲಯಗಳಲ್ಲಿ ಭಜನೆ, ನೃತ್ಯಗಳೊಂದಿಗೆ ಪೂಜೆಯನ್ನು ಅರ್ಪಿಸುವರು.ಈ ಮಾಸದಲ್ಲಿ ಬಹುತೇಕ ಜನರು ಮಾಂಸಾಹಾರವನ್ನು ಸೇವಿಸುವುದಿಲ್ಲ.

**ಸಂಕ್ರಾಂತಿ–** ಮಕರರಾಶಿಗೆ ಸೂರ್ಯನು ಪ್ರವೇಶಿಸುವ ದಿನದ ಮಹತ್ವವಾಗಿ ಈ ದಿನವನ್ನು ಉತ್ತರಾಯಣ ಪುಣ್ಯಕಾಲವೆಂದು ಆಚರಿಸಲಾಗುತ್ತದೆ. ಅಲ್ಲದೆ ದವಸ, ಧಾನ್ಯಗಳನ್ನು ನೀಡುವ ಭೂಮಿತಾಯಿಯನ್ನು ಸ್ಮರಿಸುವ ದಿನವೂ ಇದಾಗಿದೆ. ನೆಲ, ಮನೆ, ಸ್ವಚ್ಛಗೊಳಿಸಿ ಅಂದು ಮನೆಯ ಮುಂದೆ ವೈವಿಧ್ಯಮಯ ರಂಗೋಲಿಯಿಂದ ಮನೆ, ಬೀದಿಗಳನ್ನು ಶೃಂಗರಿಸಲಾಗುವುದು. ಎಳ್ಳು ಬೆಲ್ಲವನ್ನು ಸಮುದಾಯದೊಂದಿಗೆ ಹಂಚಿಕೊಂಡು ತಾವೂ ತಿನ್ನುವರು. ಗೋವುಗಳನ್ನು ಪೂಜೆ ಮಾಡಿ ಸಾಂಕ್ರಾಮಿಕ ರೋಗಗಳು ಬಾರದಿರಲೆಂದು ಕಿಚ್ಚು ಹಾಯಿಸುವರು.

**ಬನದಹುಣ್ಣಿಮೆ–** ಬನಶಂಕರಿ ದೇವಿಯ ಹುಟ್ಟಿದ ದಿನವನ್ನು ಬನದ ಹುಣ್ಣಿಮೆ ಹಬ್ಬವಾಗಿ ಆಚರಿಸಲಾಗುತ್ತದೆ. ಸಮುದಾಯದವರು ತಮ್ಮ ಕುಲದೇವತೆಯ ಹುಟ್ಟು ಹಬ್ಬವನ್ನು ಭಕ್ತಿಯಿಂದ ಮಾಡುವರು. ಚಿಕ್ಕನಾಯಕನಹಳ್ಳಿಯ ಟೌನ್‌ನಲ್ಲಿ ಈ ಆಚರಣೆಯನ್ನು ವಿಶೇಷವಾಗಿ ಮಾಡಲಾಗುತ್ತದೆ. ಅಂದು ಪ್ರಾತ:ಕಾಲ ಪೂಜಾ ಸಾಮಗ್ರಿಗಳೊಂದಿಗೆ ಕಳಸ ಸಹಿತ ಕೆರೆ ಅಥವಾ ಬಾವಿ ಸಮೀಪದಲ್ಲಿ ಬನಶಂಕರಿ ದೇವಿಯ ಕಲಶವನ್ನು ಸ್ಥಾಪಿಸಿ ಪೂಜೆ ಮಾಡಲಾಗುತ್ತದೆ. ಮುತ್ತೈದೆಯರಿಗೆ ಬಾಗಿನ ನೀಡಿದ ಮೇಲೆ ಮಂಗಳ ವಾದ್ಯಗಳೊಂದಿಗೆ ದೇವಾಲಯಕ್ಕೆ ಬರುವರು. ಅಂದು ಹಗಲಲ್ಲಿ ರಥೋತ್ಸವವು ನಡೆಯುತ್ತದೆ.ಉತ್ಸವ ಮುಗಿದು ದೇವಾಲಯದ ಬಳಿ ಬಂದಾಗ ದೇವಿಯ ಎದುರಿಗೆ ದೇವಾಂಗ ವೀರ ಮಕ್ಕಳು 'ಅಲಗು ಸೇವೆ' ಮಾಡುತ್ತಾರೆ. ಅಂದರೆ ಕತ್ತಿಯಿಂದ ಕೊರಳು ಕತ್ತರಿಸಿಕೊಳ್ಳುವಂತೆ, ಎದೆ ಮೇಲೆ, ಬೆನ್ನ ಮೇಲೆ ಹೊಡೆದುಕೊಳ್ಳುತ್ತಾರೆ. ಅವರ ಮೈಯಿಂದ ರಕ್ತ ಚಿಮ್ಮುತ್ತಿದ್ದರೆ ದೇವಿಯ ಭಂಡಾರವನ್ನು ಅವರ ಮೈ ಮೇಲೆ ಎರಚುತ್ತಿರುತ್ತಾರೆ. ಅಲಗು ಸೇವೆಯ ನಂತರ ಮಹಾ ಮಂಗಳಾರತಿ ನಂತರ 'ಅನ್ನಸಂತರ್ಪಣೆ' ನಡೆಯುತ್ತದೆ.

**ಮಹಾಶಿವರಾತ್ರಿ–** ಬಹುತೇಕ ಜನರು ಈ ಹಬ್ಬವನ್ನು ಆಚರಿಸುವರು. 'ದೇವದಾನವರು ಮಂದರ ಪರ್ವತವನ್ನು ಕಡೆಗೋಲನ್ನಾಗಿ ಕಡೆದರು. ಹಾಲಾಹಲವು ಸರ್ವ ಲೋಕಗಳನ್ನು ವ್ಯಾಪಿಸಲು ಭಯಗೊಂಡ

ದೇವದಾನವರು ಈಶ್ವರನಲ್ಲಿ ಮೊರೆ ಹೋದರು. ಲೋಕ ಕಲ್ಯಾಣಕ್ಕಾಗಿ ಶಿವನು ವಿಷವನ್ನು ಕುಡಿದನು. ಇದನ್ನು ಕಂಡು ಗಾಬರಿಗೊಂಡ ಪಾರ್ವತಿಯು ಎರಡೂ ಕೈಗಳಿಂದ ಅವನ ಕುತ್ತಿಗೆಯನ್ನು ಹಿಡಿಯಲು ವಿಷವು ಅಲ್ಲಿಯೇ ನಿಂತಿತು. ಶಿವನು ಅಂದಿನಿಂದ ವಿಷಕಂಠನಾದನು ಎಂಬ ನಂಬಿಕೆಯಿದೆ.ದೇವತೆಗಳು ಈ ಘಟನೆಯಿಂದ ಭಯಭೀತರಾಗಿ. ಅಂದಿನ ರಾತ್ರಿ ಯಾರು ನಿದ್ರಿಸದೇ ಶಿವನ ಮಹಿಮೆಯನ್ನು ಕೊಂಡಾಡುತ್ತಾ ರಾತ್ರಿಯನ್ನು ಎಚ್ಚರದಿಂದ ಕಳೆದರು ಎಂಬ ಕತೆಯಿದೆ. ಈ ಕಥಾ ಹಿನ್ನೆಲೆಯಲ್ಲಿಯೇ 'ಮಹಾಶಿವರಾತ್ರಿ' ಹಬ್ಬವನ್ನು ಆಚರಿಸಲಾಗುತ್ತದೆ. ತುಮಕೂರು ಜಿಲ್ಲೆಯಲ್ಲಿ ವಿಶೇಷವಾಗಿ ಕೆಲವು ಜನಾಂಗದವರು ಶಿವರಾತ್ರಿ ಹಬ್ಬದ ದಿನದಿಂದ ಏಳು ದಿನಗಳವರೆಗೆ 'ಶಿವಸಪ್ತಾಹ' ವನ್ನು ಆಚರಿಸುತ್ತಾರೆ. ಹಬ್ಬಕ್ಕೂ ಮುನ್ನವೇ ಬಹು, ಉದ್ದವೂ, ವಿಸ್ತಾರವೂ ಆದ ಹಸಿರು ಚಪ್ಪರವನ್ನು ಹಾಕಿರುತ್ತಾರೆ. ಈ ಸಪ್ತಾಹದಲ್ಲಿ ಒಂದು ವಾರ ಅಖಂಡ ಭಜನೆ ನಡೆಯುತ್ತದೆ. ಕೊನೆ ದಿನ ಗರುಡ ಗಂಭ ಹಿಡಿದು ಪ್ರಮುಖ ಬೀದಿಗಳಲ್ಲಿ ಭಜನೆ ಮಾಡಿ ಶಿವಾಲಯಕ್ಕೆ ಬಂದು ಶಿವನಿಗೆ ಅರ್ಚನೆ ಮಾಡುವರು. ಆದರೆ ಈ ಶಿವ ಸಪ್ತಾಹದ ಸಲುವಾಗಿ ಭಕ್ತರಿಂದ ದವಸಧಾನ್ಯ ಸಂಗ್ರಹಿಸಿ ಒಂದು ದಿನ 'ಶಿವಪ್ಪನ ಪರೇವ'ನ್ನು ಮಾಡುತ್ತಾರೆ. ಚಪ್ಪರದ ಕೆಳಗೆ ಜನರು ಪ್ರಸಾದವಾಗಿ ಊಟ ಮಾಡುವರು. ಎಲ್ಲರೂ ಅಂದಿನ ರಾತ್ರಿ ಜಾಗರಣೆ ಮಾಡುವರು. ಮಹಾಶಿವರಾತ್ರಿಯಂದು ಶ್ರದ್ಧೆ, ಭಕ್ತಿಯಿಂದ ಶಿವಧ್ಯಾನ ಮಾಡುತ್ತ ಮಡಿಯಿಂದ ಉಪವಾಸ ವ್ರತವನ್ನು ಆಚರಿಸುವರು. ಈಶ್ವರನ ದೇವಾಲಯಗಳಿಗೆ ಹೋಗಿ ಪೂಜೆ, ಧ್ಯಾನಗಳಲ್ಲಿ ತೊಡಗುವರು. ಅಂದಿನ ರಾತ್ರಿ ಗ್ರಾಮೀಣ ಪ್ರದೇಶದಲ್ಲಿ ಜಾಗರಣೆಯ ಸಲುವಾಗಿ ಪೌರಾಣಿಕ ನಾಟಕಗಳನ್ನು ಅಭಿನಯಿಸುವರು.

೩೦. ಕಂಟಲಗೆರೆ ಸಣ್ಣಹೊನ್ನಯ್ಯ ೨೦೧೧ ***"ಅಸಾದಿಗಳ ಬದುಕು ಮತ್ತು ಸಂಸ್ಕೃತಿ"*** ತುಮಕೂರು, ತುಮಕೂರು ವಿಶ್ವವಿದ್ಯಾನಿಲಯ ಪುಟ ೨೭

೩೧. ರೇಣುಕಯ್ಯ ಸು. ೩೮ ವ. ಅಸಾದಿ, ಆದಿಕರ್ನಾಟಕ, ಮೂಗನಾಯ್ಕನ ಕೋಟೆ, ಗುಬ್ಬಿ ತಾಲೂಕು.

೩೨. ಗಂಗರಾಜು ಸು. ೪೦ ವ. ಕೃಷಿ, ಹರೆ ಬಡಿಯುವ, ಹೊಲೆಯರು, ಬೆಟ್ಟದಹಳ್ಳಿ, ಕಡಬ, ಗುಬ್ಬಿ ತಾಲೂಕು.

೩೩. ಸುರೇಶ ಸು. ೪೮ ವ. ಕೃಷಿ, ಆದಿಕರ್ನಾಟಕ, ಮೂಗನಾಯ್ಕನ ಕೋಟೆ, ಗುಬ್ಬಿ ತಾಲೂಕು.

೩೪. ತುಮಕೂರು ಜಿಲ್ಲೆಯಲ್ಲಿ ನಡೆಸುವ ಜಾತ್ರೆಗಳಲ್ಲಿ ಪ್ರಮುಖವಾದುವೆಂದರೆ **ತುಮಕೂರಿನ** ಸಿದ್ಧಗಂಗಾ ಕ್ಷೇತ್ರದ ಸಿದ್ಧಲಿಂಗೇಶ್ವರಸ್ವಾಮಿಯ ಜಾತ್ರೆ, ದೇವರಾಯನದುರ್ಗದ ನರಸಿಂಹಸ್ವಾಮಿಯ ಜಾತ್ರೆ, ಶೆಟ್ಟಿಹಳ್ಳಿ ಆಂಜನೇಯಸ್ವಾಮಿ ಜಾತ್ರೆ, **ಕೊರಟಗೆರೆಯ** ಕ್ಯಾಮೇನಹಳ್ಳಿಯ ಆಂಜನೇಯಸ್ವಾಮಿಜಾತ್ರೆ, ಬುಕ್ಕಪಟ್ಟಣದ ದೊಡ್ಡಮ್ಮದೇವರ ಜಾತ್ರೆ, **ಮಧುಗಿರಿಯ** ದಂಡಿನಮಾರಮ್ಮನಜಾತ್ರೆ, ಗೊಂದಿಹಳ್ಳಿ ಆಂಜನೇಯಸ್ವಾಮಿ ದನಗಳಜಾತ್ರೆ, ಬಡವನಹಳ್ಳಿ ರಂಗಧಾಮನ ದನಗಳಜಾತ್ರೆ, **ಸಿರಾದ** ಪಟ್ಟನಾಯಕನಹಳ್ಳಿಯ ನಂಜಾವಧೂತರ ಜಾತ್ರೆ, ತಾವರೇಕೆರೆಯಜಾತ್ರೆ, ಸೀಬಿ ನರಸಿಂಹಸ್ವಾಮಿಯಜಾತ್ರೆ, ಮಾಗೋಡು ರಂಗನಾಥನಜಾತ್ರೆ, ಕಳುವೋರಹಳ್ಳಿ ಜುಂಜಪ್ಪನ ಜಾತ್ರೆ, ಗಿಡಗನಹಳ್ಳಿ ರಂಗನಾಥನ ಜಾತ್ರೆ, ರಂಗಾಪುರದ ಮರಡಿ ರಂಗನಾಥನಜಾತ್ರೆ, ಗಂಡಿಹಳ್ಳಿಮಠದ ಮೊಹರಂಜಾತ್ರೆ, ಬೇವಿನಹಳ್ಳಿ ಗೊಲ್ಲರಹಟ್ಟಿ ಜುಂಜಪ್ಪನ ಉತ್ಸವ, **ಪಾವಗಡದ** ನಾಗಲಮಡಿಕೆ ಸುಬ್ರಮಣ್ಯೇಶ್ವರಜಾತ್ರೆ, ಹರಿಹರಪುರ ಸಿದ್ದೇಶ್ವರಸ್ವಾಮಿ ಜಾತ್ರೆ, ಮದ್ದೇದ ಸ್ವಾರಮ್ಮನ ಜಾತ್ರೆ, **ಚಿಕ್ಕನಾಯಕನಹಳ್ಳಿಯ** ದಸೂಡಿ ಆಂಜನೇಯಸ್ವಾಮಿ ಜಾತ್ರೆ, ಮುದ್ದೇನಹಳ್ಳಿ ಬಗಲಬಸವೇಶ್ವರಜಾತ್ರೆ, ಕೆರೆಹಳ್ಳಿರಂಗಸ್ವಾಮಿ ಜಾತ್ರೆ, ಚಿಕ್ಕನಾಯಕನಹಳ್ಳಿ ಪ್ರಸನ್ನೇಶ್ವರಸ್ವಾಮಿ ಜಾತ್ರೆ, ಮತಿಘಟ್ಟ ಪಾರ್ವತಮ್ಮ ಜಾತ್ರೆ, ಹಂದನಕೆರೆ ದುರ್ಗಮ್ಮನ ಜಾತ್ರೆ, ಯಳನಡು ಸಿದ್ದರಾಮೇಶ್ವರ ಜಾತ್ರೆ, ಹಳೆಯೂರು ಆಂಜನೇಯಸ್ವಾಮಿಜಾತ್ರೆ, ಗ್ರಾಮದೇವತೆ ಎಲ್ಲಮ್ಮನ ಜಾತ್ರೆ, ಹಾಗಲವಾಡಿ ಬೆಟ್ಟದಹಳ್ಳಿ ವೀರಭದ್ರಸ್ವಾಮಿ ಜಾತ್ರೆ, ಶೆಟ್ಟಿಕೆರೆ ಕೆಂಪಮ್ಮನ ಜಾತ್ರೆ, ಕಂದಿಕೆರೆ ರೇಣುಕಾ ಯಲ್ಲಮ್ಮ ಜಾತ್ರೆ, **ಗುಬ್ಬಿಯ** ಹೊಸಕೆರೆ ರಂಗನಾಥಸ್ವಾಮಿ ಜಾತ್ರೆ, ಕಲ್ಲೂರು ಆಂಜನೇಯಸ್ವಾಮಿ ಜಾತ್ರೆ, ಗುಬ್ಬಿಚನ್ನ ಬಸವೇಶ್ವರಸ್ವಾಮಿಜಾತ್ರೆ, ಚೇಳೂರು ಮರಳುಬಸವೇಶ್ವರ ಜಾತ್ರೆ, ನಿಟ್ಟೂರು ಹೋಬಳಿ ನಾಗಸಂದ್ರದ ಕೆಂಪಮ್ಮನ ಜಾತ್ರೆ, ಚೇಳೂರು ಹೋಬಳಿಯ ಮಾದಾಪುರದ ಮಣ್ಣೆ ಮಾರಿಜಾತ್ರೆ, ನಾಗಸಂದ್ರದ ಕಾಳಘಟ್ಟಮ್ಮನ ಜಾತ್ರೆ, ನಿಟ್ಟೂರು ಬಸವಾಪಟ್ಟಣದ ಕರಿಯಮ್ಮ ಜಾತ್ರೆ, ಕಡಬದ ಆಂಜನೇಯಸ್ವಾಮಿ ಜಾತ್ರೆ, ಕಲ್ಲೂರು ಶ್ರೀಆಂಜನೇಯಸ್ವಾಮಿ ಜಾತ್ರೆ, **ತಿಪಟೂರಿನ** ಗುಂಗುರುಮಲೆ ದನಗಳಜಾತ್ರೆ, ಕಿಬ್ಬನಹಳ್ಳಿ ದನಗಳಜಾತ್ರೆ, ಕೆರೆಕೋಡಿ ರಂಗಾಪುದ ಶಂಕರೇಶ್ವರಸ್ವಾಮಿ ಜಾತ್ರೆ, **ತುರುವೇಕೆರೆ** ತುರುವೇಕೆರೆ ಅಮಾನಿಕೆರೆಯ ಗಂಗಾಧರೇಶ್ವರ ಸ್ವಾಮಿಜಾತ್ರೆ, ಉಡಸಲಮ್ಮ ಜಾತ್ರೆ, ಪುರದ ಶಂಭುಲಿಂಗೇಶ್ವರಜಾತ್ರೆ, ಲೋಕಮ್ಮನಹಳ್ಳಿಯ ಮಹಾಲಿಂಗೇಶ್ವರ ಸ್ವಾಮಿ ಜಾತ್ರೆ, ದಂಡಿನಶಿವರ ಹೊನ್ನಮ್ಮದೇವಿಯ ಜಾತ್ರೆ, ಹುಲಿಕಲ್ ಕೆಂಪಮ್ಮ ದೇವರ ಜಾತ್ರೆ, **ಕುಣಿಗಲ್**‌ನ ಎಡೆಯೂರು ಸಿದ್ಧಲಿಂಗೇಶ್ವರಸ್ವಾಮಿಜಾತ್ರೆ, ಎಡೆಯೂರು ಬೋರಸಂದ್ರದ ಲಕ್ಕಮ್ಮನ ಜಾತ್ರೆಗಳನ್ನು ಆಚರಿಸಲಾಗುತ್ತದೆ.

೩೫. ಸಣ್ಣನಾಗಪ್ಪ ೨೦೦೨ ***"ತಾಯಿ ಸ್ವಾರಮ್ಮನ ಮೇಲೆ ಪದನೂರು"*** ಪಾವಗಡ ಸ್ಫೂರ್ತಿ ಪ್ರಕಾಶನ ಪುಟ ೨೦

೫೬. ಹೊನ್ನಗಾನಹಳ್ಳಿ ಕರಿಯಣ್ಣ ೨೦೦೬ ***"ಪೂರ್ವೋಕ್ತ"*** ಪುಟ-೪೦
೫೭. ***ಅದೇ*** ಪುಟ-೪೦
೫೮. ***ಅದೇ*** ಪುಟ-೩೬
೫೯. ***"ತುಮಕೂರು ಜಿಲ್ಲಾ ಗೆಜೆಟಿಯರ್"*** ೨೦೧೭ ಪುಟ-೫೪
೬೦. ಕೆಂಕೆರೆ ಹನುಮಂತೇಗೌಡ ೨೦೧೨ ***"ಸ್ಥಳೀಯ ಇತಿಹಾಸ ಹೊಸ ಶೋಧಗಳು"*** ಬೆಂಗಳೂರು. ಕೆಂಕೆರೆ ಪ್ರಕಾಶನ ಪುಟ-೧೦೫
೬೧. ಪರಶುರಾಮಯ್ಯ ಸಿ. ಕೆ. ೨೦೦೭ ***"ಚೌಡಿಕೆಯವರು-ಸಂಪ್ರದಾಯ ಮತ್ತು ಆಚರಣೆಯ ಅಧ್ಯಯನ',*** ಚಿಕ್ಕನಾಯಕನಹಳ್ಳಿ ಪರಶು ಪ್ರಕಾಶನ ಪುಟ ೧೮-೧೯
೬೨. ಪರಮಶಿವಯ್ಯ ಜೀ.ಶಂ. ೧೯೯೬ ***"ಜನಪದ ಖಂಡಕಾವ್ಯಗಳು"*** ಪುಟ-೧೦
೬೩. ಸಣ್ಣನಾಗಪ್ಪ ೨೦೧೪ ***"ಪೂರ್ವೋಕ್ತ"*** ಪುಟ ೪೫ ಪದ್ಯ ೧೩೪
೬೪. ***ಅದೇ*** ಪುಟ-೪೪
೬೫. ವಕ್ತೃ ನಂಜುಂಡಸ್ವಾಮಿ ಬಿ. ಸು.೭೦ ವ. ಆಯುರ್ವೇದ ವೈದ್ಯರು, ತುಮಕೂರು.
೬೬. ವಕ್ತೃ ಲಕ್ಷ್ಮಮ್ಮ ಕೋಂ ಪಳ್ಳರಂಗಯ್ಯ, ಗೃಹಿಣಿ, ಆದಿಕರ್ನಾಟಕ, ಅಗ್ರಹಾರ
೬೭. ವಸು ಮಳಲಿ ೧೦ ಜೂನ್ ೨೦೧೪ ***"ಕಳ್ಳುಬಳ್ಳಿ" (ತಿರುಳಬಿಟ್ಟು ಸಿಪ್ಪೆಮೆಲ್ಲುವ ಸಿರಿ)*** ಪ್ರಜಾವಾಣಿ

-೦೦೦-

# ಅಧ್ಯಾಯ : ೭

## ಸಮಾರೋಪ

೭.೧ ಅಧ್ಯಯನದ ಫಲಿತಗಳು

೭.೨ ಅಧ್ಯಯನದ ಸಾಧ್ಯತೆಗಳು

## ಅಧ್ಯಾಯ : ೭

## ಸಮಾರೋಪ

ಮೌಖಿಕ ಆಕರಗಳಲ್ಲಿ ವ್ಯಕ್ತವಾಗಿರುವ ತುಮಕೂರು ಜಿಲ್ಲೆಯಲ್ಲಿನ ಸಾಂಸ್ಕೃತಿಕ ವೀರರು ತಾವು ಪ್ರತಿನಿಧಿಸುವ ಸಮುದಾಯದ ಆದರ್ಶಗಳ ಪ್ರತೀಕವಾಗಿ ಕಂಡುಬರುತ್ತಾರೆ. ಈ ನೆಲೆಯಲ್ಲಿ ಪ್ರಧಾನವಾಗಿ ಈರುಗ್ಯಾತರಾಯನ ದಿಗ್ವಿಜಯ ಮತ್ತು ವಡ್ಡಗೆರೆ ಈರುನಾಗಮ್ಮನಕಾವ್ಯ, ಜುಂಜಪ್ಪನಕಾವ್ಯ, ದಿಬ್ಬದವೀರ ಬೊಮ್ಮಣ್ಣನಕಾವ್ಯ, ಮದ್ದೇದ ಸ್ವಾರಮ್ಮನಕಾವ್ಯ, ಹುಳಿಯಾರು ಕೆಂಚಮ್ಮನ ಕಾವ್ಯಗಳನ್ನು ಚಾರಿತ್ರಿಕವಾಗಿ ಅಧ್ಯಯನ ಮಾಡಲಾಗಿದೆ. ಇತರೆ ಚಿತ್ರದೇವರು, ಬಂದಕುಂಟೆ ಈರುಚಿಕ್ಕಣ್ಣ, ಬಳ್ಳೆಕಟ್ಟಿಈರಣ್ಣ, ಹೊನ್ನೇಮರದಈರಣ್ಣ, ಶೂಲದ ಈರಣ್ಣ, ಜಲಧಿಬಪ್ಪಣ್ಣನ, ಬರಗೂರು ಈರಮ್ಮ, ವೀರಸೀಗಣ್ಣ, ಮಾಗೋಡು ರಂಗನಾಥ, ಮರೂರು ವೀರನಾಗಪ್ಪ, ವೀರಬಡಣ್ಣ, ಪಚ್ಚೆಹೊನ್ನಪ್ಪ, ಇಟಕದಿಬ್ಬನಹಳ್ಳಿ ವೀರತಿಮ್ಮಣ್ಣ, ಇವರಿಗೆ ಸಂಬಂಧಿಸಿದ ಕಾವ್ಯಗಳನ್ನು ಸಾಂದರ್ಭಿಕವಾಗಿ ಅಧ್ಯಯನ ಮಾಡಲಾಗಿದೆ. ಸಿರಾದ ರಂಗಪ್ಪನಾಯಕ, ನಿಡಗಲ್ಲು ಹೊಟ್ಟೆಣ್ಣನಾಯಕನ ಕುರಿತ ಲಾವಣಿಗಳನ್ನು, ಮಿಡಿಗೇಶಿ, ಸಿದ್ಧರಬೆಟ್ಟದ ಬೂದಗವಿ, ದೇವರಾಯನದುರ್ಗದ ನಾಮದ ಚಿಲುಮೆ, ಸಿದ್ಧಗಂಗಾಮಠ ಮುಂತಾದ ಪ್ರದೇಶಗಳ ಐತಿಹ್ಯಗಳನ್ನು ಹಾಗೂ ಪುರಾಣ, ಪ್ರತೀತಿ, ಜನಸಾಮಾನ್ಯರ ನಂಬಿಕೆಗಳಲ್ಲಿ, ಕಂಡು ಬರುವ ಇತಿಹಾಸದ ಸೂಕ್ಷ್ಮತೆಗಳನ್ನು ಕಂಡುಕೊಳ್ಳುವ ಪ್ರಯತ್ನವನ್ನು ಮಾಡಲಾಗಿದೆ.

ತುಮಕೂರು ಜಿಲ್ಲೆಯಲ್ಲಿನ ಸ್ಥಳನಾಮಗಳು, ಕೋಟೆಗಳು, ಜಾತಿಗಳು ಸಮುದಾಯಗಳಲ್ಲಿನ ಸಂಪ್ರದಾಯ, ಆಚರಣೆಗಳು, ನಂಬಿಕೆಗಳು ಹಾಗೂ ತಲವರ್ಗಗಳ ಸ್ಥಾನಮಾನ ಮುಂತಾದುವುಗಳ ಬಗ್ಗೆ ರಚಿತವಾಗಿರುವ ಮೌಖಿಕ ಆಕರಗಳನ್ನು ಚಾರಿತ್ರಿಕ ನೆಲೆಯಲ್ಲಿ ಅಧ್ಯಯನ ಮಾಡಲಾಗಿದೆ. ಇಲ್ಲಿನ ಮೌಖಿಕ ಆಕರಗಳಲ್ಲಿನ ಚಾರಿತ್ರಿಕ ಸೂಕ್ಷ್ಮತೆಗಳನ್ನು ಗುರುತಿಸುವುದು ಈ ಅಧ್ಯಯನದ ಮುಖ್ಯ ಉದ್ದೇಶವಾಗಿದೆ. ಹಾಗೂ ಸಮುದಾಯದ ಚರಿತ್ರೆಯನ್ನು ಕಟ್ಟುವ ಪ್ರಯತ್ನವನ್ನು ಮಾಡಲಾಗಿದೆ.

ಬುಡಕಟ್ಟು, ಆದಿವಾಸಿ ಸಮುದಾಯಗಳು ತಮ್ಮ ನೋವು, ನಲಿವು, ಬದುಕು, ಬವಣೆಗಳ ಬಗ್ಗೆ ಕಾವ್ಯಗಳನ್ನು ಕಟ್ಟಿ ಹಾಡಿದರು, ಲಾವಣಿಗಳನ್ನು, ಐತಿಹ್ಯಗಳನ್ನು ಹುಟ್ಟು ಹಾಕಿದರು. ಚರಿತ್ರೆಯಲ್ಲಿ ಕಡೆಗಣಿಸಲ್ಪಟ್ಟಿದ್ದ ತಲವರ್ಗದ ಸಮುದಾಯವು ಅಸಾಮಾನ್ಯ ಸಾಧನೆಯನ್ನು ಮಾಡಿದ ತಮ್ಮ ಸಮುದಾಯಗಳಲ್ಲಿನ ವ್ಯಕ್ತಿಗಳನ್ನು ತಮ್ಮ ಪ್ರತಿನಿಧಿಗಳನ್ನಾಗಿ ಭಾವಿಸಿದರು. ಇಂತಹ ಪ್ರತಿನಿಧಿಗಳನ್ನೇ ಮುಂದೆ ತಮ್ಮ ಸಮುದಾಯದ ಸಾಂಸ್ಕೃತಿಕ ಪ್ರತೀಕವಾಗಿ ಕಂಡರು. ಹಾಗೂ ಅವರು ಮಾಡಿದ ಸಾಧನೆಗಳನ್ನು ಅಪರಿಮಿತಗೊಳಿಸುವ ಮೂಲಕ ಅವರನ್ನು ಆರಾಧಿಸಲು ಮುಂದಾದರು. ಇವರನ್ನು ಕುರಿತು ಕಟ್ಟಿ ಹಾಡಿದಂತಹ ಮೌಖಿಕಕಾವ್ಯಗಳು ಮತ್ತು ಕಥನಗಳು ಚರಿತ್ರೆಗೆ ಭಿನ್ನವಾಗಿಯೂ ಮತ್ತು ಕೆಲವೊಮ್ಮೆ ಪೂರಕವಾಗಿಯೂ ರೂಪುಗೊಂಡಿವೆ. ಇದು ಜನಸಮುದಾಯದ ಹಲವಾರು ತಲೆಮಾರುಗಳ ಅನುಭವದ ಕಥನವಾಗಿದೆ. ತಮ್ಮ ಸಮುದಾಯುದ ರಕ್ಷಣೆಗೆಂದು ಹೋರಾಡಿದ ತಮ್ಮ ನಾಯಕನನ್ನು ಅಸಾಮಾನ್ಯನಂತೆ ಬಿಂಬಿಸುತ್ತಾ ಹೋದಂತೆ ಆತನಲ್ಲಿ ಭಕ್ತಿಪೂರ್ವಕವಾದ ಭಾವನೆಗಳು ಬೆಳೆಯುತ್ತಾ ಹೋಗಿ ನಾಯಕರನ್ನ ದೈವತ್ವಕ್ಕೆ ಏರಿಸಲಾಯಿತು. ಇಂತಹ ಸನ್ನಿವೇಶದಲ್ಲಿ ಸಮುದಾಯದ ನಾಯಕನ ಸುತ್ತಾ ಹೆಣೆಯಲಾದ ಕಥನವು ಪುರಾಣೀಕೃತವಾಗುತ್ತಾ ಸಾಗುತ್ತದೆ. ಈ ಕಥನದಲ್ಲಿ ಒಂದು ಕಾಲದ ಐತಿಹಾಸಿಕ ವ್ಯಕ್ತಿಯು ಪೌರಾಣಿಕ ವ್ಯಕ್ತಿಯಾಗಿ ಬದಲಾಗಿರುತ್ತಾನೆ. ಇಂತಹ ಜನಪದ ಕಾವ್ಯವನ್ನು ನಿರ್ಬಂಧಿತ ಚೌಕಟ್ಟಿನಲ್ಲಿ ಶಾಸನ ಮತ್ತು ಕಡತಗಳಂತೆ ಗ್ರಹಿಸಿದರೆ, ಆ ಮೂಲಕ ಚರಿತ್ರೆಯನ್ನು ಗ್ರಹಿಸಲು ಸಾಧ್ಯವಾಗುವುದಿಲ್ಲ. ಅದೇ ಕಾವ್ಯದ ಅಂತರ್ ಸಂಬಂಧ ಮತ್ತು ಸನ್ನಿವೇಶಗಳ ಮೂಲಕ ಸೂಕ್ಷ್ಮವಾಗಿ ಗ್ರಹಿಸಿದಾಗ ಮಾತ್ರ ಚರಿತ್ರೆಯನ್ನು ನಿಖರವಾಗಿ ರಚಿಸಲು ಸಾಧ್ಯವಾಗುತ್ತದೆ.

ವಸು ಮಳಲಿರವರು "ತಿರುಳಬಿಟ್ಟು ಸಿಪ್ಪೆಮೆಲ್ಲುವ ಸಿರಿ" ಎಂಬ ಲೇಖನದಲ್ಲಿ "ಸಮುದಾಯಗಳ ಬದುಕು ಜನರ ನೆನಪುಗಳಲ್ಲಿ ಅಡಗಿದೆಯೇ ಹೊರೆತು ಬರಹದ ದಾಖಲೆಗಳಲ್ಲಿ ಅಲ್ಲ. ಅವರಾಡುವ ಭಾಷೆ, ಕಲೆ, ಕಸುಬು ಆಚರಣೆಗಳು ಎಲ್ಲವೂ ಬದುಕಿನ ಭಾಗವಾಗಿರುತ್ತವೆ" ಎಂದು ಅಭಿಪ್ರಾಯ ಪಟ್ಟಿದ್ದಾರೆ. ಹೀಗೆ ಅಸಾಮಾನ್ಯರ ಬದುಕಿನ ಅನುಭವ, ಮಾಡಿದ ಸಾಹಸ, ಅರಿತ ಜ್ಞಾನವು ಕಥೆಯಾಗಿ, ಹಾಡಾಗಿ, ಲಾವಣಿಯಾಗಿ, ಪದವಾಗಿ ಹಾಡುತ್ತಾ ರೂಪುಗೊಳ್ಳುತ್ತವೆ. ಹೀಗೆ ಉಳಿದು ಬಂದ ನೆನಪುಗಳು ಬರಹರೂಪಕ್ಕೆ ಇಳಿಯದಿದ್ದರೂ ಪೀಳಿಗೆಯಿಂದ ಪೀಳಿಗೆಗೆ ಉಳಿದು ಬಂದಿರುತ್ತವೆ. ಇಂತಹ ಮೌಖಿಕ ಕಾವ್ಯಗಳಲ್ಲಿನ ಚಾರಿತ್ರಿಕ ಸೂಕ್ಷ್ಮತೆಗಳನ್ನು ಗುರುತಿಸಲಾಗಿದೆ.

## ೭.೧ ಅಧ್ಯಯನದ ಫಲಿತಗಳು

- ಜನಸಾಮಾನ್ಯರ ಬದುಕು ಸಂಕೀರ್ಣತೆಯಿಂದ ಕೂಡಿದೆ :

ತುಮಕೂರು ಪರಿಸರದಲ್ಲಿನ ಸಮುದಾಯದ ವೀರರ ಪರಂಪರೆಯು ಕೆಲವೊಮ್ಮೆ ಕೆಲವೇ ಸಮುದಾಯಗಳಿಗೆ ಮಾತ್ರ ಸೀಮಿತವಾಗಿದೆ. ಕೆಲವೊಮ್ಮೆ ಬಹು ಸಮುದಾಯಕ್ಕೆ ವಿಸ್ತರಿಸಿರುವುದನ್ನು ಗುರುತಿಸಲಾಗಿದೆ. ಹಾಗೂ ಬದುಕು ಬಹು ಸಂಸ್ಕೃತಿಯ ಮಿಶ್ರಣವಾಗಿ ಕಂಡುಬರುತ್ತದೆ. ಹೀಗಾಗಿ ಇಲ್ಲಿನ ಸಮುದಾಯಗಳನ್ನು ಬಿಡಿಯಾಗಿ ಅಥವಾ ಪ್ರತ್ಯೇಕವಾಗಿ ಅಧ್ಯಯನ ಮಾಡಲು ಸಾಧ್ಯವಾಗುವುದಿಲ್ಲ.

ಚಿತ್ರಲಿಂಗ, ಕೇತೇಲಿಂಗ, ಪಾತೇಲಿಂಗ ಆರಾಧನೆಯು ಗೊಲ್ಲಸಮುದಾಯಕ್ಕೆ ಮಾತ್ರ ಸೀಮಿತವಾಗಿದ್ದರೆ, ಜುಂಜಪ್ಪ, ಭೂತಪ್ಪ, ಕಾಟುಮಲಿಂಗರ ಆರಾಧನೆಯಲ್ಲಿ ಗೊಲ್ಲರೊಂದಿಗೆ ಪ್ರಧಾನವಾಗಿ ಕುಂಚಿಟಿಗರು, ಹಾಗೂ ಇತರೆ ಜನಾಂಗಗಳು ಭಾಗವಹಿಸುವುದನ್ನು ಗುರುತಿಸಬಹುದು. ಕುರಂಗರಾಯನು ತಲವರ್ಗದ ಮಾದಿಗ ಅರಸನೆಂದು ಗುರುತಿಸಲಾಗಿದೆ. ಆದರೂ ಸಿದ್ದೇಶ್ವರಸ್ವಾಮಿಯು ಈತನ ಆರಾಧನೆಯ ದೇವರಾಗಿದೆ. ಈತನ ಆಳ್ವಿಕೆಯ ನೆಲೆಯಾದ ಸಿದ್ಧರಬೆಟ್ಟವು ಇಂದು ಸರ್ವಧರ್ಮೀಯರ ಆರಾಧನಾ ಕೇಂದ್ರವಾಗಿದೆ. ಶಿವಶರಣೆಯಾದ ಸ್ವಾರಮ್ಮನನ್ನು ಸರ್ವ ಜಾತಿಯ ಸಮುದಾಯಗಳು ಮಡಿವಂತಿಕೆಯಿಂದ ಆರಾಧಿಸುವುದನ್ನು ಕಾಣಬಹುದಾಗಿದೆ.

- ಸಮುದಾಯದ ಐಡೆಂಟಿಟಿ ಮತ್ತು ಅಸ್ತಿತ್ವ :

ಸಮುದಾಯದ ವೀರರು ಆಳುವ ವರ್ಗ ಹಾಗೂ ಜಾತಿಗಳನ್ನು ಆಧರಿಸಿ ಇಂದು ತಮ್ಮ ಸಮುದಾಯವನ್ನು ಗುರುತಿಸಿಕೊಳ್ಳುವ, (ಐಡೆಂಟಿಟಿ) ಅಥವಾ ಅಸ್ತಿತ್ವವನ್ನು ಉಳಿಸಿಕೊಳ್ಳುವ ಒಲವು (ಟ್ರೆಂಡ್) ಕಂಡುಬರುತ್ತದೆ. ಇದು ಇಂದಿನ ಅಸ್ಮಿತೆಯ ಅಂಶವಾಗಿದೆ. ತಮ್ಮ ಜಾತಿ, ಸಮುದಾಯ, ಕುಟುಂಬ, ಇಲ್ಲವೇ ಊರಿನ ಹೆಸರಿನೊಂದಿಗೆ ತಮ್ಮ ವ್ಯಕ್ತಿನಾಮವನ್ನು ಗುರುತಿಸಿಕೊಳ್ಳುವುದು ಸಾಮಾನ್ಯವಾಗಿ ಕಂಡುಬರುತ್ತದೆ. ಇದು ಅನ್ಯಸಮುದಾಯ, ಸಂಸ್ಕೃತಿಗಳೊಂದಿಗೆ ತಮ್ಮನ್ನು ಪ್ರತ್ಯೇಕಿಸಿಕೊಳ್ಳುವ ಪ್ರಯತ್ನವೂ ಆಗಿ ಕಂಡು ಬರುತ್ತದೆ. ಇದು ಕೆಲವೊಮ್ಮೆ ಸ್ವಾಗತಾರ್ಹವಾದರೂ ಸಮಾಜದ ಐಕ್ಯತೆಗೆ ಮಾರಕವೂ ಆಗುವ ಸಾಧ್ಯತೆಯಿದೆ.

ಬುಡಕಟ್ಟು ಸಮುದಾಯಗಳ ಅದಿಮ ಸಂಸ್ಕೃತಿಯು ಪ್ರಕೃತಿಯ ಮಡಿಲಿನಲ್ಲಿಯೇ ರೂಪುಗೊಂಡಿರುತ್ತದೆ. ನಂತರದ ಕಾಲಕ್ಕೆ ಅನ್ಯಸಂಸ್ಕೃತಿಗಳೊಂದಿಗಿನ ಪ್ರಭಾವ ಮತ್ತು ಸಂಪರ್ಕದ ಸಲುವಾಗಿ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳಲು ನಡೆಯುವ ಪರಸ್ಪರ ಹೋರಾಟಗಳು ಸಾಮಾನ್ಯವಾಗಿರುತ್ತವೆ. ಅಂತೆಯೇ ತುಮಕೂರು ಪರಿಸರದಲ್ಲಿ ಅಸ್ತಿತ್ವದಲ್ಲಿರುವ ಗೊಲ್ಲರ ಜುಂಜಪ್ಪ, ಕುಂಚಿಟಿಗರ ಜಲಧೇಸವರ ಮರೂರುನಾಗಪ್ಪ, ಕುಂಚಿಟಿಗರ ಬಸಲೇನೋರ

ನಾಗಮ್ಮನ ಕಾವ್ಯಗಳಲ್ಲಿ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳಲು ನಡೆಸಿರುವ ಹೋರಾಟಗಳು ಹಾಗೂ ಸ್ಥಿತ್ಯಂತರಗೊಂಡಿರಬಹುದಾದ ಸಾಂಸ್ಕೃತಿಕ ತಲ್ಲಣಗಳನ್ನು ಗುರುತಿಸಲಾಗಿದೆ.

- ಮೌಖಿಕ ಆಕರಗಳಲ್ಲಿ ವೃತ್ತಿ ಸಂಬಂಧಿ ಸ್ಥಿತ್ಯಂತರಗಳು :

ಬೇಟೆ, ಪಶುಪಾಲನೆ, ಕೃಷಿಯಂತಹ ವೃತ್ತಿಸಂಬಂಧಿ ಸ್ಥಿತ್ಯಂತರಗಳ ನೆಲೆಯಲ್ಲಿ ಪಶುಪಾಲನೆಯಿಂದ ಟಿಸಿಲೊಡೆದು ಕೃಷಿಯತ್ತ ಸಾಗಿದ ಸಾಂಸ್ಕೃತಿಕ ಪಲ್ಲಟದ ಸನ್ನಿವೇಶವಾಗಿ ಜುಂಜಪ್ಪನ ಕಾವ್ಯವನ್ನು ಗ್ರಹಿಸಬಹುದಾಗಿದೆ. ಕೃಷಿ ವೃತ್ತಿಯ ಕುಂಚಿಟಿಗ ಆಲೇಗೌಡನು ತನ್ನ ಸಾಕು ಮಗನಿಗೆ ಗೊಲ್ಲರ ಚಿನ್ನಮ್ಮಳೊಂದಿಗೆ ವಿವಾಹವನ್ನು ಮಾಡಿಸುತ್ತಾನೆ. ಈ ಮೂಲಕ ಕೃಷಿ ಮತ್ತು ಪಶುಪಾಲನೆಯ ನಿಕಟ ಸಂಬಂಧದ ಸನ್ನಿವೇಶವಿದೆ. ಮುಂದೆ ಜುಂಜಪ್ಪನ ಗುಡ್ಡೆಯ ಪೂಜಾ ವಿವಾದವು ವೃತ್ತಿ ನೆಲೆಯ ಸಂಘರ್ಷವಾಗಿ ಕುಂಚಿಟಿಗರು ಮತ್ತು ಗೊಲ್ಲರ ದ್ವೇಷಕ್ಕೆ ಕಾರಣವಾಗಿರುವುದನ್ನು ಗುರುತಿಸಲಾಗಿದೆ.

- ಪಶುಪಾಲನೆ :

ದಿಬ್ಬದ ವೀರಬಮ್ಮಣ್ಣನಕಾವ್ಯ, ಜುಂಜಪ್ಪನ ಕಾವ್ಯ, ಶೂಲದ ಈರಣ್ಣನ ಕಾವ್ಯ, ಚಿತ್ರದೇವರಕಾವ್ಯ, ಬಂದಕುಂಟೆ ಈರುಚಿಕ್ಕಣ್ಣನ ಕಾವ್ಯಗಳಲ್ಲಿ ಪ್ರಧಾನವಾಗಿ ಜನಸಾಮಾನ್ಯರ ಮುಖ್ಯ ವೃತ್ತಿಯು ಪಶುಪಾಲನೆಯಾಗಿತ್ತು. ಎಂಬುದನ್ನು ಪ್ರಸ್ತಾಪಿಸುತ್ತವೆ. ಈ ಹಿನ್ನೆಲೆಯಲ್ಲಿ ತುಮಕೂರು ಪ್ರದೇಶವು ಪಶುಪಾಲನೆಯ ಬೀಡಾಗಿತ್ತು ಎಂಬುದನ್ನು ಗುರುತಿಸಲಾಗಿದೆ. ಅಲ್ಲದೇ ಸಿರಾ ತಾಲೂಕಿನ ಬಹುತೇಕ ಶಾಸನಗಳೂ ಕೂಡ ತುರುಗೋಳ್ ಕದನಗಳು ನಡೆದಿರುವ ಬಗ್ಗೆ ಉಲ್ಲೇಖಿಸಿವೆ. ಈ ಹಿನ್ನೆಲೆಯಲ್ಲಿ ಪಶುಗಳು ಈ ಭಾಗದ ಜನರ ಸಂಪತ್ತಾಗಿದ್ದುವು ಎಂಬುದಾಗಿ ತಿಳಿದುಬರುತ್ತದೆ.

- ಜನಪದ ಕಾವ್ಯಗಳು ಮತ್ತು ವಾಸ್ತವ ಬದುಕು :

ಜನಪದ ಕಾವ್ಯವೊಂದರ ಮೇಲಿನ ಒಡೆತನವು ಇಡೀ ಸಮಾಜಕ್ಕೆ ಸೇರುತ್ತದೆ. ಹಾಗಾಗಿ ಎಲ್ಲರೂ ಅದರ ಮೇಲೆ ಹಕ್ಕನ್ನು ಚಲಾಯಿಸುತ್ತಾ ಬಂದಿರುತ್ತಾರೆ. ಇದು ಕೆಲವರಿಗೆ ಕಾವ್ಯವಾದರೇ, ಮತ್ತೆ ಕೆಲವರಿಗೆ ಧರ್ಮ, ಕಲೆ, ಆದರ್ಶ, ಪುರಾಣವಾಗಿರುತ್ತದೆ. ಅಯೋಧ್ಯೆಯ ವಿವಾದದ ಸಂದರ್ಭದಲ್ಲಿ ಮಹಾಕಾವ್ಯವಾದ ರಾಮಾಯಣವು ಚರಿತ್ರೆಯಾಯಿತು. ಅದರಂತೆಯೇ ಕಳುವರಹಳ್ಳಿಯ ಜುಂಜಪ್ಪನ ಗುಡ್ಡೆಯ ಹತ್ತಿರ ಕುಂಚಿಟಿಗರು ತಂದಿದ್ದ ಜುಂಜಪ್ಪನ ಅಲಂಕೃತ ವಿಗ್ರಹ, ವಸ್ತ್ರ, ಅಂಬು, ಇತ್ಯಾದಿಗಳನ್ನು ಬೇವಿನಹಳ್ಳಿಯ ಗೊಲ್ಲರಹಟ್ಟಿಯವರು ಕಿತ್ತುಹೊತ್ತುಕೊಂಡು ಹೋದರು. ಜುಂಜಪ್ಪನು ಗೊಲ್ಲರವನು ಎಂಬುದು ಗೊಲ್ಲರ ವಾದವಾದರೇ, ಜುಂಜಪ್ಪನಿಗೆ ಆಶ್ರಯ ನೀಡಿದವರು ನಾವು ಎಂಬುದು ಕುಂಚಿಟಿಗರ ವಾದ. ವಾದಗಳಂತೆ ಪರಸ್ಪರ ನಮ್ಮಗಳಿಗೆ ಜುಂಜಪ್ಪನು ಸೇರಬೇಕೆಂದು ನಡೆದ ವ್ಯಾಜ್ಯವು ಸು.

೧೮೭೩ ರಲ್ಲಿ ಕೋರ್ಟ್ ಮೆಟ್ಟಿಲೇರಿ ಸುಮಾರು ೧೮೮೪ ರಲ್ಲಿ ಕೋರ್ಟ್ ತೀರ್ಪು ನೀಡಿತು. ಅದರಂತೆ ಇಂದಿಗೂ ಜುಂಜಪ್ಪನ ಗುಡ್ಡೆಯಲ್ಲಿ ಬೆಳಿಗ್ಗೆ ಕುಂಚಿಟಿಗರು, ಮಧ್ಯಾಹ್ನದ ನಂತರ ಗೊಲ್ಲರು ಪೂಜೆ ಮಾಡುತ್ತಿದ್ದಾರೆ.

- ಗೊಲ್ಲರು ಮತ್ತು ಲಿಂಗಾರಾಧನೆ :

ಗೊಲ್ಲರು ಕಟ್ಟುನಿಟ್ಟಿನ ಮಡಿವಂತಿಕೆಯನ್ನು ಅನುಸರಿಸುತ್ತಾರೆ. ಕೆಲವೊಮ್ಮೆ ಲಿಂಗಾಯತರಿಗೂ ತಮ್ಮ ಹಟ್ಟಿಗಳ ಪ್ರವೇಶಕ್ಕೆ ನಿರ್ಬಂಧವನ್ನು ಹೇರುತ್ತಾರೆ. ತಮ್ಮ ವಿವಾಹ ಇತರ ಶುಭಕಾರ್ಯಗಳಿಗೆ ಬ್ರಾಹ್ಮಣರಿಗೂ ಆಹ್ವಾನವಿರುವುದಿಲ್ಲ. ಇವರ ಆರಾಧನಾ ದೇವತೆಗಳನ್ನು ಕೇತೇಲಿಂಗ, ಪಾತೇಲಿಂಗ, ಕಾಟುಮಲಿಂಗ, ಚಿತ್ರಲಿಂಗ ಎಂದು ಕರೆಯುತ್ತಾರೆ. ಅಲ್ಲದೇ ತಾವು ಆರಾಧಿಸುವ ಸಾಂಸ್ಕೃತಿಕ ವೀರರಿಗೆ ಲಿಂಗಧಾರಣೆ ಮಾಡುತ್ತಾರೆ. ಈ ನೆಲೆಯಲ್ಲಿ ಜುಂಜಪ್ಪನು ವೀರಭದ್ರನ ಅವತಾರವೆಂದು ನಂಬಲಾಗಿದೆ. ಇವರು ಶೈವಾರಾಧನೆಯ ಪ್ರಭಾವಕ್ಕೊಳಗಾಗಿದ್ದಾರೆ ಎಂಬ ಅಂಶವನ್ನು ಕಂಡುಕೊಳ್ಳಲಾಗಿದೆ.

- ಸಾಂಸ್ಕೃತಿಕ ವೀರರ ಚಾರಿತ್ರಿಕ ನೆಲೆ :

ತುಮಕೂರು ಪರಿಸರದ ಸಾಂಸ್ಕೃತಿಕ ನಾಯಕರೆಲ್ಲರನ್ನೂ ಚಾರಿತ್ರಿಕ ವ್ಯಕ್ತಿಗಳೆಂದು ಸಾಬೀತು ಪಡಿಸಲು ಸಾಧ್ಯವಾಗುವುದಿಲ್ಲ. ಆದರೆ ಲಭ್ಯವಿರುವ ಆಕರಗಳ ಮೂಲಕ ಕುಂಗರಾಯ, ಜುಂಜಪ್ಪ, ದಿಬ್ಬದವೀರಬೊಮ್ಮಣ್ಣ, ಸ್ವಾರಮ್ಮ, ಹುಳಿಯಾರು ಕೆಂಚಮ್ಮ, ಈರುಗ್ಯಾತರಾಯ, ಈರುನಾಗಮ್ಮರನ್ನು ಚಾರಿತ್ರಿಕ ನೆಲೆಯಲ್ಲಿ ಗುರುತಿಸಲಾಗಿದೆ.

- ಸಾಂಸ್ಕೃತಿಕ ವೀರರ ಕಾಲಮಾನ :

ಈ ಅಧ್ಯಯನದಲ್ಲಿ ಹೊಯ್ಸಳರ ಕಾಲದಲ್ಲಿ ಈರುಗ್ಯಾತರಾಯನು, ೧೪ ನೇ ಶತಮಾನದಲ್ಲಿ ಹುಳಿಯಾರು ಕೆಂಚಮ್ಮ, ಕರುಂಗರಾಜನು ಕ್ರಿ. ಶ. ೧೬೨೦ ರ ನಂತರದ ಕಾಲದಲ್ಲಿ, ಜುಂಜಪ್ಪನು ೧೬ ನೇ ಶತಮಾನದಲ್ಲಿ, ಹಾಗೂ ಸ್ವಾರಮ್ಮ ೧೮ ನೇ ಶತಮಾನದಲ್ಲಿದ್ದ ಚಾರಿತ್ರಿಕ ವ್ಯಕ್ತಿಗಳಾಗಿದ್ದರೆಂಬುದನ್ನು ಕಂಡುಕೊಳ್ಳಲಾಗಿದೆ.

- ಜಾತಿಗಳೊಳಗಿನ ಸಂಘರ್ಷ :

ತುಮಕೂರು ಪರಿಸರದಲ್ಲಿರುವ ಜನಪದ ಕಾವ್ಯಗಳಲ್ಲಿ ಜಾತಿ ಜಾತಿಗಳ, ಮತ್ತು ನಿರ್ದಿಷ್ಟ ಜಾತಿಯೊಳಗಿನ ಉಪಜಾತಿಗಳ ನಡುವೆ ಸಂಘರ್ಷಗಳಾಗಿರುವುದನ್ನು ಗುರುತಿಸಲಾಗಿದೆ. ಇಂದಿಗೂ ಈ ಸಂಘರ್ಷದ ನೆಲೆಯಲ್ಲಿ ಮೌಖಿಕ ಸಂಪ್ರದಾಯಗಳು ಅಸ್ತಿತ್ವದಲ್ಲಿವೆ.

ಬಂದಕುಂಟೆ ಈರುಚಿಕ್ಕಣ್ಣನ ಕಾವ್ಯದಲ್ಲಿ ಉಲ್ಲೇಖಿಸುವ ಗೊಲ್ಲರು ಮತ್ತು ಬೇಡರ ನಡುವಿನ ಸಂಘರ್ಷ. ಮರೂರು ವೀರನಾಗಪ್ಪನ ಕಾವ್ಯದಲ್ಲಿ ಬರುವ ಕುಂಚಿಟಿಗ ಜಾತಿಯೊಳಗಿನ ಜಲಧೇಸವರು ಮತ್ತು ಜಾನಕಲ್ಲು ಕುಲದ ನಡುವೆ ವಿವಾಹದ ಕಾರಣ ನಡೆದ

ಸಂಘರ್ಷದ ಪರಿಣಾಮವಾಗಿ ಆ ಕುಲಗಳ ನಡುವೆ ವಿವಾಹವು ನಿಷಿದ್ಧವಾಗಿದೆ. ಇಂದಿಗೂ ಈ ರೀತಿಯ ನಿಷಿದ್ಧವು ಜೀವಂತವಾಗಿದೆ. ಜಲಧಿಬೊಪ್ಪರಾಯನ ಕಾವ್ಯದಲ್ಲಿಯೂ ಕುರುಬರು ಮತ್ತು ಕುಂಚಿಟಿಗರ ನಡುವೆ ಏರ್ಪಡುವ ಬಾಂಧವ್ಯವನ್ನು ಗುರುತಿಸಲಾಗಿದೆ. ಜುಂಜಪ್ಪನಕಾವ್ಯದಲ್ಲಿ ಗೊಲ್ಲರು ಮತ್ತು ಕುಂಚಿಟಿಗರ ಅಳುವನೋರ ನಡುವೆ ಸಂಬಂಧ ಮತ್ತು ಸಂಘರ್ಷಗಳಿವೆ. ಹಾಗೆಯೇ ಗೊಲ್ಲರ ಉಪಪಂಗಡಗಳಾದ ಮಾರನೋರು ಮತ್ತು ಕಂಬೇರಗೊಲ್ಲರ ನಡುವಿನ ವೈರತ್ವದ ಕಾರಣ ಜುಂಜಪ್ಪನು ಕಂಬೇರ ಗೊಲ್ಲರನ್ನು ನಿರ್ನಾಮ ಮಾಡುವ ಸನ್ನಿವೇಶಗಳಿವೆ. ಈರುಗ್ಯಾತರಾಯನ ಕಾವ್ಯದಲ್ಲಿ ಕುಂಚಿಟಿಗರು ಮತ್ತು ವಡ್ಡರ ನಡುವಿನ ಸಂಬಂಧಗಳ ವಿವರಗಳಿವೆ. ಕೆಲವು ಜಾತಿಗಳ ನಡುವೆ ವೃತ್ತಿ ಸಂಘರ್ಷಗಳಿದ್ದಾಗ್ಯೂ ಕೆಲವೊಮ್ಮೆ ಕೆಲವು ಜನಾಂಗಗಳ ನಡುವೆ ಸೌಹಾರ್ದಯುತವಾದ ಬದುಕು ಅಸ್ತಿತ್ವದಲ್ಲಿದ್ದ ಬಗ್ಗೆಯೂ ತಿಳಿದು ಬರುತ್ತದೆ.

- ರಾಜಕೀಯದಲ್ಲಿ ಸಮುದಾಯಗಳು :

ತುಮಕೂರು ಪ್ರದೇಶವು ರಾಜಮನೆತನಗಳ ನೇರ ಆಳ್ವಿಕೆಗೊಳಪಟ್ಟಿರಲಿಲ್ಲ. ಆದರೆ ಗಂಗರು, ರಾಷ್ಟ್ರಕೂಟರು, ಹೊಯ್ಸಳರು, ವಿಜಯನಗರದ ಅರಸರು, ಮೈಸೂರು ಅರಸರ ಅಧೀನಕ್ಕೆ ಒಳಪಟ್ಟಿದ್ದ ಪಾಳೆಯಗಾರರು, ಸಾಮಂತರು ಆಳ್ವಿಕೆಯನ್ನು ನಡೆಸಿದ್ದರು. ಹೊಳವನಹಳ್ಳಿಯ ಹೊಳವೇಗೌಡ, ಕುರಂಗರಾಜರಂತಹ ತಲವರ್ಗವೂ ಸ್ಥಳೀಯ ಆಡಳಿತದಲ್ಲಿ ಪ್ರಮುಖ ಪಾತ್ರವನ್ನು ವಹಿಸಿತ್ತು.

ಸಿರಾ, ನಿಡಗಲ್ಲು, ಪಾವಗಡ, ಹಾಗಲವಾಡಿಯಲ್ಲಿ ನಾಯಕರು, ಕೊರಟಗೆರೆ, ಮಧುಗಿರಿಯಲ್ಲಿ ಲಿಂಗಾಯಿತ ವಕ್ಕಲಿಗರು, ಮಿಡಿಗೇಶಿಯಲ್ಲಿ ರೆಡ್ಡಿಗಳು ಆಳ್ವಿಕೆಯನ್ನು ಮಾಡಿದ್ದಾರೆ. ಗೊಲ್ಲರ ಜುಂಜಪ್ಪನೂ ಸಿರಾ ಮತ್ತು ಚೇಳೂರುಗಳನ್ನು ಆಳಿದನೆಂದು ತಿಳಿದು ಬರುತ್ತದೆ.

ವೈಧಿಕ ಸಮಾಜದಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ಶ್ರೇಣೀಕೃತ ವರ್ಗಗಳಿದ್ದು, ಇವುಗಳು ಕಸುಬು ಆಧಾರಿತವಾಗಿದ್ದವು. ಇಲ್ಲಿ ಕ್ಷತ್ರಿಯರು ರಾಜ್ಯಾಡಳಿತದಲ್ಲಿ ಮುಂಚೂಣಿಯಲ್ಲಿದ್ದರು. ಆದರೆ ಶೂದ್ರನಾದ ಚಂದ್ರಗುಪ್ತನು ಮೌರ್ಯರಾಜನಾಗಿದ್ದಂತೆ, ವಿಪ್ರ ಮಯೂರಶರ್ಮನು ಕದಂಬ ರಾಜನಾಗಿದ್ದಂತೆ ತುಮಕೂರು ಪ್ರದೇಶದಲ್ಲಿ ಆಳಿದವರು ಕ್ಷತ್ರಿಯರಾಗಿರಲಿಲ್ಲ. ಕ್ಷತ್ರಿಯ ವರ್ಗವು ವೈಧಿಕಶಾಹಿಯಿಂದ ಸೃಷ್ಟಿಸಲಾದ ಕೂಲಿ ವರ್ಗವಾಗಿತ್ತು ಎಂಬ ಅಭಿಪ್ರಾಯದ ನೆಲೆಯಲ್ಲಿ ವಿವೇಚಿಸಬಹುದಾಗಿದೆ.

- ಶ್ರೇಣೀಕೃತ ಸಾಮಾಜಿಕ ವ್ಯವಸ್ಥೆಯಲ್ಲಿ ರಾಜಕೀಯ :

ಹೊಳವೇಗೌಡ, ಕುರಂಗರಾಜನಂತಹ ತಳವರ್ಗದ ಆಡಳಿತಗಾರರು ಇಲ್ಲಿ ಆಳ್ವಿಕೆಯನ್ನು ನಡೆಸಿದ್ದರೂ, ತಲವರ್ಗದ ರಾಜನೊಬ್ಬನ ಅಸ್ತಿತ್ವಕ್ಕೆ ಮೇಲ್ವರ್ಗದ ಯಾಜಮಾನ್ಯದ ಕೃಪೆಯು ಅಗತ್ಯವಾಗಿತ್ತು. ಎಂಬ ಅಂಶವನ್ನು ಮನಗಾಣಬಹುದಾಗಿದೆ.

- ಮೌಖಿಕ ಆಕರಗಳ ನೆಲೆಯಲ್ಲಿ ಸಾಂಸ್ಕೃತಿಕ ಚರಿತ್ರೆ :

ತುಮಕೂರು ಜಿಲ್ಲೆಯ ವ್ಯಾಪ್ತಿಯಲ್ಲಿ ಈ ವರೆಗೆ ನಡೆದಿರುವ ಅಧ್ಯಯನಗಳು ರಾಜಕೀಯ, ಆರ್ಥಿಕ, ಸಾಮಾಜಿಕ, ಧಾರ್ಮಿಕ, ಸಾಹಿತ್ಯ, ವಾಸ್ತುಶಿಲ್ಪಗಳ ಹಾಗೂ ಮಾಹಿತಿ ಸಂಗ್ರಹಣೆ, ಅಂಕಿ ಅಂಶಗಳ ಕ್ರೂಢೀಕರಣವನ್ನು ಮಾಡುತ್ತಾ, ಐತಿಹಾಸಿಕ ಅಧ್ಯಯನಕ್ಕೆ ಮಹತ್ತ್ವವನ್ನು ನೀಡಲಾಗಿದೆ. ಇದಕ್ಕಾಗಿ ಮೌಖಿಕ ಆಕರಗಳನ್ನು ಪ್ರಧಾನವಾಗಿ ಬಳಸಿಕೊಂಡಿಲ್ಲ. ಅಲ್ಲದೇ ಮೌಖಿಕ ಆಕರಗಳಿಗೆ ತೃಪ್ತಿಕರವಾದ ಮನ್ನಣೆಯನ್ನು ನೀಡಿಲ್ಲ. ಮೌಖಿಕ ಆಕರಗಳನ್ನೇ ಪ್ರಧಾನವಾಗಿರಿಸಿಕೊಂಡು ಜನಪದರ ಬದುಕಿನಲ್ಲಿ ವಿಸ್ಮರಣೆಗೆ ಸರಿದಿರುವ ಆಚರಣೆಗಳು, ಸಂಪ್ರದಾಯಗಳು, ಅಧ್ಯಯನದಲ್ಲಿ ಮಾಡಲಾಗಿದೆ.

- ಮೌಖಿಕ ಆಕರಗಳು ಮತ್ತು ಲಿಖಿತ ಆಕರಗಳ ನಡುವೆ ಭಿನ್ನವಾದ ಮತ್ತು ಸಾಮ್ಯತೆಯ ಅಂಶಗಳು :

ಲಭ್ಯವಿರುವ ಬಹುತೇಕ ಮೌಖಿಕ ಆಕರಗಳು ಈಗಾಗಲೇ ರಚಿತವಾಗಿರುವ ಚರಿತ್ರೆಗೆ ಭಿನ್ನವಾದ ಮತ್ತು ಕೆಲವೊಮ್ಮೆ ಪೂರಕವಾದ ವಿಚಾರಗಳನ್ನು ಒಳಗೊಂಡಿವೆ. ದೇವರಾಯನದುರ್ಗದ ಐತಿಹ್ಯವು ಶಾಸನಗಳ ಉಲ್ಲೇಖಕ್ಕೆ ಪೂರಕವಾದ ಅಂಶಗಳನ್ನು ಹೊಂದಿದೆ. ಆದರೆ ಸಿರಾದ ಹುಟ್ಟಿನ ಬಗ್ಗೆ ಇರುವ ಶಾಸನಾತ್ಮಕ ವಿವರಗಳಿಗೆ ಈ ಕುರಿತ ಐತಿಹ್ಯಗಳು ಭಿನ್ನವಾದ ವಿವರಗಳನ್ನು ಒಳಗೊಂಡಿವೆ.

ಅಂದರೆ ಐತಿಹ್ಯ, ಲಾವಣಿ, ಸ್ಥಳಪುರಾಣ, ಮಹಾಕಾವ್ಯ ಇತ್ಯಾದಿ ಮೌಖಿಕ ಆಕರಗಳು ಚರಿತ್ರೆಯನ್ನು ಕಟ್ಟುವಲ್ಲಿ ಮತ್ತು ಮರೆಯಾದ ಸಮಕಾಲೀನ ಬದುಕಿನ ನಾನಾ ಮುಖಗಳನ್ನು ಅನಾವರಣಗೊಳಿಸುತ್ತವೆ. ಇವು ಹೊಂದಿರುವ ಮೂಲ ಕಥೆಯು ಪ್ರಸ್ತುತ ಸ್ವರೂಪದಲ್ಲಿರುವಂತೆ ನಡೆದಿರುವುದಿಲ್ಲ. ಕಾವ್ಯದಲ್ಲಿನ ವಿವಿಧ ಪ್ರಸಂಗಗಳು ಕಾಲದಿಂದ ಕಾಲಕ್ಕೆ ಕಾವ್ಯದ ಮುಖ್ಯ ವಾಹಿನಿಯಲ್ಲಿ ಸೇರಿಕೊಂಡಿರುತ್ತವೆ. ಇಲ್ಲಿ ಕಥೆಯು ಚರಿತ್ರೆಯಾಗಿರುತ್ತದೆ. ಆದರೇ ವರ್ಣನೆಯು ಕಾವ್ಯದ ಗುಣವಾಗಿರುತ್ತದೆ. ಆದರೂ ಕಥೆಯ ರಚನಾಕಾರರು ಜನರೇ ಆಗಿರುತ್ತಾರೆ. ಕಥೆಯನ್ನೊಳಗೊಂಡ ವರ್ಣನೆ ಸಹಿತವಾಗಿ ರಚಿಸಲಾದ ಕಾವ್ಯದ ಸೃಷ್ಠಿಕಾರರೇ ವಾಲ್ಮೀಕಿ ಮತ್ತು ವ್ಯಾಸರಂತಹ ಕಾವ್ಯಕಾರರು. ಇಂತಹ ಕಾವ್ಯಗಳಲ್ಲಿನ ವರ್ಣನೆಗಳು, ಅತಿಮಾನುಷತೆ,

ಅಸಮಂಜಸ ನಂಬಿಕೆಗಳನ್ನು ಸೂಕ್ಷ್ಮವಾಗಿ ಗ್ರಹಿಸಲಾಗಿದೆ. ಅಲ್ಲದೇ ಮೂಲ ಕಥಾ ರೂಪದ ಚರಿತ್ರೆಯನ್ನು ಕಟ್ಟುವ ಪ್ರಯತ್ನವನ್ನು ಮಾಡಲಾಗಿದೆ.

- ಮೌಖಿಕ ಆಕರಗಳ ಹುಟ್ಟು, ಅನಿವಾರ್ಯತೆ :

ಮಧ್ಯಕಾಲೀನ ಕರ್ನಾಟಕದ ಸಂದರ್ಭದಲ್ಲಿ ಕೇಂದ್ರೀಕೃತ ರಾಜ್ಯ ವ್ಯವಸ್ಥೆಯನ್ನು ರೂಡಿಸಿಕೊಂಡಿದ್ದ ಮಹಾಸಾಮ್ರಾಜ್ಯಗಳ ಅಸ್ತಿತ್ವದಿಂದಾಗಿ ಸಣ್ಣಪುಟ್ಟ ಸಂಸ್ಥಾನಗಳು ತಮ್ಮ ಅಸ್ತಿತ್ವವನ್ನು, ಅನನ್ಯತೆಯನ್ನು ಕಳೆದುಕೊಂಡು ಬುಡಕಟ್ಟು ಸಮುದಾಯಗಳ ಬದುಕಿನೊಳಗೆ ಪ್ರವೇಶ ಮಾಡಿದವು. ಹಂತ ಹಂತವಾಗಿ ಅವುಗಳು ಮುಖ್ಯವಾಹಿನಿಯಲ್ಲಿ ಗುರುತಿಸಿಕೊಳ್ಳುವಂತೆ ಮಾಡಿದವು. ಈ ಕಾಲದ ಚರಿತ್ರೆಯು ಸೃಷ್ಟಿಸಿಕೊಂಡ ದಾಖಲೆಗಳೂ ಕೂಡ ಭಿನ್ನವಾಗಿದ್ದು, ಸ್ವಾಯತ್ತವಾಗಿ ಉಳಿಯ ಬಯಸಿದ ಸಣ್ಣ ಪುಟ್ಟ ಸಂಸ್ಥಾನಗಳ ನಡುವಣ ಪರಸ್ಪರ ಹೊಂದಾಣಿಕ ಮತ್ತು ಸಂಘರ್ಷಗಳು ಕಾರಣವಾದುವು.

- ಸಮುದಾಯಗಳಲ್ಲಿ ಮೌಖಿಕ ಸಂಪ್ರದಾಯಗಳು :

ಸ್ಥಳೀಯ ಸಮುದಾಯವೊಂದರ ಬದುಕನ್ನು ಅರಿಯಲು ಮೌಖಿಕ ಆಕರಗಳು ಮಾತ್ರ ವಿವರಗಳನ್ನು ಒದಗಿಸುವಲ್ಲಿ ಶಕ್ತವಾಗಿವೆ. ಇಲ್ಲಿ ಲಿಖಿತ ಆಕರಗಳು ಕೆಲವೊಮ್ಮೆ ತಮ್ಮ ಅಸಹಾಯಕತೆಯನ್ನು ತೋರುತ್ತವೆ. ಜನಪದ ಕಾವ್ಯಗಳು ಮತ್ತು ಮೌಖಿಕ ಸಂಪ್ರದಾಯಗಳ ನೆಲೆಯಲ್ಲಿ ಇಂದಿಗೂ ಈ ಪರಿಸರದಲ್ಲಿ ಕಟ್ಟುನಿಟ್ಟಿನ ನಿರ್ಬಂಧ, ನಿಷಿದ್ಧಗಳಿರುವುದು ಕಂಡುಬರುತ್ತದೆ. ಈ ಸನ್ನಿವೇಶದಲ್ಲಿ ಸಾಮಾನ್ಯ ಜನತೆಯ ಬದುಕು, ಅನುಭವಗಳು, ಭಾವನೆಗಳು ಪ್ರಮುಖವಾಗುತ್ತವೆ.

ಗೊಲ್ಲರ ಜುಂಜಪ್ಪನ ನೆಲೆಯಾದ ಕಳುವರಹಳ್ಳಿಯಲ್ಲಿ ಇಂದಿಗೂ ಗೊಲ್ಲರ ಒಂದೂ ಕುಟುಂಬವೂ ವಾಸವಾಗಿಲ್ಲ. ಕುಂಚಿಟಿಗರು ತಮ್ಮ ಉಪ ಬೆಡಗು ಜಾನಕಲ್ಲೋರ ಜೊತೆ ವಿವಾಹ ಸಂಬಂಧಗಳನ್ನು ಮಾಡಲು ಹಿಂಜರೆಯುವುದು. ಈರುನಾಗಮ್ಮನ ನೆಲೆಯಾದ ವಡ್ಡಗೆರೆಯಲ್ಲಿ ಇಂದಿಗೂ ವಡ್ಡರ, ಭಜಂತ್ರಿಗಳ, ಮುಸ್ಲಿಂರ ಕುಟುಂಬಗಳಿಲ್ಲ. ಈರುನಾಗಮ್ಮನ ಪತಿಯಾದ ನಾಗಣ್ಣನನ್ನು ಕೊಲೆ ಮಾಡಿದ್ದರಿಂದಾಗಿ ತುಂಬಾಡಿಯ ನಿವಾಸಿಗಳೊಂದಿಗೆ ವಡ್ಡಗೆರೆಯವರು ವಿವಾಹ, ವ್ಯಾಪಾರಗಳಂತಹ ಯಾವುದೇ ರೀತಿಯ ಸಂಬಂಧಗಳನ್ನು ಏರ್ಪಡಿಸಿಕೊಳ್ಳುವುದಿಲ್ಲ. ತುಂಬಾಡಿಯವರ ಮನೆಯಲ್ಲಿ ನೀರು, ಊಟವನ್ನು ಮಾಡುವುದಿಲ್ಲ. ಇಂತಹ ಮೌಖಿಕ ಸಂಪ್ರದಾಯಗಳಿಗೆ ಕಾರಣವಾದ ಅಂಶಗಳಿಗೆ ಲಿಖಿತ ಆಕರಗಳು ಉತ್ತರವನ್ನು ನೀಡುವುದಿಲ್ಲ. ಆದರೆ ಈ ಮೌಖಿಕ ಸಂಪ್ರದಾಯಗಳಿಗೆ ಮೌಖಿಕ ಆಕರಗಳು ಪೂರಕವಾಗಿ ಉತ್ತರಿಸುತ್ತವೆ.

- ಮೌಖಿಕ ಸಂಪ್ರದಾಯಗಳ ವೈಶಿಷ್ಟ್ಯತೆ :

ಸಾಂಸ್ಕೃತಿಕ ಸಿರಿವಂತಿಕೆ ಆಧುನಿಕ ನಾಗರಿಕತೆಯ ಸ್ಪರ್ಧಾತ್ಮಕ ಸನ್ನಿವೇಶದಲ್ಲಿಯೂ, ಉದಾರೀಕರಣ, ಖಾಸಗೀಕರಣ, ಜಾಗತೀಕರಣದ ಪ್ರಭಾವಕ್ಕೆ ಒಳಗಾದ ಯಾಂತ್ರೀಕೃತ ಜೀವನ ಪದ್ದತಿಯಿರುವ ಈ ಕಾಲದಲ್ಲಿ ದೇಸೀಯ ಮೌಖಿಕ ಸಂಪ್ರದಾಯವು ಜೀವಂತವಾಗಿದೆ. ನಗರೀಕರಣದ ಓಟದ ಈ ಸಂದರ್ಭದಲ್ಲಿಯೂ ಗ್ರಾಮೀಣ ಸಂಸ್ಕೃತಿಯು ಹೊಳಪನ್ನು ಹೊಂದಿದೆ. ಹಳ್ಳಿಗಳ ದೇಶವಾದ ಭಾರತದಲ್ಲಿ ದೇಸೀಯತೆಯ ಸೊಗಡು ಕಾಣಿಸಿಕೊಳ್ಳುತ್ತಿರುವುದು ಈ ಗ್ರಾಮೀಣ ಬದುಕಿನಲ್ಲಿಯೇ. ಕೊಳ್ಳುಬಾಕ ಮಾರುಕಟ್ಟೆ ಸಂಸ್ಕೃತಿಯ ಎಷ್ಟೇ ಒತ್ತಡವಿದ್ದರೂ ಮೌಖಿಕ ಸಂಪ್ರದಾಯವು ತನ್ನ ವೈಶಿಷ್ಟ್ಯತೆ ಮತ್ತು ಸಾಂಸ್ಕೃತಿಕ ಸಿರಿವಂತಿಕೆಯನ್ನು ಹೊಂದಿವೆ.

- ಗ್ರಾಮೀಣ ಸಂಪ್ರದಾಯಗಳು :

ಬಹು ಹಿಂದಿನಿಂದಲೇ ರೂಪಿತವಾಗಿರುವ ಗ್ರಾಮೀಣ ಸಂಪ್ರದಾಯ, ಬದುಕಿನ ರೀತಿ-ನೀತಿಗಳು, ನಡೆ-ನುಡಿಗಳು, ಉಡುಗೆ-ತೊಡುಗೆಗಳು ದಿನದಿಂದ ದಿನಕ್ಕೆ ಸ್ಥಿತ್ಯಂತರಕ್ಕೆ ಒಳಗಾಗುತ್ತಾ ಪಟ್ಟಣದ ಜೀವನ ಶೈಲಿಯ ಪ್ರಭಾವಕ್ಕೆ ಒಳಗಾಗುತ್ತಿರುವುದು ಸ್ಪಷ್ಟವಾಗಿ ಗೋಚರಿಸುತ್ತದೆ. ಇಂತಹ ಸನ್ನಿವೇಶದಲ್ಲಿಯೂ ಮೌಖಿಕ ಸಂಪ್ರದಾಯಗಳು ಮಾರ್ಪಾಡುಗಳೊಂದಿಗೆ ತಮ್ಮ ಮೂಲ ನಂಬಿಕೆ, ಆಶಯ, ನೆಲೆಯನ್ನು ಬಿಟ್ಟು ಕೊಡದೇ ಇರುವುದು ಅವುಗಳ ಐತಿಹಾಸಿಕ ಭದ್ರಬುನಾದಿಯಿಂದಲೇ ಎಂಬುದನ್ನು ಮನಗಾಣ ಬಹುದಾಗಿದೆ.

- ಒಂದೇ ಬಗೆಯ ನಂಬಿಕೆಗಳು, ಸ್ಥಳಪುರಾಣಗಳು, ಐತಿಹ್ಯಗಳು :

ಶೆಟ್ಟಿಕೆರೆ, ದಾಳವಟ್ಟ, ನಾಗಲಮಡಿಕೆ, ದೊಡ್ಡಪಾಲನಹಳ್ಳಿ ಈ ಸ್ಥಳನಾಮಗಳ ಹಿನ್ನೆಲೆಯಲ್ಲಿ ಒಲೆಯನ್ನು ಉರಿಸಲು ಇಟ್ಟಿದ್ದ ಮೂರು ಕಲ್ಲು ಗುಂಡುಗಳು ಶಿವಲಿಂಗ ಸ್ವರೂಪಿಯವುಗಳೆಂಬ ನಂಬಿಕೆಗಳು, ಆ ಮೂಲಕ ವ್ಯಾಪಾರಿಗಳು ಈ ಸ್ಥಳಗಳಲ್ಲಿ ಜನವಸತಿ ನೆಲೆಸಲು ಕಾರಣರಾದದ್ದು, ಇತ್ಯಾದಿ ಏಕರೂಪವಾದ ಅಂಶಗಳನ್ನು ಗುರುತಿಸಬಹುದಾಗಿದೆ. ಅಂತೆಯೇ ಸಿದ್ಧರಬೆಟ್ಟ ಮತ್ತು ಕಾಕಾದ್ರಿ ಪರ್ವತಗಳ ಕುರಿತು ಸಹ ಶ್ರೀರಾಮನು ಕಾಕಾಸುರನನ್ನು ಕೊಲ್ಲುವಂತಹ ಒಂದೇ ಸ್ವರೂಪದ ಅಂಶಗಳು ಈ ಪ್ರದೇಶದಾಂದ್ಯಂತ ಪ್ರಚಲಿತದಲ್ಲಿವೆ.

- ಜನಸಮುದಾಯದ ಜೀವನ, ಆಚರಣೆ, ನಂಬಿಕೆಗಳನ್ನು ಕುರಿತು ಈವರೆಗಿನ ಅಧ್ಯಯನಗಳು ನೀಡಲಾಗದ ಸ್ಪಷ್ಟತೆಯನ್ನು ಮೌಖಿಕ ಆಕರಗಳ ನೆಲೆಯಲ್ಲಿ ಈ ಸಂಶೋಧನೆಯು ನೀಡಬಲ್ಲದು. ಹಾಗಾಗಿ ಅಂಥಾ ಕೊರತೆಯನ್ನು ಈ ಸಂಶೋಧನೆಯು ತುಂಬ ಬಲ್ಲದು ಎಂಬ ವಿಶ್ವಾಸವಿದೆ.

## ೭.೨ ಅಧ್ಯಯನದ ಸಾಧ್ಯತೆಗಳು

ಜ್ಞಾನವು ಅನಂತವೂ ಅಪರಿಮಿತವಾದುದೂ ಆಗಿದೆ. ಅದರ ಎಲ್ಲೆಯನ್ನು ಗುರುತಿಸುವುದು ಅಸಾಧ್ಯವಾದುದಾಗಿದೆ. ಇದು ಎಲ್ಲವನ್ನು ಒಳಗೊಳ್ಳುತ್ತದೆ. ಜ್ಞಾನದ ಶಾಖೆಗಳೂ ವಿಭಿನ್ನವಾದುವು. ಈ ನೆಲೆಯಲ್ಲಿ ಚರಿತ್ರೆಯು ಜ್ಞಾನ ಭಂಡಾರವಾಗಿದೆ. ಚರಿತ್ರೆಯನ್ನು ಕುರಿತ ಭಿನ್ನ ನೆಲೆಯ ಅಧ್ಯಯನಗಳು ಅದರ ವ್ಯಾಪ್ತಿಯನ್ನು ವಿಸ್ತಾರಗೊಳಿಸಿವೆ. ಈ ಹಿನ್ನೆಲೆಯಲ್ಲಿ ತುಮಕೂರು ಜಿಲ್ಲೆಯ ಪ್ರದೇಶದಲ್ಲಿ ಅಸ್ತಿತ್ವದಲ್ಲಿರುವ ಮೌಖಿಕ ಸಂಪ್ರದಾಯಗಳನ್ನು ಕುರಿತು ಅಧ್ಯಯನ ಮಾಡುವ ಪ್ರಯತ್ನವನ್ನು ಮಾಡಲಾಗಿದೆ. ಆದರೂ ಎಲ್ಲ ಮೌಖಿಕ ಆಕರಗಳು ಮತ್ತು ಸಂಪ್ರದಾಯಗಳನ್ನು ಪರಿಪೂರ್ಣವಾಗಿ ಮತ್ತು ಸೂಕ್ಷ್ಮವಾಗಿ ವಿಶ್ಲೇಷಿಸಬೇಕಿದೆ.

- ಒಂದು ನಿರ್ದಿಷ್ಟ ಪ್ರದೇಶದ ಭೌಗೋಳಿಕ ವಿವರಗಳು, ಸಾಮಾಜಿಕ ಜೀವನ, ಜಾತಿ ಪದ್ಧತಿ, ಆಹಾರ ಪದ್ಧತಿ, ಕಲೆ, ಸಂಪ್ರದಾಯಗಳಷ್ಟೇ ಅಲ್ಲದೆ ಜೀವನಕ್ರಮಕ್ಕೆ ಸಂಬಂಧಿಸಿದ ಅಂಶಗಳು ಮೌಖಿಕ ಸಂಪ್ರದಾಯದ ಅಧ್ಯಯನದ ವ್ಯಾಪ್ತಿಯೊಳಗೆ ಬರುತ್ತವೆ. ಈ ಬಗೆಯ ಸಂಶೋಧನೆಗಳು ಬದುಕುವ ಕಲೆಯ ಸುಧಾರಣೆಗೆ ನೆರವಾಗುತ್ತವೆ. ಹಾಗಾಗಿ ಜೀವನ ಕ್ರಮದ ಒಳನೋಟಗಳನ್ನು ಸೂಕ್ಷ್ಮವಾಗಿ ಅಧ್ಯಯನ ಮಾಡಬಹುದಾಗಿದೆ.
- ತುಮಕೂರು ಜಿಲ್ಲೆಯಲ್ಲಿ ಮಠಗಳು ನಡೆಸುತ್ತಿರುವ ಜ್ಞಾನ ಮತ್ತು ಅನ್ನ ದಾಸೋಹವನ್ನು ಪ್ರಸ್ತಾಪಿಸುವುದರ ಜೊತೆಗೆ ಆಧುನಿಕ ಜನಜೀವನಕ್ಕೆ ಅಗತ್ಯವಾದ ಕ್ರಮಗಳನ್ನು ಮಠಗಳು ಕೈಗೊಂಡಿರುವುದರ ಕುರಿತು ಮೌಖಿಕ ಆಕರಗಳ ನೆಲೆಯಲ್ಲಿ ಅಧ್ಯಯನ ನಡೆಸಬಹುದಾಗಿದೆ.
- ಬೇಟೆ, ಪಶುಪಲನಾ ವೃತ್ತಿ ನೆಲೆಯ ಬುಡಕಟ್ಟುಗಳು ಶೈವೀಕರಣಗೊಂಡ ಸನ್ನಿವೇಶ, ಸಾಂಸ್ಕೃತಿಕ ಪಲ್ಲಟಗಳನ್ನು ಸಮರ್ಪಕವಾಗಿ ಕಂಡುಕೊಳ್ಳಬೇಕಾಗಿದೆ.
- ಉಂಡೇತ್ರಾಯ, ಜಲಧಿ ಬೊಪ್ಪರಾಯ, ಶೂಲದ ಈರಣ್ಣ, ಬಂದಕುಂಟೆ ಈರುಚಿಕ್ಕಣ್ಣ, ಬರಗೂರು ಈರಮ್ಮ, ಬಳ್ಳಕಟ್ಟೆ ಈರಣ್ಣ, ಹೊನ್ನೆಮರದ ಈರಣ್ಣ, ಮದಲಿಂಗ, ಭೀಮಾಸತಿ ಇತ್ಯಾದಿ ಸಾಂಸ್ಕೃತಿಕ ವೀರರ ಕಥನಗಳಲ್ಲಿನ ಚಾರಿತ್ರಿಕ ನೆಲೆಯನ್ನು ಕಂಡು ಕೊಳ್ಳಬೇಕಾಗಿದೆ.
- ಪಾರಂಪರಿಕ ವೈದ್ಯ ಪದ್ದತಿಯನ್ನು ಗೌರವಿಸುವುದರಿಂದ ಕಣ್ಮರೆಯಾಗಲಿರುವ ಆ ಜ್ಞಾನವನ್ನು ಮುಂದುವರೆಸುವ ಸಲುವಾಗಿ ಅಗತ್ಯ ಅಧ್ಯಯನ ಆಗಬೇಕಿದೆ.
- ಮೌಖಿಕ ಆಕರಗಳು ಈ ಪ್ರದೇಶದಲ್ಲಿ ಸೃಷ್ಟಿಸಿಕೊಳ್ಳಲು ಕಾರಣವಾದ ಸನ್ನಿವೇಶಗಳನ್ನು ತುಮಕೂರಿನ ನೆರೆಯ ಅಥವಾ ಇತರೆ ತೌಲನಾತ್ಮಕ ಅಧ್ಯಯನ ಮಾಡಬಹುದಾಗಿದೆ.

-೦೦೦-

## ಅನುಬಂಧ

ಅ. ಗಾದೆಗಳು

ಆ. ಛಾಯಾ ಚಿತ್ರಗಳು

- ಇಸ್ಲಾಂ ಸ್ಮಾರಕಗಳು
- ಕ್ರೈಸ್ತ ಸ್ಮಾರಕಗಳು
- ಕೋಟೆಗಳು
- ಜೈನ ಸ್ಮಾರಕಗಳು
- ವಕ್ತೃಗಳು
- ವೀರರ ಸ್ಮಾರಕಗಳು

ಇ. ಸಾಂಸ್ಕೃತಿಕ ಕೇಂದ್ರಗಳು

ಈ. ನಕಾಶೆಗಳು

ಉ. ಪರಾಮರ್ಶನ ಗ್ರಂಥಗಳು

ಊ. ವಕ್ತೃಗಳ ವಿವರ

## ಅ. ಗಾದೆಗಳು

ವೇದ ಸುಳ್ಳಾದರೂ ಗಾದೆ ಸುಳ್ಳಾಗದು ಎಂಬ ನಾಣ್ಣುಡಿಯಿದೆ. ಗಾದೆಗಳು ಜನಮನದ ಮೂಲ ತಿರುಳನ್ನು ಹೊಂದಿವೆ. ಇವು ಸಮುದಾಯದ ಬದುಕಿನ ಕನ್ನಡಿಯಂತೆ ಇರುವುದರಿಂದ, ಚರಿತ್ರಕಾರನಿಗೆ ಆಕರಗಳಾಗಿವೆ. ಗಾದೆಗಳು ಸಮುದಾಯದ ವಾಸ್ತವಿಕ ಬದುಕನ್ನು ನಿರ್ದಾಕ್ಷಿಣ್ಯವಾಗಿ ಅಭಿವ್ಯಕ್ತಿಸುವ ಮೌಖಿಕ ಆಕರಗಳಾಗಿವೆ. ಇವು ಆಡಳಿತಾತ್ಮಕ, ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ, ವಿವರಗಳನ್ನು ಅಭಿವ್ಯಕ್ತಿಸುತ್ತವೆ. ಯಾವುದೇ ನಿರ್ಬಂಧಗಳಿಗೆ ಒಳಗಾಗದೇ ಸ್ವಚ್ಛಂದವಾಗಿ ನಿತ್ಯದ ಜನನುಡಿಯಲ್ಲಿ ಬಳಸಲ್ಪಡುತ್ತಿರುತ್ತವೆ. ಹೀಗಾಗಿ ತುಮಕೂರು ಪರಿಸರದಲ್ಲಿ ಪ್ರಚಲಿತವಿರುವ ಗಾದೆಗಳನ್ನು ಸಂಗ್ರಹಿಸಲಾಗಿದೆ.

- ಅಂಕೆ ಇಲ್ಲದೆ ಲಂಕೆ ಸುಟ್ಟಿತು
- ಅಂಕೆ ಯಿಲ್ಲದ ಚತುರ ಲಗಾಮು ಇಲ್ಲದ ಕುದುರೆ
- ಅಂಗೈ ಹುಣ್ಣಿಗೆ ಕನ್ನಡಿ ಬೇಕೆ
- ಅಂಗೈಯಲ್ಲಿ ಬೆಣ್ಣೆ ಇಟ್ಕಂಡು ತುಪ್ಪಕ್ಕಾಗಿ ಊರೆಲ್ಲ ಅಲೆದಂತೆ
- ಅಂಬಲಿ ಕುಡಿಯುವವನಿಗೆ ಮೀಸೆ ಹಿಡಿಯುವವನೊಬ್ಬ
- ಅಕ್ಕನ ಬಂಗಾರವಾದರೂ ಅಕ್ಕಸಾಲಿಗ ಬಿಡ
- ಅಕ್ಕರೆಯ ಅಕ್ಕ ಬಂದಾಗ ಸಕ್ಕರೆ ಕಹಿಯಾಯ್ತು
- ಅಕ್ಕಿಯ ಮೇಲೆ ಪ್ರಾಣ ನೆಂಟರ ಮೇಲೆ ಜೀವ
- ಅಗಸ ಹೊಸದರಲ್ಲಿ ಎತ್ತಿ ಎತ್ತಿ ಒಗೆದನಂತೆ
- ಅಜ್ಜ ಮದುವೆ ಅಂದ್ರೆ ನನಗೋ ಅಂದ
- ಅಜ್ಜಿಗೆ ಅರವಿ ಚಿಂತೆ ಮಗಳಿಗೆ ಗಂಡನ ಚಿಂತೆ
- ಅಜ್ಜಿ ಇಲ್ಲದ ಮನೆ ಮಜ್ಜಿಗೆ ಇಲ್ಲದ ಊಟ
- ಅಜ್ಜಿ ನೇಯ್ದಿದ್ದೆಲ್ಲಾ ಮೊಮ್ಮಗನ ಉಡುದಾರಕ್ಕೆ
- ಅಟ್ಟಕ್ಕೆ ಹಾರದವನು ಬೆಟ್ಟಕ್ಕೆ ಹತ್ತಿಯಾನೆ?
- ಅಡ್ಡ ಗೋಡೆಯ ಮೇಲೆ ದೀಪವಿಟ್ಟಂತೆ
- ಅಡಿಕೆಗೆ ಹೋದ ಮಾನ ಕೊಟ್ಟರೂ ಬಾರದು
- ಅತ್ತೆಗೊಂದು ಕಾಲ ಸೊಸೆಗೊಂದು ಕಾಲ
- ಅತ್ತ ದರಿ ಇತ್ತ ಪುಲಿ

- ಅತಿ ಆಸೆ ಗತಿ ಕೇಡು
- ಅತ್ತೂ ಕರೆದು ಔತಣ ಮಾಡಿಸಿಕೊಂಡಂತೆ
- ಅತ್ತೆ ಮೇಲಿನ ಕೋಪ ಕೊತ್ತಿ ಮೇಲೆ
- ಅನ್ನದಾನಕ್ಕಿಂತ ಇನ್ನು ದಾನವಿಲ್ಲ
- ಅನ್ನದೇವರ ಮುಂದೆ ಇನ್ನು ದೇವರು ಉಂಟೆ
- ಅನ್ನ ಹಾಕಿದ ಮನೆ ಗೊಬ್ಬರ ಹಾಕಿದ ಹೊಲ ಕೆಡಲ್ಲ
- ಅಪ್ಪ ಹಾಕಿದ ಆಲದ ಮರಕ್ಕೆ ನೇಣು ಹಾಕಿಕೊಂಡಂತೆ
- ಅಪಾಯ ಬಂದಾಗ ಉಪಾಯದಿಂದ ಗೆಲ್ಲು
- ಅಯ್ಯಾ ಎಂದರೆ ಸ್ವರ್ಗ ಎಲವೋ ಎಂದರೆ ನರಕ
- ಅರಿಯದೆ ಮಾಡಿದ ಪಾಪ ಅರಿತಾಗ ಪರಿಹಾರ
- ಅಲ್ಪನಿಗೆ ಐಶ್ವರ್ಯ ಬಂದರೆ ಅರ್ಧ ರಾತ್ರೀಲಿ ಕೊಡೆ ಹಿಡಿಸಿಕೊಂಡ
- ಅಹಂಕಾರಕ್ಕೆ ಉದಾಸೀನವೇ ಮದ್ದು
- ಅಳಿಯ ಮನೆ ತೊಳೆದ
- ಅಳಿಲು ಏರಿದರೆ ಅರಳೀ ಮರ ಅಲ್ಲಾಡೀತೇ?
- ಅಳಿವುದು ಕಾಯ ಉಳಿವುದು ಕೀರ್ತಿ
- ಆಕಳು ಕಪ್ಪಾದರೆ ಹಾಲು ಕಪ್ಪೇ?
- ಆಕಾಶ ನೋಡಲು ನೂಕುನುಗ್ಗಲೇ?
- ಆಗೋ ಪೂಜೆ ಆಗುತ್ತಿರಲಿ ಊದೋ ಶಂಖ ಊದಿ ಬಿಡುವ
- ಆಚಾರವೇ ಸ್ವರ್ಗ ಅನಾಚಾರವೇ ನರಕ
- ಆಡುವವನ ತೊತ್ತಾಗಬೇಡ ಗಾಣಿಗನ ಎತ್ತಾಗಬೇಡ
- ಆಡೋದು ಮಡಿ ಉಂಬೋದು ಮೈಲಿಗೆ
- ಆತುರಗಾರನಿಗೆ ಬುದ್ಧಿ ಮಟ್ಟ
- ಆದ್ರೆ ಒಂದು ಅಡಿಕೆ ಮರ ಹೋದ್ರೆ ಒಂದು ಗೋಟಡಿಕೆ
- ಆನೆ ಕಂಡು ನಾಯಿ ಬೊಗಳಿದಂತೆ
- ಆಪತ್ತಿಗಾದವನೇ ನೆಂಟ
- ಆರಿದ್ರ ಮಳೆ ಬಂದ್ರೆ ಅದ್ದೂರಿ ಬೆಳೆ
- ಆರು ಕಾಸಿನ ಸಂಬಳ ಆದರೂ ಅರಮನೆಯ ಕೆಲಸ ಮಾಡು
- ಆರು ಕೊಟ್ಟರೆ ಅತ್ತೆ ಕಡೆ ಮೂರು ಕೊಟ್ಟರೆ ಸೊಸೆಯ ಕಡೆ
- ಆಲಕ್ಕೆ ಹೂವಿಲ್ಲ ಸಾಲಕ್ಕೆ ಕೊನೆಯಿಲ್ಲ

- ಆಸೆಯೇ ದುಃಖಕ್ಕೆ ಮೂಲ
- ಆಳಾಗಿ ದುಡಿ ಅರಸಾಗಿ ಉಣ್ಣು
- ಆಳಾಗಬಲ್ಲವನು ಅರಸನಾಗಬಲ್ಲ
- ಇಟ್ಟದ್ದು ಕೊಳೆಯುತ್ತದೆ ಕೊಟ್ಟದ್ದು ಬೆಳೆಯುತ್ತದೆ
- ಇಟ್ಟಿಗೆ ದೊರೆ ಭೂಮಿಗೆ ಭಾರ
- ಇದ್ದಾಗ ನವಾಬಿ ಸಾಬ ಇಲ್ಲದಾಗ ಪಕೀರ್ ಸಾಬ
- ಇದ್ದಿದ್ದು ಇದ್ದ ಹಾಗೆ ಹೇಳಿದರೆ ಎದ್ದು ಬಂದು ಎದೆಗೆ ಒದೆದರು
- ಇಪ್ಪತ್ತಕ್ಕೆ ಯಜಮಾನಿಕೆ, ಎಪ್ಪತ್ತಕ್ಕೆ ಕೆಮ್ಮು ಹಿಡಿಯಬಾರದು
- ಇಪ್ಪತ್ತಕ್ಕೆ ಬಾರದ ಬುದ್ಧಿ ಎಪ್ಪತ್ತಕ್ಕೆ ಬಂದೀತೇ?
- ಇಬ್ಬರ ಜಗಳ ಮೂರನೆಯವನಿಗೆ ಲಾಭ
- ಇರುಳು ಕಂಡ ಬಾವಿಗೆ ಹಗಲು ಬಿದ್ದಂತೆ
- ಇಲಿ ಬಂತು ಎಂದರೆ ಹುಲಿ ಬಂತು ಎಂದರು
- ಇಲಿಯಾಗಿ ನೂರು ವರ್ಷ ಬಾಳುವುದಕ್ಕಿಂತ ಹುಲಿಯಾಗಿ ಮೂರು ಬಾಳುವುದೇ ಲೇಸು
- ಈಗ ಮಾಡಿದ ಪುಣ್ಯ ತೂಗಿ ಕಾಯುವುದು ಮುಂದೆ
- ಈಚಲ ಮರದ ಕೆಳಗೆ ಕುಳಿತು ಮಜ್ಜಿಗೆ ಕುಡಿದ ಹಾಗೆ
- ಈಜು ಮರೀ ಬೇಡ ಜೂಜು ಕಲೀಬೇಡ
- ಈರುಳ್ಳಿ ಮುಟ್ಟದ ಭಟ್ಟ ಬೆಳ್ಳುಳ್ಳಿ ನುಂಗಿಬಿಟ್ಟ
- ಉಗುರಿನಲ್ಲಿ ಹೋಗೋ ಚಿಗುರಿಗೆ ಕೊಡಲಿ ಬೇಕೆ?
- ಉಣ್ಣೋಕೆ ಉಡೋಕೆ ನಂಟಸ್ಥಳ
- ಉತ್ತರಕುಮಾರನ ಪೌರುಷ ಒಲೆಯ ಮುಂದೆ
- ಉತ್ತರೆ ಮಳೆ ಬಂದರೆ ಅತ್ತಂತೆ
- ಉತ್ಸಾಹವೇ ಯೌವ್ವನ ಚಿಂತೆಯೇ ಮುಪ್ಪು
- ಉಪ್ಪಿಗಿಂತ ರುಚಿಯಿಲ್ಲ ತಾಯಿಗಿಂತ ಬಂಧುವಿಲ್ಲ
- ಉಪ್ಪು ಇಟ್ಟವನನ್ನು ಮುಪ್ಪಿನ ತನಕ ನೆನೆಸು
- ಉಪ್ಪು ತಿಂದ ಮನೆಗೆ ಎರಡು ಬಗೆದಂತೆ
- ಉಪ್ಪು ತಿಂದ ಮೇಲೆ ನೀರು ಕುಡಿಯಲೇ ಬೇಕು
- ಉಳಿಯಬೇಕಾದರೆ ಉಳಿಸಬೇಕು
- ಊಟ ಮಾಡಲಾರದ ಅಳಿಯ ಕಾಟಾಚಾರದ ಅಡಿಗೆ ಎಂದ
- ಊಟ ಮಾಡಿದವನು ತೇಗುತ್ತಾನೆ ಮಾಡದವನು ರೇಗುತ್ತಾನೆ

- ಊಟ ಬಲ್ಲವನಿಗೆ ರೋಗವಿಲ್ಲ ಮಾತು ಬಲ್ಲವನಿಗೆ ಜಗಳವಿಲ್ಲ
- ಊತವನು ಸತ್ತ ಸೀತವನು ಬದುಕಿದ
- ಊರ ಬಾಗಿಲ ಮುಚ್ಚಬಹುದು ದೂರುವ ಬಾಯನ್ನು ಮುಚ್ಚಲಾಗದು
- ಊರಿಗೆ ಬಂದ ನೀರೆ ನೀರಿಗೆ ಬರಲಾರಳೇ?
- ಊರಿಗೆ ದೊರೆಯಾದರೂ ತಾಯಿಗೆ ಮಗನೇ
- ಊರಿಗೊಬ್ಬಳೇ ಪದ್ಮಾವತಿ
- ಊರು ಉಪಕಾರವರಿಯದು ಹೆಣ ಶೃಂಗಾರವರಿಯದು
- ಊರು ಸುಟ್ಟರೂ ಹನುಮಪ್ಪ ಹೊರಗೆ
- ಊರು ಕೊಳ್ಳೆ ಹೊಡೆದ ಮೇಲೆ ಕೋಟೆ ಬಾಗಿಲು ಹಾಕಿದಂತೆ
- ಊರೆಲ್ಲ ಸೂರೆ ಹೊಡೆದ ಮೇಲೆ ದಿಡ್ಡಿ ಬಾಗಿಲು ಹಾಕಿದರು
- ಊಸಿದವನ್ಯಾರು ಎಂದ್ರೆ ಮಾಸಿದ ಬಟ್ಟೆಯವ ಎಂದಂತೆ
- ಋಣವಿದ್ದವನಿಗೆ ಕಾವೇರಿ ಹಣವಿದ್ದವನಿಗೆ ತಿರುಪತಿ
- ಎಡವಿದ ಕಾಲೇ ಮತ್ತೆ ಎಡವುದು
- ಎಣ್ಣೆ ಬರುವಾಗ ಗಾಣ ಮುರಿಯಿತು
- ಎಣ್ಣೆ ಬಂದಾಗ ಕಣ್ಣು ಮುಚ್ಚಿ ಕೊಂಡರು
- ಎತ್ತು ಈಯಿತು ಎಂದರೆ ಕೊಟ್ಟಿಗೆಗೆ ಕಟ್ಟು ಎಂದಂತೆ
- ಎತ್ತಿಗೆ ಜ್ವರ ಬಂದರೆ ಎಮ್ಮೆಗೆ ಬರೆ ಹಾಕಿದಂತೆ
- ಎತ್ತು ಏರಿಗೆ ಎಳೆದರೆ ಕೋಣ ನೀರಿಗೆ ಎಳೆಯಿತು
- ಎತ್ತು ನಡೆಯದಿದ್ದರೆ ದಾರಿ ಉದ್ದ ಎಂದ ಹಾಗೆ
- ಎಲೆ ಮರೆಯ ಕಾಯಿಯಂತೆ
- ಎಲ್ಲರ ಮನೆ ದೋಸೇನೂ ತೂತೇ
- ಎಲ್ಲಿ ಹೇಳಿದರೂ ಮುತ್ತುಗಕ್ಕೆ ಮೂರೇ ಎಲೆ
- ಏರಿದವನು ಇಳಿದಾನು ಇಳಿದವನು ಏರಿಯಾನು
- ಒಂದು ಕಣ್ಣಿಗೆ ಸುಣ್ಣ ಇನ್ನೊಂದು ಕಣ್ಣಿಗೆ ಬೆಣ್ಣೆ
- ಒಂದು ಕುರಿ ಹಳ್ಳಕ್ಕೆ ಬಿದ್ದರೆ ಎಲ್ಲವೂ ಬೀಳುವುವು
- ಒಂದೂರ ಗೌಡ ಇನ್ನೊಂದೂರಿಗೆ ಹೋದರೆ ದನ ಕಟ್ಟಲು ತರವಲ್ಲ.
- ಒಡೆದ ಮನಸ್ಸು ಚೂರಾದ ಕನ್ನಡಿ
- ಒಣ ಮರಕ್ಕೆ ನೀರೆರೆದಂತೆ
- ಒಪ್ಪತ್ತು ಉಂಡವ ಯೋಗಿ ಎರಡೊತ್ತು ಉಂಡವ ಭೋಗಿ

- ಒಲ್ಲದ ಗಂಡನಿಗೆ ಮೊಸರಲ್ಲಿ ಕಲ್ಲು
- ಒಲಿದರೆ ನಾರಿ ಮುನಿದರೆ ಮಾರಿ
- ಓತಿಕ್ಯಾತಕ್ಕೆ ಬೇಲಿಯೇ ಸಾಕ್ಷಿ
- ಓದಿ ಕೆಟ್ಟ ಹೆಣ್ಣಿಲ್ಲ ಗೆಯ್ದು ಕೆಟ್ಟ ಗಂಡಿಲ್ಲ
- ಓದು ಒಕ್ಕಾಲು ಬುದ್ಧಿ ಮುಕ್ಕಾಲು
- ಕಂಕುಳಲ್ಲಿ ಕೂಸು ಇಟ್ಕಂಡು ಊರೆಲ್ಲ ಹುಡಿಕಿದಂತೆ
- ಕಂಡದ್ದನ್ನು ಆಡಿದರೆ ಕೆಂಡದಂತಹ ಕೋಪ
- ಕಂಡರೆ ಸೇರದವನಿಗೆ ಉಂಡರೆ ಸೇರೀತೆ?
- ಕಟ್ಟಿಸಿದವನಿಗೆ ಒಂದು ಮನೆಯಾದರೆ ಬಾಡಿಗೆಯವನಿಗೆ ಊರೆಲ್ಲಾ ಮನೆ
- ಕಟ್ಟುವುದು ಕಠಿಣ ಕೆಡಿಸುವುದು ಸುಲಭ
- ಕಣ್ಣು ಅರಿಯದ್ದನ್ನು ಕರುಳು ಅರಿಯದೇ?
- ಕತ್ತೆಗೇನು ಗೊತ್ತು ಕಸ್ತೂರಿ ಪರಿಮಳ
- ಕತ್ತೆ ಮೇಯ್ದಲ್ಲಿ ಮತ್ತೆ ಮೇವಿಲ್ಲ
- ಕಪಿಗೆ ಹೆಂಡ ಕುಡಿಸಿ ಚೇಳು ಕಡಿಸಿದಂತೆ
- ಕಬ್ಬಿಣವನ್ನು ಕಾಯ್ದಿರುವಾಗಲೇ ಬಡಿ
- ಕರ್ಮವಿಲ್ಲದ ಗಂಡು ಕರಿಯ ವನಕ್ಕೆ ತುಂಡು
- ಕಲಿತಿದ್ದು ಬಿಡೇ ಕಳ್ಳ ಮುಂಡೇ ಅಂದ್ರೆ ನಡು ದಾರಿಯಲ್ಲಿ ಹೋಗಿ ಮಣ್ಣು ಹುಯ್ಕ್ಯಂಡ್ಲು
- ಕಸ ತಿನ್ನುವುದಕ್ಕಿಂತ ತುಸು ತಿನ್ನುವುದೇ ಮೇಲು
- ಕಾಗುಣಿತ ಬಾರದವನಿಗೆ ಕಾವ್ಯ ಹೇಳಿದಂತೆ
- ಕಾಗೆ ಕೂರುವುದಕ್ಕೂ ಕೊಂಬೆ ಮುರಿಯುವುದಕ್ಕೂ ಸರಿ
- ಕಾಶಿಗೆ ಹೋದರೂ ಕರ್ಮ ತೊಲಗಲಿಲ್ಲ
- ಕಾರ್ಯವಾಸೇ ಕತ್ತೆ ಕಾಲು ಹಿಡಿ
- ಕಾಯಕವೇ ಕೈಲಾಸ
- ಕುಂಬಳಕಾಯಿ ಕಳ್ಳ ಅಂದ್ರೆ ಹೆಗಲು ಮುಟ್ಟಿ ನೋಡಿಕೊಂಡ
- ಕುಂಬಾರನಿಗೆ ವರುಷ ದೊಣ್ಣೆಗೆ ನಿಮಿಷ
- ಕುಡುಕನ ಬಾಳು ಎಷ್ಟಿದ್ದರೂ ಹಾಳು
- ಕುಣಿಯಲಾರದವಳಿಗೆ ನೆಲ ಡೊಂಕು
- ಕುರಿ ಕಾಯೋಕೆ ತೋಳವನ್ನು ಕಳಿಸಿದಂತೆ
- ಕುಲ ನೋಡಿ ಹೆಣ್ಣು ತರಬೇಕು ತಳಿ ನೋಡಿ ದನ ತರಬೇಕು

- ಕೊಡುವ ದಡ್ಡರಿರುವಾಗ ಬೇಡುವ ಜಾಣರಿಗೆ ಕೊರತೆಯಿರದು
- ಕೊಟ್ಟು ಕೆಟ್ಟವರಿಲ್ಲ ಕೊಡದೆ ಬಾಳಿದವರಿಲ್ಲ
- ಕೂತು ಉಣ್ಣುವವನಿಗೆ ಕುಡಿಕೆ ಹೊನ್ನು ಸಾಲದು
- ಕೂರೆಗೆ ಹೆದರಿ ಕಂಬಳಿ ಬಿಸಾಕಿದಂತೆ
- ಕೂಸು ಹುಟ್ಟೋಕೆ ಮುಂಚನೇ ಕುಲಾವಿ ಹೊಲಿಸಿದರು
- ಕೆಟ್ಟ ಮೇಲೆ ಬುದ್ಧಿ ಬಂತು ಅತ್ತ ಮೇಲೆ ಒಲೆ ಉರಿಯಿತು
- ಕೆಲಸಕ್ಕೆ ಕರೀಬೇಡ ಊಟಕ್ಕೆ ಮರೀಬೇಡ
- ಕೈ ಕೆಸರಾದರೆ ಬಾಯಿ ಮೊಸರು
- ಕೈಗೆ ಬಂದ ತುತ್ತು ಬಾಯಿಗೆ ಬರಲಿಲ್ಲ
- ಕೊಂಕಣ ಸುತ್ತಿ ಮೈಲಾರಕ್ಕೆ ಹೋದಂತೆ
- ಕೊಟ್ಟ ಹೆಣ್ಣು ಕುಲಕ್ಕೆ ಹೊರಗು
- ಕೊಟ್ಟವನು ಕೋಡಂಗಿ ಇಸ್ಕಂಡವನು ವೀರಭದ್ರ
- ಕೊಟ್ಟಿದ್ದು ತನಗೆ ಬಚ್ಚಿಟ್ಟಿದ್ದು ಪರರಿಗೆ
- ಕೊಡಲಿಯ ಕಾವು ಮರಕ್ಕೆ ಮೂಲ
- ಕೋಟಿ ವಿದ್ಯೆಗಿಂತ ಮೇಟಿ ವಿದ್ಯೆಯೇ ಮೇಲು
- ಕೋಣನ ಮುಂದೆ ಕಿನ್ನರಿ ಬಾರಿಸಿದಂತೆ
- ಕೋಣೆಯ ಮಕ್ಕಳು ಕೊಳೆತರು ಬೀದಿಯ ಮಕ್ಕಳು ಬೆಳೆದರು
- ಕೋತಿ ಕೈಯ್ಯಲ್ಲಿ ಮಾಣಿಕ್ಯ ಕೊಟ್ಟಂತೆ
- ಕೋತಿ ತಾನು ಕೆಡುವುದಲ್ಲದೇ ವನವನ್ನೆಲ್ಲಾ ಕೆಡಿಸುವುದು
- ಕೋಪದಲ್ಲಿ ಕುಯ್ದ ಮೂಗು ಮತ್ತೆ ಬಂದೀತೇ?
- ಕೋಳಿ ಕಾಲಿಗೆ ಗೆಜ್ಜೆ ಕಟ್ಟಿದರೆ ತಿಪ್ಪೆ ಕೆದರುವುದು ಬಿಟ್ಟೀತೇ?
- ಕೋಳಿ ಕೇಳಿ ಖಾರ ಅರೆಯುತ್ತರೆಯೇ?
- ಖಾವಿ ಉಟ್ಟವರೆಲ್ಲ ಸನ್ಯಾಸಿಗಳಲ್ಲ ಬೂದಿ ಬಳೆದುಕೊಂಡವರೆಲ್ಲ ವೈರಾಗಿಗಳಲ್ಲ
- ಗಂಗಳ ಕಳೆದುಹೋಗಿದ್ದಕ್ಕೆ ಚೆಂಬು ಕೊಟ್ಟು ಕಣಿ ಕೇಳಿದಂತೆ
- ಗಂಡ ಪಟ್ಟೆ ಸೀರೆ ತರುತ್ತಾನೆಂದು ಇದ್ದ ಬಟ್ಟೆ ಸುಟ್ಟಳಂತೆ
- ಗಂಡ ಹೆಂಡಿರ ಜಗಳದಲ್ಲಿ ಕೂಸು ಬಡವಾಯಿತು
- ಗಂಡ ಹೆಂಡಿರ ಜಗಳ ಉಂಡು ಮಲಗುವತನಕ
- ಗಂಡಸು ಕುಳಿತು ಕೆಟ್ಟ ಹೆಂಗಸು ತಿರುಗಿ ಕೆಟ್ಟಳು
- ಗಂಡು ತೆತ್ತು ತಿಳಿಯಬೇಕು ಹೆಣ್ಣು ಹೆತ್ತು ತಿಳಿಯಬೇಕು

- ಗಂಧ ಹೆಚ್ಚಾಯ್ತು ಅಂತ ಎಲ್ಲೆಲ್ಲೋ ಬಳಿದು ಕೊಂಡ್ರಂತೆ
- ಗಡ್ಡ ಬಿಟ್ಟ ಮಾತ್ರಕ್ಕೆ ಸನ್ಯಾಸಿಯೇ?
- ಗಣಪತಿಯ ಮದುವೆ ನಿತ್ಯ ನಾಳೆ
- ಗಣೇಶನನ್ನು ಮಾಡಲು ಹೋಗಿ ಅವರಪ್ಪನನ್ನು ಮಾಡಿದಂತೆ
- ಗಾಣಗಿತ್ತಿ ಅಯ್ಯೋ ಅಂದರೆ ನೆತ್ತಿ ತಣ್ಣಗಾದೀತೇ?
- ಗಾದೆಯು ಜನಪದರ ವೇದ
- ಗಾಳಿ ಬಂದಾಗ ತೂರಿಕೋ ಧಾರಣೆ ಬಂದಾಗ ಮಾರಿಕೋ
- ಗಾಳಿಗೆ ಗುದ್ದಿ ಮೈ ಕೈ ನೋಯಿಸಿಕೊಂಡಂತೆ
- ಗಿಡವಾಗಿ ಬಗ್ಗದ್ದು ಮರವಾಗಿ ಬಗ್ಗೀತೆ?
- ಗುಡಿಸಿದ ಮೇಲೆ ಕಸವಿರಬಾರದು ಬಡಿಸಿದ ಮೇಲೆ ಹಸಿವಿರಬಾರದು
- ಗುಣವನ್ನು ತಿಳಿಯದವನಿಗೆ ಎಲ್ಲವೂ ನಿಷ್ಪ್ರಯೋಜಕ
- ಗುಣ ನೋಡಿ ಗೆಳೆತನ ಮಾಡು
- ಗುಬ್ಬಿಯ ಮೇಲೆ ಬ್ರಹ್ಮಾಸ್ತ್ರ
- ಗುರುವಿಗೆ ತಿರುಮಂತ್ರ
- ಗುರುವಿಲ್ಲದ್ದು ಮಠವಲ್ಲ ಹಿರಿಯರಿಲ್ಲದ್ದು ಮನೆಯಲ್ಲ
- ಗೂಳಿ ಬಿದ್ದರೆ ಆಳಿಗೊಂದು ಕಲ್ಲು
- ಗೆದ್ದವನು ಸೋತ ಸೋತವನು ಸತ್ತ
- ಗೆದ್ದೆತ್ತಿನ ಬಾಲ ಹಿಡಿ
- ಚರ್ಮ ತೊಳೆದರೆ ಕರ್ಮ ಹೋದೀತೇ?
- ಚಿಂತೆಯೇ ಮುಪ್ಪು ಸಂತೋಷವೇ ಯೌವ್ವನ
- ಚಿಂತೆ ಇಲ್ಲದವನಿಗೆ ಸಂತೇಲಿ ನಿದ್ದೆ
- ಚಿಕ್ಕಂದಿನಲ್ಲಿ ಚಕ್ಕಂದ ಮುಪ್ಪಿನಲ್ಲಿ ಮೂರಾಬಟ್ಟೆ
- ಚಿನ್ನದ ಮೊಟ್ಟೆಯಿಡುವ ಕೋಳಿ ಎಂದು ಕುಯ್ಯಲಾದೀತೇ?
- ಚಿನ್ನದ ಕತ್ತಿ ಎಂದು ಕೊರಳು ಕುಯ್ಯಿಸಿಕೊಳ್ಳುವುದೇ?
- ಛತ್ರದಲ್ಲಿ ಬೋಜನ ಮಠದಲ್ಲಿ ನಿದ್ದೆ
- ಜಟ್ಟಿ ಬಿದ್ದರೂ ಮೀಸೆ ಮಣ್ಣಾಗಲಿಲ್ಲ
- ಜನಕ್ಕಂಜದಿದ್ದರೂ ಮನಕ್ಕಂಜು
- ಜನ ಮೆಚ್ಚಲಿ ಕುಣಿ ಮಗಳೇ
- ಜನ ಸೇವೆಯೇ ಜನಾರ್ಧನ ಸೇವೆ

- ಜಲ ಶೋಧಿಸಿ ನೀರು ತಾ ಕುಲ ನೋಡಿ ಹೆಣ್ಣು ತಾ
- ಜಾಣನಿಗೆ ಮಾತಿನ ಪೆಟ್ಟು ದಡ್ಡನಿಗೆ ದೊಣ್ಣೆ ಪೆಟ್ಟು
- ಜಾತಿ ಕೆಟ್ಟರೂ ನೀತಿ ಕೆಡಬಾರದು
- ತತ್ವಮಸಿ ಅನ್ನೋದು ಕಲಿ ಅಂದ್ರೆ ತುತ್ತು ಸವಿ ಅಂತ ಉಣ್ಣೋದು ಕಲ್ತ
- ತನಗೇ ಜಾಗವಿಲ್ಲ ಕೊರಳಲ್ಲಿ ಡೋಲು
- ತನ್ನ ಊರಲ್ಲಿ ರಂಗ ಪರ ಊರಲ್ಲಿ ಮಂಗ
- ತನುವರಿಯದ ನೋವಿಲ್ಲ ಮನವರಿಯದ ಪಾಪವಿಲ್ಲ
- ತಲೆ ಗಟ್ಟಿಯಿದೆ ಅಂತ ಬಂಡೆಗೆ ಚಚ್ಚಿಕೊಂಡಂತೆ
- ತಲೆಯೇ ಹೋಗುತ್ತಿದ್ದರೂ ಸಾಬಿ ಗಡ್ಡಕ್ಕೆ ಚಿಂತಿಸಿದಂತೆ
- ತಾನಾಗಿ ಮಾಡ ಮಾಡಿದ್ದೂ ನೋಡ
- ತಾಳಿದವನು ಬಾಳಿಯಾನು
- ತಾ ಮಾಡಿದ್ದು ಉತ್ತಮ, ಮಗ ಮಾಡಿದ್ದು ಮಧ್ಯಮ, ಆಳು ಮಾಡಿದ್ದು ಹಾಳು
- ತಾಯಿ ಒಡಲು ಹೊಂಗೆ ನೆರಳು
- ತಾಯಿ ಹೊಟ್ಟೆ ನೋಡಿದರೆ ಹೆಂಡತಿ ಜೇಬು ನೋಡಿದಳು
- ತಿಂದ ಮನೆಯ ಜಂತೆ ಎಣಿಸಬೇಡ
- ತೀರ್ಥ ಕುಡಿದರೆ ತಂಡಿ ಆರತಿ ತಗೆದುಕೊಂಡರೆ ಉಷ್ಣ ಪ್ರಸಾದ ತಿಂದರೆ ಅಜೀರ್ಣ
- ತುಂಬಿದ ಕೊಡ ತುಳುಕುವುದಿಲ್ಲ
- ತೊಟ್ಟಿಲು ತೂಗುವ ಕೈ ಜಗವನ್ನೇ ತೂಗುವುದು
- ತೊಟ್ಟಲನ್ನೂ ತೂಗುವುದು ಮಗುವನ್ನೂ ಜಿಗುಟುವುದು
- ತೋಳ ಹಳ್ಳಕ್ಕೆ ಬಿದ್ದರೆ ಆಳಿಗೆ ಒಂದೊಂದು ಕಲ್ಲು
- ದಡ್ಡರ ರಾಜ್ಯದಲ್ಲಿ ಜಾಣನೇ ಹೆಡ್ಡ
- ದಾನ ಪಡೆದು ಎತ್ತಿನ ಹಲ್ಲು ಎಣಿಸಿದರು
- ದಾರಿಯಲ್ಲಿ ಹೋಗುವ ಮಾರಿ ಮನೆಗೆ ಹೊಕ್ಕಿದಂತೆ
- ದುಡಿತವೇ ದುಡ್ಡಿನ ತಾಯಿ
- ದುಡ್ಡೇ ದೊಡ್ಡಪ್ಪ ವಿದ್ಯೇ ಅವರಪ್ಪ
- ದುರ್ಭಿಕ್ಷೆಯಲ್ಲಿ ಅಧಿಕ ಮಾಸ ಬಂದಂತೆ
- ದುಷ್ಟರಿಂದ ದೂರವಿರು
- ದೂರದ ಬೆಟ್ಟ ಕಣ್ಣಿಗೆ ನುಣ್ಣಗೆ
- ದೇಶ ಸುತ್ತು ಇಲ್ಲವೇ ಕೋಶ ಓದು

- ದೇವರು ವರ ಕೊಟ್ಟರೂ ಪೂಜಾರಿ ಕೊಡನು
- ದೊಡ್ಡವರ ಮನೆ ನೋಟ ಚೆಂದ ಬಡವರ ಮನೆ ಊಟ ಚೆಂದ
- ದೋಸೆ ತಿನ್ನುವಾಗ ಮೀಸೆ ತಿರುವಿದನಂತೆ
- ಧೂಪ ಹಾಕಿದರೆ ಪಾಪ ಹೋದೀತೇ?
- ಧರ್ಮಕ್ಕೆ ಧತ್ತಿ ಕೊಟ್ಟರೆ ಹಿತ್ತಲ್ಲಿ ಹೋಗಿ ಮಣೆ ಹಾಕಿದರು
- ನಂಟು ನೋಡದೆ ಹೋಯಿತು ಸಾಲ ಕೇಳದೆ ಹೋಯಿತು
- ನಂಬಿ ಕೆಟ್ಟವರಿಲ್ಲ ನಂಬದೇ ಬದುಕಿದವರಿಲ್ಲ
- ನಕ್ಕು ನುಡಿಯುವವ ಠಕ್ಕ
- ನಗು ಲೋಕಾಂತ ಅಳು ಏಕಾಂತ
- ನಡೆವರು ಎಡವದೇ ಕುಳಿತವರು ಎಡವರೇ?
- ನದಿ ಮೂಲ, ಋಷಿ ಮೂಲ, ಗುರು ಮೂಲ ಹುಡುಕಬಾರದು
- ನದಿಯನ್ನೇ ನೋಡದಿರುವವನು ಸಮುದ್ರವನ್ನು ವರ್ಣಿಸಿದಂತೆ
- ನರಕಕ್ಕೆ ನವದ್ವಾರ ನಾಶಕ್ಕೆ ಒಂದೇ ದ್ವಾರ
- ನರಿ ಕೂಗು ಗಿರಿ ಮುಟ್ಟೀತೇ?
- ನಾಚಿಕೆ ಇಲ್ಲದವನು ನೀಚನಿಗಿಂತ ಕಡೆ
- ನಾಲಿಗೆ ಒಳ್ಳೆಯದಾದರೆ ನಾಡೆಲ್ಲ ಒಳ್ಳೆಯದು
- ನಾಲಿಗೆ ಕುಲವನ್ನು ಪೇಳ್ವುದು
- ನಾಲಿಗೆ ತಪ್ಪಿದರೆ ನಾಯಿಗಿಂತ ಕಡೆ
- ನಾಯಿ ಬಾಲ ಡೊಂಕು
- ನಾಯಿ ಬೊಗಳಿದರೆ ದೇವಲೋಕ ಹಾಳಾಗುತ್ತದೆಯೇ?
- ನಾಯಿಯ ಕನಸಲ್ಲೂ ಮೂಳೇನೆ
- ನಾಯಿಯನ್ನು ಹೊಡೆಯಲು ಬಣ್ಣದ ಕೋಲೇ?
- ನಾಯಿ ಹಸಿದಿತ್ತು ಬುತ್ತಿ ಹಳಸಿತ್ತು
- ನ್ಯಾಯವಿದ್ದ ಕಡೆ ನಾರಾಯಣ
- ನಿಂತರೆ ಕಾಲು ಹಿಡಿ ಬಗ್ಗಿದರೆ ಜುಟ್ಟು ಹಿಡಿ
- ನಿಷ್ಠೆ ಇಲ್ಲದ ಪೂಜೆ ಎಷ್ಟು ಮಾಡಿದರೂ ನಷ್ಟ
- ನೀರಲ್ಲಿ ಹೋಮ ಮಾಡಿದಂತೆ
- ನೀರಿಗೆ ಹತ್ತಿರವಿರಬೇಕು ನೆಂಟರಿಗೆ ದೂರವಿರಬೇಕು
- ನೀರಿಳಿಯದ ಗಂಟಲಲ್ಲಿ ಕಡುಬು ತುರುಕಿದಂತೆ

- ನೀರು ಇದ್ದರೆ ಊರು ನಾರಿ ಇದ್ದರೆ ಮನೆ
- ನೂಲಿನಂತೆ ಸೀರೆ ತಾಯಿಯಂತೆ ಮಗಳು
- ನೆಂಟ ನೆರವಲ್ಲ ಕುಂಟ ಜೊತೆಯಲ್ಲ
- ನೇಯುವವನ ಕುಂಡಿ ಬೆತ್ತಲೆ
- ಪಕ್ಷ ಪಾಂಡವರಲ್ಲಿ ಊಟ ಕೌರವರಲ್ಲಿ
- ಪಟ್ಟ ಆಳುವ ದೊರೆಗಿಂತ ಕುಟ್ಟ ಕುಟ್ಟುವ ತಾಯಿ ಲೇಸು
- ಪ್ರತ್ಯಕ್ಷವಾದರೂ ಪ್ರಮಾಣಿಸಿ ನೋಡು
- ಪಾಪಿ ಸಮುದ್ರಕ್ಕೆ ಹಾರಿದರೂ ಮೊಣಕಾಲುದ್ದ ನೀರು
- ಪುರಾಣ ಹೇಳೋಕೆ ಬದನೇಕಾಯಿ ತಿನ್ನೋಕೆ
- ಬಂದ ದಾರಿಗೆ ಸುಂಕವಿಲ್ಲ
- ಬಂದದ್ದೆಲ್ಲಾ ಬರಲಿ ಗೋವಿಂದನ ದಯೆಯಿರಲಿ
- ಬಡತನ ಏಳಗೊಡದು ಸಿರಿತನ ಮಲಗಗೊಡದು
- ಬಡವನ ಕೋಪ ದವಡೆಗೆ ಮೂಲ
- ಬಡವ ನೀ ಮಡಗಿದಂಗಿರು
- ಬರಬರುತ್ತಾ ರಾಯರ ಕುದುರೆ ಕತ್ತೆ ಆಯಿತು
- ಬರಿದಾಗಿ ಬಾ ನಿಧಿಯಾಗಿ ಹೋಗು
- ಬಾಣಲೆಯಿಂದ ಬೆಂಕಿಗೆ
- ಬಾಯಲ್ಲಿ ಶರಣಾರ್ಥಿ ಕಂಕುಳಲ್ಲಿ ದೊಣ್ಣೆ
- ಬಾಯಿ ಬಿಟ್ಟರೆ ಬಣ್ಣ ಗೇಡು
- ಬಲ್ಲವರ ಮಾತು ಬೆಲ್ಲವ ಮೆದ್ದಂತೆ
- ಬಿದ್ದ ಪೆಟ್ಟಿಗಿಂತ ನಕ್ಕ ಪೆಟ್ಟೇ ಹೆಚ್ಚು
- ಬಿಸಿ ತುಪ್ಪ : ನುಂಗಲೂ ಆಗಲ್ಲ ಉಗಿಯಲು ಆಗಲ್ಲ
- ಬೀದಿಯ ಕೂಸು ಬೆಳೆಯಿತು ಕೋಣೆಯ ಕೂಸು ಕೊಳೆಯಿತು
- ಬೀದಿಯಲ್ಲಿ ಜೋಡಿನಲ್ಲಿ ಹೊಡೆದು ಕೋಣೆಯಲ್ಲಿ ಕ್ಷಮೆ ಕೇಳಿದಂತೆ
- ಬೀಸೋ ದೊಣ್ಣೆಗೆ ತಪ್ಪಿಸಿಕೊಂಡರೆ ನೂರು ವರ್ಷ ಆಯಸ್ಸು
- ಭರಣಿ ಮಳೆ ಬಂದ್ರೆ ಧರಣಿ ತುಂಬಾ ಬೆಳೆ
- ಭೀಮನ ಹೊಟ್ಟೆಗೆ ಅರೆಕಾಸಿನ ಮಜ್ಜಿಗೆ
- ಬುದ್ಧಿವಂತ ಬರೀತಾನೆ ವಿವೇಕಿ ಅರೀತಾನೆ
- ಬೆಟ್ಟ ಅಗೆದು ಇಲಿ ಹಿಡಿದ ಹಾಗೆ

- ಬೆಂಕಿಯಿಲ್ಲದೇ ಹೊಗೆಯಾಡದು
- ಬೆಕ್ಕಿಗೆ ಚೆಲ್ಲಾಟ ಇಲಿಗೆ ಪ್ರಾಣ ಸಂಕಟ
- ಬೆಕ್ಕು ಕಣ್ಮುಚ್ಚಿ ಹಾಲು ಕುಡಿದರೆ ಬೇರೆಯವರಿಗೆ ಗೊತ್ತಾಗುವುದಿಲ್ಲವೇ?
- ಬೆಳ್ಳಗಿರುವುದೆಲ್ಲಾ ಹಾಲಲ್ಲ ಹೊಳೆಯುವುದೆಲ್ಲಾ ಚಿನ್ನವಲ್ಲ
- ಬೆಳೆಯುವ ಸಿರಿ ಮೊಳಕೆಯಲ್ಲಿ
- ಬೇಕೆಂಬುದು ಬದುಕು ಸಾಕೆಂಬುದು ಸಾವು
- ಬೇಡಿ ತಿಂದರೆ ನೀಡಿದಷ್ಟು, ದುಡಿದು ತಿಂದರೆ ಬೇಕಾದಷ್ಟು
- ಬೇಲೀನೆ ಎದ್ದು ಹೊಲ ಮೇಯ್ದಂತೆ
- ಬೈಯ್ದು ಹೇಳಿದ್ದು ಬುದ್ಧಿ ನಕ್ಕು ಹೇಳಿದ್ದು ಕೆಡುಕು
- ಬೈಯ್ಯೋರು ಬಾಗಿಲಲ್ಲಿರಬೇಕು ಹೊಗಳುವವರು ದೂರ ಇರಬೇಕು
- ಬೋರ್ಗಲ್ಲ ಮೇಲೆ ಮಳೆ ಸುರಿದಂತೆ
- ಮಂಗ ಮೊಸರು ತಿಂದು ಮೇಕೆಯ ಬಾಯಿಗೆ ಒರೆಸಿತು
- ಮಂಗನ ಕೈಯಲ್ಲಿ ಮಾಣಿಕ್ಯ ಕೊಟ್ಟಂತೆ
- ಮದುವೆ ಆಗೋ ಗಂಡಿಗೆ ಅದೇ ಇಲ್ಲ
- ಮದುವೆ ಮಾಡಿಕೋ ಅಂದ್ರೆ ನೀನೇ ಹೆಂಡ್ತಿ ಆಗು ಅಂದ್ನಂತೆ
- ಮಂತ್ರಕ್ಕಿಂತ ಉಗುಳು ಜಾಸ್ತಿ
- ಮನ ಗೆದ್ದು ಮನೆಗೆಲ್ಲು
- ಮನಸ್ಸಿದ್ದರೆ ಮಾರ್ಗ
- ಮನೆ ಕಟ್ಟಿ ನೋಡು ಮದುವೆ ಮಾಡಿ ನೋಡು
- ಮನೆ ಕಿರಿದಾದರೂ ಮನಸ್ಸು ಹಿರಿದಾಗಿರಬೇಕು
- ಮನೆಗೆ ಮಾರಿ ಊರಿಗೆ ಉಪಕಾರಿ
- ಮನೆ ಮುರಿದರೆ ಕಟ್ಟಬಹುದು ಮನ ಮುರಿದರೆ ಕಟ್ಟಲಾಗದು
- ಮನೇಲಿ ಇಲಿ ಬೀದೀಲಿ ಹುಲಿ
- ಮಣ್ಣಿನಿಂದ ಕೌರವ ಕೆಟ್ಟ ಹೆಣ್ಣಿನಿಂದ ರಾವಣ ಕೆಟ್ಟ
- ಮಳ್ಳಿ ಮಳ್ಳಿ ಮಂಚಕ್ಕೆಷ್ಟು ಕಾಲು ಎಂದರೆ ಮೂರು ಮತ್ತೊಂದು ಅಂದ್ಲಂತೆ
- ಮಾಡಬಾರದ್ದು ಮಾಡಿದರೆ ಆಗಬಾರದ್ದು ಆಗುತ್ತದೆ
- ಮಾಡಲಾರದವಳು ಮನೆ ಬಿಟ್ಟು ನಡು ಬೀದೀಲಿ ಮಣ್ಣು ಹುಯ್ಕೊಂಡ್ಲು
- ಮಾಡಿದ ಪಾಪಕ್ಕೆ ಮನವೇ ಸಾಕ್ಷಿ ತೋಡಿದ ಬಾವಿಗೆ ಜಲವೇ ಸಾಕ್ಷಿ
- ಮಾಡಿದ್ದುಣ್ಣೋ ಮಹಾರಾಯ

- ಮಾಡಿದೋರ ಪಾಪ ಆಡಿದೋರ ಬಾಯಲ್ಲಿ
- ಮಾಡುವುದೆಲ್ಲಾ ಅನಾಚಾರ ಮನೆಯ ಮುಂದೆ ಬೃಂದಾವನ
- ಮಾತು ಆಡಿದರೆ ಹೋಯಿತು ಮುತ್ತು ಒಡೆದರೆ ಹೋಯಿತು
- ಮಾತು ಬಲ್ಲವ ಮಾಣಿಕ್ಯ ತಂದ ಬಾರದವ ಜಗಳ ತಂದ
- ಮಾತು ಬೆಳ್ಳಿ ಮೌನ ಬಂಗಾರ
- ಮಾತು ಮನೆ ಕೆಡಿಸಿತು ತೂತು ಒಲೆ ಕೆಡಿಸಿತು
- ಮಾತು ಮಾತಿಗೂ ನಗುವ ಹೆಂಗಸನ್ನು ಮಾತು ಮಾತಿಗೂ ಅಳುವ ಗಂಡಸನ್ನು ನಂಬಲಾಗದು
- ಮಾತು ಮಾತಿಗೂ ಅಳುವ ಹೆಂಗಸನ್ನು ಮೀಸೆ ಮರೆಯಲ್ಲಿ ನಗುವ ಗಂಡಸನ್ನು ನಂಬಲಾಗದು
- ಮಾತೇ ಮುತ್ತು ಮಾತೇ ಮೃತ್ಯು
- ಮಿಂಚಿ ಹೋದ ಕಾಲಕ್ಕೆ ಚಿಂತಿಸಿ ಫಲವೇನು
- ಮೀಸೆ ಬಂದವನಿಗೆ ದೇಶ ಕಾಣದು ಮೊಲೆ ಬಂದವಳಿಗೆ ನೆಲ ಕಾಣದು
- ಮುಖ ನೋಡಿ ಮಣೆ ಹಾಕು
- ಮುಖ ಮನಸ್ಸಿನ ಕನ್ನಡಿ
- ಮುಖಕ್ಕೆ ಮಂಗಳಾರತಿ ಎತ್ತು
- ಮುಪ್ಪಿನಲ್ಲಿ ಆದವರೇ ಮಕ್ಕಳು
- ಮುಳ್ಳು ಇಲ್ಲದ ಗುಲಾಬಿಯಿಲ್ಲ ನೋವಿಲ್ಲದ ಬದುಕಿಲ್ಲ
- ಮೂಗಿಗಿಂತ ಮೂಗುತಿ ಭಾರ
- ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದು
- ಮೆರೆದ ಊರಲ್ಲಿ ತಿರಿದು ಬಾಳಬಾರದು
- ಯಜಮಾನ ನಾಯಿಗೆ ಹೇಳಿದರೆ ನಾಯಿ ತನ್ನ ಬಾಲಕ್ಕೆ ಹೇಳಿದಂತೆ
- ಯಥಾ ರಾಜ ತಥಾ ಪ್ರಜಾ
- ಯುದ್ಧ ಕಾಲದಲ್ಲಿ ಶಸ್ತ್ರಾಭ್ಯಾಸ
- ಯಾಕೆ ಅಳುತ್ತೀ ಮಗಳೆ ಅಂದ್ರೆ ಲೋಕ ಮೆಚ್ಚಲಿಕ್ಕೆ ಅಂದಳಂತೆ
- ಯೋಗಿಗೆ ಕುಲವಿಲ್ಲ ಸಾಗರಕ್ಕೆ ನೆಲೆಯಿಲ್ಲ
- ರವಿ ಕಾಣದ್ದನ್ನು ಕವಿ ಕಂಡ
- ರಾಗಿಕಲ್ಲು ತಿರುಗುತ್ತಿದ್ದರೆ (ಆಡುತ್ತಿದ್ದರೆ) ಊರೆಲ್ಲ ನೆಂಟರು
- ರಾತ್ರಿಯೆಲ್ಲಾ ರಾಮಾಯಣ ಕೇಳಿ ಬೆಳಿಗ್ಗೆ ರಾಮನಿಗೂ ಸೀತೆಗೂ ಏನು ಸಂಬಂಧ ಎಂದ್ರಂತೆ

- ರಾಮೇಶ್ವರಕ್ಕೆ ಹೋದರೂ ಶನೇಶ್ವರ ಬಿಡಲಿಲ್ಲ
- ರೊಟ್ಟಿ ಜಾರಿ ತುಪ್ಪಕ್ಕೆ ಬಿದ್ದಂತೆ
- ರೋಹಿಣಿ ಮಳೆ ಬಂದ್ರೆ ಓಣಿಯೆಲ್ಲ ಬೆಳೆ
- ಲಂಕೆಯಲ್ಲಿ ಹುಟ್ಟಿದವರೆಲ್ಲಾ ರಾವಣರೇ?
- ಲಾಲಿಸಿದರೆ ಮಕ್ಕಳು ಪೂಜಿಸಿದರೆ ದೇವರು
- ಲೋಕ ತಿಳಿಯಬೇಕು ಲೆಕ್ಕ ಕಲಿಯಬೇಕು
- ವ್ಯವಸಾಯ, ಮನೆ ಮಕ್ಕಳು ಸಾಯ
- ವ್ಯಾಪಾರಕ್ಕೆ ನಿಮಿಷ ಆರಂಭಕ್ಕೆ ವರುಷ
- ವಿದ್ಯೆಯು ಸಾಧಕನ ಸೊತ್ತೇ ಹೊರೆತು ಸೋಮಾರಿಯ ಸ್ವತ್ತಲ್ಲ
- ವಿಶಾತಿ ಮಳೆ ಬಂದರೆ ಪಿಶಾಚಿ ಹಿಡಿದಂತೆ
- ವೇದ ಸುಳ್ಳಾದರೂ ಗಾದೆ ಸುಳ್ಳಾಗದು
- ಶಂಖದಿಂದ ಬಂದರೆ ತೀರ್ಥ
- ಶಕ್ತಿಗಿಂತ ಯುಕ್ತಿ ಮೇಲು
- ಶತ ದ್ರೋಹಿಗೆ ಜೋಡಿ ಶಾಲು
- ಶಸ್ತ್ರದಿಂದ ಆಗದ್ದು ಬುದ್ಧಿಯಿಂದ ಆಗುತ್ತದೆ
- ಶಿವ ಪೂಜೆಯಲ್ಲ ಕರಡಿ ಬಿಟ್ಟಂತೆ
- ಶುಭ ನುಡಿಯೇ ಸೋಮ ಗೂಬೆ ಬಂತಲ್ಲೋ ಮಾಮ
- ಶೆಟ್ಟಿ ಕೊಡ ಜೈನ ಬಿಡ
- ಶೆಟ್ಟಿ ಬಂಡವಾಳ ಸತ್ತಾಗ ಬಯಲಾಯ್ತು
- ಸಂಕಟ ಬಂದಾಗ ವೆಂಕಟರಮಣ
- ಸಂಕಟದ ಶಾವಿಗೆಗಿಂತ ಪರಿಮಳದ ಮುದ್ದೆಯೇ ಲೇಸು
- ಸಂಜೆಯ ಹೊತ್ತಿಗೆ ಮೂರು ಮೊಳ ನೇಯ್ದಂತೆ
- ಸಂಬಳ ಇಪ್ಪತ್ತಾದರೆ ಗಿಂಬಳ ಮುವ್ವತ್ತು
- ಸಗಣಿ ಜೊತೆಯ ಸರಸಕ್ಕಿಂತ ಗಂಧದ ಜೊತೆ ಗುದ್ದಾಟವೇ ಲೇಸು
- ಸಜ್ಜನರ ಸಹವಾಸ ಹೆಜ್ಜೇನು ಸವಿದಂತೆ
- ಸಜ್ಜನರ ದುಃಖ ದುರ್ಜನರ ಸಿರಿ ಶಾಶ್ವತವಲ್ಲ
- ಸತ್ಯಕ್ಕೆ ಸಾವಿಲ್ಲ ಸುಳ್ಳಿಗೆ ಕೊನೆಯಿಲ್ಲ
- ಸತ್ಯ ಶಾಶ್ವತ ಸುಳ್ಳು ಕ್ಷಣಿಕ
- ಸಮುದ್ರದ ನೆಂಟಸ್ತನ ಉಪ್ಪಿಗೆ ಬಡತನ

- ಸಾವಿರ ಕುದುರೆ ಸರದಾರ ಮನೆಯ ಹೆಂಡತಿಗೆ ಪಿಂಜಾರ
- ಸಾವಿರ ಸಲ ಗೋವಿಂದ ಅಂದ್ರೂ ಒಬ್ಬ ದಾಸಯ್ಯನಿಗೂ ಭಿಕ್ಷೆ ನೀಡಲಿಲ್ಲ
- ಸಾವಿರ ಸುಳ್ಳು ಹೇಳಿ ಮದುವೆ ಮಾಡು
- ಸ್ವಾತಿ ಮಳೆ ಬಂದರೆ ಮುತ್ತಿನ ಬೆಳೆಯಾಗುತ್ತೆ
- ಸಿಟ್ಟು ತನ್ನ ವೈರಿ ಶಾಂತಿ ಪರರ ವೈರಿ
- ಸಿದ್ಧಗಂಗೆ ಊಟ ಶಿವಗಂಗೆ ನೋಟ
- ಸುಮ್ಮನೆ ಇರಲಾರದೇ ಇರುವೆ ಬಿಟ್ಟುಕೊಂಡರು
- ಸೌಟು ಬಲ್ಲದೇ ಸಾರಿನ ರುಚಿಯಾ?
- ಹಂದಿಗೆ ಹಲವು ಮರಿ ಸಿಂಹಕ್ಕೆ ಒಂದೇ ಮರಿ
- ಹಗ್ಗ ಸಾಲದೆ ಬಾವಿ ಮುಚ್ಚಿದರಂತೆ
- ಹಡಗಿನ ವ್ಯಾಪಾರ ಉಪ್ಪಿಗೆ ಬರ
- ಹಣ್ಣು ಹಂಚಿ ತಿನ್ನು ಹೂವು ಕೊಟ್ಟು ಮುಡಿ
- ಹಣ್ಣೆಲೆ ಉದುರುವಾಗ ಚಿಗುರೆಲೆ ನಗುವುದು
- ಹತ್ತು ಮಕ್ಕಳ ತಾಯಾದರೂ ಹೆತ್ತ ಮಗನನ್ನು ಮರೆಯಲ್ಲ
- ಹತ್ತಾರು ಜನ ಓಡಾಡೋ ಕಡೇಲಿ ಹುಲ್ಲು ಬೆಳೆಯಲ್ಲ
- ಹತ್ತಿರದಿಂದ ಎತ್ತು ತಾ ದೂರದಿಂದ ಹೆಣ್ಣು ತಾ
- ಹನಿ ಹನಿ ಸೇರಿದರೆ ಹಳ್ಳ ತೆನೆ ತೆನೆ ಕೂಡಿದರೆ ಬಳ್ಳ
- ಹನುಮಂತನೇ ಹಗ್ಗ ತಿನ್ನುವಾಗ ಪೂಜಾರಿ ಶ್ಯಾವಿಗೆ ಕೇಳಿದಂತೆ
- ಹರೆಯದಲ್ಲಿ ಹಂದಿ ಕೂಡ ಚೆನ್ನಾಗಿರುತ್ತದೆ
- ಹಲ್ಲಿದ್ದವನಿಗೆ ಕಡ್ಲೆ ಇಲ್ಲ ಕಡಲೆ ಇದ್ದವನಿಗೆ ಹಲ್ಲಿಲ್ಲ
- ಹಲ್ಲಿ ಶಕುನ ಕೇಳಿ ಕಲ್ಲಿನಿಂದ ಹೊಡೆಸಿಕೊಂಡಂತೆ
- ಹಸಿದ ಬಯಕೆ ಚೆಂದ ಹಸಿರು ಕುಪ್ಪಸ ಚೆಂದ
- ಹಸಿದ ಬ್ರಾಹ್ಮಣನನ್ನು ಕೆಣಕಬೇಡ ಮೇಯ್ದ ದನವನ್ನು ಕೆಣಕಬೇಡ
- ಹಸಿದ ಮಾರಿ ಮುಂದೆ ಕುರಿ ಬಂದಂತೆ
- ಹಸಿದವನಿಗೇ ಗೊತ್ತು ಊಟದ ರುಚಿ
- ಹಳ್ಳೀಲಿ ಬಿದ್ದ ಅವಿವೇಕಿ ದಿಲ್ಲೀಲಿ ಎದ್ದ
- ಹಾಗಲಕಾಯಿಗೆ ಬೇವಿನಕಾಯಿ ಸಾಕ್ಷಿ
- ಹಾಲಿನಲ್ಲಿ ಹುಳಿ ಹಿಂಡಿದಂತೆ
- ಹಾವು ಸಾಯಬೇಕು ಕೋಲು ಮುರಿಯಬಾರದು

- ಹಾವು ಮುಪ್ಪಾದರೆ ವಿಷ ಮುಪ್ಪೇ?
- ಹಾಸಿಗೆ ಇದ್ದಷ್ಟು ಕಾಲು ಚಾಚು
- ಹಾಳುಗೆಡವಲು ಹೆಚ್ಚು ಶ್ರಮವೇಕೆ?
- ಹಿತ್ತಲಗಿಡ ಮದ್ದಲ್ಲ
- ಹಿರಿಯಕ್ಕನ ಚಾಳಿ ಮನೆ ಮಂದಿಗೆಲ್ಲ
- ಹುಚ್ಚು ಮುಂಡೆ ಮದುವೆಯಲ್ಲಿ ಉಂಡವನೇ ಜಾಣ
- ಹುಟ್ಟಿ ಬೆಳೆಯುತ್ತಾ ಅಣ್ಣ ತಮ್ಮಂದಿರು ಬೆಳೆಯುತ್ತಾ ದಾಯಾದಿಗಳು
- ಹುಣಸೆ ಮರ ಮುಪ್ಪಾದರೆ ಹುಳಿ ಮುಪ್ಪೇ?
- ಹುತ್ತ ದಾಟಬೇಡ ಹೆತ್ತವ್ವನನ್ನು ಬೈಯ್ಯಬೇಡ
- ಹೆಣ್ಣಿಗೆ ತವರು ಬೇಕು ಹೂವಿಗೆ ನಾರು ಬೇಕು
- ಹೆಣ್ಣಿಗೆ ಹಣವಿರಬಾರದು ಗಂಡಿಗೆ ಚಟವಿರಬಾರದು
- ಹೆಣ್ಣು ಮಕ್ಕಳಿಗೆ ತವರು ನೆಲೆ ಸರ್ಪಕ್ಕೆ ಹುತ್ತ ನೆಲೆ
- ಹೊಟ್ಟೆಗೆ ಇಟ್ಟಿಲ್ಲ ಜುಟ್ಟಿಗೆ ಮಲ್ಲಿಗೆ ಹೂವು
- ಹೆತ್ತವಳಿಗೆ ಹೆಗ್ಗಣ ಮುದ್ದು ಕಟ್ಟಿಕೊಂಡವಳಿಗೆ ಕೋಣ ಮುದ್ದು
- ಹೇನಿಗೆ ಅಂಜಿ ತಲೆ ಬೋಳಿಸಿದಂತೆ
- ಹೊರಲಾರದ ಕುದುರೆಗೆ ಲಾಳವೇ ಭಾರ
- ಹೊಳೆ ನೀರಿಗೆ ದೊಣೆ ನಾಯಕನ ಅಪ್ಪಣೆ
- ಹೊಳೆಯಲ್ಲಿ ಹುಣಿಸೆ ಹಣ್ಣು ತೊಳೆದಂತೆ
- ಹೋಗಿ ಬಾಳುವುದಕ್ಕಿಂತ ಸೇರಿ ಬಾಳುವುದೇ ಲೇಸು
- ಹೋದೆಯಾ ಪಿಶಾಚಿ ಎಂದರೆ ಬಂದೆ ಗವಾಕ್ಷಿಲಿ ಎಂದಂತೆ

## ಆ. ಛಾಯಾಚಿತ್ರಗಳು

ಇಸ್ಲಾಂ ಸ್ಮಾರಕಗಳು



ತಾತಯ್ಯ ಘೋರಿ, ಚಿಕ್ಕನಾಯಕನಹಳ್ಳಿ



ಮಲ್ಲಿಕ್ ರೆಹಾನ್ ದರ್ಗಾ, ಸಿರಾ

ಕ್ರೈಸ್ತ ಸ್ಮಾರಕಗಳು



ವೆಸ್ಲಿಯನ್ ಚರ್ಚ್, ತುಮಕೂರು



ಟಾಮ್ಲಿನ್‌ಸನ್ ಚರ್ಚ್ ಸಿರಾಗೇಟ್, ತುಮಕೂರು



ವಿಲಿಯಂ ಸೇಂಟ್ ಆರ್ಥರ್ ಚರ್ಚ್, ಗುಬ್ಬಿ.



ಲೂರ್ದುಮಾತಾ ಚರ್ಚ್ ಹೊರಪೇಟೆ, ತುಮಕೂರು

## ಕೋಟೆಗಳು



ಭೋಗನರಸಿಂಹ ದೇವರಾಯನದುರ್ಗ



ಕೋಟೆ, ಚೆನ್ನರಾಯನದುರ್ಗ

## ಜೈನ ಸಾಂಸ್ಕೃತಿಕ ಸ್ಮಾರಕಗಳು



ಆದಿನಾಥ ಬಸದಿ, ಗುಬ್ಬಿ



ಬಸದಿ/ಬಸ್ತಿ ಬೆಟ್ಟ, ಮಂದರಗಿರಿ



ನಿಟ್ಟೂರು ಶಾಂತಿನಾಥ ಬಸದಿಯ
ಒಳ ಚಾವಣಿಯಲ್ಲಿರುವ ಜ್ವಾಲಮಾಲಿನಿ ದೇವರು



ನಿಟ್ಟೂರು ಶಾಂತಿನಾಥ ಬಸದಿಯ
ಬಾಗಿಲ ತೊಲೆಯಲ್ಲಿರುವ ಶಾಸನ





ನಿಟ್ಟೂರು ಶಾಂತಿನಾಥ ಬಸದಿಯಲ್ಲಿರುವ ಶಾಸನಗಳು

# ವಕ್ತೃಗಳು



ಬಿ. ವಿ. ನಾಗರಾಜಪ್ಪನವರು ಬಂದ್ರೆಹಳ್ಳಿ



ರೇಣುಕಯ್ಯನವರು, ಅಸಾದಿ,
ಮೂಗನಾಯ್ಕನಕೋಟೆ



ದೊಡ್ಡನರಸಪ್ಪನವರು ಕುರಂಕೋಟೆ



ನರಸಪ್ಪನವರು, ಬಿಜವರ.



ಬೇವಿನಹಳ್ಳಿಯ ಪೂಜಾರಪ್ಪನವರು

ಸಾಂಸ್ಕೃತಿಕ ವೀರರ ಸ್ಮಾರಕಗಳು





ಕಳುವೋರಹಳ್ಳಿಯ ಜುಂಜಪ್ಪನ ತಾಯಿ ಸಿನ್ನಮ್ಮ, ಮತ್ತು ತಂದೆ ಕೆಂಗುರಿ ಮಲ್ಲೇಗೌಡರ ಸಮಾಧಿ



ಜುಂಜಪ್ಪನ ಗುಡ್ಡೆ, ಕಳುವೋರಹಳ್ಳಿ,



ಬೇವಿನಹಳ್ಳಿ ಗೊಲ್ಲರಹಟ್ಟಿಯಲ್ಲಿ ಜುಂಜಪ್ಪನ ದೇವಾಲಯ





ಸ್ವಾರಮ್ಮ ದೇವಾಲಯದ ಆವರಣದಲ್ಲಿರುವ ಶಿಲಾ ವಿಗ್ರಹಗಳು



ಮದ್ದೆ, ಕರೆಕ್ಯಾತನಹಳ್ಳಿಯ ಸ್ವಾರಮ್ಮ ವಿಗ್ರಹ



ಸ್ವಾರಮ್ಮಳ ಪತಿ ಶಂಕರಲಿಂಗನ ದೇವಾಲಯ



ಶಂಕರಲಿಂಗ ಬೆಟ್ಟದ ಮೇಲಿನಿಂದ ಸ್ವಾರಮ್ಮ ದೇವಾಲಯದ ನೋಟ



ವೀರನಾಗಪ್ಪನ ದೇವಾಲಯದ ಆವರಣದಲ್ಲಿರುವ ಶಿಲಾ ವಿಗ್ರಹ, ಮರೂರು



ಗರ್ಭಗುಡಿಯಲ್ಲಿರುವ ಪೂಜಾ ಶಿಲಾ ವಿಗ್ರಹ



ವೀರನಾಗಪ್ಪ ದೇವಾಲಯ, ಮರೂರು.



ಮರೂರು ವೀರನಾಗಪ್ಪನ ಕಂಚಿನ ವಿಗ್ರಹ,



ಶೂಲದ ಈರಣ್ಣನ ದೇವಾಲಯದ ಮುಂದೆ ಇರುವ ಶಿಲ್ಪ, ನಿಡಗಲ್ಲು



ನಾಗಮ್ಮ ದೇವಾಲಯ, ತಾಡಿ ಗ್ರಾಮ.



ತಾಡಿ ನಾಗಮ್ಮ ದೇವಾಲಯದ ಆವರಣದಲಿರುವ ಪ್ರಾಚೀನ ಕಲ್ಯಾಣಿ



ಬಂದ್ಕುಂಟೆ ಈರುಚಿಕ್ಕಣ್ಣನ ವಿಗ್ರಹ



ಬಂದ್ಕುಂಟೆ ಈರುಚಿಕ್ಕಣ್ಣ – ಮಾಹಿತಿ ಫಲಕ



ಪಾಲನಹಳ್ಳಿ ಕುಮಾರರಾಮ ಪೂಜಾ ವಿಗ್ರಹ



ಕುಮಾರರಾಮ ದೇವಾಲಯದಲ್ಲಿರುವ ಶಾಸನ





ಕುಮಾರರಾಮ ದೇವಾಲಯದಲ್ಲಿರುವ ಶಾಸನಗಳು

## ಇ. ಸಾಂಸ್ಕೃತಿಕ ಕೇಂದ್ರಗಳು

ತುಮಕೂರು ಜಿಲ್ಲೆಯಲ್ಲಿ ಸಾಂಸ್ಕೃತಿಕವಾಗಿ ಮಹತ್ವವನ್ನು ಪಡೆದಿರುವ ಕೆಲವು ಸ್ಥಳಗಳನ್ನು ಇಲ್ಲಿ ಪಟ್ಟಿ ಮಾಡಲಾಗಿದೆ.

- ತುಮಕೂರು, ದೇವರಾಯನದುರ್ಗ, ಸೀತಕಲ್ಲು, ಮಂದರಗಿರಿ, ಗೂಳೂರು, ಹೆಬ್ಬೂರು, ಕೈದಾಳ, ಹೆಗ್ಗೆರೆ, ಚಿಕ್ಕತೊಟ್ಲುಕೆರೆ
- ಗುಬ್ಬಿ, ಚೇಳೂರು, ಹಾಗಲವಾಡಿ, ನಿಟ್ಟೂರು, ಕಡಬ,
- ಕುಣಿಗಲ್, ಹುತ್ರಿದುರ್ಗ, ಹುಲಿಯೂರುದುರ್ಗ, ಎಡೆಯೂರು, ಅಮೃತೂರು, ಚಿಕ್ಕಮಾವತ್ತೂರು, ಸಂತೆಮಾವತ್ತೂರು, ಯಲಗಲವಾಡಿ
- ಪಾವಗಡ, ನಿಡಗಲ್ಲು, ಯಲ್ಲಪ್ಪನಾಯಕನ ಹೊಸಕೋಟೆ, ಕರೇಕ್ಯಾತನಹಳ್ಳಿ, ಗಾರೆಬೆಟ್ಟ, ಮದ್ದೇ ಗ್ರಾಮ. ಯಲ್ಲಪ್ಪನಾಯಕನ ಹೊಸಕೋಟೆ, ಜಂಗಮರಹಳ್ಳಿ, ಬಳ್ಳಕಟ್ಟೆ, ಅರಸೀಕೆರೆ
- ತುರುವೇಕೆರೆ, ಸಂಪಿಗೆ, ತಂಡಗ, ದಂಡಿನಶಿವರ,
- ತಿಪಟೂರು, ಅರಳಗುಪ್ಪೆ, ಹೊನ್ನವಳ್ಳಿ, ನೊಣವಿನಕೆರೆ, ಬೈರನಾಯಕನಹಳ್ಳಿ, ಶೆಟ್ಟಿಹಳ್ಳಿ, ಬಸ್ತಿಹಳ್ಳಿ, ವಾಸುದೇವರಹಳ್ಳಿ,
- ಚಿಕ್ಕನಾಯಕನಹಳ್ಳಿ, ಮದಗದಗುಡ್ಡ, ಹಂದನಕೆರೆ, ಕಂದಿಕೆರೆ, ಗೋಡೆಕೆರೆ, ಮದಲಿಂಗನಗುಡ್ಡ, ಮಂಚಲದೊರೆ, ಹುಳಿಯಾರು
- ಕೊರಟಗೆರೆ, ಸಿದ್ದರಬೆಟ್ಟ, ಚೆನ್ನರಾಯನದುರ್ಗ, ಹೊಳವನಹಳ್ಳಿ, ತುಂಬಾಡಿ, ವಡ್ಡಗೆರೆ, ಕ್ಯಾಶವಾರ, ಅರಸಾಪುರ, ಕೋಡಗದಾಲ, ಪುವರ, ಪಾಲನಹಳ್ಳಿ, ನೇಗಲಾಲ
- ಸಿರಾ, ಮರಡಿಗುಡ್ಡ, ಬರಗೂರು, ಕಳುವರಹಳ್ಳಿ, ಹುಳಿಯಾರು, ಪಟ್ಟನಾಯಕನಹಳ್ಳಿ, ಬರಗೂರು, ಬೇವಿನಹಳ್ಳಿ, ದಿಬ್ಬದವೀರಬೊಮ್ಮನಹಳ್ಳಿ, ಯಾದಲಡುಕು, ಬಂದಕುಂಟೆ
- ಮಧುಗಿರಿ, ಮಿಡಿಗೇಶಿ, ಮಧುಗಿರಿಯ ದುರ್ಗದ ಕೋಟೆ, ಕೋಡಗದಾಲ, ಸಿದ್ದಾಪುರ, ಮಿಡಿಗೇಶಿ, ಬಿಜ್ಜಾವರ, ಹಂದ್ರಾಳು, ಹೊಸಕೆರೆ, ಅವರ್ಗಲ್ಲು, ತಾಡಿ ಮುಂತಾದುವು

## ಈ. ನಕಾಶೆಗಳು

- ತುಮಕೂರು ಜಿಲ್ಲೆಯ ಭೌಗೋಳಿಕ ನೆಲೆ
- ತುಮಕೂರು ಜಿಲ್ಲೆಯ ಭೌಗೋಳಿಕ ಎಲ್ಲೆ
- ತುಮಕೂರು ಜಿಲ್ಲೆಯ ತಾಲೂಕು ಕೇಂದ್ರಗಳು – ೧
- ತುಮಕೂರು ಜಿಲ್ಲೆಯ ಸಾಂಸ್ಕೃತಿಕ ಸ್ಥಳಗಳು – ೨
- ತುಮಕೂರು ಜಿಲ್ಲೆಯ ಸಾಂಸ್ಕೃತಿಕ ಸ್ಥಳಗಳು – ೩

## ತುಮಕೂರು ಜಿಲ್ಲೆಯ ಭೌಗೋಳಿಕ ನೆಲೆ




## ತುಮಕೂರು ಜಿಲ್ಲೆಯ ಭೌಗೋಳಿಕ ಎಲ್ಲೆ



## • ತುಮಕೂರು ಜಿಲ್ಲೆಯ ತಾಲೂಕು ಕೇಂದ್ರಗಳು – ೧

೧) ತುಮಕೂರು ೨) ಕೊರಟಗೆರೆ ೩) ಗುಬ್ಬಿ ೪) ಕುಣಿಗಲ್ ೫) ತುರುವೇಕೆರೆ
೬) ತಿಪಟೂರು ೭) ಚಿಕ್ಕನಾಯಕನಹಳ್ಳಿ ೮) ಸಿರಾ ೯) ಮಧುಗಿರಿ ೧೦) ಪಾವಗಡ

**ತುಮಕೂರು ಜಿಲ್ಲೆಯ ತಾಲೂಕು ಕೇಂದ್ರಗಳು – ೧**



## • ತುಮಕೂರು ಜಿಲ್ಲೆಯ ಸಾಂಸ್ಕೃತಿಕ ಸ್ಥಳಗಳು – ೨

೧) ಜುಂಜಪ್ಪನಗುಡ್ಡೆ ೨) ತಡಕಲೂರು ೩) ಹಾಗಲವಾಡಿ ೪) ಜಾನಕಲ್ಲು ೫) ಗುಂಡಾರ್ಲಹಳ್ಳಿ ೬) ಬಂದಕುಂಟೆ ೭) ನಾಗಲಮಡಿಕೆ ೮) ಬಿಜ್ಜಾವರ ೯) ಹೊಳವೇಗೌಡನಹಳ್ಳಿ ೧೦) ಕೈದಾಳ ೧೧) ಗೂಳೂರು ೧೨) ಶೆಟ್ಟಿಕೆರೆ ೧೩) ಹೆಗ್ಗೆರೆ (ಘನಪುರಿ) ೧೪) ಅರಳಗುಪ್ಪೆ ೧೫) ಕೇಶವಾಡ ೧೬) ಎಡೆಯೂರು ೧೭) ಹುಲಿಯೂರುದುರ್ಗ ೧೮) ತಂಡಗ ೧೯) ಕಡಬ ೨೦) ಚೇಳೂರು ೨೧) ಮಿಡಿಗೇಶಿ

**ತುಮಕೂರು ಜಿಲ್ಲೆಯ ಸಾಂಸ್ಕೃತಿಕ ಸ್ಥಳಗಳು – ೨**



## • ತುಮಕೂರು ಜಿಲ್ಲೆಯ ಸಾಂಸ್ಕೃತಿಕ ಸ್ಥಳಗಳು – ೩

೧) ಹೊಸಕೆರೆ ೨) ತಾಡಿ ೩) ವಡ್ಡಗೆರೆ ೪) ಪೆನುಕೊಂಡೆ ೫) ತುಂಬಾಡಿ ೬) ನೆಲಮಂಗಲ ೭) ಕರೇಕ್ಯಾತನಹಳ್ಳಿ ೮) ಚಿಕ್ಕಸ್ವಾರಗಿರಿ ೯) ಮದ್ದೇಗ್ರಾಮ ೧೦) ಮರೂರು ೧೧) ರಾಜವಂತೆ ೧೨) ವೀರಬೊಮ್ಮನಹಳ್ಳಿ ೧೩) ಬರಗೂರು ೧೪) ಬೇವಿನಹಳ್ಳಿಗೊಲ್ಲರಹಟ್ಟಿ ೧೫) ಕಳುವರಹಳ್ಳಿ ೧೬) ಕಂಬೇರಹಟ್ಟಿ ೧೭) ಸಿದ್ಧರಬೆಟ್ಟ ೧೮) ಕುರಂಕೋಟೆ ೧೯) ಹೊಲತಾಳು ೨೦) ಪಾಲನಹಳ್ಳಿ ೨೧) ಹುಳಿಯಾರು ೨೨) ಮದಲಿಂಗನ ಕಣಿವೆ ೨೩) ಜುಂಜಪ್ಪನಗುಡ್ಡೆ ೨೪) ತಡಕಲೂರು ೨೫) ಬದಕೆಗುಡ್ಲು ೨೬) ದೊಡ್ಡೆಣ್ಣೆಗೆರೆ ೨೭) ನಿಡಗಲ್ಲು ೨೮) ಮಂದರಗಿರಿ ೨೯) ದೇವರಾಯನದುರ್ಗ ೩೦) ಸಂಪಿಗೆ ೩೧) ಕರಡಿ ೩೨) ನಿಟ್ಟೂರು ೩೩) ಹುತ್ರಿದುರ್ಗ



## ಉ. ಪರಾಮರ್ಶನ ಗ್ರಂಥಗಳು

### ಪ್ರಾಥಮಿಕ ಆಕರಗಳು

- ಅಭಿಶಂಕರ್ ಕೆ. ೧೯೬೯ *"ತುಮಕೂರ್ ಗೆಜೆಟಿಯರ್"* ಬೆಂಗಳೂರು, ಕರ್ನಾಟಕ ಸರ್ಕಾರ.
- ಚಂದ್ರಶೇಖರ್ ಎನ್. (ಸಂ) ೨೦೧೭ "ತುಮಕೂರು ಜಿಲ್ಲಾ ಗ್ಯಾಸೆಟಿಯರ್" ಬೆಂಗಳೂರು, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ. *"ಎಪಿಗ್ರಾಫಿಯ ಕರ್ನಾಟಿಕ "* ಸಂಪುಟಗಳು.
- ಕಲಬುರ್ಗಿ ಎಂ. ಎಂ. (ಸಂ) ೧೯೯೪ *"ಕರ್ನಾಟಕದ ಕೈಫಿಯತ್ತುಗಳು"* ಹಂಪಿ ಪ್ರಸಾರಂಗ ಕ. ವಿ. ವಿ.
- ಕನ್ನಡ ವಿಷಯ ವಿಶ್ವಕೋಶ *"ಜಾನಪದ"* ೨೦೦೬ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿ. ವಿ.
- ಪ್ರಾನ್ಸಿಸ್ ಬುಕನಾನ್ ೨೦೧೦ *"ಎ ಜರ್ನಿ ಫ್ರಂ ಮದ್ರಾಸ್ ಥ್ರೂ ದಿ ಕಂಟ್ರೀಸ್ ಆಫ್ ಮೈಸೂರ್ ಕೆನರಾ ಅಂಡ್ ಮಲಬಾರ್"* ಗೆಜೆಟಿಯರ್ ಡಿಪಾರ್ಟ್‌ಮೆಂಟ್, ಗೌರ್ನಮೆಂಟ್ ಆಫ್ ಕರ್ನಾಟಕ.
- *"ಸೌತ್ ಇಂಡಿಯನ್ ಇನ್ಸ್ಕ್ರಿಪ್ಷನ್ಸ್"* ix ಭಾಗ-೧
- ಯೋಗೀಶ್ವರಪ್ಪ ಡಿ. ಎನ್. (ಸಂ) ೨೦೦೭ *"ಚರಿತ್ರೆಯ ಆಕರ ಸಂಪುಟ" ಅಪ್ರಕಟಿತ ಪ್ರಾಚೀನ ಸಾಹಿತ್ಯಮಾಲೆ* ಬೆಂಗಳೂರು, ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ.
- ರಾಜಶೇಖರಪ್ಪ ಬಿ. (ಸಂ) ೨೦೦೭ *"ಚಿತ್ರದುರ್ಗ ಪಾಳೆಯಗಾರರ ದಾಖಲೆಗಳು" ದೊಡ್ಡಮದಕೇರಿನಾಯಕನ ಕೈಫಿಯತ್ತು. ಅಪ್ರಕಟಿತ ಪ್ರಾಚೀನ ಸಾಹಿತ್ಯಮಾಲೆ ೩* ಬೆಂಗಳೂರು, ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ.

### ಆನುಷಂಗಿಕ ಆಕರಗಳು

- ಅರ್ಕಸಾಲಿ ವೃಷಬೇಂದ್ರಾಚಾರ್ ೨೦೧೦ *"ಮಳೆರಾಜ ಪರಂಪರೆ"* ಹಂಪಿ, ಪ್ರಸಾರಾಂಗ ಕ. ವಿ. ವಿ.
- ಅಮರೇಶ ನುಗಡೋಣಿ (ಸಂ) ೨೦೧೪ *"ಕಥೆ ಹುಟ್ಟುವ ಪರಿ"* ಹಂಪಿ, ಪ್ರಸಾರಾಂಗ ಕ. ವಿ. ವಿ.
- ಅಮರೇಶ ನುಗಡೋಣಿ ೨೦೧೪ *"ತತ್ವಪದ ಸಾಹಿತ್ಯ ಅಧ್ಯಯನ"* ಹಂಪಿ, ಪ್ರಸಾರಾಂಗ ಕ. ವಿ. ವಿ.
- ಅಮೃತಸೋಮೇಶ್ವರ ೨೦೦೭ *"ತುಳುವ ಜಾನಪದ ಕೆಲವು ನೋಟಗಳು"* ಹಂಪಿ, ಪ್ರಸಾರಂಗ ಕ. ವಿ. ವಿ.

- ಅಂಗಡಿ ಎಸ್. ಎಸ್. ೨೦೧೦ "*ಶಂಭಾ ಜೋಷಿ ಭಾಷಾ ವಿವೇಚನೆ*" ಹಂಪಿ, ಪ್ರಸಾರಾಂಗ ಕ. ವಿ. ವಿ.
- ಅಂಬಳಿಕೆ ಹಿರಿಯಣ್ಣ ೨೦೦೦ "*ಜಾನಪದ ಪ್ರಕ್ರಿಯೆ: ಹಾಂಕೋ ದೃಷ್ಟಿ*" ಹಂಪಿ, ಪ್ರಸಾರಾಂಗ ಕ. ವಿ. ವಿ.
- ಆದ್ಯರಾಮಾಚಾರ್ಯ ೨೦೦೩ "*ಕರಿಗಿರೀಶ ದೇವರಾಯನದುರ್ಗ*" ಕನ್ನಡ ಕ್ಷೇತ್ರಪಾಲ ನೃಸಿಂಹನನ್ನು ಕುರಿತ ಐತಿಹಾಸಿಕ ಕೃತಿ. ಬೆಂಗಳೂರು, ಶ್ರೀಮತಿ ಹೆಚ್. ಕೆ. ವಸುಂದರಾ ಎಸ್.ವಿ ಪ್ರಿಂಟರ್ಸ್
- ಇಸ್ಮಾಯಿಲ್ ಜಬೀರ್ ಬಾವಾಜಿ ೨೦೧೦ "*ಮೌಖಿಕ ಪರಂಪರೆ ಮತ್ತು ಚರಿತ್ರೆ*" ಮೈಸೂರು, ಮಾತಾ ಪ್ರಿಂಟರ್ಸ್.
- ಕಂಟಲಗೆರೆ ಸಣ್ಣಹೊನ್ನಯ್ಯ ೨೦೧೧ "*ಅಸಾದಿಗಳ ಬದುಕು ಮತ್ತು ಸಂಸ್ಕೃತಿ*" ತುಮಕೂರು, ತುಮಕೂರು ವಿಶ್ವವಿದ್ಯಾನಿಲಯ
- ಕಮಲೇಶ್ ೨೦೦೯ "*ಚಿಕ್ಕನಾಯಕನಹಳ್ಳಿ ತಾಲೂಕ್ ಐತಿಹಾಸಿಕ ಮತ್ತು ಸಾಂಸ್ಕೃತಿಕ ಅಧ್ಯಯನ (ಕ್ರಿ.ಶ.೧೭೨೦ ರಿಂದ ಕ್ರಿ.ಶ ೧೯೦೦)*" ಬೆಂಗಳೂರು, ಅಂಕಿತ ಪುಸ್ತಕ ಪ್ರಕಾಶನ.
- ಕಲಬುರ್ಗಿ ಎಂ. ಎಂ. (ಸಂ) ೧೯೯೯ "*ಪ್ರಾಚೀನ ಕರ್ನಾಟಕದ ಆಡಳಿತ ವಿಭಾಗಗಳು ಭಾಗ-೧*" ಹಂಪಿ, ಪ್ರಸಾರಂಗ ಕ. ವಿ. ವಿ.
- ಕಲಬುರ್ಗಿ ಎಂ. ಎಂ. (ಸಂ) ೨೦೦೧ "*ಕೊಮಾರ ರಾಮಯ್ಯನ ಚರಿತ್ರೆ*" ಹಂಪಿ, ಪ್ರಸಾರಂಗ ಕ. ವಿ. ವಿ.
- ಕೃಷ್ಣಮೂರ್ತಿ ಪಿ. ವಿ. ೨೦೧೧ "*ಶಾಸನ, ಇತಿಹಾಸ ಮಂಥನ*" ಭಾಷಾಭಿವೃದ್ಧಿ ಯೋಜನೆ, ತುಮಕೂರು ವಿಶ್ವವಿದ್ಯಾನಿಲಯ.
- ಕಾವಲ್ಲಮ್ಮ ಆರ್. ೨೦೦೫ "*ಮಧುಗಿರಿ ಮಹಾನಾಡು ಪ್ರಭುಗಳು*" ಕೃಷ್ಣಾಪುರದೊಡ್ಡಿ, ಬೆಂಗಳೂರು, ಪ್ರಕಾಶನ ಕೆ.ಎಸ್.ಮುದ್ದಪ್ಪ ಸ್ಮಾರಕ ಟ್ರಸ್ಟ್.
- ಕೆಂಕೆರೆ ಹನುಮಂತೇಗೌಡ (ಸಂ) ೨೦೧೧ "ಸಾಂಸ್ಕೃತಿಕ ವೀರರು ಮತ್ತು *ಮಹಾಸತಿಯರ ಲಾವಣಿಗಳು*" ಭಾಷಾಭಿವೃದ್ಧಿ ಯೋಜನೆ, ತುಮಕೂರು ವಿಶ್ವವಿದ್ಯಾನಿಲಯ.
- ಕೆಂಕೆರೆ ಹನುಮಂತೇಗೌಡ ೨೦೧೫ "*ದೇವಗುಂದ ಮಹಾನಾಡ ಪ್ರಭುಗಳು*" ಬೆಂಗಳೂರು, ಗೋಧೂಳಿ ಪ್ರಕಾಶನ.
- ಕ್ಯಾತನಹಳ್ಳಿ ರಾಮಣ್ಣ (ಸಂ) ೧೯೯೧ "*ಫ್ಲೀಟರು ಸಂಗ್ರಹಿಸಿದ ಲಾವಣಿಗಳು*" ಮೈಸೂರು ವಿಶ್ವವಿದ್ಯಾನಿಲಯ
- ಗಣಪತಿಗೌಡ ೨೦೧೧ "*ಗ್ರಾಮ ಒಕ್ಕಲಿಗರ ಸಾಂಸ್ಕೃತಿಕ ಅನನ್ಯತೆ ಮತ್ತು ಸಮಕಾಲೀನ ಸಂದರ್ಭಗಳು*" ಹಂಪಿ, ಪ್ರಸಾರಾಂಗ ಕ. ವಿ. ವಿ.
- ಗಂಗಾಧರ ದೈವಜ್ಞ ೨೦೧೫ "*ಬುಡಕಟ್ಟು ಸಮಾಜ ಹುಟ್ಟು-ಸಾವಿನ ನಡುವೆ*" ಹಂಪಿ.

ಪ್ರಸಾರಾಂಗ ಕ. ವಿ. ವಿ.

- ಗೋಪಾಲ ಬಾ. ರಾ ೧೯೯೬ "ಇತಿಹಾಸಶಾಸ್ತ್ರ ಮತ್ತು ಸಿದ್ಧಾಂತ" ಮೈಸೂರು, ಪ್ರಸಾರಾಂಗ ಮೈಸೂರು ವಿ. ವಿ.
- ಗೋಪಾಲ್ ಆರ್. (ಸಂ) ೨೦೦೯ *"ತುಮಕೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ"* ಮೈಸೂರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ.
- ಗೋವಿಂದರಾಜು ಸಿ. ಆರ್. ೨೦೦೯ *"ನವಚಾರಿತ್ರಿಕವಾದ"* ಹಂಪಿ, ಪ್ರಸಾರಂಗ ಕ. ವಿ. ವಿ.
- ಚಂದ್ರ ಪೂಜಾರಿ ಎಂ. ೨೦೧೧ *"ಸಂಶೋಧನೆ ಏನು? ಏಕೆ? ಹೇಗೆ?"* ಹಂಪಿ, ಪ್ರಸಾರಂಗ ಕ. ವಿ. ವಿ.
- ಚಂದ್ರ ಪೂಜಾರಿ ಎಂ. ೨೦೦೮ *"ಸಂಶೋಧನಾ ಪ್ರಸ್ತಾವ"* ಹಂಪಿ, ಪ್ರಸಾರಂಗ ಕ. ವಿ. ವಿ.
- ಚಂದ್ರ ಪೂಜಾರಿ ಎಂ. ೨೦೦೮ *"ಸಂಶೋಧನಾ ಜವಾಬ್ದಾರಿ"* ಹಂಪಿ, ಪ್ರಸಾರಂಗ ಕ. ವಿ. ವಿ.
- ಚಂದ್ರ ಪೂಜಾರಿ ಎಂ. ೨೦೧೧ *"ಸಮಾಜ ಸಂಶೋಧನೆ"* ಹಂಪಿ, ಪ್ರಸಾರಂಗ ಕ. ವಿ. ವಿ.
- ಚಂದ್ರಶೇಖರ ಟಿ. ಆರ್. ೨೦೧೨ *"ಕರ್ನಾಟಕ ಜನಗಣತಿ ೨೦೧೧"* ಹಂಪಿ, ಪ್ರಸಾರಂಗ ಕ. ವಿ. ವಿ.
- ಚಂದ್ರು ಕಾಳೇನಹಳ್ಳಿ ೨೦೧೧ *"ಮಂಟೇಸ್ವಾಮಿ ಕಾವ್ಯ"* ಹಂಪಿ, ಪ್ರಸಾರಾಂಗ ಕ. ವಿ. ವಿ.
- ಚನ್ನಬಸಪ್ಪ ಎಸ್. ಪಾಟೀಲ ೧೯೯೯ *"ಕರ್ನಾಟಕ ಕೋಟೆಗಳು ಸಂಪುಟ-೧"* ಹಂಪಿ, ಪ್ರಸಾರಂಗ ಕ. ವಿ. ವಿ.
- ಚನ್ನಬಸವಯ್ಯ ಹಿರೇಮಠ ೨೦೧೪ *"ಪ್ರಾಚೀನ ಕರ್ನಾಟಕದ ರಾಜಕೀಯ ವಿಭಾಗಗಳು"* ಹಂಪಿ, ಪ್ರಸಾರಾಂಗ ಕ. ವಿ. ವಿ.
- ಚಲುವರಾಜು (ಸಂ) ೧೯೯೭ *"ಜುಂಜಪ್ಪ"* ಬುಡಕಟ್ಟು ಮಹಾಕಾವ್ಯಮಾಲೆ. ಹಂಪಿ, ಪ್ರಸಾರಂಗ ಕ. ವಿ. ವಿ.
- ಚಿಕ್ಕವೀರಯ್ಯ ವೀ. ೧೯೯೧ *"ಸಿದ್ಧರಬೆಟ್ಟ ಒಂದು ದರ್ಶನ"* ಸಿದ್ಧರಬೆಟ್ಟ, ಸಿದ್ಧೇಶ್ವರ ಸ್ವಾಮಿ ಸೇವಾ ಸಮಿತಿ.
- ಚಿಕ್ಕಣ್ಣಯಣ್ಣೆಕಟ್ಟೆ ೧೯೯೮ *"ಚಿತ್ರದೇವರ ಕಾವ್ಯ"* ಶಿರಾ, ಗಡಿನಾಡ ಜಾನಪದ ಸಂಪರ್ಕ ಕೇಂದ್ರ.
- ಚಿಕ್ಕಣ್ಣಯಣ್ಣೆಕಟ್ಟೆ ೨೦೦೧ *"ತುಮಕೂರು ಜಿಲ್ಲಾ ಜಾನಪದ ಅಧ್ಯಯನ"* ಶಿರಾ

- ಚಿಕ್ಕಣ್ಣ ಯಣ್ಣೆಕಟ್ಟೆ ೨೦೦೩ *"ತುಮಕೂರು ಜಿಲ್ಲಾ ಜಾತ್ರೆಗಳು"* ಬೆಂಗಳೂರು, ಕನ್ನಡ ಪುಸ್ತಕ ಪ್ರಾಧಿಕಾರ ಪ್ರಕಾಶನ.
- ಚಿಕ್ಕಣ್ಣಯಣ್ಣೆಕಟ್ಟೆ ೨೦೦೧ *"ಕಿನ್ನರಿಯ ಮೇಲೆ ಕಿರುಗೆಜ್ಜೆ"* ಶಿರಾ, ಗಡಿನಾಡ ಜಾನಪದ ಸಂಪರ್ಕ ಕೇಂದ್ರ.
- ಚಿತ್ತಯ್ಯ ಪೂಜಾರ್ ೨೦೧೧ *"ಬಿಸಿಲಬೇವು"* ಬೆಂಗಳೂರು, ಸಿವಿಜಿ ಇಂಡಿಯಾ.
- ಚಿತ್ತಯ್ಯಪೂಜಾರ್.ಡಿ.ಕೆ ೨೦೧೦ *"ನಿಡಗಲ್ಲು ದುರ್ಗದ ಕಥನ-ಸ್ಥಳೀಯ ಸಂಸ್ಕೃತಿ ಚರಿತ್ರೆಯ ನಿರ್ವಚನ"* ಬೆಂಗಳೂರು, ಸೃಷ್ಟಿ ಪಬ್ಲಿಕೇಷನ್ಸ್.
- ಚಿನ್ನಸ್ವಾಮಿ ಸೋಸಲೆ ೨೦೦೪ *"ಸಾಮ್ರಾಜ್ಯ ಮತ್ತು ಸಂಸ್ಥಾನ"* ಹಂಪಿ, ಪ್ರಸಾರಾಂಗ ಕ. ವಿ. ವಿ.
- ಚಿನ್ನಸ್ವಾಮಿ ಸೋಸಲೆ ೨೦೧೨ *"ದಲಿತರ ಬದುಕು – ಮೆಲುಕು"* ಹಂಪಿ, ಪ್ರಸಾರಾಂಗ ಕ. ವಿ. ವಿ.
- ಚಿನ್ನಸ್ವಾಮಿ ಸೋಸಲೆ (ಸಂ) ೨೦೧೭ "ಪ್ರಾಚೀನ ಜೈನಕಾವ್ಯಗಳಲ್ಲಿ ಚಾರಿತ್ರಿಕ ಪ್ರಜ್ಞೆ" ಹಂಪಿ, ಪ್ರಸಾರಾಂಗ ಕ. ವಿ. ವಿ.
- ಚಿನ್ನಸ್ವಾಮಿ ಸೋಸಲೆ *"ಅನ್ ಆಬ್ಜೆಕ್ಟೀವ್ ಸ್ಟಡಿ ಆಫ್ ಇನ್‌ಹ್ಯೂಮನ್ ಪ್ರಾಕ್ಟೀಸಸ್ ಅಂಡ್ ಅಟ್ರಾಸಿಟೀಸ್ ಆನ್ ದಲಿತ್ಸ್ ಇನ ಕರ್ನಾಟಕ"* ಹೊಸಪೇಟೆ, ಸೋಸಲೆ ಪ್ರಕಾಶನ.
- ಚೆಲುವರಾಜನ್ ವಿ. ಆರ್. ೨೦೦೯ *"ಪಾವಗಡ ಕ್ಷೇತ್ರ ದರ್ಶನ"* ಪಾವಗಡ, ಅಲಂಕಾರ್ ಪ್ರಕಾಶನ.
- ಚೆಲುವರಾಜನ್ ವಿ. ಆರ್. ೨೦೧೩ *"ನಿಡಗಲ್ಲು ಲಕ್ಷ್ಮೀನರಸಿಂಹಸ್ವಾಮಿ"* ಪಾವಗಡ, ಅಲಂಕಾರ್ ಪ್ರಕಾಶನ.
- ಜ್ಯೋತಿ ಹಸೂರ ೨೦೧೧ *"ಡಾ.ಶಂಭಾ ಜೋಷಿಯವರ ಅಸಂಕಲಿತ ಲೇಖನಗಳು"* ಹಂಪಿ, ಪ್ರಸಾರಾಂಗ ಕ. ವಿ. ವಿ.
- ಡೇವಿಡ್ ಕೆ. ದುನವೇ, ವಿಲ್ಲ ಕೆ.ಬಾಮ್ (ಸಂ) ೧೯೮೪ & ೧೯೯೬ "ಅನ್ ಇಂಟರ್ ಡಿಸಿಪ್ಲಿನರಿ ಅಂಥೋಲಜಿ" ಕ್ಯಾಲಿಫೋರ್ನಿಯ, ಲಂಡನ್, ನ್ಯೂಡೆಲ್ಲಿ, ಅಲ್ತಮಿರ ಪ್ರೆಸ್, ಎ ಡಿವಿಜನ್ ಆಫ್ ಎಸ್‌ಎಜಿಇ ಪಬ್ಲಿಕೇಷನ್ಸ್.
- ತಾರಿಹಳ್ಳಿ ಹನುಮಂತಪ್ಪ (ಸಂ) ೨೦೧೨ *"ಮಾನವ ಮತ್ತು ಸಾಂಸ್ಕೃತಿಕ ಪಲ್ಲಟಗಳು"* ಹಂಪಿ, ಪ್ರಸಾರಾಂಗ ಕ. ವಿ. ವಿ.
- ತಿಮ್ಮೇಗೌಡ ಎನ್. ಎಸ್. (ಸಂ) ೧೯೮೧ *"ತುಮಕೂರು ಜಿಲ್ಲೆಯ ಜಾನಪದ ನಂಬಿಕೆಗಳು"* ಬೆಂಗಳೂರು, ಕ. ಸಾ. ಪ.
- ಧೀಕ್ಷಿತ್ ಜಿ. ಎಸ್, ಕುಪ್ಪುಸ್ವಾಮಿ, ಮತ್ತು ಮೋಹನ್.ಎಸ್.ಕೆ. (ಕನ್ನಡಕ್ಕೆ-ನೀಲತ್ತಹಳ್ಳಿ ಕಸ್ತೂರಿ) ೨೦೦೦ *"ಕರ್ನಾಟಕದಲ್ಲಿ ಕೆರೆ ನೀರಾವರಿ"* ಹಂಪಿ, ಪ್ರಸಾರಾಂಗ ಕ. ವಿ. ವಿ.

- ನಂದೀಶ್ವರ ಎನ್. ೨೦೦೮ *"ಶಿರಾ ತಾಲೂಕು ದರ್ಶನ"* ಶಿರಾ, ತೇಜಸ್ವೀ ಪ್ರಕಾಶನ.
- ನಂದೀಶ್ವರ ಎನ್. ೨೦೦೮ *"ಸಿರಾ ತಾಲೂಕಿನ ಸ್ಮಾರಕಗಳು ಹಾಗೂ ಶಾಸನಗಳು"* ಶಿರಾ, ತೇಜಸ್ವೀ ಪ್ರಕಾಶನ.
- ನಾಗರತ್ನಮ್ಮ ಎಸ್. ೨೦೦೯ "ತುಮಕೂರು *ಜಿಲ್ಲೆಯಲ್ಲಿ ಸ್ವಾಂತಂತ್ರ್ಯ ಚಳವಳಿ"* ಬೆಂಗಳೂರು, ದೇಸೀ ಪುಸ್ತಕ ಪ್ರಕಾಶನ.
- ನಾಗರಾಜು ಎಂ. ಹೆಚ್. ೨೦೦೩ *"ಕುಂಚಿಟಿಗ ಸಾಂಸ್ಕೃತಿಕ ಇತಿಹಾಸ"* ತುಮಕೂರು, ಅನಿಕೇತನ ಪ್ರಕಾಶನ.
- ನಾಗರಾಜು ಓ. ೨೦೧೦ *"ಕುರಂಗರಾಜ ವೈಭವ"(ಐತಿಹಾಸಿಕ ಕದಂಬರಿ)* ತುಮಕೂರು, ಶಶಾಂಕ ಪ್ರಕಾಶನ.
- ನಾರಾಯಣಚಾರ್ಯ ಕೆ. ೧೯೪೫ "ಮ*ಧುಗಿರಿ ಚರಿತ್ರೆ"* ಬೆಂಗಳೂರು, ವಿ.ಬಿ.ಸುಬ್ಬಯ್ಯ ಅಂಡ್ ಸನ್ಸ್ ಪ್ರಕಾಶನ.
- ನಾವಡ ಎ. ವಿ. ೨೦೦೦ *"ಮೌಖಿಕಕಾವ್ಯ ಸಂಯೋಜನ ಪ್ರಕ್ರಿಯೆ"* ಹಂಪಿ, ಪ್ರಸಾರಾಂಗ ಕ. ವಿ. ವಿ.
- ನಿರಂಜನ ರಾ. ನ. ೨೦೧೧ "ಕುಕ್ಕಲನಾಡು *ದೇವಾಲಯ* ಮತ್ತು *ಶಿಲ್ಪಗಳು"* ಹಂಪಿ, ಪ್ರಸಾರಾಂಗ ಕ. ವಿ. ವಿ.
- ಪದ್ಮಪ್ರಸಾದ್ ಎಸ್. ಪಿ. ೨೦೧೭ *"ಜೈನ ವಾಸ್ತು* ಮತ್ತು *ಶಿಲ್ಪ"* ಹಂಪಿ, ಪ್ರಸಾರಾಂಗ ಕ. ವಿ. ವಿ.
- ಪರಮಶಿವಯ್ಯ ಜೀ.ಶಂ ೧೯೭೯ *"ದಕ್ಷಿಣಕರ್ನಾಟಕ ಜನಪದ ಕಾವ್ಯಪ್ರಕಾರಗಳು"* ಮೈಸೂರು ವಿ. ವಿ.
- ಪರಮಶಿವಮೂರ್ತಿ ಡಿ. ವಿ. ೨೦೧೧ "ತುರುಗೋಳ್ *ಸಂಕಥನ"* ಹಂಪಿ, ಪ್ರಸಾರಾಂಗ ಕ. ವಿ. ವಿ.
- ಪರಶುರಾಮಯ್ಯ ಸಿ. ಕೆ. ೨೦೦೭ *"ಚೌಡಿಕೆಯವರು-ಸಂಪ್ರದಾಯ* ಮತ್ತು *ಆಚರಣೆಯ ಅಧ್ಯಯನ"* ಚಿಕ್ಕನಾಯಕನಹಳ್ಳಿ, ಪರಶು ಪ್ರಕಾಶನ.
- ಪದ್ಮ ಎಂ. ಬಿ. ಮತ್ತು ಡಾವೆಂಕಟರತ್ನಂ ಎ. ವಿ. ೧೯೯೯ *"ಇತಿಹಾಸ ಸಂಶೋಧನಾ ಮಾರ್ಗ"* ಬೆಂಗಳೂರು.
- ಪಾದೂರು ಗುರುರಾಜ ಭಟ್ ೧೯೬೩, ೨೦೦೯, "ತುಳುನಾಡು, *ಸಾಮಾಜಿಕ ಚರಿತ್ರೆಯಲ್ಲಿ ಒಂದು ಸಂಶೋಧನಾತ್ಮಕ ವಿವೇಚನೆ"* ಡಾ. ಪಾದೂರು ಗುರುರಾಜ ಭಟ್ ಮೆಮೋರಿಯಲ್ ಟ್ರಸ್ಟ್, ಉಡುಪಿ.
- ಪ್ರಕಾಶ ಮಂಟೇದ ೨೦೧೧ "ಮಂ*ಟೇದಯ್ಯನ ಸಾಂಸ್ಕೃತಿಕ ಚರಿತ್ರೆ"* ಹಂಪಿ, ಪ್ರಸಾರಾಂಗ ಕ. ವಿ. ವಿ.

- ಪ್ರಭಾಕರ ಎ. ಎಸ್. (ಸಂ) ೧೯೯೯ *"ಮ್ಯಾಸಬೇಡರ ಕಥನಗಳು"* ಹಂಪಿ, ಪ್ರಸಾರಾಂಗ ಕ. ವಿ. ವಿ.
- ಪುಟ್ಟಯ್ಯ ಬಿ. ಎಂ. ೨೦೧೦ *"ಸಂಶೋಧನೆಯ ತಾತ್ವಿಕ ಆಯಾಮಗಳು"* ಹಂಪಿ, ಪ್ರಸಾರಾಂಗ ಕ. ವಿ. ವಿ.
- ಪುಟ್ಟಯ್ಯ ಬಿ. ಎಂ. ೨೦೧೫ *"ವಡ್ಡಾರಾಧನೆ ಸಾಂಸ್ಕೃತಿಕ ಮುಖಾಮುಖಿ"* ಹಂಪಿ, ಪ್ರಸಾರಾಂಗ ಕ. ವಿ. ವಿ.
- ಪುಟ್ಟಯ್ಯ ಎಂ. ೧೯೭೨ *"ಕುಂಚಿಟಿಗರ ಸಮಾಜ ಚರಿತ್ರೆ"* ಬೆಂಗಳೂರು, ಪ್ರಶಾಂತಿ ಪ್ರಕಾಶನ.
- ಬಸವರಾಜ ಸಬರದ ೨೦೦೯ *"ಜನಪದ ದೈವಗಳು"* ಹಂಪಿ, ಪ್ರಸಾರಾಂಗ ಕ. ವಿ. ವಿ.
- ಬೋರಯ್ಯ ಎಚ್. ಎಂ. ೨೦೧೫ *"ಕುಣಿಗಲ್-ಕೆರೆ-ಪಟ್ಟಣ"* ಬೆಂಗಳೂರು, ಗೋಧೂಳಿ ಪ್ರಕಾಶನ.
- ಭಾಸ್ಕರಪ್ಪ ಸಿ. ಎನ್. (ಸಂ) ೧೯೮೧ *"ತುಮಕೂರು ಜಿಲ್ಲಾ ದರ್ಶನ"* ತುಮಕೂರು, ಟೈಮ್ಸ್ ಪಬ್ಲಿಕೇಷನ್ಸ್.
- ಬೋರಲಿಂಗಯ್ಯ ಹಿ. ಚಿ. ೨೦೧೬ *"ದೇಸೀ ಕನ್ನಡ ಪರಂಪರೆ"* ಹಂಪಿ, ಪ್ರಸಾರಾಂಗ ಕ. ವಿ. ವಿ.
- ಮಂಜುನಾಥ ಬೇವಿನಕಟ್ಟಿ ೨೦೦೩ *"ಜನಜಾನಪದ"* ಹಂಪಿ, ಪ್ರಸಾರಾಂಗ ಕ. ವಿ. ವಿ.
- ಮಲ್ಲಿಕಾರ್ಜುನ ಕಲಮರಹಳ್ಳಿ ೨೦೧೧ *"ಗೊಲ್ಲರ ಇತಿಹಾಸ ಕಥನ"* ಹಂಪಿ, ಪ್ರಸಾರಾಂಗ ಕ. ವಿ. ವಿ.
- ಮಹದೇವ ಸಿ. ಮಾಧವಪೆರಾಜೆ, ಸುಬ್ಬಣ್ಣರೈ ಎ. ೨೦೦೨ *"ಹೊಸಪೇಟೆ ತಾಲ್ಲೂಕು ದರ್ಶನ"* ಹಂಪಿ ಕ. ವಿ. ವಿ.
- ಮಹದೇವ ಸಿ. ೨೦೦೯ *"ಕುಮ್ಮಟದುರ್ಗದ ಅರಸರು"* ಹಂಪಿ, ಪ್ರಸಾರಾಂಗ ಕ. ವಿ. ವಿ.
- ಮಹದೇವ ಸಿ. ೨೦೧೫ *"ಶಾಸನಗಳಲ್ಲಿ ಕುಮ್ಮಟದುರ್ಗದ ಅರಸರು"* ಹಂಪಿ, ಪ್ರಸಾರಾಂಗ ಕ. ವಿ. ವಿ.
- ಮಹಾದೇವ ಶಂಕನಪುರ ೨೦೧೧ *"ಮಲೆಯಮಾದಯ್ಯನ ಸಾಂಸ್ಕೃತಿಕ ಚರಿತ್ರೆ"* ಹಂಪಿ, ಪ್ರಸಾರಾಂಗ ಕ. ವಿ. ವಿ.
- ಮಹಾದೇವಯ್ಯ ಪಿ. (ಸಂ) ೨೦೧೫ *"ಶಂಬಾ ಜೋಷಿ ಚಿಂತನೆಗಳು"* ಹಂಪಿ, ಪ್ರಸಾರಾಂಗ ಕ. ವಿ. ವಿ.
- ಮುದ್ದುವೀರಪ್ಪ ಜಂಗಮರಹಳ್ಳಿ ೨೦೦೨ *"ವೀರನಾಗಪ್ಪನಪದ"* ವಿಜಯನಗರ, ಬೆಂಗಳೂರು. ಆರ್. ಡಿ. ಡಿಜಿಟಲ್ ಮೀಡಿಯಾ.

- ಮುದ್ದುವೀರಪ್ಪ ಜಂಗಮರಹಳ್ಳಿ ೨೦೧೧ *"ದಿಬ್ಬದ ವೀರಬೊಮ್ಮಣ್ಣನ ಕಾವ್ಯ"* ತುಮಕೂರು, ಸಾಹಿತ್ಯ ಪ್ರಕಾಶನ.
- ಮುದ್ದುವೀರಪ್ಪ ಜಂಗಮರಹಳ್ಳಿ ೨೦೧೧ *"ಮಹಾಸತಿ ಬರಗೂರು ವೀರನಾಗಮ್ಮನ ಕಾವ್ಯ"* ತುಮಕೂರು, ಸಾಹಿತ್ಯ ಪ್ರಕಾಶನ.
- ಮುದ್ದುವೀರಪ್ಪ ಕೆ. ವಿ. ೨೦೧೨ *"ತುಮಕೂರು ಜಿಲ್ಲೆಯ ಕೋಟೆಗಳ ಸಾಂಸ್ಕೃತಿಕ ಒಳನೋಟಗಳು"* ಭಾಷಾಭಿವೃದ್ಧಿ ಯೋಜನೆ, ತುಮಕೂರು ವಿಶ್ವವಿದ್ಯಾನಿಲಯ.
- ಮೊಗಳ್ಳಿ ಗಣೇಶ್ ೨೦೦೯ *"ಅವ್ಯಕ್ತ ಚರಿತ್ರೆ"* ಹಂಪಿ, ಪ್ರಸಾರಾಂಗ ಕ. ವಿ. ವಿ.
- ಮೋಹನ್‌ಕೃಷ್ಣ ರೈ ೨೦೧೦ "ತುಳುನಾಡ ಸಿರಿ ಬದುಕು ಹೋರಾಟದ ಕಥನ" ಹಂಪಿ, ಪ್ರಸಾರಾಂಗ ಕ. ವಿ. ವಿ.
- ಮೋಹನ್‌ಕೃಷ್ಣ ರೈ ೨೦೦೪, ೨೦೧೭, *"ಪ್ರಭುತ್ವ ಮತ್ತು ಜನತೆ" (ರಾಷ್ಟ್ರಕೂಟರಿಂದ ಹೊಯ್ಸಳರವರೆಗೆ)* ಹಂಪಿ, ಪ್ರಸಾರಾಂಗ ಕ. ವಿ. ವಿ.
- ಯೋಗೀಶ್ವರಪ್ಪ ಡಿ. ಎನ್. ೨೦೦೯ *"ಮಧ್ಯಕಾಲೀನ ಕರ್ನಾಟಕದ ಪಾಳೆಯಗಾರರು"* ಬೆಂಗಳೂರು, ಧಾತ್ರಿ ಪುಸ್ತಕ.
- ಯೋಗೀಶ್ವರಪ್ಪ ಡಿ. ಎನ್. ೧೯೯೯ *'ಹಾಗಲವಾಡಿ ನಾಯಕರು'* ಪ್ರಸಾರಾಂಗ ಹಂಪಿ, ಕ. ವಿ. ವಿ.
- ಯೋಗೀಶ್ವರಪ್ಪ ಡಿ. ಎನ್. ೨೦೧೨ *"ಕಲ್ಪಶೋಧ"* ತುಮಕೂರು ಜಿಲ್ಲೆಯ ಸಂಶೋಧನಾ ಲೇಖನಗಳು ಬೆಂಗಳೂರು, ಪ್ರಗತಿ ಗ್ರಾಫಿಕ್ಸ್.
- ಯೋಗೀಶ್ವರಪ್ಪ ಡಿ. ಎನ್. (ಸಂ) ೨೦೧೬ *"ಕನ್ನಡ ಕಾವ್ಯಗಳಲ್ಲಿ ಚಾರಿತ್ರಿಕ ಅಂಶಗಳು"* ಬೆಂಗಳೂರು, ಪ್ರಗತಿ ಗ್ರಾಫಿಕ್ಸ್.
- ಯೋಗೀಶ್ವರಪ್ಪ ಡಿ. ಎನ್. ೨೦೧೬ *"ನಾಯಕತನ ಪದ್ದತಿ"* ಬೆಂಗಳೂರು, ಪ್ರಗತಿ ಗ್ರಾಫಿಕ್ಸ್.
- ಯೋಗೀಶ್ ಎನ್. ೨೦೧೪ *"ಪುರವರ ಸಾಂಸ್ಕೃತಿಕ ಅಧ್ಯಯನ"* ತುಮಕೂರು, ಸಮತಾ ಪ್ರಕಾಶನ.
- ರವೀಂದ್ರನಾಥ ಕೆ. ೨೦೧೧ *"ಅಧ್ಯಯನದ ವಿಧಿವಿಧಾನಗಳು"* ಹಂಪಿ, ಪ್ರಸಾರಾಂಗ ಕ. ವಿ. ವಿ.
- ರಮೇಶ ಸ. ಚಿ. ೨೦೦೫ *"ಅಲೆಮಾರಿಗಳ ಸ್ಥಿತಿಗತಿ"* ಹಂಪಿ, ಪ್ರಸಾರಾಂಗ ಕ. ವಿ. ವಿ.
- ರಮೇಶ ಸ. ಚಿ. ೨೦೧೦ *"ಕರ್ನಾಟಕ ಜಾನಪದ ಆಚರಣೆಗಳು"* ಹಂಪಿ, ಪ್ರಸಾರಾಂಗ ಕ. ವಿ. ವಿ.
- ರಮೇಶ್‌ನಾಯಕ್ (ಸಂ) ೨೦೦೭ *"ಕರ್ನಾಟಕದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನಗಳ ಮರುಚಿಂತನೆ'* ಹಂಪಿ, ಪ್ರಸಾರಾಂಗ ಕ. ವಿ. ವಿ.
- ರಹಮತ್ ತರೀಕೆರೆ ೨೦೧೪ *"ಕರ್ನಾಟಕದ ಮೊಹರಂ"* ಹಂಪಿ, ಪ್ರಸಾರಾಂಗ

ಕ. ವಿ. ವಿ.

- ರಾಜಪ್ಪ ಟಿ. ಎಸ್. (ಸಂ) ೧೯೭೪ *"ಕೆರೆಹೊನ್ನಮ್ಮ ಮತ್ತು ಇತರ ಲಾವಣಿಗಳು"* ಮೈಸೂರು ವಿ. ವಿ.
- ರಾಜರಾಮ ಹೆಗಡೆ, ಅಶೋಕ ಶೆಟ್ಟರ್ (ಸಂ) ೨೦೦೧ *"ಮಲೆಕರ್ನಾಟಕದ ಅರಸು ಮನೆತನಗಳು"* ಹಂಪಿ, ಪ್ರಸಾರಾಂಗ ಕ. ವಿ. ವಿ.
- ರಾಜರಾಮಹೆಗಡೆ (ಸಂ) ೨೦೦೨ *"ಕೆರೆನೀರಾವರಿ ನಿರ್ವಹಣೆ ಚಾರಿತ್ರಿಕ ಅಧ್ಯಯನ"* ಹಂಪಿ, ಪ್ರಸಾರಾಂಗ ಕ. ವಿ. ವಿ.
- ರಾಜೇಗೌಡ ಹ. ಕ. ೨೦೦೭ *"ಜಾನಪದ ಶೋಧ"* ಹಂಪಿ, ಪ್ರಸಾರಾಂಗ ಕ. ವಿ. ವಿ.
- ರಾಮಕೃಷ್ಣ ಜಿ. ೨೦೧೬ *"ಋಗ್ವೇಧ ಪ್ರವೇಶಿಕೆ : ಐತಿಹ್ಯ ಮತ್ತು ವಾಸ್ತವ"* ಬೆಂಗಳೂರು, ನವಕರ್ನಾಟಕ ಪ್ರಕಾಶನ.
- ಲಕ್ಷ್ಮಣ್‌ತೆಲಗಾವಿ (ಸಂ) ೧೯೮೭ *'ಹರತಿಸಿರಿ'* ಹರ್ತಿಕೋಟೆ, ಹಿರಿಯೂರು ತಾಲೂಕು ಹರತಿ ನೆನಪಿನ ಸಂಪುಟ ಪ್ರಕಟಣಾ ಸಮಿತಿ ಪರವಾಗಿ ವಾಲ್ಮೀಕಿ ಸಾಹಿತ್ಯ ಸಂಪದ ಪ್ರಕಟಣೆ.
- ಲಕ್ಷ್ಮಣ್‌ತೆಲಗಾವಿ(ಸಂ) ೨೦೦೩ *"ಸ್ಥಳೀಯಚರಿತ್ರೆ-ಅಧ್ಯಯನದ ತಾತ್ವಿಕತೆ ಮತ್ತು ಸ್ವರೂಪ"* ಹಂಪಿ, ಕ. ವಿ. ವಿ.
- ಲಕ್ಷ್ಮಣ್‌ತೆಲಗಾವಿ ೨೦೦೯ *"ವಿಜಯನಗರ ಕಾಲದ ರಾಮಾನುಜ ಕೂಟಗಳು"* ಹಂಪಿ, ಪ್ರಸಾರಾಂಗ ಕ. ವಿ. ವಿ.
- ಲಕ್ಷ್ಮಣ್‌ತೆಲಗಾವಿ ೨೦೧೦ *"ದೊಡ್ಡೇರಿ ಕದನ ಚರಿತ್ರೆ ಮತ್ತು ಜಾನಪದಗಳ ನೆಲೆಯಲ್ಲಿ"* ಹಂಪಿ, ಕ. ವಿ. ವಿ.
- ಲಕ್ಷ್ಮಣ ಸಿ. ಎಂ. ೨೦೦೦ *"ತುಮಕೂರು ಜಿಲ್ಲೆಯ ಭೌಗೋಳಿಕ ಪರಿಸರ ಮತ್ತು ಅಭಿವೃದ್ಧಿ"* ತುಮಕೂರು, ದರ್ಶನ್ ಪ್ರಕಾಶನ.
- ಲಲಿತಮ್ಮ ೧೯೮೦ *"ಮಧುಗಿರಿ ಇತಿಹಾಸ"* ಮಧುಗಿರಿ.
- ಲಾರಿಹ್ಯಾಂಕೋ, ಜವಾಹರ್‌ಲಾಲ್ ಹೊಂಡೂ, ಜಾನಿ ಮೈಲ್ಸ್‌ಫಾಲಿ (ಸಂ) ೧೯೯೮ *"ದಿ ಎಫಿಕ್ ಓರಲ್ ಅಂಡ್ ರಿಟನ್"* ಮೈಸೂರು ಸೆಂಟ್ರಲ್ ಇನ್ಸ್ಟಿಟ್ಯೂಟ್ ಆಫ್ ಇಂಡಿಯನ್ ಲಾಂಗ್ವೇಜಸ್.
- ವಲೆರಿಯೋ ರಲಿ ಯೋ ೧೯೯೪ *"ರೆಕಾರ್ಡಿಂಗ್ ಓರಲ್ ಹಿಸ್ಟ್ರಿ" ಎ ಪ್ರಾಕ್ಟಿಕಲ್ ಗೈಡ್ ಫಾರ್ ಸೋಷಿಯಲ್ ಸೈಂಟಿಸ್ಟ್ಸ್,* ಕ್ಯಾಲಿಫೋರ್ನಿಯಾ, ನ್ಯೂಡೆಲ್ಲಿ, ಎಸ್‌ಎಜಿಇ ಪಬ್ಲಿಕೇಷನ್ಸ್.
- ವಸು ಎಂ. ವಿ. ೨೦೦೪ *"ಮೌಖಿಕ ಇತಿಹಾಸ"* ಬೆಂಗಳೂರು, ಅಂಕಿತ ಪುಸ್ತಕ.

- ವಸು ಎಂ. ವಿ. (ಸಂ) ೨೦೦೯ *"ಕನ್ನಡದೊಳ್ ಭಾವಿಸಿದ ಜನಪದಂ"* ಬೆಂಗಳೂರು, ಚಿಂತನ ಪುಸ್ತಕ ಪ್ರಕಾಶನ.
- ವಸು ಎಂ. ವಿ. (ಸಂ) ೨೦೦೧ *"ದಕ್ಷಿಣ ಕರ್ನಾಟಕದ ಅರಸು ಮನೆತನಗಳು"* ಹಂಪಿ, ಪ್ರಸಾರಾಂಗ ಕ. ವಿ. ವಿ.
- ವಾಸುದೇವನ್ ಸಿ. ಎಸ್. ೨೦೦೧ *"ಹಂಪಿ ಪರಿಸರದ ಕೆರೆಗಳು"* ಹಂಪಿ, ಪ್ರಸಾರಾಂಗ ಕ. ವಿ. ವಿ.
- ವಿಜಯ್‌ಪೂಣಚ್ಚ ತಂಬಂಡ ೨೦೦೪ *"ಪಳಮೆ-ಮೌಖಿಕ ಆಕರಗಳು ಕಟ್ಟಿಕೊಡುವ ಕನ್ನಡ-ಕೊಡಗು-ತುಳುನಾಡಿನ ಅಧ್ಯಯನ"* ಹಂಪಿ, ಪ್ರಸಾರಾಂಗ ಕ. ವಿ. ವಿ.
- ವಿಜಯ್‌ಪೂಣಚ್ಚ ತಂಬಂಡ (ಸಂ) ೨೦೧೦ *"ಚರಿತ್ರೆ ಸಂಪುಟ ೧ ಮತ್ತು ೩"* ಹಂಪಿ, ಪ್ರಸಾರಾಂಗ ಕ. ವಿ. ವಿ.
- ವಿಜಯ್‌ಪೂಣಚ್ಚ ತಂಬಂಡ ೨೦೦೯ *"ಕೆಳವರ್ಗದ ಪ್ರತಿಭಟನೆ ಸಬಾಲ್ಟ್ರನ್ ಚರಿತ್ರೆ" ಬರವಣಿಗೆ ಕ್ರಮ* ಮತ್ತು ವಿಮರ್ಶೆ. ಹಂಪಿ, ಪ್ರಸಾರಾಂಗ ಕ. ವಿ. ವಿ.
- ವಿರೂಪಾಕ್ಷಿ ಪೂಜಾರಹಳ್ಳಿ ೨೦೦೨ *"ಚಿತ್ರದುರ್ಗ ಜಿಲ್ಲೆಯ ಬುಡಕಟ್ಟು ವೀರರು"* ಹಂಪಿ, ಪ್ರಸಾರಾಂಗ ಕ. ವಿ. ವಿ.
- ವಿರೂಪಾಕ್ಷಿ ಪೂಜಾರಹಳ್ಳಿ ೨೦೧೫ *"ವಿಜಯನಗರ ಕಾಲದ ಸಂಸ್ಕೃತಿ" ಬೇಟೆ ಪಶುಪಾಲನೆ* ಮತ್ತು ಕೃಷಿ. ಹಂಪಿ, ಪ್ರಸಾರಾಂಗ ಕ. ವಿ. ವಿ.
- ವಿರೂಪಾಕ್ಷಿ ಪೂಜಾರಹಳ್ಳಿ (ಸಂ) ೨೦೦೬ *"ತರೀಕೆರೆ ಪಾಳೆಯಗಾರ ಸರ್ಜಪ್ಪನಾಯಕನ ಕಥನ ಕಾವ್ಯ"* ಹಂಪಿ, ಪ್ರಸಾರಾಂಗ ಕ. ವಿ. ವಿ.
- ವೀರೇಶ ಬಡಿಗೇರ ೨೦೧೦ *"ಶಾಸನಗಳಲ್ಲಿ ಆಯಗಾರಿಕೆ ಸಂಸ್ಕೃತಿ"* ಹಂಪಿ, ಪ್ರಸಾರಾಂಗ ಕ. ವಿ. ವಿ.
- ವೀರೇಶ ಬಡಿಗೇರ ೨೦೧೬ *"ಕನ್ನಡ ಹಸ್ತಪ್ರತಿಗಳ ಮೌಖಿಕ ಸಂಕಥನ"* ಹಂಪಿ, ಪ್ರಸಾರಾಂಗ ಕ. ವಿ. ವಿ.
- ವೆಂಕಟೇಶ ಇಂದ್ವಾಡಿ (ಸಂ) ೨೦೦೮ *"ಮಲೆಯ ಮಾದಪ್ಪನ ಮಹಾಕಾವ್ಯ"* ಹಂಪಿ, ಪ್ರಸಾರಾಂಗ ಕ. ವಿ. ವಿ.
- ವೆಂಕಟೇಶ ಇಂದ್ವಾಡಿ (ಸಂ) ೨೦೧೦ *"ಸಿರಿ ಜನಪದ ಕಾವ್ಯ"* ಹಂಪಿ, ಪ್ರಸಾರಾಂಗ ಕ. ವಿ. ವಿ.
- ವೆಂಕಟೇಶ ಇಂದ್ವಾಡಿ (ಸಂ) ೨೦೧೨ *"ಮಂಟೇಸ್ವಾಮಿ ಕಾವ್ಯ ಓದುವ ಪಠ್ಯ"* ಹಂಪಿ, ಪ್ರಸಾರಾಂಗ ಕ. ವಿ. ವಿ.
- ವೆಂಕಟೇಶ ಇಂದ್ವಾಡಿ ೨೦೧೬ *"ಊರೆಂಬುದು ಊರಾಗುತ್ತಿದ್ದ ಪರಿ (ಆಧುನಿಕತೆಯ ಅಬ್ಬರದಲ್ಲಿ ಗ್ರಾಮೀಣ ಸಂಸ್ಕೃತಿಯೊಂದರ ತಿಳಿನೋಟ"* ಹಂಪಿ, ಪ್ರಸಾರಾಂಗ ಕ. ವಿ. ವಿ.

- ವೆಂಕಟೇಶಯ್ಯ ವೈ. ಜಿ. ೨೦೦೮ *"ಯಲಗಲವಾಡಿ ಗ್ರಾಮಸಂಸ್ಕೃತಿಯ ಗ್ರಹಿಕೆಗಳು"* ಕುಣಿಗಲ್, ಸುಶೀಲ ಪ್ರಕಾಶನ.
- ವೆಂಕಟೇಶಯ್ಯ ವೈ. ಜಿ. ೨೦೧೪ *"ಕುಣಿಗಲ್ ತಾಲ್ಲೂಕು ವೈಭವ"* ಕುಣಿಗಲ್, ಹಂಸಾಂಜಲಿ ಪ್ರಕಾಶನ.
- ವೇಣುಗೋಪಾಲ್ ಟಿ. ಎಸ್. ಮತ್ತು ಶೈಲಜಾ ೨೦೧೩ "ಪುರಾಣ ಮತ್ತು ವಾಸ್ತವ" (ಮೂಲ: ಡಿ.ಡಿ.ಕೊಸಾಂಬಿ) ಬೆಂಗಳೂರು, ಚಿಂತನ ಪುಸ್ತಕ.
- ವೈಜಯಂತಿಮಾಲ (ಸಂ) ೧೯೮೧ *"ವಡ್ಡಗೆರೆ ವೀರನಾಗಮ್ಮ ಕಾವ್ಯ"* ಬೆಂಗಳೂರು, ಕ. ಸಾ. ಪ.
- ಶಂಕರನಾರಾಯಣ ತೀ. ನಂ. ೧೯೮೨ *"ಕಾಡುಗೊಲ್ಲರ ಸಂಪ್ರದಾಯಗಳು ಮತ್ತು ನಂಬಿಕೆಗಳು"* ಪ್ರಸಾರಾಂಗ ಮೈಸೂರು ವಿ. ವಿ.
- ಶಂಕರನಾರಾಯಣ ತೀ. ನಂ. ೨೦೦೧ "ಫಿನ್ಲೆಂಡಿನ ಜಾನಪದ ವಿದ್ವಾಂಸರು" ಬೆಂಗಳೂರು, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ.
- ಶಾಮಶಾಸ್ತ್ರಿ ಆರ್ (ಸಂ) *"ಲಿಂಗಣ್ಣಕವಿ ವಿರಚಿತ ಕೆಳದಿನೃಪವಿಜಯ"* ಮೈಸೂರು ವಿ. ವಿ.
- ಶಿವಣ್ಣ ಎಸ್. ೨೦೧೧ *"ಕಾಡುಗೊಲ್ಲರ ಸಾಂಸ್ಕೃತಿಕ ವೀರರು"* ತುಮಕೂರು ವಿಶ್ವವಿದ್ಯಾನಿಲಯ.
- ಶ್ರೀನಿವಾಸ್ ಎಂ. ಡಿ. ೧೯೯೪ *"ಮಧುಗಿರಿ ಶ್ರೀದಂಡಿನ ಮಾರಮ್ಮ"* ಮಧುಗಿರಿ, ಭಾನು ಪ್ರಕಾಶನ.
- ಶ್ರೀನಿವಾಸ್ ಎಂ. ಡಿ. ೨೦೦೯ *"ಮಿಡಿಗೇಶಿ"* ತುಮಕೂರು, ಬನಶಂಕರಿ ಪ್ರಕಾಶನ.
- ಶ್ರೀನಿವಾಸ್ ಎಂ. ಡಿ. ೨೦೧೦ *"ಪ್ರಾಚೀನ ರಾಜಧಾನಿ ಬಿಜ್ಜಾವರ"* ತುಮಕೂರು, ಬನಶಂಕರಿ ಪ್ರಕಾಶನ.
- ಶ್ರೀನಿವಾಸ್ ಎಂ. ಡಿ. ೨೦೧೦ *"ಭಸ್ಮಾಂಗಿ"* ತುಮಕೂರು, ಬನಶಂಕರಿ ಪ್ರಕಾಶನ.
- ಶ್ರೀನಿವಾಸ್ ಎಂ. ಡಿ. ೨೦೧೧ *"ಮಧುಗಿರಿ ವೆಂಕಟರಮಣಸ್ವಾಮಿ ದೇವಾಲಯ"* ತುಮಕೂರು ಬನಶಂಕರಿ ಪ್ರಕಾಶನ.
- ಶ್ರೀನಿವಾಸಮೂರ್ತಿ ಹೆಚ್. ವಿ. ೨೦೦೦ *"ಇತಿಹಾಸ ಸಂಶೋಧನಾ ಸಮೀಕ್ಷೆ"* ಬೆಂಗಳೂರು, ಪದ್ಮ ಪ್ರಕಾಶನ.
- ಶ್ರೀನಿವಾಸಮೂರ್ತಿ ಹೆಚ್. ವಿ. ೧೯೮೨ *"ಇತಿಹಾಸ ಸಂಶೋಧನಾ ವಿಧಾನ ಮತ್ತು ಇತಿಹಾಸ ಲೇಖನ ಕಲೆ"* ಬೆಂಗಳೂರು, ಕೈಲಾಸ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್.
- ಶ್ರೀನಿವಾಸಜೆಟ್ಟಿ ಬಿ. ೧೯೭೦ *"ಜ್ಯೇಷ್ಠಮಲ್ಲ ಮೋಡಬ್ರಾಹ್ಮಣ ದರ್ಪಣ"* ಶ್ರೀನಿಂಬುಜಾ ಗ್ರಂಥಮಾಲಾ ಕುಸುಮ-೩. ಬಳೇಪೇಟೆ ಬೆಂಗಳೂರು, ಕಾರ್ಯನಿರ್ವಾಹಕ ಸಮಿತಿ ಶ್ರೀನಿಂಬುಜಾ ದೇವಾಲಯ.

- ಶ್ರೀಪಾದಭಟ್ ಮತ್ತು ಎಲ್.ಪುಟ್ಟರಾಜು ೨೦೧೧ *“ತುಮಕೂರು ಜಿಲ್ಲೆಯ ಸ್ಥಳನಾಮಗಳು”* ತುಮಕೂರು ವಿ. ವಿ.
- ಶ್ರೀಮತಿ ಎಚ್. ಎಸ್. ೨೦೧೨ *“ಪ್ರಾಚೀನ ಭಾರತದ ಚರಿತ್ರೆ” ಡಿ.ಡಿ.ಕೊಸಾಂಬಿಯವರ ಚಿಂತನೆಗಳು*, (ಮೂಲ: ಕೆ.ಬಾಲಗೋಪಾಲ್) ಬೆಂಗಳೂರು, ಪ್ರಗತಿ ಗ್ರಾಫಿಕ್ಸ್.
- ಶೆಟ್ಟಿ ಎಸ್. ಡಿ. ೨೦೧೭ *“ಜೈನ ಬಸದಿಗಳು”* ಹಂಪಿ, ಪ್ರಸಾರಾಂಗ ಕ. ವಿ. ವಿ.
- ಸಣ್ಣನಾಗಪ್ಪ ೨೦೦೨ “ತಾಯಿ ಸ್ವಾರಮ್ಮನ ಮೇಲೆ ಪದನೂರು” ಪಾವಗಡ, ಸ್ಫೂರ್ತಿ ಪ್ರಕಾಶನ.
- ಸಣ್ಣನಾಗಪ್ಪ ೨೦೦೬ *“ಶ್ರೀವರದಾಂಜನೇಯ”* ಪಾವಗಡ, ಸ್ಫೂರ್ತಿ ಪ್ರಕಾಶನ.
- ಸಣ್ಣನಾಗಪ್ಪ (ಸಂ) ೨೦೧೪ *“ವೀರಸೀಗಣ್ಣನ ಜನಪದಕಾವ್ಯ”* ಬೆಂಗಳೂರು, ಗಣೆ ಪ್ರಕಾಶನ.
- ಸದಾನಂದ ಕನವಳ್ಳಿ (ಅನುವಾದ) ೨೦೧೦ *“ಮರೆತುಹೋದ ಮಹಾಸಾಮ್ರಾಜ್ಯ ವಿಜಯನಗರ”* (ಮೂಲ: ರಾಬರ್ಟ್ ಸಿವೆಲ್) ಹಂಪಿ, ಪ್ರಸಾರಾಂಗ ಕ. ವಿ. ವಿ.
- ಸಿದ್ಧಲಿಂಗಯ್ಯ ೧೯೯೭ *“ಗ್ರಾಮದೇವತೆಗಳು”* ಬೆಂಗಳೂರು, ಮೂಲಭಾರತಿ ಪ್ರಕಾಶನ.
- ಸುಬ್ಬಣ್ಣರೈ ಎ. ೧೯೯೪ *“ದಕ್ಷಿಣಕನ್ನಡ ಜಿಲ್ಲೆಯ ಐತಿಹ್ಯಗಳು”* ಮುಂಬೈ ವಿ. ವಿ. ಜೂನಿಯರ್ ಚೇಂಬರ್ ಮಾಣಿ.
- ಸೋಮಣ್ಣ ೨೦೧೦ *“ವ್ಯವಸಾಯ ಸಂಬಂಧಿ ಆಚರಣೆಗಳು”* ಹಂಪಿ, ಪ್ರಸಾರಾಂಗ ಕ. ವಿ. ವಿ.
- ಸೋಮೇಶ ಎಂ. ೨೦೧೧ *“ಡಣಾಯಕನ ಕೆರೆ”* ಬೆಂಗಳೂರು, ಕ. ಸಾ. ಪ.
- ಹರಿಶ್ಚಂದ್ರ ದಿಗ್ಸಂಗಿಕರ (ಸಂ) ೨೦೦೯ *“ಚಾರಿತ್ರಿಕ ಲಾವಣಿಗಳು”* ಹಂಪಿ, ಪ್ರಸಾರಾಂಗ ಕ. ವಿ. ವಿ.
- ಹುಲಿಕುಂಟೆ ಮೂರ್ತಿ ೨೦೧೦ *“ಮಂಟೇಸ್ವಾಮಿ ಪರಂಪರೆ ಕುಲಮೀಮಾಂಸೆ”* ಹಂಪಿ ಪ್ರಸಾರಾಂಗ ಕ. ವಿ. ವಿ.
- ಹೆಗಡೆ ಎಲ್. ಆರ್. ೧೯೭೩ *“ಕೆಲವು ಲಾವಣಿಗಳು”* ಮೈಸೂರು ವಿ. ವಿ.
- ಹೆರಂಜೆ ಕೃಷ್ಣಭಟ್ಟ, ಎಸ್. ಡಿ. ಶೆಟ್ಟಿ (ಸಂ) ೨೦೦೦ *“ತುಳುಕರ್ನಾಟಕ ಅರಸು ಮನೆತನಗಳು”* ಪ್ರಸಾರಾಂಗ ಹಂಪಿ, ಕ. ವಿ. ವಿ.
- ಹೊನ್ನಗಾನಹಳ್ಳಿ ಕರಿಯಣ್ಣ (ಸಂ) ೨೦೦೬ *“ಬಂದ್ಕುಂಟೆ ಈರುಚಿಕ್ಕಣ್ಣನ ಕಾವ್ಯ”* ತುಮಕೂರು ಪುಣ್ಯಕೋಟಿ ಪ್ರಕಾಶನ.
- ಹೆಬ್ಬಾಲೆ ಕೆ. ನಾಗೇಶ್ ೨೦೧೧ *“ಬಹು ಸಂಸ್ಕೃತಿ ಮತ್ತು ದೇಶಿ ಜಾತ್ರೆಗಳ ಮಹಾಸಮನ್ವಯ”* ಪ್ರಸಾರಾಂಗ ಹಂಪಿ, ಕ. ವಿ. ವಿ.
- ಹೆಬ್ಬಾಲೆ ಕೆ. ನಾಗೇಶ್ ೨೦೦೫ *“ಕಾವೇರಿ ಜಾನಪದ”* ಪ್ರಸಾರಾಂಗ ಹಂಪಿ. ಕ. ವಿ. ವಿ.

**ನಿಘಂಟುಗಳು**


- ಕನ್ನಡ ವಿಷಯ ವಿಶ್ವಕೋಶ ೨೦೦೬ "*ಜಾನಪದ*" ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿ. ವಿ.
- ರೆವರೆಂಡ್ ಜಾನ್ ಎಫ್ ಕಿಟಲ್ ೧೯೮೨, ೧೯೮೪, ೧೯೮೮, ೧೯೯೦, ೧೯೯೧, ೧೯೯೩, ೧೯೯೪, ೧೯೯೬, ೧೯೯೯, "ಕನ್ನಡ ಇಂಗ್ಲೀಷ್ ಡಿಕ್ಷನರಿ" ನ್ಯೂಡೆಲ್ಲಿ, ಏಷಿಯನ್ ಎಜುಕೇಷನಲ್ ಸರ್ವೀಸಸ್
- ಹಾ. ಮಾ. ನಾಯಕ (ಪ್ರ ಸಂ) ೧೯೭೭, ೧೯೯೪ "*ಕನ್ನಡ ರತ್ನಕೋಶ*" ಬೆಂಗಳೂರು, ಕನ್ನಡ ಅಭಿವೃದ್ಧಿ ಪ್ರಾಧಿಕಾರ


**ಸಂಪ್ರಬಂಧಗಳು/ಲೇಖನಗಳು**


- ಅಯ್ಯಾಳಿ ಯರಿಸ್ವಾಮಿ ೨೦೧೭ "*ಹೊಸಪೇಟೆ : ಐತಿಹ್ಯಗಳ ಸಾಂಸ್ಕೃತಿಕ ಅಧ್ಯಯನ*" ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧ ಚರಿತ್ರೆ ವಿಭಾಗ ಹಂಪಿ ಕ. ವಿ. ವಿ.
- ಕರಿಬಸಪ್ಪ ಎ. ೨೦೦೩ "*ಬಳ್ಳಾರಿ ಜಿಲ್ಲೆಯ ಐತಿಹ್ಯಗಳು*" ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧ ಹಸ್ತಪ್ರತಿಶಾಸ್ತ್ರ ವಿಭಾಗ ಹಂಪಿ ಕ. ವಿ. ವಿ.
- ಜಗದೀಶ್ ೨೦೧೨ "ಸಿದ್ಧರಬೆಟ್ಟ ದರ್ಶನ" ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧ ಕನ್ನಡ ವಿಭಾಗ, ಬೆಂಗಳೂರು ವಿ. ವಿ.
- ನಿಂಗಪ್ಪ ಹೆಚ್. ೨೦೦೧ "*ಕನ್ನಡ ಜನಪದ ಮಹಾಕಾವ್ಯಗಳ ಸಾಂಸ್ಕೃತಿಕ ವೀರರು*" ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧ, ಬುಡಕಟ್ಟು ಅಧ್ಯಯನ ವಿಭಾಗ, ಕ. ವಿ. ವಿ. ಹಂಪಿ.
- ಪುಟ್ಟರಾಜು ೨೦೧೦ "*ಮೈಸೂರು ಸಂಸ್ಥಾನದ ಇತಿಹಾಸದಲ್ಲಿ ಜಾನುವಾರು ಅಮೃತಮಹಲ್ ತಳಿ ಕುರಿತ ವಿಶೇಷ ಅಧ್ಯಯನ*" ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧ ಚರಿತ್ರೆ ವಿಭಾಗ, ಬೆಂಗಳೂರು ವಿ. ವಿ.
- ಬಸವರಾಜ ಕೆ. ಪಿ. ೨೦೦೭ "*ಸಿರಾಸೀಮೆಯ ಸಾಂಸ್ಕೃತಿಕ ವೀರರು*" ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧ, ಜನಪದ ಅಧ್ಯಯನ ವಿಭಾಗ, ಹಂಪಿ, ಕ. ವಿ. ವಿ.
- ರತ್ನಮ್ಮ ಡಿ. ೨೦೦೮ "*ಜುಂಜಪ್ಪನ ಕಾವ್ಯ*" ಅಪ್ರಕಟಿತ ಎಂ.ಫಿಲ್ ಸಂಶೋಧನಾ ಪ್ರಬಂಧ, ಕರ್ನಾಟಕ ಸಂಘ ಸಂಶೋಧನಾ ಕೇಂದ್ರ ಮಂಡ್ಯ, ಹಂಪಿ, ಕ. ವಿ. ವಿ.
- ಲಕ್ಷ್ಮಿದೇವಿ ಎಲ್. ೨೦೦೬ "*ಕೋಲಾರ ಜಿಲ್ಲೆಯ ಐತಿಹ್ಯಗಳು*" ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧ ಜನಪದ ಅಧ್ಯಯನ ವಿಭಾಗ, ಹಂಪಿ, ಕ. ವಿ. ವಿ.
- ಸತೀಶ ಪಿ. ೧೯೯೭ "*ಮಲೆಮಾದೇಶ್ವರ ಕಾವ್ಯ*" ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧ, ಬುಡಕಟ್ಟು ಅಧ್ಯಯನ ವಿಭಾಗ, ಹಂಪಿ, ಕ. ವಿ. ವಿ.

- ಹೇಮಾವತಿ ಟಿ. ಆರ್. ೨೦೦೪ *"ಜನಪದ ಮಹಾಕಾವ್ಯಗಳಲ್ಲಿ ಸ್ತ್ರೀ ಸಂವೇದನೆ-ಒಂದು ಅಧ್ಯಯನ"* ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧ, ಜನಪದ ಅಧ್ಯಯನ ವಿಭಾಗ, ಹಂಪಿ, ಕ. ವಿ. ವಿ.


**ಸ್ಮರಣ ಸಂಚಿಕೆಗಳು**


- ಅನಂತರಾಮಯ್ಯ (ಸಂ) ೨೦೦೮ *"ಜ್ಞಾನಾದ್ರಿ"* ತುಮಕೂರು, ಕರ್ನಾಟಕ ಇತಿಹಾಸ ಕಾಂಗ್ರೇಸ್‌ನ ೧೯ನೇ ಸಮ್ಮೇಳನದ ಸ್ಮರಣ ಸಂಚಿಕೆ.
- ಇತಿಹಾಸ ದರ್ಶನ ಸಂಪುಟಗಳು.
- ಕವಿತಾಕೃಷ್ಣ (ಸಂ) ೨೦೦೨ *"ಜಯಮಂಗಲಿ"* ತುಮಕೂರು, ನೆನಪಿನ ಸಂಚಿಕೆ ಅಖಿಲ ಭಾರತ ೬೯ ನೇ ಕನ್ನಡ ಸಾಹಿತ್ಯ ಸಮ್ಮೇಳನ.
- ಕಾಡಶೆಟ್ಟಿಹಳ್ಳಿ ಸತೀಶ್ (ಸಂ) "ಗುಬ್ಬಿಯಪ್ಪ" ೨೦೧೨ ಗುಬ್ಬಿ, ಶ್ರೀಚನ್ನಬಸವೇಶ್ವರಸ್ವಾಮಿ ಜೀರ್ಣೋದ್ಧಾರ ಸೊಸೈಟಿ.
- ಚನ್ನಪ್ಪ ಟಿ. ಆರ್. (ಸಂ) ೧೯೬೯ *"ವೀರಜ್ಯೋತಿ"* ಅಗ್ರಹಾರ. ಕೊರಟಗೆರೆ ತಾ. ಶ್ರೀವೀರಭದ್ರಸ್ವಾಮಿ ಸೇವಾಸಮಿತಿ.
- ನಂಜುಂಡಸ್ವಾಮಿ ಬಿ. (ಸಂ) ೨೦೦೨ *"ಕಲ್ಪಸಿರಿ"* ಅಖಿಲ ಭಾರತ ೬೯ನೆಯ ಕನ್ನಡ ಸಾಹಿತ್ಯ ಸಮ್ಮೇಳನ ತುಮಕೂರು-೨೦೦೨ ಸಂಸ್ಮರಣೆ ಸಂಪುಟ. ಬೆಂಗಳೂರು, ಕಸಾಪ.
- ನಂದೀಶ್ವರ ಎನ್. ೨೦೧೭ *"ಸೀರೆನಾಡು"* ಸಿರಾ ತಾಲೂಕು ೪ನೇ ಕನ್ನಡ ಸಾಹಿತ್ಯ ಸಮ್ಮೇಳನ ಸ್ಮರಣ ಸಂಚಿಕೆ.
- ಮರಿದೇವರು ಸಿ. ಹೆಚ್. (ಸಂ) ೨೦೦೦ *"ಹೆಂಜೇರು"* ನೆನಪಿನ ಸಂಚಿಕೆ ನಿದ್ರಘಟ್ಟ-ಗೊಲ್ಲಹಳ್ಳಿ, ತುಮಕೂರು ಜಿಲ್ಲಾ ಎರಡನೇ ಗಡಿನಾಡ ಕನ್ನಡ ಸಾಹಿತ್ಯ ಸಮ್ಮೇಳನ.
- ಮಯೂರ ಗೋವಿಂದರಾಜು (ಸಂ) ೨೦೧೨ *"ಸುವರ್ಣಮುಖಿ"* ನೆನಪಿನ ಸಂಚಿಕೆ ಕೊರಟಗೆರೆ ತಾಲೂಕು ಪ್ರಥಮ ಕನ್ನಡ ಸಾಹಿತ್ಯ ಸಮ್ಮೇಳನ.
- ಮೀರಾಸಾಬಿಹಳ್ಳಿ ಶಿವಣ್ಣ ೨೦೧೨ *"ಕುಂಚಿಟಿಗರು"* ಬೆಂಗಳೂರು, ಕುಂಚಿಟಿಗರ ಮಹಾ ಸಮ್ಮೇಳನ ಸ್ಮರಣ ಸಂಚಿಕೆ.
- ಸುಬ್ರಮಣ್ಯ ಪ. ವಿ. (ಸಂ) ೨೦೧೧ *"ಗಿರಿಸಿರಿ"* ಮಧುಗಿರಿ, ನೆನಪಿನ ಸಂಚಿಕೆ ೪ನೇ ಕನ್ನಡ ಸಾಹಿತ್ಯ ಸಮ್ಮೇಳನ.

**ಪತ್ರಿಕೆಗಳು**


- ಗೋವಿಂದರಾಜು ಸಿ. ಆರ್. (ಸಂ) ೨೦೧೦ "*ಚರಿತ್ರೆ ಅಧ್ಯಯನ*" ಅರ್ಧವಾರ್ಷಿಕ ಪತ್ರಿಕೆ ಹಂಪಿ, ಪ್ರಸಾರಂಗ ಕ. ವಿ. ವಿ.
- ಚೆನ್ನಸ್ವಾಮಿ ಸೋಸಲೆ (ಸಂ) ೨೦೧೦ "*ಚರಿತ್ರೆ ಅಧ್ಯಯನ*" ಅರ್ಧವಾರ್ಷಿಕ ಪತ್ರಿಕೆ. ಹಂಪಿ, ಪ್ರಸಾರಂಗ ಕ. ವಿ. ವಿ.
- ಚೆನ್ನಸ್ವಾಮಿ ಸೋಸಲೆ.ಎನ್ (ಸಂ) ೨೦೧೬ ಜುಲೈ-ಡಿಸೆಂಬರ್ "ಚರಿತ್ರೆ ಅಧ್ಯಯನ" ಹಂಪಿ, ಪ್ರಸಾರಾಂಗ ಕ. ವಿ. ವಿ.
- ಚೆನ್ನಸ್ವಾಮಿ ಸೋಸಲೆ (ಸಂ) *ಜುಲೈ-ಡಿಸೆಂಬರ್* ೨೦೧೬ "*ಚರಿತ್ರೆ ಅಧ್ಯಯನ*" ಅರ್ಧವಾರ್ಷಿಕ ಪತ್ರಿಕೆ. ಹಂಪಿ ಪ್ರಸಾರಂಗ ಕ. ವಿ. ವಿ.
- ತಿರುಮಲೇಶ್ ಕೆ. ವಿ. ೨೮ ಮಾರ್ಚ್ ೨೦೦೮ "ವಿಜಯಕರ್ನಾಟಕ" (ಆ ಕನ್ನಡದೊಳ್ ಭಾವಿಸಿದ ಜನಪದಂ)
- ಪ್ರಸನ್ನ ೨೧೨ ಜನವರಿ ೨೦೧೭ "ಪ್ರಜಾವಾಣಿ" (ಮಂಟೇಸ್ವಾಮಿ ಪರಂಪರೆ ತೋರಿದ ದಾರಿ)
- ಪೃಥ್ವಿದತ್ತ ಚಂದ್ರಶೋಭಿ ೧೨ ಜೂನ್ ೨೦೧೫ "*ಪ್ರಜಾವಾಣಿ*" (ಸಂಶೋಧನಾ ಪ್ರಕ್ರಿಯೆಯ ಮೌಲ್ಯವರ್ಧನೆ ಹೇಗೆ?)
- ಪೃಥ್ವಿದತ್ತ ಚಂದ್ರಶೋಭಿ ೨೧ ಜುಲೈ ೨೦೧೭ "*ಪ್ರಜಾವಾಣಿ*" (ತತ್ವಪದ: ಸಮಾನತೆಯ ಆಶಯದ ಆಧ್ಯಾತ್ಮ ಪರಂಪರೆ)
- ಪೃಥ್ವಿದತ್ತ ಚಂದ್ರ ಶೋಭಿ ೦೩ ನವೆಂಬರ್ ೨೦೧೭ "*ಪ್ರಜಾವಾಣಿ* " (ಐತಿಹಾಸಿಕ ಸತ್ಯದ ಹುಡುಕಾಟದ ಬಗೆ)
- ಮೋಹನ್‌ಕೃಷ್ಣ ರೈ ಕೆ. (ಸಂ) ಜನವರಿ-ಜೂನ್ ೨೦೦೮ "*ಚರಿತ್ರೆ ಅಧ್ಯಯನ*" ಅರ್ಧವಾರ್ಷಿಕ ಪತ್ರಿಕೆ ಹಂಪಿ, ಪ್ರಸಾರಂಗ ಕವಿವಿ.
- ರಾಜೇಶ ಹಂ. ಗು. (ಸಂ) ಜೂನ್-ಸೆಪ್ಟೆಂಬರ್ ೨೦೦೯ "*ಇತಿಹಾಸ ದರ್ಪಣ-೨*" ತ್ರೈಮಾಸಿಕ ಪತ್ರಿಕೆ.
- ರಾಜೇಶ ಹಂ. ಗು. (ಸಂ) ಅಕ್ಟೋಬರ್-ಡಿಸೆಂಬರ್ ೨೦೦೯ "*ಇತಿಹಾಸ ದರ್ಪಣ-೩*" ತ್ರೈಮಾಸಿಕ ಪತ್ರಿಕೆ.
- ರಾಜೇಶ ಹಂ. ಗು. (ಸಂ) ಅಕ್ಟೋಬರ್-ಡಿಸೆಂಬರ್ ೨೦೧೧ "*ಇತಿಹಾಸ ದರ್ಪಣ-೧೧*" ತ್ರೈಮಾಸಿಕ ಪತ್ರಿಕೆ.
- ಲಕ್ಷ್ಮಣ್‌ತೆಲಗಾವಿ (ಸಂ) ೨೦೦೬ "*ಚರಿತ್ರೆ ಅಧ್ಯಯನ*" ಅರ್ಧವಾರ್ಷಿಕ ಪತ್ರಿಕೆ. ಹಂಪಿ, ಪ್ರಸಾರಂಗ ಕ. ವಿ. ವಿ.
- ವಸು ಮಳಲಿ ೧೦ ಜೂನ್ ೨೦೧೪ "*ಪ್ರಜಾವಾಣಿ*" (ತಿರುಳಬಿಟ್ಟು ಸಿಪ್ಪೆಮೆಲ್ಲುವ ಸಿರಿ)

## ಊ. ವಕ್ತೃಗಳ ವಿವರ

- ಅಗಸರ ರಾಮಯ್ಯ, ಸು. ೯೦ ವ. ಕೃಷಿಕ, ಅಗಸರು, ಜೆಟ್ಟಿಅಗ್ರಹಾರ. ಕೊರಟಗೆರೆ ತಾಲೂಕು.
- ಅರುಣ್‌ಕುಮಾರ ಸು. ೪೦ ವ. ಪದವೀದರ, ಭಜಂತ್ರಿ, ಕರುಡುಗಾನಹಳ್ಳಿ, ಕೊರಟಗೆರೆ ತಾಲೂಕು
- ಆಲೇಗೌಡ ಸು. ೪೫ ವ. ಕೃಷಿಕ, ವಕ್ಕಲಿಗರು, ಕಳುವೋರಹಳ್ಳಿ ಸಿರಾ ತಾಲೂಕು.
- ಆರೀಫ್ ಸು. ೩೮ ವ. ಉಪನ್ಯಾಸಕರು, ಮುಸ್ಲಿಂ, ಹೊಸಕೆರೆ, ಮಧುಗಿರಿ ತಾಲೂಕು.
- ಕಾಂತರಾಜು ಸು. ೫೦ ವ. ಅರ್ಚಕರು, ತಬಲವಾದಕರು, ಶೆಟ್ಟಿಬಣಜಿಗರು, ಬಿಜವರ, ಮಧುಗಿರಿ ತಾಲೂಕು.
- ಗಂಗರಾಜು ಸು. ೪೦ ವ. ಕೃಷಿ, ಹರೆ ಬಡಿಯುವ, ಹೊಲೆಯರು, ಬೆಟ್ಟದಹಳ್ಳಿ, ಕಡಬ, ಗುಬ್ಬಿ ತಾಲೂಕು.
- ಚಿತ್ತಯ್ಯ ಸು. ೭೦ ವ. ಪೂಜಾರಿ, ಗೊಲ್ಲರು, ಬೇವಿನಹಳ್ಳಿ ಗೊಲ್ಲರಹಟ್ಟಿ, ಸಿರಾ ತಾಲೂಕು.
- ಚಿದಾನಂದ ಸು ೪೫ ವ. (ದಾಸಪ್ಪ) ದಾಸರು, ಜುಂಜಪ್ಪನ ಗುಡ್ಡೆ, ಸಿರಾ ತಾಲೂಕು.
- ಚೆಲುವರಾಜನ್ ವಿ. ಆರ್. ಸು. ೭೫ ವ. ಚಿತ್ರಮಂದಿರದ ಮಾಲೀಕರು, ವೈಷ್ಣವ ಬ್ರಾಹ್ಮಣರು, ಪಾವಗಡ.
- ಜಗದೀಶ ಸು. ೪೫ ವ. ಕೃಷಿಕರು, ಆದಿದ್ರಾವಿಡರು, ಕೊರಟಗೆರೆ.
- ಜಲಜ ಜೈನ್ ಸು. ೭೦ ವ. ಗೃಹಿಣಿ, ಜೈನರು, ತುಮಕೂರು.
- ಜಯಣ್ಣ ಸು. ೬೦ ವ. ಕೃಷಿಕರು, ವಕ್ಕಲಿಗರು, ಜುಂಜಪ್ಪನ ಗುಡ್ಡೆ, ಸಿರಾ ತಾಲೂಕು.
- ತಿಪ್ಪಣ್ಣ ಸು ೬೭ ವ. ಕೂದಲು ವ್ಯಾಪಾರಿ, ದೊಂಬಿದಾಸರು, ಶಿವಪುರ
- ತಿಪ್ಪೇಶ್ ಸು. ೩೮ ವ. ಕಂಪನಿ ನೌಕರ, ವಕ್ಕಲಿಗರು, ವೀರಬೊಮ್ಮನಹಳ್ಳಿ, ಸಿರಾ ತಾಲೂಕು.
- ದೊಡ್ಡನರಸಪ್ಪ ಸು. ೯೩ ವ. ಮುಖಂಡರು ದೊಡ್ಡಕಾಯಪ್ಪ ದೇವಸ್ಥಾನ, ಕುರಂಕೋಟೆ ಕೊರಟಗೆರೆ ತಾಲೂಕು.
- ದೊಡ್ಡಯ್ಯ ಸು ೩೮ ವ. ಟೈಲರ್, ಹೆಳವರು, ಬುಕ್ಕಪಟ್ಟಣ, ಕೊರಟಗೆರೆ ತಾಲೂಕು.
- ನರಸಪ್ಪ ಬಿ. ಎನ್. ಸು. ೫೫ ವ. ಈಡಿಗರು, ಬಿಜವರ, ಮಧುಗಿರಿ ತಾಲೂಕು.
- ನರಸಮ್ಮ, ಸು. ೯೦ ವ. ಗೃಹಿಣಿ, ತಿಗಳರು, ತುಂಬಾಡಿ ಕೊರಟಗೆರೆ ತಾಲೂಕು.
- ನಂಜುಂಡಸ್ವಾಮಿ ಬಿ. ಸು. ೭೦ವ. ವೈದ್ಯರು, ವೀರಶೈವರು, ತುಮಕೂರು.

- ನಾಗಭೂಷಣ ಸು. ೪೦ ವ. ಶಿಕ್ಷಕರು, ಈಡಿಗರು, ನೊಣವಿನಕೆರೆ ತಿಪಟೂರು ತಾಲೂಕು.
- ನಾಗಮ್ಮ ಕೋಂ ಮುದ್ದನಾಗಯ್ಯ ಸು. ೬೮ ವ. ಗೃಹಿಣಿ, ಆದಿಕರ್ನಾಟಕ, ಜೆಟ್ಟಿಅಗ್ರಹಾರ ಕೊರಟಗೆರೆ ತಾಲೂಕು.
- ನಾಗರಾಜು ಸು. ೫೦ ವ. ಶಿಕ್ಷಕರು, ನಾಯಕರು, ಬಿಜವರ, ಮಧುಗಿರಿ ತಾಲೂಕು.
- ನಾಗರಾಜು ಎಂ. ಎಚ್. ಸು. ೫೮ ವ. ವಕ್ಕಲಿಗರು, ಪ್ರಾಂಶುಪಾಲರು, ಕೊಂಡೆತಿಮ್ಮನಹಳ್ಳಿ, ಪಾವಗಡ ತಾಲೂಕು.
- ನಿರಂಜನಾ ಆರಾಧ್ಯ ಸು. ೭೦ ವ. ಉಧ್ಯಮಿ, ಬ್ರಾಹಣರು, ಕಗ್ಗೆರೆ, ಗುಬ್ಬಿ ತಾ.
- ನೀರಗಂಟಿಯವರ ಹುನುಮಕ್ಕಜ್ಜಿ (ಹನುಮಂತರಾಯಪ್ಪರವರ ತಾಯಿ) ಸು. ೯೦ ವ. ಗೃಹಿಣಿ, ನಾಯಕರು, ಜೆಟ್ಟಿಅಗ್ರಹಾರ. ಕೊರಟಗೆರೆ ತಾಲೂಕು.
- ಪ್ರಕಾಶ್ ಆಚಾರಿ ಸು. ೫೫ ವ. ವ್ಯಾಪಾರಿ, ಅಕ್ಕಸಾಲಿಗರು, ಜುಂಜಪ್ಪನ ಗುಡ್ಡೆ, ಸಿರಾ.
- ಪದ್ಮಪ್ರಸಾದ್ ಸು. ೭೫ ವ. ಸಂಶೋಧಕರು, ಜೈನರು, ಪ್ರಾಂಶುಪಾಲರು, ತುಮಕೂರು.
- ಪರಶುರಾಮಪ್ಪ ಸು. ೭೮ ವ. ಅಸಾದಿ, ಆದಿಕರ್ನಾಟಕ, ಮೂಗನಾಯ್ಕನ ಕೋಟೆ, ಗುಬ್ಬಿ ತಾಲೂಕು.
- ಪಳ್ಳರಂಗಯ್ಯ ಸು. ೭೫ ವ. ಕೃಷಿಕ, ಆದಿಕರ್ನಾಟಕ, ಜೆಟ್ಟಿಅಗ್ರಹಾರ.
- ಫಯಾಜ್ ಸು. ೪೨ ವ. ಪಥವೀದರರು, ಮುಸ್ಲಿಂ, ಚಿ. ನಾ. ಹಳ್ಳಿ.
- ಪಾಪಕ್ಕ ದಿ. ಸು. ೮೫ ವ. ಕೂಲಿ, ಬೋವಿ, ಜಗನ್ನಾಥಪುರ, ಕೊರಟಗೆರೆ ತಾಲೂಕು.
- ಪುಟ್ಟರಾಜು ಸು. ೪೫ ವ. ಉಪನ್ಯಾಸಕರು, ವಕ್ಕಲಿಗರು, ಮೇಲುಕುಂಟೆ, ಸಿರಾ ತಾಲೂಕು.
- ಪ್ರಾನ್ಸಿಸ್ ಪಿಂಟೋ ಸು. ೪೪ ವ. ಉಪನ್ಯಾಸಕರು, ಕ್ರೈಸ್ತರು, ಇರಕಸಂದ್ರ ಕಾಲೋನಿ, ತುಮಕೂರು.
- ಪೂಜಾರರ ಮುದ್ದಣ್ಣ ಸು. ೫೫ ವ. ಕೃಷಿಕ, ನಾಯಕರು, ಜೆಟ್ಟಿಅಗ್ರಹಾರ. ಕೊರಟಗೆರೆ ತಾಲೂಕು.
- ಪೂಜಾರಪ್ಪ ಸು. ೭೫ ವ. ಪೂಜಾರಿ, ಗೊಲ್ಲರು, ಬೇವಿನಹಳ್ಳಿ ಗೊಲ್ಲರಹಟ್ಟಿ, ಸಿರಾ ತಾಲೂಕು.
- ಭೀಮರಾಜು ಸು ೫೮ ವ. ಕೃಷಿಕರು, ವಕ್ಕಲಿಗರು, ಕಳುವೋರಹಳ್ಳಿ. ಸಿರಾ ತಾಲೂಕು.
- ಮುದ್ದುವೀರಪ್ಪ. ಸು. ೪೦ ವ. ಉಪನ್ಯಾಸಕರು, ವಕ್ಕಲಿಗರು, ಜಂಗಮರಹಳ್ಳಿ, ಪಾವಗಡ ತಾಲೂಕು.
- ಮೊಯಿದ್ದೀನ್ ಭಾಷಾ ಸು. ೬೮ ವ. ಉರ್ದು ಭಾಷಾ ಉಪನ್ಯಾಸಕರು, ಮುಸ್ಲಿಂ, ಮಧುಗಿರಿ.
- ರಂಗಧಾಮಯ್ಯ ದಿ. ಸು. ೮೦ ವ. ಅವಧೂತರು, ಆದಿಕರ್ನಾಟಕ, ಶಿವಪುರ ಅಗ್ರಹಾರ, ಕೊರಟಗೆರೆ ತಾಲೂಕು.

- ರವಿಕುಮಾರ್ ಸು. ೪೫ ವ. ಆದಿಕರ್ನಾಟಕ, ಇರಕಸಂದ್ರ ಕಾಲೋನಿ,
  ಕೊರಟಗೆರೆ ತಾಲೂಕು.
- ರಾಮಾಂಜಿನಯ್ಯ ಸು. ೭೦ ವ. ವೈದ್ಯರು, ವೈಷ್ಣವರು, ಬೇಡತ್ತೂರು, ಮಧುಗಿರಿ ತಾಲೂಕು.
- ರೇಣುಕಯ್ಯ ಸು. ೫೮ ವ. ಅಸಾದಿ, ಆದಿಕರ್ನಾಟಕ, ಮೂಗನಾಯ್ಕನ ಕೋಟೆ,
  ಗುಬ್ಬಿ ತಾಲೂಕು.
- ಲಕ್ಕಮ್ಮ ಕೋಂ ಪಳ್ಳರಂಗಯ್ಯ ಸು. ೭೨ ವ. ಗೃಹಿಣಿ, ಆದಿಕರ್ನಾಟಕ, ಜೆಟ್ಟಿಅಗ್ರಹಾರ
  ಕೊರಟಗೆರೆ ತಾಲೂಕು.
- ಯರಪ್ಪ ಸು. ೭೦ ವ. ಪೂಜಾರಿ, ಗೊಲ್ಲರು, ಬೇವಿನಹಳ್ಳಿ ಗೊಲ್ಲರಹಟ್ಟಿ, ಸಿರಾ ತಾಲೂಕು.
- ಯೋಗೀಶ್ವರಪ್ಪ ಡಿ. ಎನ್. ಸು. ೫೭ ವ. ಪ್ರಾಂಶುಪಾಲರು, ಲಿಂಗಾಯಿತರು, ತುಮಕೂರು.
- ರಾಮಚಂದ್ರಪ್ಪ ಸು. ೫೨ ವ. ಶಿಕ್ಷಕರು, ಕುರುಬರು, ಕೊಡಿಗೇನಹಳ್ಳಿ.
- ರಾಮಚಂದ್ರಯ್ಯ ಸು. ೭೮ ವ. ಪೂಜಾರಿ, ನಾಯಕರು, ಕುಮಾರರಾಮ ದೇವಾಲಯ,
  ಪಾಲನಹಳ್ಳಿ, ಕೊರಟಗೆರೆ ತಾಲೂಕು.
- ಲಿಂಗರಾಜು ಕೆ. ಜೆ. ಸು. ೩೭ ವ. ವಕ್ಕಲಿಗರು, ಕಲ್ಲೇನಹಳ್ಳಿ, ಚಿ. ನಾ. ಹಳ್ಳಿ.
- ವಡ್ಡಗೆರೆ ನಾಗರಾಜಯ್ಯ ಸು. ೫೨ ವ. ಆದಿಕರ್ನಾಟಕ, ವಡ್ಡಗೆರೆ, ಕೊರಟಗೆರೆ ತಾಲೂಕು.
- ವಿನಾಯಕ ಮಂಜುನಾಥ ನಾಯ್ಕ ಸು. ೪೬ ವ. ನಾಮಧಾರಿ, ಕುಜಹಳ್ಳಿ, ಕುಮಟಾ, ಉ.ಕ.
- ಶಂಕರಣ್ಣ ಸು. ೫೯ ವ. ಅಡಿಗೆ ಭಟ್ಟರು, ಕುರುಬರು, ಚಿಕ್ಕತೊಟ್ಲುಕೆರೆ, ತಾಲೂಕು.
- ಶಿವಲಿಂಗಮೂರ್ತಿ ಸು. ೫೫ ವ. ಉಪ್ಪಾರರು, ಕೋರ, ತುಮಕೂರು ತಾಲೂಕು.
- ಸಣ್ಣನಾಗಪ್ಪ ಸು. ೬೫ ವ. ವಿಶ್ರಾಂತ ಪ್ರಾಂಶುಪಾಲರು, ಗೊಲ್ಲರು, ಪಾವಗಡ.
- ಸಿದ್ದಗಂಗಯ್ಯ ಸು. ೬೨ ವ. ಕೃಷಿಕ, ಆದಿಕರ್ನಾಟಕ, ಜೆಟ್ಟಿಅಗ್ರಹಾರ. ಕೊರಟಗೆರೆ ತಾಲೂಕು.
- ಸಿದ್ದಣ್ಣ ಡಿ.ಟಿ ಸು. ೪೦ ವ. ಉಪನ್ಯಾಸಕರು ಗೊಲ್ಲರು, ಪಾವಗಡ.
- ಸಿದ್ದಲಿಂಗೇಶ್ವರ ಪೂಜಾರರು ಸು. ೩೫ ವ. ವೀರಶೈರು, ಚಿಕ್ಕತೊಟ್ಲುಕೆರೆ,
  ತುಮಕೂರು ತಾಲೂಕು.
- ಸುರೇಶ ಹೆಚ್. ಎಲ್. ಸು. ೪೫ ವ. ಶಿಕ್ಷಕರು, ವಕ್ಕಲಿಗರು, ಹುಲುವಂಗಲ,
  ಕೊರಟಗೆರೆ ತಾಲೂಕು.
- ಸುರೇಶ ಸು. ೪೮ ವ. ಕೃಷಿ, ಆದಿಕರ್ನಾಟಕ, ಮೂಗನಾಯ್ಕನ ಕೋಟೆ, ಗುಬ್ಬಿ ತಾಲೂಕು.
- ಸೋಮೇಶಪ್ಪ ಸು. ೫೫ ವ. ಉಪನ್ಯಾಸಕರು. ಕುರುಬರು, ಗಾಣದಹುಣಸೆ,
  ಸಿರಾ ತಾಲೂಕು.
- ಹನುಮಂತಪ್ಪಜ್ಜ. ಸು. ೮೦ ವ. ಪೂಜಾರಿ, ಕೊರಚರು, ಯಾದಗೆರೆ,
  ಕೊರಟಗೆರೆ ತಾಲೂಕು.

-೦೦೦-